# ಸ್ನೇಹದ ಮಾತು

ಶ್ರೀನಿವಾಸಮೂರ್ತಿಗಳು ಗ್ರಂಥಲೇಖನಕ್ಕೆ ಮೊದಲು ಮಾಡಿದ ಕಾಲದಲ್ಲಿ ಕೋಕಿಲತಂತ್ರ ಕನ್ನಡ ಸಾಹಿತ್ಯಲೋಕದಲ್ಲಿ ಇನ್ನೂ ಮೊದಲಾಗಿರಲಿಲ್ಲ. ಆ ಕಾಲ ಈಗ್ಗೆ ಸುಮಾರು ೪೦ ವರ್ಷಗಳ ಹಿಂದಿನದು. ಬಹುಶಃ ಆಗತಾನೆ ಅವರು ಕಾಲೇಜನ್ನು ಬಿಟ್ಟಿದ್ದರು, ಅಥವಾ ಬಿಡುವುದರಲ್ಲಿದ್ದರು. ಆಗ್ಗೆ ಕನ್ನಡ ಸಾಹಿತ್ಯದಲ್ಲಿ ಅವರಿಗಿಂತ ಹಿರಿಯರಾಗಿದ್ದವರು ಅನೇಕರಿದ್ದರು, — ಆರ್. ನರಸಿಂಹಾಚಾರ್ಯರು, ಚ. ವಾಸುದೇವಯ್ಯನವರು, ಎಚ್. ವಿ. ನಂಜುಂಡಯ್ಯನವರು, ರಾ. ರಘುನಾಥರಾಯರು, ಬಿ. ವೆಂಕಟನಾರಣಪ್ಪನವರು, ಇಂಥವರು. ಮೂರ್ತಿಗಳು ಹಿರಿಯರಲ್ಲಿ ಗೌರವವಿಲ್ಲದಿದ್ದವರಲ್ಲ, ಮತ್ತು ತಮ್ಮ ಲೇಖನಕ್ಕೆ ಮುನ್ನುಡಿ ಬೇಕೆಂದು ಅವರು ಕೇಳಿದ್ದಿದ್ದರೆ ಬಹುಶಃ ಯಾರೂ ಇಲ್ಲವೆನ್ನುತ್ತಿರಲಿಲ್ಲ. ಮುನ್ನುಡಿಯೆಂಬುದು ಆಗ ವಾಡಿಕೆಯಲ್ಲಿಲ್ಲದ್ದಾಗಿದ್ದರೂ, ಮೂರ್ತಿ ಎಲ್ಲರಲ್ಲೂ ಸಂಪಾದಿಸಿಕೊಂಡಿದ್ದ ಪ್ರೀತಿ ವಿಶ್ವಾಸಗಳು ಅಷ್ಟು ಮಟ್ಟಿನವು. ಆದರೆ ಮೂರ್ತಿಗಳ ಸ್ವಭಾವ ಇತರರ ಶಿಫಾರಸನ್ನು ನಂಬಿಕೊಂಡಿರುವುದಲ್ಲ, ಸ್ವಂತ ಯೋಗ್ಯತೆಯನ್ನು ನಂಬಿಕೊಂಡಿರುವಂಥಾದ್ದು. ಯೋಗ್ಯತೆಗೆ ಸಂದಷ್ಟರಿಂದ ಅವರಿಗೆ ತೃಪ್ತಿ. ಅದು ದೊಡ್ಡ ಯೋಗ್ಯತೆ.

ಕೋಗಿಲೆ ತಾನು ಹೆತ್ತ ಮರಿಯನ್ನು ಕಾಗೆಯ ಗೂಡಿನಲ್ಲಿರಿಸಿ, ಕಾಗೆಅದನ್ನು ತನ್ನದೆಂದುಕೊಂಡು ಸಲಹಲೆಂದು ಯೋಚಿಸುತ್ತದೆಯಂತೆ. ಆದದ್ದರಿಂದಲೇ ಕಾಗೆಗೆ "ಪರಭೃತ್" ಎಂದೂ ಕೋಗಿಲೆಗೆ "ಪರಭೃತ" (ಪರಪುಷ್ಟ) ಎಂದೂ ಹೆಸರು. ತಾನು ಮಾಡಿದ್ದರ ಹೊಣೆಗಾರಿಕೆಯನ್ನು ಇನ್ನೊಬ್ಬರಿಗೆ ವಹಿಸುವ ಯುಕ್ತಿ ಕೋಗಿಲೆಯದು. ಮೂರ್ತಿಯವರು ಆ ಸೀತಿಯನ್ನಂಗೀಕರಿಸಿದ್ದವರಲ್ಲ. ಅವರು ಯಾವ ಮತ್ತೊಬ್ಬರ ಪುಸ್ತಕಕ್ಕಾಗಲಿ ಎಂದಾದರೂ ಮುನ್ನುಡಿ ಬರೆದದ್ದಾಗಿದ್ದರೆ ಅದು ನನಗೆ ತಿಳಿಯದು. ಅವರು ತಮಗೋಸ್ಕರ ಅಂಥ ಹೊರಗಣ ಸಹಾಯವನ್ನು

ಎಂದೂ ಅಪೇಕ್ಷಿಸಿದವರಲ್ಲವೆಂದು ನಾನು ತಿಳಿದುಕೊಂಡಿದ್ದೇನೆ. ಮುನ್ನುಡಿಯ ಪದ್ಧತಿ ನನಗೇನೋ ಪ್ರಿಯವಾದದ್ದಲ್ಲ. ಮೂರ್ತಿ ಬದುಕಿದ್ದಿದ್ದರೆ ನಾನು ಈಗ ಈ ಎರಡು ಪಂಕ್ತಿಯನ್ನು ಬರೆಯಬೇಕಾದ ಆವಶ್ಯಕತೆಯುಂಟಾಗುತ್ತಿರಲಿಲ್ಲ. ಅವರ ಕೃತಿಗೆ ಯಾರ ಶಿಫಾರಸೂ ಅವಶ್ಯವಿಲ್ಲ. ಅವರ ಪ್ರಿಯಶಿಷ್ಯರೊಬ್ಬರು ನನಗೆ ಪ್ರಿಯಮಿತ್ರರಾಗಿ ಈ ಪ್ರಕಟನೆಯ ಭಾರವನ್ನಂಗೀಕರಿಸಿರುವುದರಿಂದ, ಆ ಮಿತ್ರರು ನನ್ನಲ್ಲಿಟ್ಟಿರುವ ಅಭಿಮಾನದ ಫಲವಾಗಿ ನನಗೆ ಈ ಅವಕಾಶ ದೊರೆತಿದೆ. ಮೂರ್ತಿಯನ್ನು ಕುರಿತು ಮಾತನಾಡುವ ಅವಕಾಶ ನನಗೆ ಎಂದಾದರೂ ಸಂತೋಷಕರವೇ; ಆತನ ಸ್ಮರಣೆ ಕರ್ತವ್ಯವೇ. ಅದು ಈಗ ಹೇಗೆ ಪವಿತ್ರವೋ ಹಾಗೆ ಇಷ್ಟವೂ ಆಗಿರುವ ಕರ್ತವ್ಯ.

ಈ ಪುಸ್ತಕ ಮೂರ್ತಿಗಳು ಮಾಡಿದ ಕೊನೆಯ ಸಾಹಿತ್ಯ ಸೇವೆ. ಇದನ್ನು ಅವರು ಪೂರ್ತಿ ಬರೆದಿರಿಸಿ ಆಮೇಲೆ ಅಚ್ಚಿಗೆ ಹೊರಡಲಿಲ್ಲ. ಕಥೆ ಅವರ ಮನಸ್ಸಿನಲ್ಲಿತ್ತು; ಅದನ್ನು ಆಗಾಗ ಬರೆದು ಅಚ್ಚಿನ ಕಾರ್ಖಾನೆಯ ಕೆಲಸದ ವೇಳೆಗೆ ಬೇಕಾದಷ್ಟು ಭಾಗವನ್ನು ಒದಗಿಸುತ್ತಿದ್ದರು. ಇದರ ಕಡೆಯ ಪ್ರಕರಣ ಅಚ್ಚಾಗುವುದಕ್ಕೆ ಮುಂಚೆಯೇ ಆತ ತೀರಿಕೊಂಡ ಕಾರಣದಿಂದ, ಗ್ರಂಥ ಮುಗಿಯಲಿಲ್ಲವೇನೋ ಎಂದು ಅದನ್ನು ಅದುವರೆಗೆ ನೋಡಿದವರು ಭ್ರಾಂತಿ ಪಟ್ಟಿದ್ದಂತೆ ಕಾಣುತ್ತದೆ. ಪುಸ್ತಕದ ಬಹುಭಾಗ ಅಚ್ಚಾಗಿ, ಕೊಂಚ ಇನ್ನೂ ಅಚ್ಚಾಗಬೇಕಾಗಿದ್ದಾಗ ಒಂದು ದಿನ ಮೂರ್ತಿ ಈ ಪುಸ್ತಕವನ್ನು ಕುರಿತು ನನ್ನಲ್ಲಿ ಪ್ರಸ್ತಾವಿಸಿ, ಅದರ ಕಥೆಯನ್ನು ಆದ್ಯಂತವಾಗಿ ಸಂಗ್ರಹಿಸಿ ಹೇಳಿದ್ದರು. ಅದನ್ನು ಜ್ಞಾಪಕದಲ್ಲಿರಿಸಿಕೊಂಡು ಈ ಗ್ರಂಥವನ್ನೋದಿ ನೋಡಿದ ಮೇಲೆ, "ಇದು ಪೂರ್ತಿಯಾಗಿದೆ; ಗ್ರಂಥಕರ್ತರು ಇದಕ್ಕೆ ಇನ್ನು ಸೇರಿಸಬಹುದಾಗಿದ್ದ ಸಂಗತಿ ಯಾವುದೂ ಇದ್ದಿರಲಾರದು"—ಎಂದು ನನ್ನ ಮನಸ್ಸಿಗನ್ನಿಸುತ್ತದೆ.

ಈ ಪುಸ್ತಕವನ್ನೋದುವವರಲ್ಲಿ ಯಾರು ಮೂರ್ತಿಯ ಸ್ವಭಾವವನ್ನರಿತವರೋ ಅವರಿಗೆ,—ಮೂರ್ತಿಯ ಮಿಕ್ಕ ಲೇಖನಗಳಂತೆಯೇ,—ಇದು ಆತನ ನೈಜಲಕ್ಷಣಗಳಿಂದ ತುಂಬಿದ್ದೆಂದು ತಾನಾಗಿ ತೋರಿಬಂದೀತು. ಮೂರ್ತಿ ಎಲ್ಲ ವಿಷಯಗಳಲ್ಲೂ ಚೊಕ್ಕಟವಾದ ವ್ಯಕ್ತಿ. ದೇಹ ನಿರ್ಮಲ

ವಾದ ಕಾಂತಿಯುಳ್ಳದ್ದು; ಮುಖ ಪ್ರಸನ್ನವಾದದ್ದು; ಮನಸ್ಸು ಉದಾರ ವಾದದ್ದು ಮತ್ತು ಉನ್ನತ ದೃಷ್ಟಿಯುಳ್ಳದ್ದು; ಮಾತು ಸರಸವಾದದ್ದು, ಕೋಮಲ ಮಧುರ ಭಾವಗಳು, ತುಂಬಿ ತುಳುಕುತ್ತಿದ್ದದ್ದು; ಲಲಿತಹಾಸ್ಯ ಪ್ರೀತಿಯುಳ್ಳದ್ದು. ಈ ಎಲ್ಲ ಲಕ್ಷಣಗಳೂ ಅವರ ಈ ಕಥೆಯಲ್ಲಿ ಕಾಣ ಬರುತ್ತವೆ. ಜನವನ್ನು ಮೆಚ್ಚಿಸಲಿಕ್ಕಾಗಿ ಶೃಂಗಾರದ ಹಸಿ ಹಸಿಯನ್ನಾಗಲಿ ಸಮಾಜ ಪರಿಷ್ಕರಣಾತುರದ ಬಿಸಿಬಿಸಿಯನ್ನಾಗಲಿ ಕಥೆಯಲ್ಲಿ ತುಂಬ ಬೇಕೆಂದು ಅವರಿಗೆ ಮನಸ್ಸಾಗಿದ್ದಿದ್ದರೆ ಅಂಥ ರಸಾಭಾಸಗಳನ್ನು ತುಂಬಲು ಸಂದರ್ಭ ಕಲ್ಪಿಸಿಕೊಳ್ಳುವುದು ಅವರಿಗೇನೂ ಕಷ್ಟದ ಕೆಲಸವಾಗಿರಲಿಲ್ಲ. ಅಂಥ ಮನಸ್ಸು ಅವರದಲ್ಲ. ಅವರು ಎಲ್ಲ ಬಗೆಯ ಕೊಳಕುಗಳನ್ನೂ ಘಾಟುಗಳನ್ನೂ ದೂರಮಾಡಿದ್ದವರು. ಅವರಿಗೆ ಬೇಕಾಗಿದ್ದದ್ದು ಶುಚಿಯಾದ ಸೊಗಸು,—ಯಾರ ಮನಸ್ಸಿಗೂ ಯಾವ ಬಗೆಯಲ್ಲಿಯೂ ಎಷ್ಟು ಮಾತ್ರವೂ ವೆಗಟನ್ನೂ ಅಸಹ್ಯವನ್ನೂ ಉಂಟುಮಾಡಲಾರದ, ಚಿತ್ತೋತ್ಕರ್ಷಕವಾದ ಸೊಗಸು. ಅಂಥ ಸೊಗಸು ಈ ಕಥೆಯಲ್ಲಿ ಕಾಣ ಬರುತ್ತದೆ.

ಮೂರ್ತಿಯ ಸಾಹಿತ್ಯಗುಣ ವಾಸ್ತವಿಕತೆ, — ಆದರೆ ಅದು ಉದಾತ್ತ ದೃಷ್ಟಿಯ ವಾಸ್ತವಿಕತೆ. ಅವರು ಸಂಸಾರದಲ್ಲಿ ಬಾಳಿ ಬಾಳನ್ನು ಸೊಗಸುಗೊಳಿಸಬೇಕೆಂದು ದುಡಿದವರು. ತಂದೆ ತಾಯಿ, ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ಭಾವಮೈದಂದಿರು, ವಿಸ್ತಾರವಾದದ್ದೂ ಬಗೆಬಗೆಯದೂ ಆದ ಬಂಧುವರ್ಗ, ಹಾಗೆಯೇ ವಿವಿಧವಾದ ಮಿತ್ರವರ್ಗ — ಇಷ್ಟರ ನಡುವೆ, ಎಲ್ಲರಲ್ಲಿಯೂ ಮಿಳಿತರಾಗಿ, ಎಲ್ಲರ ಅಂತರಂಗಗಳನ್ನೂ ಒಳಹೊಕ್ಕು ಕಂಡು, ಅವರಿಗೆ ತಾನು ಕೂಡಿದ ಮಟ್ಟಿಗೂ ಒಗ್ಗಿ, ಅವರನ್ನೊಗ್ಗಿಸಿಕೊಂಡು, ಎಲ್ಲರಿಗೂ ಸಹಕಾರಿಯಾಗಿ ಬದುಕು ನಡಸಿದ ಸಾತ್ತ್ವಿಕಪುರುಷ ನಮ್ಮ ಶ್ರೀನಿವಾಸಮೂರ್ತಿ. ಅವರ ಕುಟುಂಬ ನಮ್ಮ ಸಮಾಜದಲ್ಲಿ ಮಧ್ಯಮ ತರಗತಿಗೆ ಸೇರಿದ್ದು. ಅದು ತೀರಾ ಬಡತನದ್ದಲ್ಲ, ಹೇಳಿಕೊಳ್ಳುವಂಥ ಸಿರಿವಂತಿಕೆಯದೂ ಅಲ್ಲ. ಅವರ ತಂದೆ ಶ್ರೀ ರಾಮಚಂದ್ರರಾಯರು ಚಿಕ್ಕ ಹುದ್ದೆಯಿಂದ ಅಮಲ್ದಾರ್ ಪದವಿಗೆ ಹತ್ತಿದ್ದವರು. ಅವರಲ್ಲಿ ಜಾಗರೂಕತೆ, ಜಾಣತನ, ವಿನಯ, ಗಾಂಭೀರ್ಯ — ಇವೆಲ್ಲ ಇಲ್ಲದಿದ್ದಿದ್ದರೆ ಅಂಥ ಏಳಿಗೆ ಸಾಧ್ಯವಾಗುತ್ತಿರಲಿಲ್ಲ. ಅವರು ಜನದ ಕಣ್ಣಿಗೆ ಹೇಗೋ ವ್ಯವಹಾರಕ್ಕೂ ಹಾಗೆಯೇ

ಇಷ್ಟರಾಗಿದ್ದವರು. ತಂದೆಯ ಗುಣ ಕಾಂತಿಗಳು ಮಗನ ಪಾಲಿಗೆ ತುಂಬಾ ಬಂದಿದ್ದವು. ಅವರ ಕುಟುಂಬವು ಸ್ನೇಹ ಆದರಣೆ ಸಂತೋಷಗಳಿಂದ ತುಂಬಿದ್ದದ್ದು. ಅಂಥ ಭಾರೀ ಕುಟುಂಬದಲ್ಲಿ ಪರಿಪರಿಯ ಸ್ವಭಾವದವರು ಸೇರಿಕೊಂಡಿದ್ದದ್ದು ಸಹಜವಲ್ಲವೇ ? ಮೂರ್ತಿಯ ಮಿತ್ರಮಂಡಲಿಯೂ ವಿಶಾಲವಾದದ್ದು ; ಉಪಾಧ್ಯಾಯತನದ ಮತ್ತು ಇನ್‌ಸ್ಪೆಕ್ಟರ್ ಹುದ್ದೆಯ ಜೊತೆಗೆ ಸ್ಕೌಟ್ ಆಗಿಯೂ ಅವರು ಬಹು ಜನರ ಪರಿಚಯ ಸಂಪಾದಿಸಿದ್ದರು. ಹೀಗೆ ಸರಸಿಗಳು, ಜಿಪುಣಿಗಳು, ಕೈಲಾಗದವರು, ಅತಿ ರಸಿಕರು, ಹೊಟ್ಟೆಯುರಿಯವರು, ಶೀಘ್ರಕೋಪದವರು, ದೀರ್ಘ ಜಡರು, ಛಲವಂತರು, ಜಾಣರು, ಕಪಟಿಗಳು — ಇಂಥವರೆಲ್ಲರ ಸಂಪರ್ಕವೂ ಮೂರ್ತಿಗೆ ಚಿಕ್ಕಂದಿನಿಂದ ದೊರೆತಿತ್ತು. ಆ ವಿವಿಧಾನುಭವಗಳ ಮಥನದಿಂದ ಹುಟ್ಟಿದ ನವನೀತವೇ ಮೂರ್ತಿಯ ಕಥೆ ನಾಟಕಗಳು. ಸಂಸಾರದಲ್ಲಿ ಮನಸ್ತಾಪಗಳು ಹೇಗೆ ಹುಟ್ಟುತ್ತವೆ; ತಮಾಷೆಯ ಮಾತು ತಳಮಳಕ್ಕೆ ಹೇಗೆ ದಾರಿ ಮಾಡುತ್ತದೆ; ಬಲಪಕ್ಕದ ಕೊಬ್ಬಿನ ಕೊಳ್ಳಿಯೂ ಎಡಪಕ್ಕದ ಹೊಟ್ಟೆಯುಬ್ಬರದ ಕೊಳ್ಳಿಯೂ ಹೇಗೆ ತಿಕ್ಕಾಡಿ ಕಿಡಿಯೆಬ್ಬಿಸುತ್ತವೆ ; ಆ ಕಿಡಿ ನಿರಪರಾಧಿಯ ನಡವಳಿಕೆಗೆ ಹೇಗೆ ಅಪರಾಧದ ಬಣ್ಣವನ್ನು ಕಟ್ಟುತ್ತದೆ ; ಹಾಲು ಯಾವಾಗ ಉಕ್ಕುತ್ತದೆ, ಯಾವಾಗ ಒಡೆಯುತ್ತದೆ ; ಸಕ್ಕರೆಯ ನಡುವೆ ಉಪ್ಪು ಹೇಗೆ ಅಡಗಿಕೊಂಡಿರುತ್ತದೆ — ಈ ಮನುಷ್ಯ ಬಾಂಧವ್ಯದ ಮರ್ಮಗಳನ್ನೆಲ್ಲ ಚೆನ್ನಾಗಿ ಕಂಡುಕೊಂಡವರು ಮೂರ್ತಿ. ಹಾಗೆ ಕಂಡ ಮರ್ಮಗಳಲ್ಲಿ ಕೆಲವನ್ನು ಪ್ರಸ್ತುತ ಕಥೆಯಲ್ಲಿ ಚಿತ್ರಿಸಿದ್ದಾರೆ. ವಿಪರೀತ ಕಲ್ಪನೆಯಿಲ್ಲದಿರುವುದು ಈ ಚಿತ್ರಣದ ಸೊಗಸಿನಲ್ಲೊಂದು ಭಾಗ.

ಸಂಭಾಷಣೆಯಲ್ಲಿ ಮೂರ್ತಿ ತುಂಬಾ ಸ್ವಾರಸ್ಯಗಾರರು. ಕಥೆ ಹೇಳುವುದರಲ್ಲಿಯೂ ಹಾಗೆಯೇ. ಅಚ್ಚುಕಟ್ಟಾದ ವಾಕ್ಯರಚನೆ ; ವಸ್ತುವನ್ನು ಕಣ್ಣೆದುರಿಗೆ ತರಲು ಸಮರ್ಥವಾದ ಪದಗಳ "ಪ್ರೋಂಭಾವಣೆ" (ಇದು ಅವರಿಗೆ ಬಳಕೆಯಾಗಿದ್ದ ಮಾತು) ; ತಿಳಿಯಾಗಿ ಹರಿದು ಗದ್ದಲವೆಬ್ಬಿಸದ ಪರಿಹಾಸ ; ಮನಸ್ಸಿನಲ್ಲಿ ಸುಳಿದು ಕಿವಿಗೆ ಕೇಳಿಸಿ – ಕೇಳಿಸದಂಥ ಶೃಂಗಾರವಿಲಾಸ — ಇವೆಲ್ಲ ಮೂರ್ತಿಯ ಕಥನ ಕೌಶಲದ ಅಂಶಗಳು. ಮೂರ್ತಿ ಕಥೆ ಹೇಳುತ್ತಿದ್ದರೆ ಅದನ್ನು ಕೇಳುವುದೇ ಒಂದು ದೊಡ್ಡ ಸುಖಾನುಭವ. ಆಗ

ಮಾತಿನ "ಪೊಗದಸ್ತಿ"ನ (ಇದೂ ಅವರ ಬಳಕೆಯ ಮಾತೇ) ಜೊತೆಗೆ ಮುಖದ ಕಾಂತಿ, ಧ್ವನಿಯ ಕೊಂಕು, ಕಣ್ಣು ಕೈಗಳ ಭಾವ ಭಂಗಿ — ಇವು ಸೇರಿಕೊಂಡು ಒಂದು ಜೀವ ಕಳೆಯಿಂದ ಕೇಳುವವರನ್ನು ಪರವಶಗೊಳಿಸು ತ್ತಿದ್ದವು. ಮೂರ್ತಿ ಅದೃಶ್ಯರಾದ ಮೇಲೆ ಅವರ ಸಂಭಾಷಣೆಯ ಸೌಖ್ಯ ವನ್ನು ಬಯಸುವವರಿಗೆ ಅವರು ಬರೆದ ಕಥೆ ಕಾದಂಬರಿಗಳು ಅಮೂಲ್ಯ ವಾಗಿವೆ.

"ಮಹಾ ತ್ಯಾಗ" ಎಂದು ಕೇಳಬಂದ ಕೂಡಲೆ "ಅದೇನು ಕರ್ಣನೆ?" "ಅದೇನು ಗೌತಮ ಬುದ್ಧನೆ?" ಎಂದು ಯಾರೂ ಕೇಳಬೇಕಾದದ್ದಿಲ್ಲ. ತ್ಯಾಗಗುಣ ಜೀವನದ ಸಾಮಾನ್ಯ ದರ್ಜೆಗಳಲ್ಲಿಯೂ ಇರಬಹುದಾದದ್ದು. ಕಪಿ ಬೆಟ್ಟ ಹೊತ್ತು ತಂದರೆ ಅಳಿಲು ಮರಳು ಮೆತ್ತಿಕೊಂಡು ತಂದೀತು. ವೀರಾಧಿವೀರನ ತ್ಯಾಗದ ದರ್ಶನದಿಂದ ನಮಗೆ ಅದ್ಭುತದ ಅನುಭವವಾದರೆ ಸಾಧಾರಣ ಮನುಷ್ಯನ ತ್ಯಾಗದಿಂದ ನಮಗೆ ಅನುಕರಣಧೈರ್ಯ ದೊರೆಯು ತ್ತದೆ. ವೀರೋದಾಹರಣೆಗೆ ಸಾರ್ಥಕತೆ ಸಾಮಾನ್ಯನು ತೋರುವ ಅನು ಸರಣೆಯಲ್ಲಿ.

ಸರೋಜ ತನ್ನ ಮನೆಗಾಗಿ ಪಾಯಸ ಮಾಡಲೆಂದು ಹಾಲು ಕಾಯಿ ಸುತ್ತಿದ್ದಳು. ಪಕ್ಕದಲ್ಲಿ ನಿಂತಿದ್ದೊಬ್ಬರು ಏನೋ ಆತುರದಲ್ಲಿ ನಿಂಬೆಯ ಹಣ್ಣು ಹೆಚ್ಚಿದರು. ಅದರ ಹುಳಿ ತೊಟ್ಟು ಎಗರಿ ಆ ಹಾಲಿನಮೇಲೆ ಬಿದ್ದು ಅದು ಒಡೆಯಿತು. ಆಗ ಆಕೆ ಅದನ್ನು ಬಚ್ಚಲಲ್ಲಿ ಚೆಲ್ಲಿ ಗೋಳಾಡುವುದಕ್ಕೆ ಪ್ರತಿಯಾಗಿ ಅದರಿಂದ ಮೊಸರು ಮಾಡಿ ಬೇಡಿದವರಿಗೆ ಬಡಿಸಿದಳು. ಒಬ್ಬಳ ಉಪವಾಸದಿಂದ ಊರಿಗೆ ಔತಣವಾಯಿತು.

ಈ ಕಥೆಯಲ್ಲಿ ನಮ್ಮ ಕಾಲದ ಮಧ್ಯಮ ತರಗತಿಯ ಸಮಾಜ ಜೀವನ ರೂಪಗೊಂಡಿದೆ. ಗುಣದ ಬೆಲೆಯನ್ನು ಮರೆತು ಹಣದ ಬೆಲೆ ದೊಡ್ಡ ದೆಂದುಕೊಂಡ ಗೃಹಸ್ಥರು, ಲೋಕರೀತಿಯಲ್ಲಿ ನಿಜವಾದ ನೀತಿಯೆಷ್ಟಿದೆ ಯೆಂದು ವಿಚಾರ ಮಾಡದೆ ಹೋದ ಸಭ್ಯರು, ಅನ್ಯಾಯದಲ್ಲಿ ಇಷ್ಟವಿಲ್ಲದೆ ನ್ಯಾಯ ರಕ್ಷಣೆಗೆ ಧೈರ್ಯ ಸಾಲದೆ ಇದ್ದ ಮರ್ಯಾದೆವಂತರು—ಇಂಥವರು ಈ ಹೊತ್ತು ನಮ್ಮ ಮನೆ ಸಮಾಜಗಳನ್ನಾಳುತ್ತಿರುವವರು. ಅವರ "ಫೋಟೋ" (ಪ್ರತಿಚಿತ್ರ)ಗಳನ್ನು "ಮಹಾ ತ್ಯಾಗ"ದ ಪುಟಗಳಲ್ಲಿ ಕಾಣ

ಬಹುದು. ಆ ಜನ ಉದ್ದೇಶದಲ್ಲಿ ಕೆಟ್ಟವರಲ್ಲ; ಆದರೆ ಪರಿಣಾಮದಲ್ಲಿ ಒಳ್ಳೆಯವರಾಗಲು ಅವರಲ್ಲಿ ನಿಷ್ಕರ್ಷೆ ನಿಷ್ಠೆಗಳು ಬೇಕಾದಷ್ಟಿರಲಿಲ್ಲ. ಜೀವನ ದಲ್ಲಿ ನೆಮ್ಮದಿಯೂ ಶಾಂತಿಯೂ ಕಾಣಿಸಬೇಕಾದರೆ ಜನದಲ್ಲಿ ಒಂದು ನೀತಿ ಸಮುನ್ನತಿ ಇರಬೇಕು. ಆ ನೀತಿ "ಕಚ್ಚದೆ, ಒದೆಯುವೆ" ಇರುವ ಅಂಗ ಲಾಚಿತನವಲ್ಲ; ಅದು ಒಂದು ಬುದ್ಧಿಯ ಎಚ್ಚರಿಕೆಯ ಮತ್ತು ಒಂದು ಎದೆಯ ಗಟ್ಟಿತನದ ಸಂಯೋಗದ ಫಲಿತ. ಬುದ್ಧಿಯು ಧರ್ಮಾಧರ್ಮ ವಿವೇಚನೆಯಲ್ಲಿ ಚಟುವಟಿಕೆಯುಳ್ಳದ್ದಾಗಿರಬೇಕು, ಎದೆ ಫಲಿತಾಫಲಿತಗಳ ಅನುಭವದಲ್ಲಿ ಸಹನೆಯುಳ್ಳದ್ದಾಗಿರಬೇಕು. ಸಹನೆಯು ಒಂದು ರೂಪ ಕೊಂಚಮಟ್ಟಿನ ವಿರಕ್ತಿ. ಇವು ಮೂರ್ತಿಯಲ್ಲಿದ್ದ ಗುಣಗಳೆಂದು ನಾನು ನಲವತ್ತು ವರ್ಷದ ಅನುಭವದ ಆಧಾರದ ಮೇಲೆ ಭಾವಿಸಿಕೊಂಡಿದ್ದೇನೆ. ಆ ಗುಣಗಳ ಆವಶ್ಯಕತೆಯನ್ನು ಈ ಸಂಸಾರ ಕಥೆ ದೃಷ್ಟಾಂತಪಡಿಸುತ್ತದೆ. ನಮ್ಮ ಜನ ಇದನ್ನು ಪುನಃ ಪುನಃ ಓದಿ ಚಿಂತಿಸಲೆಂದು ನಾನು ಬಯಸುವುದು ಅವರಿಗೋಸ್ಕರವಾಗಿ, — ಅವರ ಬಾಳು ಚೆನ್ನಾಗಲೆಂದು. ಇಂತು ಶಿವಂ.

ಜೂನ್ ೧೯೫೫. ಡಿ. ವಿ. ಜಿ.

# ಮಹಾತ್ಯಾಗ

## ೧. ತಾಯಿ ಮತ್ತು ಮಗ

ಬೀದಿಯಲ್ಲಿ ಜಟಕಾಗಾಡಿ ಮನೆಯ ಮುಂದೆ ಬಂದು ನಿಂತಿತು. ಕಾವೇರಮ್ಮ ನಡುಮನೆಯಿಂದಲೇ ಆ ಗಾಡಿಯನ್ನು ನೋಡಿ, 'ಈಗ ಯಾರು ನಮ್ಮ ಮನೆಗೆ ಬರುತ್ತಾರೆ?' ಎಂದುಕೊಂಡಳು. ಆದರೆ ಹೆಚ್ಚುಕಾಲ ಆಲೋಚನೆ ಮಾಡುವುದಕ್ಕೆ ವಿರಾಮವೇನೂ ಇರಲಿಲ್ಲ. ಆಕೆಯ ಮಗ ಸೀತಾರಾಮು ಗಾಡಿಯಿಂದಿಳಿದು ಮನೆಯೊಳಕ್ಕೆ ಬಂದನು. ಜಟಕಾಗಾಡಿಯವನು ಅವನ ಟ್ರಂಕನ್ನೂ ಹಾಸಿಗೆಯನ್ನೂ ಹೊತ್ತು ತಂದು ಹಾಲಿನಲ್ಲಿಟ್ಟು ಬಾಡಿಗೆಗಾಗಿ ಕೈಯೊಡ್ಡಿದನು. ಅವನಿಗೆ ಬಾಡಿಗೆಕೊಟ್ಟು ಕಳಿಸಿದ್ದಾಯಿತು.

ಸೀತಾರಾಮರಾಯನ ಮುಖ ಗೆಲುವಾಗಿರಲಿಲ್ಲ; ಹೇಳಬಹುದಾದರೆ ಸ್ವಲ್ಪ ದುಗುಡದಿಂದಲೇ ತುಂಬಿತ್ತು. ಕಾವೇರಮ್ಮ, 'ಇದೇನು ಸೀತಾರಾಮು! ಎರಡು ದಿನದ ಹಿಂದೆ ಹೋದವನು ಇಷ್ಟುಬೇಗ ಹಿಂದಿರುಗಿಬಿಟ್ಟೆ. ಒಂದು ವಾರ ರಜಾ ತೆಗೆದುಕೊಂಡಿದ್ದೇನೆ, ಮುಂದಿನ ಸೋಮವಾರ ಊರಿಗೆ ಹಿಂದಿರುಗುತ್ತೇನೆ— ಎಂದು ಹೇಳಿ ಹೋಗಿದ್ದೆಯಲ್ಲ. ಭಾನುವಾರ ಹೊರಟವನು ಮಂಗಳವಾರವೇ ಬಂದುಬಿಟ್ಟೆ' ಎಂದು ಕೇಳಿದಳು.

'ಏನೋ ಮನಸ್ಸಿಗೆ ತೋಚಿತು, ಹಿಂದಿರುಗಿ ಬಿಟ್ಟೆ.'

'ತಟ್ಟನೆ ಹಿಂದಿರುಗುವುದಕ್ಕೆ ಕಾರಣ?'

'ಕಾರಣ ಗೀರಣ ಕೇಳಬೇಡ. ಮನಸ್ಸಿಗೆ ಒಗ್ಗಲಿಲ್ಲ; ಹಿಂದಿರುಗಿ ಬಂದೆ.'

'ನೀನು ಹೊರಟಾಗಲೇ ನಾನು ಹೇಳಿದೆ: ಈಗ ಅವರ ಮನೆಗೆ ಹೋಗಬೇಡ. ನಿನ್ನ ಹೆಂಡತಿ ತವರು ಮನೆಗೆ ಹೋಗಿ ಇನ್ನೂ

ತಿಂಗಳಾಗಿಲ್ಲ. ಹಿಂದೆಯೇ ನೀನು ಹೋದರೆ ಚೆನ್ನಾಗಿರುವುದಿಲ್ಲ. ಅವರದೆಲ್ಲ ದೊಡ್ಡಕುದುರೆ ಚೇಷ್ಟೆಗಳು. ನಾವು ಅವರಿಗೆ ಈಡೇನೂ ಅಲ್ಲ–ಎಂದು ನಾನು ಹೇಳಲಿಲ್ಲವೆ? ನನ್ನ ಮಾತನ್ನು ತಳ್ಳಿಹಾಕಿ ಆ ತೊನ್ನು ಹಿಡಿದವಳನ್ನು ನೋಡುವುದಕ್ಕೆ ಹಿಂದೆಯೇ ಹೋದೆಯಪ್ಪ.'

ಸೀತಾರಾಮರಾಯನಿಗೆ ದುಗುಡ ಹೆಚ್ಚಿತು. ಆದರೆ ತಾಯಿಯಲ್ಲಿ ಅವನಿಗೆ ಭಕ್ತಿ ಹೆಚ್ಚು. ಏನು ಮಾಡುವುದು? ನಿಟ್ಟುಸಿರು ಬಿಡುತ್ತ, 'ನನಗೆ ಅಲ್ಲಿ ಹೋದರೂ ಸುಖವಿಲ್ಲ, ಇಲ್ಲಿ ಬಂದರೂ ಸುಖ ವಿಲ್ಲ. ಎಲ್ಲಿಯಾದರೂ ತೊಲಗಿ ಹೋಗೋಣವೆಂದರೆ ಈ ದೊಡ್ಡ ಸಂಸಾರ ತಲೆಗೆ ಕಟ್ಟಿದೆ. ಅಪ್ಪ ಏನೋ ಕಣ್ಣು ಮುಚ್ಚಿಕೊಂಡ. ಪುಣ್ಯಮಾಡಿದ ಜೀವ!' ಎಂದು ನೊಂದುಕೊಂಡು ಹೇಳಿದನು.

'ಹೌದಪ್ಪ! ನೀನೇ ನೋಡು. ಅಪರಂಜಿಯಂತೆ ವಯಿನ ವಾಗಿದ್ದ ಸಂಸಾರ. ನಾನೂ ಅರಿಸಿನ ಕುಂಕುಮ ಹಚ್ಚಿಕೊಂಡು ದೊಡ್ಡ ಮುತ್ತೈದೆಯಾಗಿದ್ದೆ. ನಿನ್ನ ಹೆಂಡತಿ ಈ ಮನೆ ತುಳಿದದ್ದೇ ತಡ. ಒಂದು ವರ್ಷದೊಳಗಾಗಿ ಮಾವನನ್ನ ನುಂಗಿದಳು. ಆಗ ಎಂದರೆ ನೀವಿಬ್ಬರೂ ಸಂಪಾದನೆ ಮಾಡುತ್ತಿದ್ದಿರಿ. ಈ ಸಂಸಾರ ಹೇಗೋ ನಡೀತಿತ್ತು. ಈಗ ನಿನ್ನ ಸಂಪಾದನೆಯಲ್ಲಿ ಎಲ್ಲ ನಡೆಯ ಬೇಕು. ಮದುವೆಯಾಗುವ ತಂಗಿಯರು ಇಬ್ಬರು ನಿನ್ನ ಕೊರಲಿಗೆ ಉರುಲು ಬಿದ್ದಿದ್ದಾರೆ; ಓದುವ ಹುಡುಗರು—ನಿನ್ನ ತಮ್ಮಂದಿರು ಮೂವರು—ನಿನಗೆ ಗಂಟುಬಿದ್ದಿದ್ದಾರೆ. ನನ್ನ ವಸ್ತುವನ್ನು ಕಳೆದು ಕೊಂಡು ತಲೆಗೆ ಮುಸುಕೆಳೆದುಕೊಂಡು ಮೂಳಿ ನಾನೊಬ್ಬಳು ನಿನ್ನ ಪ್ರಾಣಕ್ಕೆ ತಗುಲಿಬಿದ್ದಿದ್ದೇನೆ.'

ಕಾವೇರಮ್ಮನಿಗೆ ಅಳು ಬಂತು. ಸ್ವರ ಗದ್ಗದವಾಯಿತು. ಸೀತಾರಾಮರಾಯನಿಗೆ ಸರೋಜಳನ್ನು ತಂದುಕೊಂಡದ್ದು ಕಾವೇ ರಮ್ಮನ ಇಷ್ಟಕ್ಕೆ ವಿರೋಧವಾಗಿ. ಸರೋಜ ಇಂಟರ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದಳು. ಅವಳು ದೇಹಸೌಷ್ಠವದಿಂದ ಕೂಡಿ ಬೆಳ್ಳಗೆ ಆರೋಗ್ಯವಾಗಿದ್ದ ಹೆಣ್ಣು; ದುಂಡನೆಯ ಮುಖ, ಅಗಲವಾದ ಕಣ್ಣು ಗಳು, ಉದ್ದನೆಯ ಜಡೆ; ಒಳ್ಳೆಯ ಚೆಲುವೆ. ಅವಳ ತಂದೆ ಕೃಷ್ಣ

ರಾಯರು ಅಸಿಸ್ಟೆಂಟ್ ಕಮಿಷನರ್. ಸೀತಾರಾಮರಾಯನ ತಂದೆ ಶ್ರೀನಿವಾಸರಾಯರೂ ಸರೋಜಳ ತಂದೆ ಕೃಷ್ಣರಾಯರೂ ಬಾಲ್ಯದಿಂದಲೂ ಸ್ನೇಹಿತರು, ಸಹಪಾಠಿಗಳು; ಸೆಂಟ್ರಲ್ ಕಾಲೇಜಿನ ಹಾಸ್ಟೆಲಿನಲ್ಲಿ ಒಂದೇ ಕೊಟಡಿಯಲ್ಲಿದ್ದ ಸಹವಾಸಿಗಳು. ಅದೃಷ್ಟಗಳಲ್ಲಿ ಸ್ವಲ್ಪ ವ್ಯತ್ಯಾಸವಿದ್ದುದರಿಂದ ಶ್ರೀನಿವಾಸರಾಯರು ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಹೆಡ್‌ಗುಮಾಸ್ತೆಯರಾಗಿ ಉಳಿದರು. ಕೃಷ್ಣರಾಯರಾದರೋ ಬೇಗ ಅಮಲ್ದಾರ್‌ಗಿರಿಗೆ ಏರಿ ಅನಂತರ ಅಸಿಸ್ಟೆಂಟ್ ಕಮಿಷನರ್ ಸಹ ಆದರು. ಸ್ನೇಹದೊಂದಿಗೆ ಬಾಂಧವ್ಯವೂ ಹಾಲೂ ಸಕ್ಕರೆಗಳಂತೆ ಸೇರಿ ಮಧುರ ಜೀವನ ತಮ್ಮ ಪಾಲಿಗಿರಲಿ ಎಂದು ಇಬ್ಬರೂ ಬಯಸಿದ್ದವರೇ. ಸೀತಾರಾಮರಾಯನು ಬಿ. ಎ. ಪದವೀಧರ. ಒಳ್ಳೆಯ ರೂಪವಂತ. ಸರೋಜಳನ್ನು ನೋಡಿದ ಯಾವ ಗಂಡಸು ತನಗೆ ಅವಳು ಬೇಡ ಎಂದು ಹೇಳಿಯಾನು? ತಂದೆ ಮತ್ತು ಮಗ ಇಬ್ಬರ ಅಭಿಪ್ರಾಯವೂ ಒಂದೇ ಆಯಿತು. ಆದರೆ ಕಾವೇರಮ್ಮ ಆ ಸಂಬಂಧಕ್ಕೆ ಒಪ್ಪಲಿಲ್ಲ. ಬೇರೇಕಡೆಯಿಂದ ತಮ್ಮ ನೆಂಟರಲ್ಲಿಯೋ ಮತ್ತೆ ಎಲ್ಲಿಯೋ ಒಂದು ಹೆಣ್ಣನ್ನು ತಂದುಕೊಳ್ಳಬೇಕೆಂದು ಆಕೆಯ ಇಷ್ಟ. ಆದ್ದರಿಂದ ಸರೋಜಳನ್ನು ಗೊತ್ತು ಮಾಡುತ್ತಾರೆಂದು ತಿಳಿದ ಲಾಗಾಯಿತು,—'ಅದೇನು ಆ ತೊನ್ನು ಮೈಗೆ ಮೋಹಪಡುತ್ತೀಯೋ ಸೀತಾರಾಮು? ಆ ಓದಿದ ಹುಡಗಿ ನಿನ್ನೊಡನೆ ಸಂಸಾರ ಮಾಡುತ್ತಾಳೆಯೇನೋ? ಎಲ್ಲಿಯಾದರೂ ನಾಟಕದ ಕಂಪೆನಿಗೋ ಸಿನೀಮಾ ಕಂಪೆನಿಗೋ ಸೇರಿಕೊಳ್ಳುತ್ತಾಳೆ! ಎಂದು ಮುಂತಾಗಿ ಮಗನಿಗೆ ಬೋಧನೆ ಮಾಡುತ್ತ ಬಂದಳು. ಆದರೆ ತಾಯಿಯ ಬೋಧನೆ ಫಲಕಾರಿಯಾಗಲಿಲ್ಲ. ದೈವಸಂಕಲ್ಪವಿತ್ತು, ಮದುವೆ ನಡೆದುಹೋಯಿತು. ಆದರೆ ಕಾರಣಾಂತರಗಳಿಂದ ಕಾವೇರಮ್ಮನ ಅತೃಪ್ತಿ ಮತ್ತು ಅಸಮಾಧಾನಗಳು ನಡೆದುಕೊಂಡೇ ಬಂದುವು. ಸಮಯ ದೊರತಾಗೆಲ್ಲ ಏನಾದರೊಂದು ಚುಚ್ಚು ಮಾತನ್ನಾಡುವುದು, ಮಗನ ಮನಶ್ಶಾಂತಿಯನ್ನೂ ಸಂತೋಷವನ್ನೂ ಕೆಡಿಸುವುದು ಆಕೆಯ ಚಾಳಿಯಾಗಿತ್ತು. ಸರೋಜಳ ದುರದೃಷ್ಟಕ್ಕೆ ಅವಳು ಗಂಡನೊಡನೆ

ಸಂಸಾರ ನಡೆಸಲು ಬಂದ ವರ್ಷದಲ್ಲಿಯೇ ಶ್ರೀನಿವಾಸರಾಯರು ತೀರಿ ಹೋದರು. 'ಅಯ್ಯೋ! ಪೂರ್ವನಿಲ್ಲದ ನಕ್ಷತ್ರ ಎಂದು ತಿಳಿದು ತಿಳಿದೂ ಮದುವೆ ಮಾಡಿದರಲ್ಲ! ನನ್ನ ಸಂಸಾರ ಮುರಿದರಲ್ಲ' ಎಂದು ಆಕೆ ತನ್ನ ಗೋಳಾಟದಲ್ಲಿ ಸೊಸೆಯ ಮತ್ತು ಬೀಗರ ದೂಷಣೆಯನ್ನೂ ನೆಯ್ದು ಹೇಳುತ್ತಿದ್ದಳು. ಸೀತಾರಾಮರಾಯನಿಗೆ ತನ್ನ ಹೆಂಡತಿಯಲ್ಲಿ ಸಹಜವಾದ ಪ್ರೇಮವಿದ್ದರೂ ತಾಯಿಗೆ ಒದಗಿದ ವೈಧವ್ಯಕ್ಕೆ ಹೆಂಡತಿ ಕಾರಣಳೆಂಬ ವ್ಯಸನ ಆ ಪ್ರೇಮಕ್ಕೆ ಸ್ವಲ್ಪ ನೀರುಗೂಡಿಸಿತ್ತು. ಕಾಲ ಕ್ರಮದಲ್ಲಿ ಪ್ರೇಮ ಗಟ್ಟಿಯಾಗುವುದು ದುಸ್ಸಾಧ್ಯವಾಗಿರಲಿಲ್ಲ. ಸರೋಜ ಮನೆಗೆ ಬಂದು ಎರಡು ವರ್ಷವಾದಮೇಲೆ ಬಸಿರಿಯಾದಳು. ಐದ ನೆಯ ತಿಂಗಳಲ್ಲಿ ತವರು ಮನೆಗೆ ಹೋದಳು. ಈ ಸಂದರ್ಭದಲ್ಲಿ ಸಹ ತಾಯಿಗೂ ಮಗನಿಗೂ ಭಿನ್ನಾಭಿಪ್ರಾಯ ಬಂದಿತ್ತು. 'ಐದನೆಯ ತಿಂಗಳು ತುಂಬುತ್ತ ಬಂದಾಗ ತವರು ಮನೆಗೆ ಕಳಿಸೋಣ; ನಾವು ಸೊಸೆಗೆ ಮಾಡಬೇಕಾದ ಶಾಸ್ತ್ರ ಸ್ವಲ್ಪ ಇದೆ. ಅದನ್ನು ಮಾಡಿ ಕಳಿಸಿ ಕೊಡೋಣ' ಎಂಬುದು ಕಾವೇರಮ್ಮನ ವಾದವಾಗಿತ್ತು. ಆದರೆ ಕೃಷ್ಣರಾಯರು ಕಾರ್ಯಾಂತರವಾಗಿ ತುಮಕೂರಿಗೆ ಬಂದಿದ್ದಾಗ ಅಳಿಯ ನನ್ನು ಸರಿಮಾಡಿಕೊಂಡು ಐದನೆಯ ತಿಂಗಳು ಹುಟ್ಟಿದ ನಾಲ್ಕೈದು ದಿನಗಳಲ್ಲಿಯೇ ತಮ್ಮ ಮಗಳನ್ನು ಶಿವಮೊಗ್ಗಕ್ಕೆ ಕರೆದುಕೊಂಡು ಹೋದರು; ಗಂಡನ ಮನೆಯಲ್ಲಿ ನಡೆಯಬೇಕಾದ ಹೂವು ಮುಡಿಸು ವುದು ಎಂಬ ಮಂಗಳ ಕಾರ್ಯಕ್ಕೆ ಅವಕಾಶವಾಗಲಿಲ್ಲ. ಕಾವೇರಮ್ಮ ಮಗನನ್ನು ಆಕ್ಷೇಪಿಸಿದಾಗ, 'ಎಲ್ಲ ಮಂಗಳ ಕಾರ್ಯಗಳನ್ನೂ ಅವರೇ ಮಾಡುತ್ತಾರೆ. ಅವು ಎಲ್ಲಿ ನಡೆದರೇನು?' ಎಂದು ಉತ್ತರಕೊಟ್ಟನು. 'ಸರಿ. ಮಗನು ಕೈಬಿಟ್ಟು ಹೋದಹಾಗೆಯೇ' ಎಂದು ಆಕೆ ಕಣ್ಣೀರು ಹಾಕಿದಳು.

ಸೀತಾರಾಮರಾಯನ ಸಂಸಾರದ ವಾತಾವರಣ ಹಾಗಿದ್ದಾಗ ಅವನು ದುಗುಡದಿಂದ ಮನೆಗೆ ಹಿಂದಿರುಗಿದ್ದನ್ನು ನೋಡಿ, ಅವನು ಕೊಟ್ಟ ಉತ್ತರಗಳನ್ನು ಕೇಳಿ, ಗಂಡ ಹೆಂಡರಿಗೆ ಏನೋ ವಿರಸವಾಗಿರಬೇಕು, ಬೀಗರ ಮನೆಯಲ್ಲಿ ತನ್ನ ಮಗ ಏನೋ ಅಪಮಾನಪಟ್ಟಿರಬೇಕು ಎಂದು

ಕಾವೇರಮ್ಮ ಊಹಿಸಿದ್ದರಲ್ಲಿ ಆಶ್ಚರ್ಯವೇನಿಲ್ಲ. ಮನೆಯಲ್ಲಿ ಹಿಂದಿನ ದಿನ ಮಾಡಿಟ್ಟದ್ದ ಕೋಡಬಳೆಗಳಲ್ಲಿ ನಾಲ್ಕನ್ನು ತಟ್ಟೆಯಲ್ಲಿ ತಂದಿಟ್ಟು, ಒಂದು ಲೋಟ ನೀರನ್ನು ಪಕ್ಕದಲ್ಲಿಟ್ಟು, ತಾಯಿಯ ಪ್ರೇಮವನ್ನು ಸಹಜವಾಗಿ ಆಕೆ ತೋರಿಸಿದಳು.

'ನಿನ್ನ ಮಾವನ ಮನೆಯಲ್ಲಿ ಏನು ನಡೆಯಿತಪ್ಪ ಸೀತಾರಾಮು? ನಿನ್ನನ್ನು ಅವರು ಆದರಿಸಿದರೋ ಇಲ್ಲವೋ?' ಎಂದು ಆಕೆ ಕೇಳಿದಳು. ಸೀತಾರಾಮು ಉತ್ತರವನ್ನು ಕೊಡಲಿಲ್ಲ.

'ನಿನ್ನ ಹೆಂಡತಿ ಆರೋಗ್ಯವಾಗಿದ್ದಾಳೋ ಇಲ್ಲವೋ? ನಿನ್ನೊಡನೆ ಮಾತುಕತೆ ಆಡಿದಳೋ ಇಲ್ಲವೋ?'

ಈ ಪ್ರಶ್ನೆಗಳಿಗೂ ಉತ್ತರವಿಲ್ಲ. ಸೀತಾರಾಮು ಕೋಡಬಳೆಗಳನ್ನು ಮಾತ್ರ ಮುರಿದು ಮುರಿದು ಬಾಯಿಗೆ ಹಾಕಿಕೊಳ್ಳುತ್ತಿದ್ದನು.

'ಇದೇನು ಸೀತಾರಾಮು ನೀನು ಬಾಯೇ ಬಿಡುವುದಿಲ್ಲ? ಏನಾಯಿತು ಹೇಳು. ಅವರ ಸಂಬಂಧ ಬೇಡ, ಬೇಡ ಎಂದು ನಾನು ಕಡ್ಡಿ ಮುರಿದು ಕೈಗೆ ಕೊಟ್ಟೆ. ನಿನ್ನ ತಂದೆ ನನ್ನ ಮಾತನ್ನು ಕೇಳಲಿಲ್ಲ. ನೀನೂ ಕೇಳಲಿಲ್ಲ.'

'ಈಗ ಆ ಮಾತೆಲ್ಲ ಏಕಮ್ಮ? ಋಣಾನುಬಂಧವಿತ್ತು. ಮದುವೆ ಆಯಿತು.'

'ಏನಪ್ಪ ಹಾಗಾದರೆ? ನಿನ್ನ ಸುಖದುಃಖಗಳನ್ನು ತಾಯಿಯಾದ ನಾನು ವಿಚಾರಿಸಬಾರದೆ? ಎಷ್ಟಾದರೂ ನನ್ನದು ಹೆತ್ತ ಹೊಟ್ಟೆಯಲ್ಲವೆ? ನನ್ನ ಕರುಳು ನುಲಿಯುವ ಹಾಗೆ ನಿನ್ನ ಅತ್ತೆಮಾವಂದಿರ ಕರುಳು ನುಲಿದೀತೆ? ಅವರಿಗೇನು? ತಮ್ಮ ಮಗಳು ನಲಿಯುತ್ತಿದ್ದರೆ ಅವರಿಗೆ ಸಂತೋಷ. ನಿನ್ನ ಪಾಡು ಅವರಿಗೇನು ಬೇಕು. ತಿಂಗಳ ತಿಂಗಳ ಸಂಬಳ ನಿನ್ನ ಹೆಂಡತಿಯ ಕೈಯಲ್ಲಿ ಕೊಟ್ಟುಬಿಟ್ಟು, ಅವಳು ಹೇಳಿದಂತೆ ನೀನು ಕೇಳಿಕೊಂಡು ಬಿದ್ದಿದ್ದರೆ, ಅಳಿಯ ಒಳ್ಳೆಯವನು ಎಂದು ಹಿಗ್ಗುತ್ತಾರೆ. ಹೊಟ್ಟೆ ನೆತ್ತಿ ನೋಡಿ ಆದರಿಸುತ್ತಾರೆಯೆ? ದೀಪಾವಳಿಯ ಹೊಸತರಲ್ಲಿ ಮಾತ್ರ ಅಳಿಯನಿಗೆ ಎಲ್ಲೂ ಇಲ್ಲದ ಅಕ್ಕರೆ ಆದರ, ಅಷ್ಟೇ.'

'ಲೋಕರೂಢಿಯೇ ಹಾಗೆ. ಯಾರನ್ನು ತಾನೆ ಏಕೆನ್ನಬೇಕು?'

'ಲೋಕರೂಢಿ ಇರಲಿ. ನನಗೆ ತಿಳಿಯದೇ? ಶಿವಮೊಗ್ಗದಲ್ಲಿ ಏನಾಯಿತು? ಅದೇಕೆ ನೀನು ಎರಡೇ ದಿನಗಳಲ್ಲಿ ಹಿಂದಿರುಗಿದೆ? ಹೂವು ಮುಡಿಸುವ ಶಾಸ್ತ್ರಕ್ಕೆ ನೀನು ಬರಲಿಲ್ಲ ಎಂದು ಆಕ್ಷೇಪಣೆ ಎತ್ತಿದರೇನು? ನಾನು ನಿನ್ನನ್ನು ತಡೆದು ನಿಲ್ಲಿಸಿಕೊಂಡೆ ಎಂದು ಆ ಬಿಕನಾಸಿ ಆಡಿದಳೇನು?'

'ನಿನ್ನ ಮಾತನ್ನು ಯಾರೂ ಆಡಲಿಲ್ಲ.'

'ಮತ್ತೆ ನಿನ್ನನ್ನು ಆಕ್ಷೇಪಿಸಿದರೋ?'

'ನನ್ನನ್ನೂ ಆಕ್ಷೇಪಿಸಲಿಲ್ಲ'

'ಮತ್ತೆ ಏಕೆ ಬಂದುಬಿಟ್ಟೆ? ನಿನ್ನ ಮುಖದಲ್ಲಿ ದುಗುಡ ಏಕೆ?'

'ಆಗಲೇ ಹೇಳಿದೆನಲ್ಲ. ನನಗೆ ಒಗ್ಗಲಿಲ್ಲ, ಬಂದುಬಿಟ್ಟೆ.'

'ಮತ್ತೆ ನಿನ್ನ ಮುಖ ದುಗುಡದಿಂದ ಏಕೆ ತುಂಬಿದೆ?'

'ಹೆಂಡತಿಯನ್ನು ಬಿಟ್ಟುಬಂದರೆ ದುಗುಡ ಇಲ್ಲದೆ ಇರುತ್ತದೆಯೆ?'

'ಇನ್ನೂ ನಾಲ್ಕು ದಿನ ಅಲ್ಲೇ ನೀನು ಇರಬಹುದಾಗಿತ್ತಲ್ಲ. ಹೆಂಡತಿಯ ಜತೆಯಲ್ಲಿ ಇರಬೇಕು ಎಂದು ಹೋದವನು ತಟ್ಟನೆ ಹಿಂದಕ್ಕೆ ಬರಬೇಕಾದರೆ ಏನೋ ನಡೆದಿರಬೇಕು. ನನ್ನಲ್ಲಿ ಹೇಳದೆ ಮುಚ್ಚುಮರೆ ಮಾಡುತ್ತೀಯೆ.'

'ಇರಲಮ್ಮ, ಆಮೇಲೆ ಹೇಳುತ್ತೇನೆ. ಏನೋ ಸ್ವಲ್ಪ ರಗಳೆ ಆಯಿತು.'

'ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದು ಸತ್ಯವಾಗಿದ್ದರೆ ಪುನಃ ನೀನು ಅವರ ಮನೆಗೆ ಹೋಗಕೂಡದು; ಅವರ ಮುಖಗಳನ್ನೇ ನೋಡ ಕೂಡದು. ನನ್ನ ಮೇಲೆ ಆಣೆ ಇಡು.'

'ಆಣೆ ಗೀಣೆ ಏಕಮ್ಮ? ಆಯಿತು. ನನಗೂ ಬುದ್ಧಿ ಬಂತು. ಸದ್ಯಕ್ಕೆ ಎಲ್ಲವನ್ನೂ ಮರೆತುಬಿಡುವುದೇ ಒಳ್ಳೆಯದು.'

'ಯಾರು ನಿನ್ನನ್ನು ಆಡಿದವರು? ನಿನ್ನ ಅತ್ತೆಯೆ? ನಿನ್ನ ಮಾವನೆ? ನಿನ್ನ ಹೆಂಡತಿಯೆ?'

'ಈಗ ಯಾವ ಮಾತೂ ಬೇಡಮ್ಮ. ಯಾರು ಆಡಿದರೂ ಒಂದೇ.'

'ನೀನು ನನ್ನ ಮಾತು ಕೇಳುವ ಹಾಗಿದ್ದರೆ ಹೇಳಿಯೇನು ? ನಿನಗೆ ಅವರ ಸಹವಾಸವೇ ಬೇಡ. ಈಗಲೂ ಕಾಲ ಮಿಾರಿಹೋಗಿಲ್ಲ. ಆ ಠೊನ್ನು ವೈಯವಳು ತವರುಮನೆಯಲ್ಲಿಯೇ ಬಿದ್ದಿರಲಿ. ನಿನಗೆ ಬೇರೆ ಮದುವೆ ಮಾಡಿಸುತ್ತೇನೆ.'

ಸೀತಾರಾಮರಾಯನು ಏನೊಂದು ಉತ್ತರವನ್ನೂ ಕೊಡಲಿಲ್ಲ. ಕಾವೇರಮ್ಮ ಮಾತನ್ನು ತಾನೇ ಮುಂದುವರಿಸುತ್ತ, 'ಈಗಿನ ಕಾಲದ ತಾಟಕಿಯರು. ಇವರ ಮುಖಕ್ಕೆ ವಿದ್ಯೆ ಬೇರೆ. ನಿನಗೆ ಹೇಳುತ್ತೇನೆ ಕೇಳಪ್ಪ ಸೀತಾರಾಮು! ಗಂಡ ಬುದ್ಧಿವಂತನಾಗಿದ್ದರೆ ಹೆಂಡತಿಯನ್ನು ಎಂದೆಂದಿಗೂ ನಂಬಕೂಡದು. ನೋಡಪ್ಪ - ನಮ್ಮೂರಿನಲ್ಲಿ ನನ್ನಂತೆಯೇ ದಿಕ್ಕೆಟ್ಟವಳು ಸೀತಮ್ಮ ಎಂಬುವಳಿದ್ದಳು. ಬಹಳ ಒಳ್ಳೆಯ ಹೆಂಗಸು. ಅವಳ ಮಗನಿಗೆ ನಿನ್ನ ಹಾಗೆಯೇ ತಾಯಿ ಎಂದರೆ ಪ್ರಾಣ; ಅವಳ ಆರೈಕೆ ಶುಶ್ರೂಷೆ ಚೆನ್ನಾಗಿ ಆಗಬೇಕಲ್ಲ ಎಂದು ಹಗಲೂ ರಾತ್ರಿ ಯೋಚನೆ ಮಾಡುತ್ತಲೇ ಇದ್ದವನು. ಆದರೆ ಅವನೂ ನಿನ್ನ ಹಾಗೆಯೇ ಸ್ವಲ್ಪ ಬೆಪ್ಪು. ಪ್ಯಾಸ್ ಮಾಡಿದ್ದರೆ ಏನು? ಜನಗಳ ಮರ್ಮ ತಿಳಿದು ಕೊಳ್ಳುವ ಜಾಣತನ ಇರಲಿಲ್ಲ. ಬೆಳ್ಳಗಿರುವುದೆಲ್ಲ ಹಾಲೆಂದು ನಂಬಿ ಬಿಟ್ಟರೆ ಹೇಗೆ? ಅವನಿಗ ಒಬ್ಬಳು ತಾಟಕಿತ್ತಿ ಹೆಂಡತಿಯಾಗಿ ಗಂಟು ಬಿದ್ದಿದ್ದಳು. ಅವಳ ಬೆಡಗೋ! ಅವಳ ಬಿನ್ನಾಣವೋ! ಒಂದೇ ನಿಮಿಷದಲ್ಲಿ ಗಂಡನನ್ನು ವಶಮಾಡಿಕೊಂಡುಬಿಟ್ಟಳು. ಅವಳ ಮಾತೇ ಅವನಿಗೆ ವೇದ. ಅವನು ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು, ಆಕೆಯನ್ನು ಆದರಿಸಬೇಕು — ಎಂದು ತನ್ನ ಹೆಂಡತಿಗೆ ಆಗಾಗ ಹೇಳು ತ್ತಲೇ ಇದ್ದನು. ತನ್ನ ಗಂಡನಿಗೆ ಆ ಗೂಬೆ ತಾಯಿಯ ಹುಚ್ಚು ಹಿಡಿದಿದೆ ಎಂದು ಆ ತಾಟಕಿತ್ತಿ ತಿಳಿದುಕೊಂಡು ಒಂದು ನಾಟಕ ಆಡು ತ್ತಿದ್ದಳೋ ಹಾಗೆ ಆಡುತ್ತಿದ್ದಳು! ಅಡಿಗೆಯ ಮನೆಯಲ್ಲಿಯೋ ನೀರ ಮನೆಯಲ್ಲಿಯೋ ಆ ತಾಯಿ ಇರುವಾಗ ತಾನು ಬಾಗಿಲ ಬಳಿ ಅಡ್ಡಲಾಗಿ ನಿಂತು ಮೆಲ್ಲಗೆ, 'ಅತ್ತಮ್ಮ! ಅರಿಸಿನ ಬೇಕೇ?' ಎನ್ನುವಳು. ನನ್ನಂಥ ವಿಧವೆ ಅವಳೇನು ಅರಿಸಿನ ಕೋರಿಯಾಳು ಹೇಳು. ಅವಳು – ಬೇಡಮ್ಮ, ಬೇಡಮ್ಮ ಎಂದು ಉತ್ತರ ಕೊಡುತ್ತಿದ್ದಳು. ಆ ತಾಟಕಿತ್ತಿ – ಅತ್ತಮ್ಮ!

ಕುಂಕುಮ ಹಚ್ಚಿಕೊಳ್ಳುತ್ತೀರಾ? ಎಂದು ಮತ್ತೆ ಕೇಳುವುದು. ಆ ತಾಯಿ, 'ಅಯ್ಯೋ! ಬೇಡಮ್ಮ, ಬೇಡಮ್ಮ! ಎಲ್ಲ ನಿನಗೇ ಇರಲಿ ನನ್ನಮ್ಮ' ಎಂದು ಗಟ್ಟಿಯಾಗಿ ಉತ್ತರ ಕೊಡುವುದು. ಆ ತಾಟಕಿತ್ತಿ ಗಂಡನ ಹತ್ತಿರ ಬಂದು, 'ನೋಡಿದಿರಾ! ನೀವೇ ಕಿವಿಯಾರ ಕೇಳುತ್ತಿದ್ದಿರಲ್ಲ! ನಾನೇನು ಮಾಡಲಿ? ಹಾಲು ಕೊಡುವುದಕ್ಕೆ ಹೋದರೆ ಬೇಡಮ್ಮ, ಬೇಡಮ್ಮ ಎನ್ನುತ್ತಾರೆ. ಫಲಾಹಾರಕ್ಕೆ ಉಪ್ಪಿಟ್ಟು ಮಾಡುತ್ತೇನೆ ಎಂದರೆ ಬೇಡಮ್ಮ, ಬೇಡಮ್ಮ ಎನ್ನುತ್ತಾರೆ. ನನ್ನ ಕೈಯ ಸೇವೆಯೇ ನಿಮ್ಮ ತಾಯಿಗೆ ಹಿಡಿಸುವುದಿಲ್ಲ' ಎಂದು ಹೇಳುತ್ತಿದ್ದಳು. ನೋಡಪ್ಪ! ಲೋಕದಲ್ಲಿ ಎಂಥೆಂಥ ತಾಟಕಿತ್ತಿಯರಿರುತ್ತಾರೆ. ಪಾಪ! ಎರಡು ವರ್ಷಗಳಲ್ಲಿಯೇ ಆ ಅತ್ತೆ ಸತ್ತೇಹೋದಳು.'

'ಕಥೆ ಚೆನ್ನಾಗಿದೆಯಮ್ಮ! ನಾನು ಅಂಥ ಬೆಪ್ಪು ಎಂದು ತಿಳಿದುಕೊಂಡಿದ್ದೀಯೇನು!'

'ಕಥೆ ಅಲ್ಲ, ಸೀತಾರಾಮು! ನಡೆದದ್ದು. ನೋಡು, ನಮ್ಮೂರಿನಲ್ಲೇ ರಂಗಮ್ಮ ಇದ್ದಳು. ಮುದುಕಿ ಎಂದರೆ ಅಂಥ ಗಟ್ಟಿ ಮುದುಕಿಯನ್ನು ನಾನು ಎಲ್ಲಿಯೂ ನೋಡಿಲ್ಲ. ಅವಳ ಮಗ ಸಂಬಳ ತಂದು ಹೆಂಡತಿಯ ಕೈಯಲ್ಲಿ ಕೊಟ್ಟು, ಎಲ್ಲ ಯಾಜಮಾನ್ಯವನ್ನೂ ಅವಳಿಗೆ ವಹಿಸಿದ್ದ. ಆ ಸೊಸೆ ಒಳ್ಳೆಯವಳೇ, ಏನೂ ಕೆಟ್ಟವಳಲ್ಲ. ಒಂದು ದಿನ ರಂಗಮ್ಮ ಸೊಸೆಗೆ,— ನನ್ನ ಹಾಸಿಗೆಯನ್ನು ಸ್ವಲ್ಪ ಕೊಡವಿ ಹಾಕಮ್ಮ ಎಂದಳು. ಸೊಸೆ ಮೆತ್ತೆಯನ್ನೂ, ಮಗ್ಗುಲಹಾಸಿಗೆಯನ್ನೂ, ದಿಂಬನ್ನೂ ಕೈಗೆ ತೆಗೆದುಕೊಂಡಾಗ, ದಿಂಬೇಕೋ ಭಾರವಾಗಿ ಕಂಡಿತು. ಅಷ್ಟರಲ್ಲಿ ರಂಗಮ್ಮ,— ಆ ದಿಂಬನ್ನು ಇತ್ತ ಕೊಡು, ಉಳಿದುವನ್ನು ಕೊಡವಿ ಹಾಕು ಎಂದು ಅದನ್ನು ಈಸಿಕೊಂಡು ಪಕ್ಕದಲ್ಲಿಟ್ಟುಕೊಂಡಳು. ಸೊಸೆ ಹಾಸಿಗೆಯನ್ನು ಕೊಡವಿ ಹಾಕಿದಳು. ರಂಗಮ್ಮ ದಿಂಬನ್ನು ತಾನೇ ಹಾಕಿಕೊಂಡಳು. ಸೊಸೆಗೆ ಆ ದಿಂಬಿನಲ್ಲಿ ಏನಿದೆಯೋ ತಿಳಿಯಬೇಕಲ್ಲ ಎಂದು ಕುತೂಹಲ. ಅದೇನು ಅತ್ತಮ್ಮ? ದಿಂಬು ಭಾರವಾಗಿದೆ—ಎಂದು ಕೇಳಿದಳು. ಅದಕ್ಕೆ ರಂಗಮ್ಮ—ಸತ್ತರೂ ಬಾಳಿದರೂ ಹತ್ತಿರ ಸ್ವಲ್ಪ ಹಣ ಇರಬೇಕಮ್ಮ. ಏನಾದರೂ

ದಾನ ಧರ್ಮ ಮಾಡಬೇಕು ಎಂದು ಮನಸ್ಸಾದರೆ ಯಾರನ್ನು ಕೇಳಲಿ? ಪಾಪ! ನಿನ್ನ ಗಂಡನ ಕೈಯಲ್ಲಿ ಹಣ ಎಲ್ಲಿರುತ್ತೆ? ನಾಳೆ ನಾನು ಸತ್ತರೆ ಕರ್ಮಾಂತರಕ್ಕೆ ಹಣ ಒದಗಬೇಕೋ ಬೇಡವೋ? ನೀನೂ ನನ್ನ ಸೇವೆ ಅಕ್ಕರೆಯಿಂದ ಮಾಡುತ್ತಾ ಇದ್ದೀಯಮ್ಮ! ಇರುವ ಹಣ ವನ್ನೆಲ್ಲ ನಿನಗೇನೇ ಏಕೆ ಕೊಡಬಾರದು? ಹತ್ತಿರ ಇರಲಿ ಎಂದು ಇಟ್ಟುಕೊಂಡಿದ್ದೇನೆ—ಎಂದು ಉತ್ತರ ಕೊಟ್ಟಳು. ತಾನು ಸ್ನಾನಕ್ಕೆ ಹೋಗುವಾಗ, ಮಡಿಯುಟ್ಟುಕೊಳ್ಳುವಾಗ ಮೊದಲು ರಂಗಮ್ಮ ಆ ದಿಂಬನ್ನು ಭದ್ರವಾಗಿ ತನ್ನ ಪೆಟ್ಟಿಗೆಯಲ್ಲಿಟ್ಟು ಬೀಗ ಹಾಕುತ್ತಿದ್ದಳು. ನೋಡಪ್ಪ ಸೀತಾರಾಮು! ಆ ಸೊಸೆ ಹಣದಾಸೆಯಿಂದ ಆ ಅತ್ತೆಯ ಸೇವೆ ಒಂದು ಮಾಡಿದಳೋ ಹಾಗೆ ಮಾಡಿದಳಪ್ಪ! ಮುದುಕಿ ಸುಖ ವಾಗಿದ್ದಳು. ಆದರೆ ಏನು? ಆಯುಸ್ಸು ಮುಗಿದರೆ ಎಲ್ಲರೂ ಸಾಯ ಬೇಕಲ್ಲ. ರಂಗಮ್ಮ ಸತ್ತಳು. ಆ ಸೊಸೆ ಮೊದಲು ಹಾಸಿಗೆಯಲ್ಲಿದ್ದ ದಿಂಬನ್ನು ಎತ್ತಿಕೊಂಡು ಬಿಚ್ಚಿದಳು! ಬಿಚ್ಚಿದರೆ ಒಳಗೆಲ್ಲ ಮಡಕೆಯ ಚೂರುಗಳು! ಹೆಂಚಿನ ಚೂರುಗಳು! ಆ ಗಟ್ಟಿ ಮುದುಕಿ ಅವುಗಳ ನ್ನೆಲ್ಲ ಯಾವಾಗಲೋ ಹೊಲಿದು ಹೊಲಿದು, ನೋಡುವುದಕ್ಕೆ ರೂಪಾಯಿ ಗಳಂತೆ ಮಾಡಿಟ್ಟಿದ್ದಳು! ಆ ಸೊಸೆಯ ಗೋಳಾಟ ಕೇಳಬೇಕೇ! ಅಯ್ಯೋ ಅತ್ತಮ್ಮ! ಎಲ್ಲ ಮಡಕೆ ಚೂರುಗಳೇ! ಎಲ್ಲ ಹೆಂಚಿನ ಚೂರುಗಳೇ! ಅಯ್ಯೋ ಅತ್ತಮ್ಮ! ಅಯ್ಯೋ ಅತ್ತಮ್ಮ! ಎಂದು ಎದೆ ಎದೆ ಬಡಿದುಕೊಂಡು ಅತ್ತಳು. ನೋಡಿದವರೆಲ್ಲ — ಅಯ್ಯೋ ಪಾಪ! ಅತ್ತೆಯ ಮೇಲೆ ಸೊಸೆಗೆ ಎಷ್ಟೊಂದು ಪ್ರಾಣವಿತ್ತು ಎಂದು ಮೆಚ್ಚಿಕೊಂಡು ಸಮಾಧಾನ ಮಾಡುವವರೇ ಆಗಿದ್ದರು. ಆದೀಗ ನೋಡಪ್ಪ, ಜಾಣತನ ಎಂದರೆ ಜಾಣತನ!'

ಕಾರ್ಮೋಡಗಳ ಮರೆಯಿಂದ ಚಂದ್ರ ಇಣಿಕಿ ನೋಡಿ ಮತ್ತೆ ಕಾರ್ಮೋಡಗಳಲ್ಲೇ ಅದೃಶ್ಯವಾದಂತೆ ಸೀತಾರಾಮರಾಯನ ದುಗುಡದ ಮುಖ ಸ್ವಲ್ಪ ನಗು ತೋರಿ ಪುನಃ ದುಗುಡದಲ್ಲಿ ಮುಳುಗಿಹೋಯಿತು. ಅವನ ಆಲೋಚನೆಗಳೆಲ್ಲ ಶಿವಮೊಗ್ಗದಲ್ಲಿ ನಡೆದ ದುರಂತ ಘಟನೆಗಳ ಕಡೆಗೇ ಹೋಗುತ್ತಿದ್ದುವು. 'ಮಗನಿಗೆ ಶಿಕ್ಷಣ ಚೆನ್ನಾಗಿ ಕೊಡುತ್ತೀ

ಯಮ್ಮ! ನಾಳೆ ಅಳಿಯ ಒಬ್ಬನು ಬಂದರೆ ಏನು ಶಿಕ್ಷಣ ಕೊಡು ತ್ತೀಯೋ ಹೇಳು' ಎಂದು ಕೇಳಿದನು. ಸೀತಾರಾಮರಾಯನು ವಿವೇಕ ಶಾಲಿಯೇ ಆಗಿದ್ದನು. ಅತ್ತೆಯ ಮನೆಯಲ್ಲಿ ತಾನಾಗಿ ಮಾಡಿಕೊಂಡ ತೊಡಕು, ಜತೆಗೆ ಆದ ವೈಪರೀತ್ಯ, ಈಗ ತಾಯಿ ಹಾಕುತ್ತಿರುವ ಹಂಚಿಕೆ—ಇವುಗಳೆಲ್ಲ ಅವನ ಮನಸ್ಸಿನಲ್ಲಿ ಮಥನವಾಗುತ್ತ ತನ್ನ ಬಾಳು ಮುಂದೆ ಹೇಗೆ ರೂಪುಗೊಳ್ಳುತ್ತದೆಯೋ ಭವಿಷ್ಯದಲ್ಲಿ ಏನಿದೆಯೋ ದೇವರೇ ಬಲ್ಲ ಎಂದು ನಿಟ್ಟುಸಿರನ್ನು ಬಿಡುತ್ತ ಎದ್ದನು. ಕೋಡಬಳೆ ಗಳು ಯಾವಾಗಲೋ ಮುಗಿದು ತಟ್ಟೆ ಬರಿದಾಗಿತ್ತು. ಕಾವೇರಮ್ಮ ತಾನು ಸರಿಯಾದ ಕಾಲದಲ್ಲಿ ಮಗನ ಮನಸ್ಸನ್ನು ತನ್ನ ಕಡೆಗೆ ತಿರುಗಿಸಿ ಕೊಳ್ಳಲು ಯತ್ನ ಮಾಡಿದೆನೆಂದು ಸಂತೋಷಗೊಂಡಳು.

---

## ೨. ಕಾತರದ ಗಂಡ

ಶಿವಮೊಗ್ಗದಲ್ಲಿ ನಡೆದದ್ದೇನು? ಹೂವುಮುಡಿಸುವ ಶುಭಕಾರ್ಯಕ್ಕೆ ಬರಬೇಕೆಂದು ಸೀತಾರಾಮರಾಯನಿಗೆ ಅವನ ಮಾವನಿಂದ ಕಾಗದ ಬಂದಿತ್ತು. ಆದರೆ ಅವನಿಗೆ ಕಚೇರಿಯಲ್ಲಿ ಬಹಳ ಕೆಲಸವಿದ್ದುದರಿಂದ ಅವನು ಹೋಗಲಾಗಲಿಲ್ಲ. ಅದರ ಜತೆಗೆ ಹೂವು ಮುಡಿಸುವುದು, ಬಳೆ ತೊಡಿಸುವುದು ಮೊದಲಾದ ಸ್ತ್ರೀ ಸಂಬಂಧವಾದ ಕಾರ್ಯಗಳಿಗೆ ತಾನೇಕೆ ಹೋಗಬೇಕು ಎಂಬ ಭಾವನೆ; ಒಂದು ವೇಳೆ ಹೋದರೆ ತನ್ನ ತಾಯಿಯಿಂದ ಏನಾದರೂ ಮಾತಲಿಕೆ ಬರಬಹುದು ಎಂಬ ಭಯ—ಈ ಎಲ್ಲ ಕಾರಣಗಳಿಂದ ಅವನು ತಾನು ಬರುವುದಕ್ಕಾಗುವುದಿಲ್ಲವೆಂದು ಕಾಗದವನ್ನು ಬರೆದುಹಾಕಿದ್ದನು. ಆದಾದ ಕೆಲವು ದಿನಗಳಿಗೆಲ್ಲ ತನ್ನ ಹೆಂಡತಿಯನ್ನು ನೋಡಬೇಕೆಂಬ ಬಯಕೆ ಅವನಿಗೆ ಬಲವಾಯಿತು. ಹೆಂಗಸರು ಆರು-ಏಳು ತಿಂಗಳ ಗರ್ಭಿಣಿಯರಾಗಿರುವಾಗ ನವೀನ ಕಳೆಯಿಂದ ಹೆಚ್ಚು ಚೆಲುವಾಗಿರುತ್ತಾರೆ ಎಂಬುದನ್ನು ಅವನು ಕೇಳಿ ತಿಳಿದಿದ್ದನು. ಸಹಜ ಸುಂದರಿಯಾದ ಸರೋಜ ಈಗ ಹೇಗಿರಬಹುದು? ನೋಡಿಕೊಂಡು ಬರೋಣ, ಎರಡು ದಿನ ಇದ್ದು ಬರೋಣ ಎಂದು ಮನಸ್ಸು ಮಾಡಿ ತನ್ನ ಹೆಂಡತಿಗೆ ತಾನು ಭಾನುವಾರ ಸಾಯಂಕಾಲ ಶಿವಮೊಗ್ಗಕ್ಕೆ ಬರುವುದಾಗಿ ಕಾಗದ ಬರೆದಿದ್ದನು.

ರೈಲು ಶಿವಮೊಗ್ಗವನ್ನು ಸಮೀಪಿಸುತ್ತಿದ್ದಾಗ,—ಬಹುಶಃ ಮಾವನ ಮೋಟಾರು ರೈಲ್ವೆಸ್ಟೇಷನ್ನಿಗೆ ಬಂದಿರುತ್ತದೆ, ತನ್ನನ್ನು ಎದುರುಗೊಳ್ಳುವುದಕ್ಕೆ ಸರೋಜಳೇ ಮೋಟಾರಿನಲ್ಲಿ ಬಂದಿರುತ್ತಾಳೆ ಎಂಬ ಮುಂತಾದ ಆಶಾ ನಿರೀಕ್ಷಣೆಗಳಿಂದ ಅವನ ಮನಸ್ಸು ತುಂಬಿ ನಲಿದಾಡುತ್ತಿತ್ತು. ಆದರೆ ರೈಲು ನಿಲ್ದಾಣದಲ್ಲಿ ನಿಂತಾಗ ಅಲ್ಲಿ ಯಾರೂ ಕಣ್ಣಿಗೆ ಬೀಳಲಿಲ್ಲ. ಅದು ಮೊದಲನೆಯ ಆಶಾಭಂಗವಾಯಿತು. ನಿಲ್ದಾಣಕ್ಕೆ ಮೋಟಾರು ಬಂದಿರಲಿಲ್ಲ. ಅದು ಎರಡನೆಯ ಆಶಾಭಂಗವಾಯಿತು. ಮೊದಲನೆಯದು ಅಸುಖವನ್ನುಂಟುಮಾಡಿತು. ಎರಡನೆಯದು ಅವನಿಗೆ ಅಪಮಾನ

ತಂದಂತಾಯಿತು. ಮನುಷ್ಯನು ಯಾವುದೊಂದು ನಿರೀಕ್ಷಣೆಯನ್ನೂ ಆಶೆಯನ್ನೂ ಮುಂದಾಗಿ ಕಲ್ಪಿಸಿಕೊಳ್ಳದಿದ್ದರೆ ಪರಮಸುಖಿ; ಮಿತವಾಗಿ ಕಲ್ಪಿಸಿಕೊಂಡು ಅವು ಭಂಗವಾದಾಗ ಸುಲಭವಾಗಿ ಸಮಾಧಾನ ಮಾಡಿಕೊಂಡರೆ ಇದ್ದುದರಲ್ಲಿ ಸುಖಿ; ಹೆಚ್ಚು ಆಶೆಗಳನ್ನೂ ಇಲ್ಲದ ನಿರೀಕ್ಷಣೆಗಳನ್ನೂ ಮಾಡಿಕೊಂಡು ಅವು ಭಂಗವಾದಾಗ ಸಮಾಧಾನವನ್ನು ತಂದುಕೊಳ್ಳದಿದ್ದರೆ ದುಃಖಿ. ಅವನು ನಿಷ್ಕಾರಣವಾಗಿ ಬೇಸರಗೊಳ್ಳುತ್ತಾನೆ, ಮುಂಗೋಪಿಯೂ ಆಗುತ್ತಾನೆ. ಪ್ರಕೃತ ಸಂದರ್ಭದಲ್ಲಿ ಸೀತಾರಾಮರಾಯನು ದುಃಖಿಯಾದದ್ದು ಮಾತ್ರವಲ್ಲದೆ ಕೋಪಿಯೂ ಆದನು. ತನ್ನನ್ನು ಕಂಡರೆ ಅತ್ತೆಯ ಮನೆಯವರಿಗೆ ಅಲಕ್ಷ್ಯ; ಅವಳಿಗೂ ಸಹ ತನ್ನಲ್ಲಿ ಅನಾದರಣೆ–ಎಂದು ಗೊಣಗುಟ್ಟುತ್ತ ಒಂದು ಜಟಕಾಗಾಡಿಯನ್ನು ಗೊತ್ತುಮಾಡಿಕೊಂಡು ದುರ್ಗಿಗುಡಿ ಬಡಾವಣೆಗೆ ಹೋದನು. ಕೃಷ್ಣರಾಯರು ವಾಸಮಾಡುತ್ತಿದ್ದುದು ಆ ಬಡಾವಣೆಯಲ್ಲಿ ಸ್ವಂತ ಬಂಗಲೆಯಲ್ಲಿ. ಜಟಕಾಗಾಡಿ ಗೇಟಿನ ಬಳಿಗೆ ಬಂದಾಗ, ಒಳಗೆ ಮನೆಯ ಮುಂದೆ ನಿಂತಿದ್ದ ಮಾವನ ಮೋಟಾರು ಸೀತಾರಾಮರಾಯನ ಕಣ್ಣಿಗೆ ಬಿತ್ತು. ಅಲ್ಲಿಯೇ ಓಡಾಡುತ್ತಿದ್ದ ಒಬ್ಬಿಬ್ಬರು ಆಳುಗಳೂ ಕಣ್ಣಿಗೆ ಬಿದ್ದರು. ಆ ನೋಟಗಳಿಂದ ಅವನಿಗೆ ಮತ್ತಷ್ಟು ಕೆರಳಿತು. ಆದರೆ ನಡೆದುಹೋದ ಅಚಾತುರ್ಯಕ್ಕೆ ತನ್ನ ಸರೋಜ ಪಶ್ಚಾತ್ತಾಪಪಟ್ಟು ಕಾಫಿಯ ಲೋಟವನ್ನೂ ತಿಂಡಿಯ ತಟ್ಟೆಯನ್ನೂ ಮೇಜಿನ ಮೇಲಿಟ್ಟು ಮುಕುಳಿತಸರೋಜಹಸ್ತಳಾಗಿ ಕ್ಷಮಾಯಾಚನೆ ಮಾಡುತ್ತಾಳೆಂದೂ ಆಗ ಮೊದಲು ಬಿಗುಮಾನವನ್ನು ತಾನು ಸ್ವಲ್ಪ ತೋರಿಸಿ ಅನಂತರ ತನ್ನ ಪ್ರೇಮದ ಬಹುಮಾನವನ್ನು ಪ್ರದರ್ಶಿಸಿ ಸಂತುಷ್ಟ ಹೃದಯನಾಗಬಹುದೆಂದೂ ಕಲ್ಪನೆ ಮಾಡಿಕೊಂಡು ಜಟಕಾ ಗಾಡಿಯಿಂದ ಕೆಳಕ್ಕಿಳಿದನು. ಮನೆಯ ವರಾಂಡದಲ್ಲಿ ಸರೋಜ ಕಂಡು ಬರಲಿಲ್ಲ. ಸಾಹೇಬರ ಅಳಿಯ ಬಂದುದನ್ನು ಆಳು ನೋಡಿ ಸಡಗರದಿಂದ ಬಂದು ಟ್ರಂಕನ್ನೂ ಹಾಸಿಗೆಯನ್ನೂ ಒಳಕ್ಕೆ ಕೊಂಡೊಯ್ದನು. ಕೂಡಲೇ ಅಳಿಯ ಬಂದಿರುವ ಸಮಾಚಾರ ಕೃಷ್ಣರಾಯರಿಗೆ ತಿಳಿದು ಅವರು ಕೊಟಡಿಯಿಂದ ಸರ್ರನೆ ಬಂದರು. ಹಿಂದೆಯೇ ಅವರ ಹೆಂಡತಿಯೂ

ಬಂದಳು. ಸರೋಜ ಕಂಡುಬರಲಿಲ್ಲ! ಕೃಷ್ಣರಾಯರಿಗೆ ಅಳಿಯನ ಮೇಲೆ ನಿಜವಾದ ಪ್ರೇಮವಿತ್ತು. ಸೀತಾರಾಮರಾಯನು ಕೇವಲ ಅಳಿಯನೆಂದಲ್ಲ, ತಮ್ಮ ಪರಮ ಮಿತ್ರರಾಗಿದ್ದ ಶ್ರೀನಿವಾಸರಾಯರ ಮಗನೆಂದು; ಈಚಿಗೆ ಆ ಮಿತ್ರ ತೀರಿಕೊಂಡದ್ದರಿಂದ ಸೀತಾರಾಮ ರಾಯನನ್ನು ನೋಡಿದಾಗ ಶ್ರೀನಿವಾಸರಾಯರೇ ಮರಳಿ ಬಂದಷ್ಟು ಸಂತೋಷವಾಗುತ್ತಿತ್ತು; ಇನ್ನು ಖಾಸಾ ಅಳಿಯನಾಗಿರುವಾಗ ಹೇಳ ತಕ್ಕದ್ದೇನು? ಹೆಚ್ಚು ಪ್ರೇಮ ಸಂತೋಷಗಳು ಇರುತ್ತಿದ್ದುವು.

'ಏನಪ್ಪ! ನಾನು ಈಗ ತಾನೆ — ಐದು ನಿಮಿಷಗಳ ಹಿಂದೆ — ಸರ್ಕೀಟಿನಿಂದ ವಾಪಸು ಬಂದೆ. ಇಲ್ಲದಿದ್ದರೆ ಮೋಟಾರನ್ನು ಕಳಿಸ ಬಹುದಾಗಿತ್ತು. ನಿನಗೆ ಬಹಳ ಆಯಾಸವಾಯಿತೋ ಏನೋ? ರೈಲ್ವೆ ಸ್ಟೇಷನ್ನಿಗೆ ಯಾರೂ ಬಂದಿರಲಿಲ್ಲವೇ?' ಎಂದು ಕೃಷ್ಣರಾಯರು ಕೇಳಿದರು.

'ನಾನು ಯಾವಾಗಲೂ ಮೋಟಾರಿನಲ್ಲಿ ಓಡಾಡುತ್ತೇನೆಯೇ? ಐವತ್ತು ರೂಪಾಯಿ ಗುಮಾಸ್ತೆ ಮೋಟಾರನ್ನು ಏಕೆ ನಿರೀಕ್ಷಿಸುತ್ತಾನೆ? ನನಗೆ ಶಿವಮೊಗ್ಗ ಹೊಸದೇನೂ ಅಲ್ಲ. ಮನೆ ತಿಳಿದಿದೆ. ಜಟಕಾ ಮಾಡಿಕೊಂಡು ಬರುವಷ್ಟು ಸಾಮರ್ಥ್ಯ ನಿಮ್ಮ ಅಳಿಯನಿಗಿಲ್ಲವೇ?' ಎಂದು ಅರ್ಧ ನಗು ಅರ್ಧ ದುಗುಡದಿಂದ ಸೀತಾರಾಮರಾಯನು ಉತ್ತರ ಕೊಟ್ಟನು. ಕೃಷ್ಣರಾಯರು ತಮ್ಮ ಹೆಂಡತಿಯ ಕಡೆಗೆ ತಿರುಗಿ ಕೊಂಡು, 'ಸರೋಜ ಎಲ್ಲಿ?' ಎಂದು ಕೇಳಿದರು.

'ಅವಳು ಸಿನೀಮಾ ನೋಡುವುದಕ್ಕೆ ಹೋಗಿದ್ದಾಳೆ. ಇವತ್ತು ಕಡೆಯ ಆಟವಂತೆ. ನಾಗರಾಜ ಅವಳನ್ನು ಕರೆದುಕೊಂಡು ಹೋಗಿ ದ್ದಾನೆ.'

'ಅವಳ ಗಂಡ ಈ ಸಂಜೆ ಬರುವುದು ಅವಳಿಗೆ ತಿಳಿದಿರಲಿಲ್ಲವೇ? ಅವಳು ಏಕೆ ಹೋದಳು?'

'ಬರುವುದು ತಿಳಿದಿತ್ತು. ಅವಳೇ ಕಾಗದವನ್ನು ತೋರಿಸಿ— ನಿನ್ನ ಅಳಿಯಂದಿರು ಈ ಸಂಜೆ ಬರುತ್ತಾರಮ್ಮ—ಎಂದು ಹೇಳಿದಳು. ನಾಗರಾಜನ ಬಲವಂತ. ಅವಳು ಸಿನೀಮಾಗೆ ಹೋಗಿದ್ದಾಳೆ. ಆಟ

ಮುಗಿಯುತ್ತಲೂ ಬಂದುಬಿಡುತ್ತಾಳೆ' ಎಂದು ಆಕೆ ಸಮಾಧಾನ ಹೇಳಿ, 'ಬಾರಪ್ಪ! ಕೈಕಾಲು ತೊಳೆದುಕೋ. ನಿನ್ನ ತಾಯಿ ಕ್ಷೇಮವಾಗಿದ್ದಾಳೆಯೆ? ಮನೆಯಲ್ಲಿ ಹುಡುಗರೆಲ್ಲ ನೆಮ್ಮದಿಯಾಗಿದ್ದಾರೆಯೆ?' ಎಂದು ಕುಶಲ ಪ್ರಶ್ನೆ ಮಾಡುತ್ತ ಅಳಿಯನನ್ನು ನೀರ ಮನೆಯವರೆಗೂ ಹಿಂಬಾಲಿಸಿದಳು. ಅಡಿಗೆಯವನು ಅಳಿಯನಿಗೆ ಕೈಕಾಲಿಗೆ ನೀರು ಕೊಟ್ಟು, ಒರಸಿಕೊಳ್ಳುವುದಕ್ಕೆ ಟವಲ್ ಕೊಟ್ಟು ಉಪಚರಿಸಿದನು.

ಮುಂದಿನ ಕೊಟಡಿಯಲ್ಲಿ ಅಳಿಯ, ಅತ್ತೆ, ಮಾವ ಕುರ್ಚಿಗಳಲ್ಲಿ ಕುಳಿತರು. ಅತ್ತೆ ಏನನ್ನೂ ತೆಗೆದುಕೊಳ್ಳಲಿಲ್ಲ. ಅಳಿಯ ಮತ್ತು ಮಾವ ಉಪಾಹಾರ ಸ್ವೀಕಾರ ಮಾಡಿದರು. ಅತ್ತೆ ಮತ್ತು ಮಾವ ಅಳಿಯನೊಂದಿಗೆ ಆಡುವ ಮಾತು ಕಥೆ ಏನಿರುತ್ತದೆ? ಏನೋ ಕಚೇರಿಯ ಮಾತು, ಮೇಲಿನ ಅಧಿಕಾರಿಗಳ ವಿಶ್ವಾಸ ಸಂಪಾದನೆ, ಮುಂದಿನ ಬಡ್ತಿ ಯಾವಾಗ ಬರುತ್ತದೆ?—ಈ ಮಾತುಗಳೆಲ್ಲ ನಡೆದುವು. ಉಪ್ಪಿಲ್ಲದ ಸಾರಿನಂತೆ, ಸಕ್ಕರೆಯಿಲ್ಲದ ಕಾಫಿಯಂತೆ ಆ ಮಾತುಗಳಾವುವೂ ಸೀತಾರಾಮರಾಯನಿಗೆ ರುಚಿಸಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಅಳಿಯನಿಗೆ ಮಹಡಿಯಮೇಲೆ ಬೇರೆ ಕೊಟಡಿಯನ್ನು ಸಜ್ಜು ಮಾಡಿಕೊಟ್ಟು, 'ವಿಶ್ರಾಂತಿ ತೆಗೆದುಕೊಳ್ಳಪ್ಪ. ದೂರದ ಪ್ರಯಾಣ ಮಾಡಿಕೊಂಡು ಬಂದಿದ್ದೀಯೆ' ಎಂದು ಕೃಷ್ಣರಾಯರು ಹೇಳಿ ತಮ್ಮ ಕೆಲಸಕ್ಕೆ ಹೊರಟು ಹೋದರು. ಸೀತಾರಾಮರಾಯನಿಗೆ ಬೇಕಾಗಿದ್ದುದು ಏಕಾಂತದ ಬಿಡುವು.

ಅವನು ಮಂಚದ ಮೇಲೆ ಕಾಲುಚಾಚಿಕೊಂಡು ಹಾಸಿಗೆಯಲ್ಲಿ ಬಿದ್ದುಕೊಂಡನು. ಏಕಾಂತದಲ್ಲಿ ಬರುವ ಆಲೋಚನೆಗಳು ಯಾವಾಗಲೂ ಒಳ್ಳೆಯವೆಂದು ಹೇಳಲಾಗುವುದಿಲ್ಲ. ಅದರಲ್ಲಿಯೂ ಮನಸ್ಸು ಕದಡಿರುವಾಗ ಅಕಾರಣಗಳು ಸಕಾರಣಗಳಾಗಿಯೂ ಅಲ್ಪ ಘಟನೆಗಳು ಮಹತ್ ಘಟನೆಗಳಾಗಿಯೂ, ನಿರ್ದೋಷಿಗಳು ಸದೋಷಿಗಳಾಗಿಯೂ ಕಂಡುಬರುವುದುಂಟು. 'ನಾನು ಕಾಗದ ಬರೆದಿದ್ದರೂ ನನ್ನನ್ನು ನಿರೀಕ್ಷಿಸುವುದಕ್ಕೆ ಬದಲಾಗಿ ಅವಳಿಗೆ ಸಿನೀಮಾ ಹೆಚ್ಚಾಯಿತು. ಸಿನೀಮಾ ನೋಡಬೇಕೆಂದು ಬಯಕೆ ಇದ್ದಿದ್ದರೆ ನಾನು ಬಂದ ಮೇಲೆ ಜತೆಯಲ್ಲಿ

ನಾವಿಬ್ಬರೂ ಹೋಗಬಹುದಾಗಿತ್ತು. ಅಷ್ಟು ನಿಧಾನಿಸಬೇಡವೆ? ಆ ನಾಗರಾಜನ ಬಲವಂತವಂತೆ! ಈಗಾಗಲೆ ತಾನೊಬ್ಬ ಪ್ರೊಫೆಸರೋ ಅಸಿಸ್ಟೆಂಟ್ ಕಮಿಷನರ್ ಆಗಿಹೋದಂತೆ ಮೆರೆಯುತ್ತಾನೆ! ತಲೆಯೆಲ್ಲ ಪ್ರತಿಷ್ಠೆ! ಗಂಡನ ಜತೆಯಲ್ಲಿ ಕುಳಿತುಕೊಂಡು ಸಿನೀಮಾ ನೋಡುವುದು ಹೆಚ್ಚು ಆನಂದವೋ? ಅಣ್ಣನ ಪಕ್ಕದಲ್ಲಿ ಕುಳಿತುಕೊಂಡು ಸಿನೀಮಾ ನೋಡುವುದು ಹೆಚ್ಚು ಆನಂದವೋ? ಇಷ್ಟು ವಿವೇಚನೆ ಇಲ್ಲ. ಇಲ್ಲಿ ನಾನು ಸೊಳ್ಳೆ ಹೊಡೆಯುತ್ತ ಬಿದ್ದುಕೊಂಡಿರಬೇಕು. ಅಲ್ಲಿ ಅವಳು ಸಿನೀಮಾ ನೋಡುತ್ತ ನಲಿಯುತ್ತಿರಬೇಕು! ರೈಲ್ವೆ ಸ್ಟೇಷನ್ನಿಗೆ ಒಬ್ಬ ಆಳನ್ನು ಕೂಡ ಕಳಿಸಿರಲಿಲ್ಲ. ಬರುತ್ತೇನೆಂದು ಕಾಗದ ಬರೆದಿದ್ದರೂ ಅಷ್ಟು ಅಲಕ್ಷ್ಯವೇ?' ಎಂದು ಮುಂತಾಗಿ ಗುಣಾಕಾರಗಳನ್ನು ಮನಸ್ಸಿನಲ್ಲಿ ಮಾಡಿಕೊಳ್ಳುತ್ತಿದ್ದನು. ಏಳೂವರೆ ಗಂಟೆ ಆಯಿತು. ಸೀತಾರಾಮರಾಯನು ಈ ಗೊಣಗಾಟ ಕೊರಗಾಟಗಳಲ್ಲಿದ್ದಾಗ ಕೊಟಡಿಯ ಬಾಗಿಲನ್ನು ತೆರೆದುಕೊಂಡು ಅವನ ಭಾವಮೈದ ರಘು ಒಳಕ್ಕೆ ಬಂದು,

'ನೀನು ಕ್ಷಮಿಸಬೇಕು ಭಾವ! ಅಕ್ಕ ಹೇಳಿದಳು: ನಿನ್ನ ಭಾವ ತುಮಕೂರಿಂದ ಬರುತ್ತಾರಪ್ಪ. ರೈಲ್ವೆ ಸ್ಟೇಷನ್ನಿಗೆ ಹೋಗಿ ಕರೆದುಕೊಂಡು ಬಾರಪ್ಪ ಎಂದು ಹೇಳಿದಳು. ನಾನು, ಸಂಜೆ ಫುಟ್‌ಬಾಲ್ ಮ್ಯಾಚ್ ಇದೆ; ನಾನು ಅದರಲ್ಲಿ ಭಾಗ ವಹಿಸಬೇಕು; ನಮ್ಮ ಹೈಸ್ಕೂಲ್ ಟೀಮಿನಲ್ಲಿ ನಾನೇ ಸೆಂಟರ್ ಫಾರ್‌ವರ್ಡ್; ನಾನು ಹೋಗುವುದಕ್ಕಾಗುವುದಿಲ್ಲ; ಬೇರೆ ಯಾರನ್ನಾದರೂ ಕಳಿಸಿಕೊಡು ಎಂದು ಹೇಳಿ ಹೊರಟುಹೋದೆ. ರೈಲ್ವೆ ಸ್ಟೇಷನ್ನಿಗೆ ಯಾರೂ ಹೋಗಿರಲಿಲ್ಲ ಎಂದು ತಿಳಿಯಿತು' ಎಂದು ಹೇಳಿದನು.

'ಯಾರೇಕೆ ಬರಬೇಕು? ನನಗೆ ಕೈಕಾಲುಗಳಿಲ್ಲವೆ? ಸ್ಟೇಷನ್ನಿನಲ್ಲಿ ಮೂಟೆ ಹೊರುವುದಕ್ಕೆ ಕೂಲಿಜನ ಇದ್ದಾರೆ. ನನ್ನನ್ನು ಕೂಡಿಸಿಕೊಂಡು ಬರುವುದಕ್ಕೆ ಜಟಕಾ ಗಾಡಿಗಳಿವೆ.'

'ನಿನಗೆ ಬಹಳ ಕೋಪ ಬಂದಿರುವ ಹಾಗಿದೆಯಲ್ಲ ಭಾವ!'

'ಕೋಪ ಏನಿಲ್ಲ. ಇರುವ ಮಾತು ಹೇಳಿದೆ. ಅದು ಹೋಗಲಿ,

ಬಿಡು. ಮ್ಯಾಚಿನಲ್ಲಿ ಏನಾಯಿತು? ನಿಮ್ಮ ಟೀಮು ಗೆದ್ದಿತೋ ಹೇಗೆ?'

'ಒಂದು ಗೋಲಿನಿಂದ ಗೆದ್ದಿತು. ಇಂಟರ್ ಕಾಲೇಜಿನವರೂ ಬಲವಾಗಿಯೇ ಆಡಿದರು. ಗೋಲ್ ಹೊಡಿಯುವುದಕ್ಕೆ ಒಂದು ಅವಕಾಶವನ್ನೂ ಕೊಡಲಿಲ್ಲ. ಕಡೆಗೆ ಆಟ ಮುಗಿಯುವುದಕ್ಕೆ ಐದು ನಿಮಿಷ ಇರುವಾಗ ನಾನು ಹೇಗೊ ದಬಾಯಿಸಿಕೊಂಡು ನುಗ್ಗಿ ಒಂದು ಗೋಲ್ ಹೊಡೆದೆ.'

ಭಾವಮೈದುನನ ಜತೆಯಲ್ಲಿ ಮ್ಯಾಚಿನ ಮಾತು, ಸ್ಕೂಲಿನ ಮಾತು ಆಡುತ್ತಿದ್ದಾಗ ಅಡಿಗೆಯವನು ಬಂದು, 'ಎಲೆಹಾಕಿದೆ' ಎಂದು ತಿಳಿಸಿದನು. ಎಂಟು ಗಂಟೆಯಾಗಿತ್ತು. ಅಡಿಗೆ ಚೆನ್ನಾಗಿದ್ದರೂ ಸೀತಾರಾಮರಾಯನು ಸರಿಯಾಗಿ ಊಟ ಮಾಡಲಿಲ್ಲ. ಎರಡು ತುತ್ತು ಬಾಯಿಗೆ ಹಾಕಿಕೊಂಡು ಕೈ ತೊಳೆದುಕೊಂಡು ನೆಟ್ಟಗೆ ಕೊಟಡಿಗೆ ಬಂದು ಮಲಗಿಬಿಟ್ಟನು

ನಿರೀಕ್ಷಣೆಯಲ್ಲಿ ಒಂದು ಕ್ಷಣ ಒಂದು ಯುಗವಾಗಿ ಕಾಣುತ್ತದೆ. ಕ್ಷಣಕ್ಷಣಕ್ಕೂ ಮನಸ್ಸು ಉದ್ವೇಗಗೊಳ್ಳುತ್ತದೆ. ಸಿನೀಮಾ ಮುಗಿಯಬೇಕಾದರೆ ರಾತ್ರಿ ಸುಮಾರು ೯-೩೦ ಗಂಟೆಯಾಗಬಹುದು, ಸರೋಜ ಮನೆಗೆ ಬರುವುದಕ್ಕೆ ೯-೪೫ ಆಗಬಹುದು-ಎಂಬುದು ತಿಳಿದಿದ್ದರೂ ಕೈಗಡಿಯಾರವನ್ನು ಐದು ನಿಮಿಷಕ್ಕೊಂದಾವೃತ್ತಿ ನೋಡಿಕೊಳ್ಳುವುದು ತಪ್ಪಲಿಲ್ಲ; ಗಡಿಯಾರ ನಡೆಯುತ್ತಿದೆಯೋ ಇಲ್ಲವೋ ಎಂದು ಕಿವಿಗಿಟ್ಟುಕೊಂಡು ಕೇಳುವುದು ತಪ್ಪಲಿಲ್ಲ. ಇನ್ನೂ ಒಂಬತ್ತು ಗಂಟೆಯಾಗಿಲ್ಲದಿದ್ದರೂ ರೈಲು ಪ್ರಯಾಣದ ಆಯಾಸದಿಂದ ಸೀತಾರಾಮನಿಗೆ ಕಣ್ಣುಗಳು ಎಳೆದುಕೊಂಡು ಹೋಗುತ್ತಿದ್ದುವು. ನಿದ್ರಾತುರವಾಗಿದ್ದ ಕಣ್ಣುಗಳಿಗೂ ಉದ್ವೇಗಭರಿತವಾಗಿದ್ದ ಮನಸ್ಸಿಗೂ ಒರಸೊರಸು ಪ್ರಾರಂಭವಾಯಿತು. ತಾನು ಎಚ್ಚರವಾಗಿಯೇ ಇರಬೇಕೆಂದೂ ಸರೋಜಳಿಗೆ ಆ ದಿನ ಬುದ್ಧಿ ಕಲಿಸಬೇಕೆಂದೂ ಒಂದು ಕಡೆ ಮನಸ್ಸು ಹೇಳುತ್ತಿತ್ತು. ತಾನು ಅವಳಲ್ಲಿ ಕೋಪಗೊಳ್ಳದೆ, ಸಿನಿಮಾ ಚೆನ್ನಾಗಿತ್ತೆ? ಕಥೆ ಏನು? ಅಭಿನಯ, ದೃಶ್ಯಸಂಯೋಜನೆ ಹೇಗಿದ್ದುವು?, ಎಂದು

ಕೇಳುತ್ತ, ಲಲ್ಲೆಯ ನುಡಿಗಳಿಂದ ಸುಖಸಾಮ್ರಾಜ್ಯದಲ್ಲಿ ಓಲಾಡಬೇಕೆಂದು ಮನಸ್ಸು ಇನ್ನೊಂದು ಕಡೆ ಹೇಳುತ್ತಿತ್ತು. ತಾನು ಏನೊಂದು ಅಸಮಾಧಾನವನ್ನೂ ಪ್ರದರ್ಶಿಸದೆ ಎಂದಿನಂತೆಯೇ ಆದರಿಸಿಬಿಟ್ಟರೆ ತನ್ನನ್ನು ಭಾರ್ಯಾದಾಸನೆಂದು ಎಲ್ಲಿ ತಿಳಿದುಕೊಳ್ಳುತ್ತಾಳೋ ತನ್ನ ಮರ್ಯಾದೆಗೆ ಎಲ್ಲಿ ಊನವಾಗುತ್ತದೆಯೋ ಎಂಬ ಭಾವನೆ ಮಗುದೊಂದು ಕಡೆ ತಲೆ ಎತ್ತುತ್ತಿತ್ತು. ಅವಳು ಬಂದಾಗ ನಿದ್ದೆಯಲ್ಲಿರುವಂತೆ ನಟಿಸಿ ಅವಳು ಏನು ಮಾಡುತ್ತಾಳೋ ನೋಡಿಕೊಂಡು ಅನಂತರ ಶಿಕ್ಷಿಸಬೇಕೋ ಆದರಿಸಬೇಕೋ ನಿರ್ಧರಿಸೋಣ ಎಂದು ಮತ್ತೊಂದು ಆಲೋಚನೆ ಬರುತ್ತಿತ್ತು. ಆದರೆ ಈ ಹೊಯ್ದಾಟಗಳಲ್ಲಿ ಸರೋಜಳಿಗೆ ಬುದ್ಧಿಗಲಿಸಬೇಕು, ಅವಳು ಮುಂದೆ ತನ್ನನ್ನು ಅಲಕ್ಷ್ಯ ಮಾಡದಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು ಎಂಬುದೇ ಮೇಲುಗೈಯಾಗಿತ್ತು. ಗಂಡಸು ಎಂತಹ ವಿದ್ಯಾವಂತನಾಗಿದ್ದರೂ, ಸುಸಂಸ್ಕೃತನೆಂದು ಹೆಸರು ಪಡೆದಿದ್ದರೂ ಕಾಮ ಪಕ್ವವಾಗಿ ಪ್ರೇಮವಾಗುವ ವರೆಗೆ ಅವನು ಕೇವಲ ಸ್ವಾರ್ಥಿ. ಹೆಂಡತಿ ಎಂಬುದು ತನ್ನ ವಸ್ತು, ತನ್ನ ಮನಸ್ಸಂತೋಷಕ್ಕಾಗಿ ತನ್ನಿಷ್ಟದಂತೆ ನಡೆದುಕೊಳ್ಳಬೇಕಾದ ಜೀವಂತ ಯಂತ್ರ ಎಂದು ಭಾವಿಸಿ ತನ್ನ ಅಧಿಕಾರವನ್ನು ಚಲಾಯಿಸುವುದಕ್ಕೆ ಪ್ರಯತ್ನ ಪಡುತ್ತಾನೆ. ಹೆಂಡತಿ ಎಂಬುವಳು ತನ್ನಂತೆಯೇ ಮನುಷ್ಯ ವ್ಯಕ್ತಿ, ಅದಕ್ಕೆ ವ್ಯಕ್ತಿತ್ವವಿದೆ, ಸ್ವಾತಂತ್ರ್ಯಪ್ರಿಯತೆ ಇದೆ; ಅವುಗಳನ್ನು ಮನ್ನಿಸಿ ತಾನು ಹೊಂದಿಕೊಂಡು ಹೋಗಬೇಕು, ಪ್ರಿಯಸಖಿಯಂತೆ ಭಾವಿಸಿ ಅವಳೊಡನೆ ವರ್ತಿಸಬೇಕು — ಎಂಬ ಉದಾರ ಭಾವನೆಗಳು ಗಂಡಸಿನ ಹೃದಯದಲ್ಲಿ ಮೂಡುವುದಿಲ್ಲ. ಪತಿವ್ರತೆಯಾದವಳು ಗಂಡನ ಇಷ್ಟದಂತೆ ನಡೆದುಕೊಳ್ಳಬೇಕು ಎಂಬ ಸೂತ್ರ ಅವನಿಗೆ ಮೇಲ್ಪಂಕ್ತಿ. ಗಂಡ ಸರಸಿಯಾಗಿ ಉದಾರಿಯಾಗಿ ನಡೆದುಕೊಂಡರೆ ಸಂಸಾರದಲ್ಲಿ ಅನೇಕ ಮನಸ್ತಾಪಗಳು ತಪ್ಪಿಹೋಗುತ್ತವೆ. ಪ್ರಕೃತದಲ್ಲಿ ಸೀತಾರಾಮರಾಯನು ಆ ಗುಣಗಳನ್ನು ಪ್ರದರ್ಶಿಸಲಿಲ್ಲ.

ಸೀತಾರಾಮರಾಯನಿಗೆ ಮನಸ್ಸಿನಲ್ಲಿ ಉದ್ವೇಗವಿದ್ದರೂ ಒಬ್ಬೊಂಟಿಗನಾಗಿ ಎಷ್ಟು ಹೊತ್ತು ಕಣ್ಣು ಬಿಟ್ಟುಕೊಂಡು ಮಲಗಿರಲು ಸಾಧ್ಯ?

೯–೧೫ರ ಹೊತ್ತಿಗೆ ಕಣ್ಣುಗಳು ತಾವಾಗಿ ಮುಚ್ಚಿಕೊಳ್ಳುವುದಕ್ಕೆ ಮೊದಲು ಮಾಡಿದುವು. ನಿದ್ದೆಯ ಜೊಂಪು ಹತ್ತತೊಡಗಿತು. ಆದರೂ ಒಂದೆರಡು ಬಾರಿ ಪ್ರಯತ್ನ ಪೂರ್ವಕವಾಗಿ ಹಾಸಿಗೆಯಲ್ಲಿ ಕುಳಿತು ಗಡಿಯಾರವನ್ನು ನೋಡಿಕೊಂಡನು. ೯–೩೦ ಆಗಿತ್ತು. ಇನ್ನೇನು! ಕಾಲು ಗಂಟೆಯೊಳಗಾಗಿ ಬರುತ್ತಾಳೆ ಎಂದು ನಿರೀಕ್ಷಿಸುತ್ತ ಮಲಗಿಕೊಂಡನು. ಕಾಲುಗಂಟೆಗೆಲ್ಲ ನಾಗರಾಜ, ಸರೋಜ ಮತ್ತು ಆವಳ ತಂಗಿ ಸುಕನ್ಯೆ–ಎಲ್ಲರೂ ಸಿನೀಮಾದಿಂದ ಹಿಂದಿರುಗಿ ಬಂದ ಗಲಭೆ ಅಸ್ಪಷ್ಟವಾಗಿ ಅವನಿಗೆ ಕೇಳಿಸಿತು. ನಿದ್ದೆಯ ಜೊಂಪು ಹತ್ತಿದ ಜತೆಗೆ ಸ್ವಲ್ಪ ನಟನೆಯೂ ಸೇರಿ ಅವನು ಕೆಳಕ್ಕೆ ಇಳಿದುಬರದೆ ಕೊಟಡಿಯಲ್ಲೇ ಮಲಗಿದ್ದನು. ತನ್ನ ಗಂಡ ಸಂಜೆ ರೈಲಿನಲ್ಲಿ ಬಂದು ಮಹಡಿಯ ಮೇಲೆ ಮಲಗಿದ್ದಾನೆಂಬುದು ಸರೋಜಳಿಗೆ ತಿಳಿದುಬಂತು. ಅವಳು ಕೂಡಲೇ ಮೆಟ್ಟಿಲುಗಳನ್ನು ಹತ್ತಿ ಸಂಭ್ರಮದಿಂದ ಕೊಟಡಿಗೆ ಬಂದಳು. ಗೋದಾವರಿಯ ದಂಡೆಯಲ್ಲಿ ಸೈಕತ ಕ್ರೀಡಾಲೋಲಳಾಗಿದ್ದು ಹೊತ್ತು ಮೀರಿಬಂದ ಸೀತಾದೇವಿಯನ್ನು ಅಸಮಾಧಾನ ದೃಷ್ಟಿಯಿಂದ ಶ್ರೀರಾಮನು ನೋಡಿದಾಗ ಆಕೆ ಹೇಗೆ ಕರಸರೋಜಗಳನ್ನು ಮುಗಿದು ನಿಂತಳೋ ಹಾಗೆಯೇ ತಾನೂ ತನ್ನ ಪತಿದೇವನೆದುರಿನಲ್ಲಿ ನಿಂತು ಕ್ಷಮೆಯನ್ನು ಬೇಡಿಕೊಳ್ಳಬೇಕೆಂದು ಸರೋಜ ಹಾಸಿಗೆಯ ಬಳಿಗೆ ಬಂದಳು. ಆದರೆ ಆ ಪತಿದೇವನು ತನ್ನನ್ನು ಮರೆತು ನಿದ್ರಾಂಗನಾ ಲೋಲನಾಗಿರುವುದನ್ನು ಕಂಡು ಆ ಸವತಿಯನ್ನು ಓಡಿಸಲೋ ಬೇಡವೋ ಎಂದು ಎರಡು ನಿಮಿಷಗಳ ಕಾಲ ಡೋಲಾಯಮಾನಸಳಾಗಿ ನಿಂತಳು. ಬೇಗ ಊಟ ಮಾಡಿಕೊಂಡು ಬಂದು ಓಡಿಸುತ್ತೇನೆ ಎಂದು ಹೇಳಿಕೊಳ್ಳುತ್ತ ನಗು ನಗುತ್ತ ಹಿಂದಕ್ಕೆ ಬಂದು ಮಹಡಿಯನ್ನಿಳಿದು ಊಟದ ಮನೆಗೆ ಹೋಗಿ ಕುಳಿತಳು. ಇತ್ತ ಸೀತಾರಾಮರಾಯನು ಹಾಸಿಗೆಯಿಂದೆದ್ದು ಕೊಟಡಿಯ ಬಾಗಿಲನ್ನು ಒಳಗಿಂದ ಹಾಕಿಕೊಂಡು ದೀಪವನ್ನು ಆರಿಸಿ ಮಲಗಿದನು.

ಹತ್ತು ನಿಮಿಷಗಳ ತರುವಾಯ ಸರೋಜ ಎಲೆಯಡಕೆ ತಟ್ಟೆಯನ್ನು ತೆಗೆದುಕೊಂಡು ಮಹಡಿಯನ್ನು ಹತ್ತಿ ಬಂದಳು. ತಾನು ಹೊರಟು ಬಂದಾಗ ಕೊಟಡಿಯ ಬಾಗಿಲು ಅರ್ಧ ತೆರೆದಿತ್ತು, ದೀಪ ಉರಿಯು

ತ್ತಿತ್ತು. ಈಗ ಬಾಗಿಲೇಕೆ ಹಾಕಿದೆ? ಗಾಳಿಗೇನಾದರೂ ಹಾಕಿಕೊಂಡಿತೋ ಎಂದು ಅನುಮಾನಿಸುತ್ತ ಬಾಗಿಲಬಳಿಗೆ ಬಂದಳು. ಬಾಗಿಲನ್ನು ಅಗುಳಿ ಹಾಕಿಕೊಂಡದ್ದು ತಿಳಿದು ಬಂತು. ಗಂಡನು ಎಚ್ಚರವಾಗಿದ್ದನೆಂದೂ, ನಿದ್ರೆ ಬಂದವನಂತೆ ನಟಿಸಿ, ಈಗ ತನ್ನನ್ನು ಹೊರಗಿಕ್ಕಿ ಅಸಮಾಧಾನವನ್ನು ವ್ಯಕ್ತಗೊಳಿಸಿರುವನೆಂದೂ ಸರೋಜಳಿಗೆ ಕ್ಷಣದಲ್ಲಿ ಹೊಳೆದುವು. ಕಣ್ಣುಗಳು ಅಶ್ರುಮಯುವಾದುವು. ಬಾಗಿಲನ್ನು ಮೆಲ್ಲಗೆ ತಟ್ಟಿದಳು. ಅದು ತೆರೆಯಲಿಲ್ಲ. ಗಟ್ಟಿಯಾಗಿ ತಟ್ಟುವ ಹಾಗಿಲ್ಲ, ಗಟ್ಟಿಯಾಗಿ ಮಾತನಾಡುವ ಹಾಗಿಲ್ಲ. ಮೆಲ್ಲಗೆ ಪುನಃ ತಟ್ಟಿದಳು. 'ಸ್ವಲ್ಪ ಬಾಗಿಲು ತೆರೆಯಿರಿ. ತಪ್ಪಾಯಿತು, ಕೋಪ ಬೇಡ' ಎಂದು ಹೇಳಿದಳು. ಬಾಗಿಲು ತೆರೆಯಲಿಲ್ಲ. ಎರಡು ಮೂರು ಬಾರಿ ಬಾಗಿಲನ್ನು ತಟ್ಟಿದಳು, ಮೊರೆಯಿಟ್ಟಳು. ಫಲಕಾರಿಯಾಗಲಿಲ್ಲ. 'ಹಾಳು ಸಿನೀಮಾಗೆ ನಾನೇಕೆ ಹೋದೆನೋ?' ಎಂದು ಕಣ್ಣೀರನ್ನು ಒರಸಿಕೊಳ್ಳುತ್ತ ಇನ್ನೂ ಐದು ನಿಮಿಷ ನಿಂತು ಬಾಗಿಲು ತಟ್ಟಿ ನಿರೀಕ್ಷಿಸಿದಳು. ಬಾಗಿಲು ತೆರೆಯಲಿಲ್ಲ. ದುಃಖ ಸಂತಪ್ತಳಾಗಿ ಮೆಲ್ಲಮೆಲ್ಲಗೆ ಹಿಂಜರಿಯುತ್ತ ಮಹಡಿಯನ್ನಿಳಿದು ಕೆಳಕ್ಕೆ ಬಂದಳು; ತನ್ನ ಕೊನೆಯ ತಮ್ಮ ತಂಗಿ ಮಲಗಿದ್ದ ಹಾಸಿಗೆಯಲ್ಲಿ ಕಣ್ಣೀರು ಹರಿಸುತ್ತ ಮಲಗಿಕೊಂಡಳು.

ಸರೋಜ ಹೊರಟುಹೋದ ಹದಿನೈದು ನಿಮಿಷಗಳ ತರುವಾಯ ಸೀತಾರಾಮು ಮೆಲ್ಲಗೆ ಬಾಗಿಲನ್ನು ತೆರೆದನು. ಆವನ ನಿರೀಕ್ಷಣೆಯಲ್ಲಿ ಕಾಲುಗಂಟೆಯ ವರೆಗೋ ತಾನು ಬಾಗಿಲನ್ನು ತೆರೆಯುವ ವರೆಗೋ ಸರೋಜ ಗೋಗರೆಯುತ್ತ ನಿಂತಿರುತ್ತಾಳೆ; ಹಾಗೆ ಪೇಚಾಡಿಸಿ ಬಾಗಿಲು ತೆರೆಯೋಣ ಎಂದು ಇದ್ದಿತೋ ಏನೋ! ಐದು ನಿಮಿಷಗಳವರೆಗೆ ಕಾದು ನೋಡಿದರೂ ಒಳಕ್ಕೆ ಸರೋಜ ಬಂದ ಸುಳಿವು ಕಾಣಲಿಲ್ಲ. ಬಳಿಕ ದೀಪವನ್ನು ಹಾಕಿ ಕೊಟಡಿಯ ಒಳಗೆ ಹೊರಗೆ ಶೋಧಿಸಿದನು. ಸರೋಜ ಕಾಣಲಿಲ್ಲ. ತಾನು ಮಾಡಿದ್ದು ತನಗೇ ನಷ್ಟವಾಯಿತು. ಕೆಲವು ಕಾಲ ಚಿಂತಿಸುತ್ತಿದ್ದು ಬಳಿಕ ನಿದ್ದೆ ಹೋದನು.

## ೩. ಬೆನ್ನಿನ ಚಾಡಿ

ಬೆಳಗಾಯಿತು. ಸುಮಾರು ಏಳು ಗಂಟೆಯ ಹೊತ್ತಿಗೆ ಸೀತಾರಾಮು ಮಹಡಿಯಿಂದ ಇಳಿದುಬಂದನು. ಮುಖ ತೊಳೆದುಕೊಳ್ಳುವುದಕ್ಕೆ ನೀರ ಮನೆಗೆ ತಿರುಗಿದಾಗ ಅಲ್ಲಿಂದ ಮುಖ ತೊಳೆದುಕೊಂಡು ಸರೋಜ ಹೊರಕ್ಕೆ ಬರುತ್ತಿದ್ದಳು. ಅವಳ ಕೈಯಲ್ಲಿದ್ದ ಟವಲನ್ನು ಕಿತ್ತುಕೊಂಡು ನೀರಮನೆಯೊಳಕ್ಕೆ ಪ್ರವೇಶಿಸಿದನು. ಕಿತ್ತುಕೊಂಡ ಒರಟುತನಕ್ಕೆ ಸರೋಜ ಸ್ವಲ್ಪ ಸುಖಿಯೇ ಆದಳು. ಗಂಡನ ಮುನಿಸು ಇಳಿದಿರ ಬೇಕೆಂದು ಊಹಿಸಿ ತಾನು ಹಿಂದೆಯೇ ಹೋಗಿ ತಂಬಿಗೆಯಿಂದ ನೀರನ್ನು ಕೈಗೆ ಹಾಕುತ್ತ, 'ನಿನ್ನೆ ರಾತ್ರಿ ನೀವು ಹಾಗೆ ಮಾಡಬಹುದೆ?' ಎಂದು ಕೇಳಿದಳು.

'ನಿನ್ನೆ ಸಂಜೆ ನೀನು ಹಾಗೆ ಮಾಡಬಹುದೆ?' ಎಂದು ಸೀತಾ ರಾಮು ಕೇಳಿದನು.

'ತಪ್ಪಾಯಿತು. ಇನ್ನು ಜನ್ಮವಿರುವ ವರೆಗೂ ನಾನು ಹಾಗೆ ಮಾಡುವುದಿಲ್ಲ.'

'ಸರಿ. ನಾನೂ ಮುಂದೆ ಹಾಗೆ ಮಾಡುವುದಿಲ್ಲ.'

ಅಲ್ಲಿಗೆ ಇಬ್ಬರ ಮನಸ್ಸುಗಳೂ ತಾತ್ಕಾಲಿಕವಾಗಿ ಸಮಾಧಾನಕ್ಕೆ ಬಂದಂತಾಯಿತು. ಆದರೆ ತನ್ನ ಮನೆಯಲ್ಲಿ ಸಾಮಾನ್ಯ ರೀತಿಯಲ್ಲಿ ನಡೆದುಕೊಳ್ಳುವ ಮನುಷ್ಯ ಅಳಿಯನಾಗಿ ಅತ್ತೆಯ ಮನೆಗೆ ಹೋದರೆ ಬಹಳ ಸೂಕ್ಷ್ಮವಾಗಿಬಿಡುತ್ತಾನೆ. 'ಯಕ್ಷೋ ಯಾದೃಶಸ್ತಾದೃಶೋ ಬಲಿ' ಎಂಬಂತೆ ಅತ್ತೆಯ ಮನೆಯಲ್ಲಿ ಮೊದಲು ಮೊದಲು ಮಾಡುವ ಉಪಚಾರದ ರುಚಿಯನ್ನು ಕಂಡುಕೊಂಡು ಅದೇ ಉಪಚಾರವನ್ನು ಯಾವಾಗಲೂ ನಿರೀಕ್ಷಿಸುತ್ತ ಹೋಗುತ್ತಾನೆ. ಎರಡನೆಯದಾಗಿ, ಯಾರು ಏನು ಮಾತಾಡಿದರೂ ಅದರ ಪರಿಣಾಮ ಫಲವನ್ನೆಲ್ಲ ತನ್ನ ಹೆಂಡತಿಯ ತಲೆಯಮೇಲೆ ಹೇರುತ್ತಾನೆ. ಸೀತಾರಾಮುರಾಯನಂಥ ಸರಸಿಯಲ್ಲದ ಮನುಷ್ಯನಿಗೆ ಅಸುಖ, ಅತೃಪ್ತಿ, ಅಸಮಾಧಾನ ತುಂಬಿಕೊಳ್ಳುತ್ತವೆ.

ಮೊದಲನೆಯ ಬಾರಿ ಕಾಫಿ ಸೇವನೆ ಮಹಡಿಯ ಮೇಲೆ ಕೊಟಡಿಯಲ್ಲಿ ನಡೆಯಿತು. ಸೀತಾರಾಮು ಮತ್ತು ಸರೋಜ ಇಬ್ಬರೂ ಒಟ್ಟಿಗೆ ಕುಳಿತು ತೆಗೆದುಕೊಂಡರು. ಅಡಿಗೆಯ ನಾರಣಾಚಾರಿಗೆ ಬದಲು ಸರೋಜ ತಾನೇ ಬೆಳ್ಳಿಯ ತಟ್ಟೆಯಲ್ಲಿ ಎರಡು ಲೋಟಗಳನ್ನಿಟ್ಟುಕೊಂಡು ಕಾಫಿಯನ್ನು ಸುರಿದು ಸ್ವಲ್ಪ ಹೆಚ್ಚು ಹಾಲನ್ನು ಸೇರಿಸಿ ತಟ್ಟೆಯನ್ನು ಎತ್ತಿಕೊಂಡು ಹೊರಟು ಬಂದಿದ್ದಳು. ಇದು ಅವಳ ತಾಯಿಗೆ ಸರಿಬೀಳಲಿಲ್ಲ. ನಾರಣಾಚಾರಿಯ ಕೈಯಲ್ಲಿ ಅಳಿಯನಿಗೆ ಕಾಫಿಯನ್ನು ಕಳಿಸಬೇಕೆಂದು ಆಕೆಯ ಇಷ್ಟ. ತನ್ನ ಮನೆಯಲ್ಲಿರುವ ಆಳುಕಾಳುಗಳ ಅಡಿಗೆಯವರು ಪರಿಚಾರಕರ ಓಡಾಟವನ್ನು ಅಳಿಯ ನೋಡಲಿ ಎಂಬ ಅಸಿಸ್ಟೆಂಟ್ ಕಮಿಷನರ್ ಗಿರಿಯ ಹೆಮ್ಮೆ ಉಪಪ್ರಜ್ಞಾರಂಗದಲ್ಲಿ ಸುಳಿದಿದ್ದಿತೋ ಏನೋ! ಆದರೆ ಆಗ ಸರೋಜ ಕಾಫಿಯನ್ನು ತಂದುಬಿಟ್ಟಳು. ತಾಯಿ ತನ್ನ ಅಸಮಾಧಾನವನ್ನು ಗೊಣಗಾಟದಲ್ಲಿ ಮುಕ್ತಾಯಗೊಳಿಸಿದಳು. ಸುಮಾರು ಎಂಟು ಗಂಟೆಯ ಹೊತ್ತಿಗೆ ಸೀತಾರಾಮರಾಯನು ಸ್ನಾನ ಮಾಡುವುದಕ್ಕಾಗಿ ಟವಲ್ಲುಗಳನ್ನೂ ಪಂಚೆಯನ್ನೂ ತೆಗೆದುಕೊಂಡು ನೀರಮನೆಗೆ ಕಾಲಿಟ್ಟನು. ಹಿಂದೆಯೇ ಸರೋಜ ಹೋಗಿ ನೀರನ್ನು ತೋಡಿಕೊಡಲು ಹವಣಿಸಿದಳು. ತಾಯಿ ನಡುಮನೆಗೆ ಬಂದು, 'ಏನಮ್ಮ! ನಾಲ್ಕು ದಿನದಿಂದ ಸೊಂಟನೋವು ತಲೆನೋವು ಎಂದು ನರಳುತ್ತಿದ್ದೆಯಲ್ಲ! ನಿನ್ನ ಗಂಡನಿಗೆ ನಾರಣಾಚಾರಿ ನೀರು ತೋಡಿಕೊಟ್ಟರೆ ಆಗದೇ? ಬಸಿರು, ಬೇನೆ ಏನೇ ಆಗಿದ್ದರೂ ಅವನ ಸೇವೆ ನೀನೇ ಮಾಡಬೇಕೇ?' ಎಂದು ಕೇಳಿದಳು. ಸೀತಾರಾಮು ಸಿಸ್ರನೆ, 'ನನ್ನ ಸೇವೆ ಮಾಡು ಎಂದು ನಾನೇನೂ ನಿಮ್ಮ ಮಗಳಿಗೆ ಹೇಳಲಿಲ್ಲ. ನನಗೆ ದೇವರು ಕೈಕಾಲು ಕೊಟ್ಟಿದ್ದಾನೆ' ಎಂದು ಹೇಳಿ ಸರೋಜಳನ್ನು ನೀರಮನೆಯಿಂದಾಚೆಗೆ ಮೆಲ್ಲನೆ ತಳ್ಳಿಬಿಟ್ಟನು. ಹಾಲಿನಲ್ಲಿ ತಾಯಿಗೂ ಮಗಳಿಗೂ ಮಾತು ಬೆಳೆಯಿತು. 'ನೀನೇಕೆ ಗಂಡಹೆಂಡಿರ ಮಧ್ಯೆ ಬರುತ್ತೀಯೆ? ನನಗೇನು ಬಂದಿದೆ ಬೇನೆ? ಊರಿಂದ ಗಂಡ ಬಂದರೆ ನಾನು ಉಪಚಾರ ಮಾಡಬೇಡವೆ? ಸುಮ್ಮಸುಮ್ಮನೆ ಅವರನ್ನು ರೇಗಿಸಿ ಕೂಡಿಸುತ್ತೀಯೆ' ಎಂದು ಮಗಳು ಹೇಳಿದಳು.

'ನಾನೇನು ಆಡಬಾರದ್ದನ್ನು ಆಡಿದೆನೆ? ನೀನು ಬಸಿರಿ, ನಿನ್ನ ಕೈಯಲ್ಲಾಗದು; ನಾರಣಾಚಾರಿ ನೀರು ತೋಡಿ ಕೊಡಲಿ ಎಂದರೆ ತಪ್ಪೇ? ಅಷ್ಟು ಅಕ್ಕರೆಯಿರುವ ಗಂಡ— ನೀನು ಕಷ್ಟಪಡಬೇಡ, ನಾನೇ ತೋಡಿಕೊಳ್ಳುತ್ತೇನೆ. ಇಲ್ಲ, ನಾರಣಾಚಾರಿಯನ್ನು ಕರೆ. ನೀರು ತೋಡಿಕೊಡಲಿ ಎಂದು ಹೇಳಬೇಡವೇ? ಹೊಕ್ಕ ಮನೆಯಲ್ಲಂತೂ ಕತ್ತೆ ದುಡಿದ ಹಾಗೆ ದುಡಿದೆ. ತವರುಮನೆಯಲ್ಲಾದರೂ ಉಸ್ಸಮ್ಮ ಎಂದು ಎರಡು ದಿನ ನಿನಗೆ ವಿಶ್ರಾಂತಿ ಬೇಡವೇ? ನನ್ನ ಕಣ್ಣೆದುರಿಗೆ ನೀನು ಕಷ್ಟಪಡಬೇಡಮ್ಮ! ನನ್ನ ಕಣ್ಣುಮರೆಯಲ್ಲಿ ನಿನ್ನನ್ನು ಬಡಿದಾದರೂ ಬಡಿಯಲಿ, ಕಡಿದಾದರೂ ಕಡಿಯಲಿ! ನಾನೇನು ಅಡ್ಡ ಬರುವ ಹಾಗಿದೆಯೆ?'

ತಾಯಿಯ ವಾದಕ್ಕೆ ಮಗಳು ಉತ್ತರ ಹೇಳುವುದು ಸ್ವಲ್ಪ ಕಷ್ಟವಾಯಿತು.

'ನೀನು ಹಾಯಾಗಿ ಒಂದು ಕಡೆ ಕುಳಿತುಕೋ. ಅವನ ಉಪಚಾರವನ್ನೆಲ್ಲ ಹುಡುಗರಿಂದಲೋ ನಾರಣಾಚಾರಿಯಿಂದಲೋ ಮಾಡಿಸುತ್ತೇನೆ.'

ಈ ಮಾತುಗಳಾಗುತ್ತಿದ್ದಾಗ ನಾರಣಾಚಾರಿ ದೋಸೆಗಳನ್ನು ಹೊಯ್ದು ಸಿದ್ಧಪಡಿಸಿದ್ದನು; ಎರಡನೆಯ ಬಾರಿ ಕಾಫಿ ತಯಾರು ಮಾಡಿದ್ದನು. ಸೀತಾರಾಮು ಸ್ನಾನವನ್ನು ಮುಗಿಸಿಕೊಂಡು ಯಾರ ಕಡೆಗೂ ತಿರುಗಿನೋಡದೆ ಮೆಟ್ಟಿಲುಗಳನ್ನು ಹತ್ತಿ ಕೊಟಡಿಗೆ ಹೊರಟುಹೋದನು. ಸ್ವಲ್ಪ ಹೊತ್ತಿನೊಳಗೆ ನಾರಣಾಚಾರಿ ತಟ್ಟೆಗಳಲ್ಲಿ ದೋಸೆಗಳನ್ನು ಎತ್ತಿಕೊಂಡು ಹಾಲಿಗೆ ಬಂದನು. ಸರೋಜ ಅವನನ್ನು ತಡೆದು, 'ತಟ್ಟೆಗಳನ್ನು ಇಲ್ಲಿ ಕೊಡು. ನೀನು ಹೋಗಿ ನೀರೂ ಕಾಫಿ ತೆಗೆದುಕೊಂಡು ಬಾ' ಎಂದು ಹೇಳಿ ತಟ್ಟೆಗಳನ್ನು ಈಸಿಕೊಂಡು ಮಹಡಿಯನ್ನು ಹತ್ತಿ ಹೋದಳು. ಇತ್ತ ಕೆಳಗಿದ್ದ ತಾಯಿ ಸುಮ್ಮನಿರದೆ, 'ತುಂಬಿದ ಬಸಿರಿ! ಎಷ್ಟೊಂದು ಬಾರಿ ಮಹಡಿ ಹತ್ತುವುದು ಇಳಿಯುವುದು! ಕೆಳಗಡೆಯೇ ಇದ್ದು ದೋಸೆ ತಿಂದಿದ್ದರೆ ಆಗುತ್ತಿರಲಿಲ್ಲವೇ!' ಎಂದು ಕೂಗಾಡಿದಳು. ಮಹಡಿಯಮೇಲೆ ಏನೋ ಮಾತಿಗಾರಂಭವಾಯಿತು. ಸರೋಜ,

'ನೀವು ನನ್ನ ತಾಯಿ ಆಡುವ ಯಾವ ಮಾತನ್ನೂ ಕಿವಿಗೆ ಹಾಕಿಕೊಳ್ಳ ಬೇಡಿ. ನಾಗರಾಜ ಆಡುವ ಯಾವ ಮಾತನ್ನೂ ಕಿವಿಗೆ ಹಾಕಿಕೊಳ್ಳ ಬೇಡಿ. ನನ್ನ ಬಾಯಿಂದ ಮಾತು ಹೊರಟರೆ, ನಿಮ್ಮ ಮಾವನವರ ಬಾಯಿಂದ ಮಾತು ಹೊರಟರೆ ನಿಮ್ಮಿಷ್ಟ ಬಂದಂತೆ ಮಾಡಬಹುದು. ಬೇಕಾದರೆ ಹೊಡೆಯಿರಿ, ಹೊಡಿಸಿಕೊಳ್ಳುತ್ತೇನೆ' ಎಂದು ಹೇಳಿದಳು.

'ನಿನ್ನ ಮನೆಯಲ್ಲಿ ನಿನ್ನನ್ನು ಹೊಡೆದರೆ ನನ್ನನ್ನು ಜೀವದಿಂದ ಬಿಟ್ಟಾರೆಯೆ?'

'ನೀವು ಹೊಡೆಯುತ್ತೀರಿ ಎಂದಲ್ಲ. ಸುಮ್ಮನೆ ಮಾತಿಗೋಸ್ಕರ ಹೇಳಿದೆ, ಅಷ್ಟೇ!'

ಮುಖ್ಯವಾದ ಮಾತುಗಳು ಅವು. ಅಷ್ಟುಹೊತ್ತಿಗೆ ಸೀತಾರಾಮ ರಾಯನನ್ನು ಹುಡುಕಿಕೊಂಡು ಯಾರೋ ಬಂದಿದ್ದಾರೆಂದು ಕೆಳಗಿನಿಂದ ನಾಗರಾಜ ಹೇಳಿದನು. ಬಂದಿದ್ದವನು ಸೀತಾರಾಮರಾಯನ ಕಾಲೇಜ್ ಸಹಪಾಠಿ ಮತ್ತು ಸ್ನೇಹಿತ; ಶಿವಮೊಗ್ಗದ ಸರ್ಕಾರಿ ಹೈಸ್ಕೂಲಿನಲ್ಲಿ ಒಬ್ಬ ಉಪಾಧ್ಯಾಯ. ಆ ಸ್ನೇಹಿತನೊಡನೆ ಕುಶಲ ಪ್ರಶ್ನೆಗಳಾದ ತರುವಾಯ ಅವನ ಮನೆಗೆ ಹೋಗಬೇಕೆಂದು ನಿಷ್ಕರ್ಷೆಯಾಯಿತು. ಆ ಬೆಳಗಿನ ಊಟಕ್ಕೆ ಸೀತಾರಾಮರಾಯನಿಗೆ ಸ್ನೇಹಿತನಿಂದ ಆಹ್ವಾನವೂ ಬಂತು. ಅತ್ತೆಯ ಮನೆಯ ವಾತಾವರಣದಿಂದ ಮನಸ್ಸಿಗೆ ಕಿರಿಕಿರಿಯಾಗಿದ್ದುದರಿಂದ ಸ್ಥಳ ಬದಲಾವಣೆ ಮಾಡುವುದು ಒಳ್ಳೆಯದೆಂದೂ ಅವನಿಗೆ ಅನ್ನಿಸಿತು. ಒಳಕ್ಕೆ ಹೋಗಿ ಸರೋಜಳೊಡನೆ, 'ನನಗಾಗಿ ಊಟಕ್ಕೆ ಕಾಯಬೇಡ. ನಾನು ಹಿಂದಿರುಗಿ ಬಂದಾಗ ಊಟಮಾಡುತ್ತೇನೆ. ಒಂದುವೇಳೆ ಸ್ನೇಹಿತನ ಮನೆಯಲ್ಲಿಯೇ ಊಟವಾದರೂ ಆಗಬಹುದು'—ಎಂದು ಹೇಳಿ ಕೋಟು ರುಮಾಲುಗಳನ್ನು ಧರಿಸಿಕೊಂಡು ಹೊರಟುಬಂದನು. ಅವನು ಊಟಕ್ಕೆ ಅತ್ತೆಯ ಮನೆಗೆ ಬರಲಿಲ್ಲ. ಕೃಷ್ಣರಾಯರು ಊಟದ ಹೊತ್ತಿನಲ್ಲಿ, 'ಅಳಿಯನೆಲ್ಲಿ?' ಎಂದು ವಿಚಾರಿಸಿದರು. ಸ್ನೇಹಿತನ ಮನೆಗೆ ಹೋಗಿರುವುದಾಗಿ ಸರೋಜ ಉತ್ತರಕೊಟ್ಟಳು. 'ನೀನು ಅವನನು ಇಲ್ಲಿಯೇ ಊಟಕ್ಕೆ ನಿಲ್ಲಿಸಿಕೊಳ್ಳಬೇಕಾಗಿತ್ತೋ ಇಲ್ಲವೋ ಹೇಳಮ್ಮ.

ನಿನ್ನೆ ರಾತ್ರಿಯೂ ಅವನು ಸರಿಯಾಗಿ ಊಟಮಾಡಲಿಲ್ಲ. ಅವನ ಮನಸ್ಸಿಗೆ ಅಸಮಾಧಾನವುಂಟುಮಾಡಬೇಡ. ನೀನು ಜಾಣೆ ನೋಡು!' ಎಂದು ಕೃಷ್ಣರಾಯರು ಹೇಳಿದರು. ತಾವು ಪುನಃ ನಾಲ್ಕು ಗಂಟೆಗೆ ಹಿಂದಿರುಗುವುದಾಗಿಯೂ ನಾಗರಾಜನಿಗೆ ಹೆಣ್ಣು ಕೊಡಬೇಕೆಂದು ಬರುವವರು ಹೆಣ್ಣನ್ನು ಕರೆದುಕೊಂಡು ಮಾತುಕಥೆಗಳಿಗೆ ನಾಲ್ಕು ಗಂಟೆಗೆ ಬರಬಹುದೆಂದೂ ಹೇಳಿ ಕೃಷ್ಣರಾಯರು ಕಚೇರಿಗೆ ಹೊರಟು ಹೋದರು.

ನಾಗರಾಜ ಕೃಷ್ಣರಾಯರ ಹಿರಿಯ ಮಗ. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಅರ್ಥಶಾಸ್ತ್ರವನ್ನು ಓದಿ ಬಿ.ಎ. (ಆನರ್ಸ್) ಮೊದಲನೆಯ ತರಗತಿಯಲ್ಲಿ ಮೊದಲನೆಯವನಾಗಿ ತೇರ್ಗಡೆಯಾಗಿದ್ದ ಬುದ್ಧಿಶಾಲಿಯಾದ ಯುವಕ. ವಯಸ್ಸು ಸುಮಾರು ಇಪ್ಪತ್ತೆರಡು. ಸರೋಜಳ ಅಣ್ಣ ಎಂದು ಹೇಳಿದಮೇಲೆ ಸ್ಫುರದ್ರೂಪಿ ಎಂದು ವರ್ಣಿಸಬೇಕಾಗಿಲ್ಲ. ಅವನ ಕ್ರಾಪು, ಕೇಶಪ್ರಸಾಧನ, ಮುಖಪ್ರಸಾಧನಗಳು, ಉಡುಪಿನ ರೀತಿ ಎಲ್ಲವೂ ಆಕರ್ಷಣೀಯವಾಗಿದ್ದುವು. ಪಾಶ್ಚಾತ್ಯ ಸಮಾಜ ರೀತಿ ನೀತಿಗಳ ಅನುಕರಣೆ, ಅವುಗಳಂತೆ ನಮ್ಮ ಸಮಾಜವೂ ಆಗಬೇಕೆಂಬ ಭಾವನೆ ಅವನಲ್ಲಿ ತುಂಬಿದ್ದುವು. ತಾನು ಬಹಳ ಬುದ್ಧಿಶಾಲಿಯೆಂದು ಹೆಮ್ಮೆ, ಟೆನ್ನಿಸ್ ಮತ್ತು ಕ್ರಿಕೆಟ್ ಆಟಗಳಲ್ಲಿ ಒಳ್ಳೆಯ ಹುಲಿ ಎಂಬ ಜಂಬ ಮಾತಿನಲ್ಲಿ ಕಾಣಿಸಿಕೊಳ್ಳುತ್ತಿದ್ದುವು. ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಗೆ ಕಟ್ಟಿ ವ್ಯಾಸಂಗ ಮಾಡುತ್ತಿದ್ದುದಲ್ಲದೆ ತನಗೆ ಮೊದಲನೆಯ ಸ್ಥಾನ ಮೀಸಲೆಂದೂ, ತನ್ನ ತಂದೆಯ ಜತೆಗೆ ತಾನೂ ಅಸಿಸ್ಟೆಂಟ್ ಕಮೀಷನರಾಗಿ ಬರುವೆನೆಂದೂ ಬಹಿರಂಗವಾಗಿಯೇ ಹೇಳುತ್ತಿದ್ದನು. ಅಭಿವೃದ್ಧಿಗೆ ಬರುವ ಇಂತಹ ಸುಂದರ ಮೇಧಾವಿ ಯುವಕನಿಗೆ ಹೆಣ್ಣು ಕೊಡಬೇಕೆಂದು ಹೆಣ್ಣು ಹೆತ್ತವರು ನಾನು, ತಾನು ಎಂದು ಮೇಲೆ ಬಿದ್ದು ಬರುತ್ತಿದ್ದರು. ಯಾವ ಹೆಣ್ಣಿಗೆ ಆ ಸೌಭಾಗ್ಯವನ್ನು ಬ್ರಹ್ಮದೇವನು ಸಂಕಲ್ಪಿಸಿದ್ದನೋ!

ಸಾಯಂಕಾಲ ನಾಲ್ಕು ಗಂಟೆಗೆ ಮೋಟಾರಿನಲ್ಲಿ ಕೃಷ್ಣರಾಯರು ಬಂದರು. ಹೆಣ್ಣಿನ ಕಡೆಯವರು ಯಾರೂ ಬಂದಿರಲಿಲ್ಲ. 'ನಾನು

ಐದು ಗಂಟೆಗೆಲ್ಲ ಡೆಪ್ಯುಟಿ ಕಮಿಷನರ್ ಜತೆಯಲ್ಲಿ ತುರ್ತಾಗಿ ಸರ್ಕೀಟು ಹೋಗಬೇಕಲ್ಲ. ಇವರು ಬೇಗ ಬಂದಿದ್ದರೆ ಆಗಿತ್ತು. ನಾಗರಾಜ ಮನೆಯಲ್ಲಿದ್ದಾನೋ ಕ್ಲಬ್ಬಿಗೆ ಹೊರಟುಬಿಟ್ಟನೋ' ಎಂದು ಮುಂತಾಗಿ ತಮ್ಮ ಹೆಂಡತಿ ತುಳಸಾಬಾಯಿಯೊಡನೆ ಆಡತೊಡಗಿದರು. ನಾಗರಾಜ ಮನೆಯಲ್ಲಿಯೇ ಇದ್ದ. ಉಡುಪುಗಳನ್ನು ಧರಿಸಿಕೊಂಡು ಮೇಜಿನ ಮೇಲೆ ಟೆನ್ನಿಸ್ ಬ್ಯಾಟನ್ನು ಇಟ್ಟು ಕೈಗಡಿಯಾರವನ್ನು ನೋಡಿಕೊಳ್ಳುತ್ತಿದ್ದನು. ನಾಲ್ಕೂಕಾಲು ಗಂಟೆಗೆ ಒಂದು ಮೋಟಾರು ಗೇಟಿನೊಳಕ್ಕೆ ಬಂದು ಮನೆಯ ಮುಂದೆ ನಿಂತಿತು. ಸರಿಗೆ ರುಮಾಲಿನ ಇಬ್ಬರು ದೊಡ್ಡ ಮನುಷ್ಯರು, ಅರಳೇಪೇಟೆ ಸೀರೆಯ ಒಬ್ಬಳು ಮಧ್ಯ ವಯಸ್ಸಿನ ಹೆಂಗಸು, ಸುಮಾರು ಹದಿನೆಂಟು ವರ್ಷದ ಸೊಟ್ಟ ಬೈತಲೆಯ ಲೋಲಕ್ ಥಳುಕಿನ ಬಳುಕು ನಡುವಿನ ಜಾರ್ಜೆಟ್ ಸೀರೆಯ ಬೆಡಗಿನ ಚೆಲುವೆ, ಮತ್ತು ಇಬ್ಬರು ಹುಡುಗರು ಮೋಟಾರಿನಿಂದ ಇಳಿದರು. ಸ್ವಾಗತ ಸಂಭ್ರಮಗಳು ನಡೆದುವು. ಹಾಗೆಯೆ ಕೊಳ್ಳುಡೆಯ ಪ್ರಸ್ತಾಪಗಳಾದುವು. ಹೆಣ್ಣಿನವರ ದೈನ್ಯದ ಮನವಿಗಳು, ಗಂಡಿನವರ ಜಂಬದ ಪ್ರದರ್ಶನಗಳು ನಡೆದುವು. ಕೃಷ್ಣರಾಯರು ದೊಡ್ಡಮನುಷ್ಯರಾಗಿದ್ದುದರಿಂದ ಹೆಚ್ಚು ಮಾತು ಬೆಳಸದೆ,'ಋಣಾನುಬಂಧವಿದ್ದರೆ ಮದುವೆ ಆಗಲಿ. ನಮ್ಮ ನಾಗರಾಜ ಮೆಚ್ಚಿದರೆ ನಮ್ಮ ಆಕ್ಷೇಪಣೆಯಿಲ್ಲ. ನಾವು ಸಹ ಹೆಣ್ಣು ಹೆತ್ತವರು. ಅವನು ನೋಡಿ ಒಪ್ಪಿದ ಮೇಲೆ ಜಾತಕಗಳನ್ನು ತೋರಿಸೋಣ. ದೈವ ಸಂಕಲ್ಪ ಹೇಗಿದೆಯೋ ಹಾಗೆ ನಡೆಯಲಿ' ಎಂದು ಹೇಳಿದರು. ನಾಗರಾಜ ಕೈಯಲ್ಲಿ ಟೆನ್ನಿಸ್ ಬ್ಯಾಟ್ ಹಿಡಿದುಕೊಂಡು ಹಾಲಿಗೆ ಬಂದವನು ಸ್ವಲ್ಪ ಹೊತ್ತು ಕುರ್ಚಿಯ ಮೇಲೆ ಕುಳಿತಿದ್ದು ಆ ಮೇಲೆ ಕ್ಲಬ್ಬಿಗೆ ಹೊರಟುಹೋದನು. ಹುಡುಗಿ ಓರೆನೋಟದಿಂದ ಕದ್ದು ನೋಡದೆ ಸಂಪೂರ್ಣ ದೃಷ್ಟಿಯಿಂದಲೇ ನಖಶಿಖಾಂತವಾಗಿ ನಾಗರಾಜನನ್ನು ನೋಡಿ ಮೇಜಿನ ಮೇಲಿದ್ದ 'ಹಿಂದೂ' ಪತ್ರಿಕೆಯನ್ನು ಕೈಯಲ್ಲಿ ಹಿಡಿದು ಮನಸ್ಸಿನಲ್ಲಿ ಓದಿಕೊಳ್ಳುತ್ತಿದ್ದಳು. ಆಕೆಯ ಮುಖಭಾವದಲ್ಲಿ ತಾನು ಜಯಲಾಭವನ್ನು ಪಡೆದ ಭರವಸೆ ಕಾಣುತ್ತಿತ್ತು.

ಕೃಷ್ಣರಾಯರು, ‘ನಮ್ಮ ನಾಗರಾಜನ ಅಭಿಪ್ರಾಯವನ್ನು ಅವನನ್ನು ಕೇಳಿ ತಿಳಿಸುತ್ತೇನೆ. ಎರಡು ದಿನ ವಿರಾಮ ಕೊಡಿ. ಕಾಗದ ಬರೆಯುತ್ತೇನೆ’ ಎಂದು ಹೇಳಿದರು. ಸರಿಗೆ ರುಮಾಲಿನವರೊಬ್ಬರು, ‘ನಮ್ಮನ್ನು ಅನಿಶ್ಚಯದಲ್ಲಿ ಬಹಳ ಕಾಲ ಇಡಬೇಡಿ. ವಧೂವರರ ಸಾಮ್ಯ ಎಲ್ಲ ವಿಚಾರಗಳಲ್ಲೂ ಚೆನ್ನಾಗಿದೆ. ನಾವು ನೋಡಿದ್ದರಲ್ಲಿ ಜಾತಕಗಳು ಕೂಡಿಬರುತ್ತವೆ. ತಾವೂ ಸಹ ತೋರಿಸಬಹುದು’ ಎಂದು ಹೇಳಿದರು. ಎಲ್ಲರೂ ಹೊರಡಲು ಸಿದ್ಧವಾದರು. ಹುಡುಗಿ ಕೃಷ್ಣರಾಯರಿಗೂ ತುಳಸಾಬಾಯಿಗೂ ನಮಸ್ಕಾರ ಮಾಡಿದಳು.

ಸೀತಾರಾಮರಾಯನು ಮನೆಗೆ ಹಿಂದಿರುಗಿದಾಗ ರಾತ್ರಿ ಏಳೂವರೆ ಗಂಟೆ. ಸ್ನೇಹಿತನ ಮನೆಯ ಔತಣದಿಂದಲೂ ಅಲ್ಲಿ ಹೊಡೆದ ಹರಟೆಯಿಂದಲೂ ಸ್ವಲ್ಪ ಗೆಲುವಾಗಿ ಅವನು ಬಂದಿದ್ದನು. ನಾಗರಾಜ ಕ್ಲಬ್ಬಿನಿಂದ ಹಿಂದಿರುಗಿದಾಗ ಎಂಟು ಗಂಟೆಯಾಗಿತ್ತು. ಊಟದ ಪ್ರಕರಣಗಳು ಮುಗಿದಾಗ ಎಂಟೂವರೆ ಗಂಟೆಯಾಗಿತ್ತು. ಹಿಂದಿನ ರಾತ್ರಿಯ ಸಿಹಿ ನೆನಪುಗಳ ಬಿಸೆಯಿಂದ ಇಂದಿನ ರಾತ್ರಿ ಸರೋಜ ಬೇಗ ಕೊಟಡಿಗೆ ಬರುವಳೆಂದು ಸೀತಾರಾಮರಾಯನು ನಿರೀಕ್ಷಿಸುತ್ತ ಹೋಗಿ ಮಲಗಿದನು. ಆದರೆ ಊಟವಾದಮೇಲೆ ನಾಗರಾಜನ ಕೊಟಡಿಯಲ್ಲಿ ಸಭೆ ಸೇರಿತ್ತು. ಮನೆಯ ಯಜಮಾನಿ, ನಾಗರಾಜ, ಸರೋಜ, ಸುಕನ್ಯೆ ಮತ್ತು ಇತರ ಹುಡುಗರು—ಎಲ್ಲರೂ ಅಲ್ಲಿ ಸೇರಿ ಸಾಯಂಕಾಲ ಬಂದಿದ್ದ ಹೆಣ್ಣಿನ ಮತ್ತು ಹೆಣ್ಣಿನವರ ವಿಚಾರದಲ್ಲಿ ವಿಮರ್ಶೆಗಳನ್ನೂ ಟೀಕೆಗಳನ್ನೂ ಮಾಡುತ್ತಿದ್ದರು. ಯಜಮಾನಿ, ‘ಮೊದಲು ನಿನ್ನ ಅಭಿಪ್ರಾಯ ಹೇಳು ನಾಗರಾಜ! ನಾಳೆ ನೀನು ಅಸಿಸ್ಟೆಂಟ್ ಕಮಿಷನರ್ ಆಗುವವನು. ಮುಂದೆ ಅದೃಷ್ಟವಿದ್ದರೆ ಕೌನ್ಸಿಲರ್ ಕೂಡ ಆಗಬಹುದು. ನಿನ್ನ ಮನಸ್ಸಿಗೆ ಒಪ್ಪಿತೇ’ ಎಂದು ಕೇಳಿದಳು. ನಾಗರಾಜ, ‘ನನ್ನ ಅಭಿಪ್ರಾಯ ಇರಲಿ. ನಿಮ್ಮ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿ. ನನ್ನದೇನು? ಮದುವೆ ಆದರೆ ಆಸೆ. ಇಲ್ಲದಿದ್ದರೆ ಇಲ್ಲ’ ಎಂದನು. ಸುಕನ್ಯೆ, ‘ಆ ಹುಡುಗಿ **ಅಪ್ ಟು ಡೇಟ್ ಅಮ್ಮಯ್ಯ** ಇದ್ದ ಹಾಗೆ ಕಂಡಳು. ಅವಳಿಗೆ ನಿನಗಿಂತ ಜಂಬ ಅಂತ ಕಾಣಿಸಿತಣ್ಣ! ನೀನು ಕೈಯಲ್ಲಿ ಟೆನ್ನಿಸ್ ಬ್ಯಾಟ್

ಇಟ್ಟುಕೊಂಡು ಕುಳಿತೆ! ಅವಳು **ಹಿಂದೂ** ಪೇಪರ್ ಓದುತ್ತ ಕುಳಿತಳು!' ಎಂದಳು.

'ಆ ಅತ್ತಿಗೇನೂ ಟೆನ್ನಿಸ್ ಬ್ಯಾಟ್ ಇಟ್ಟುಕೊಂಡು ಕುಳಿತಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಒಡನೆಯೇ ಮಂತ್ರ ಹೇಳಿ ಮದುವೆ ಮಾಡಿಬಿಡಬಹುದಾಗಿತ್ತು' ಎಂದು ರಘು ನಗುತ್ತ ಹೇಳಿದನು.

'ನಿನಗೆ ಕೈಯಲ್ಲಿ ಫುಟ್‌ಬಾಲ್ ಇಟ್ಟುಕೊಂಡು ಒಬ್ಬಳು ಬರುತ್ತಾಳೆ! ಮದುವೆ ಮಾಡಿಸುತ್ತೇನೆ!' ಎಂದು ಸರೋಜ ರಘುವಿಗೆ ನಗುತ್ತ ಹೇಳಿದಳು. ಈ ಮಾತುಗಳಿಂದ ನಗುವಿನ ಕೋಲಾಹಲ ಕೊಟಡಿಯಿಂದ ಹೊರಟು ಮಹಡಿಯ ಮೇಲೆಲ್ಲ ವ್ಯಾಪಿಸಿ ಸೀತಾರಾಮುವಿನ ಕಿವಿಗೆ ಅಲಗಿನಂತೆ ಇರಿಯುತ್ತಿತ್ತು. ರಾತ್ರಿ ಒಂಬತ್ತು ಗಂಟೆಯಾಯಿತು. ಕೆಳಗೆ ಸಭೆ ಸೇರಿದ್ದವರ ಮಾತುಗಳೂ ನಗುಗಳೂ ಮುಗಿಯಲಿಲ್ಲ. ಕಾಮದಿಂದ ಕ್ರೋಧ, ಕ್ರೋಧದಿಂದ ಸಮ್ಮೋಹ, ಸಮ್ಮೋಹದಿಂದ ವಿಸ್ಮೃತಿ, ವಿಸ್ಮೃತಿಯಿಂದ ಬುದ್ಧಿನಾಶ ಎಂಬುವ ಮೆಟ್ಟಲುಗಳನ್ನು ಸೀತಾರಾಮು ಹತ್ತುತ್ತಿದ್ದನು. ಕೆಳಗಿನ ಒಂದೊಂದು ನಗುವಿನ ಲಹರಿಗೂ ಮಹಡಿಯ ಮೇಲೆ ಅವನು ಉರಿದುರಿದು ಬೀಳುತ್ತಿದ್ದನು. ತಾನೂ ಸರಸಿಯಾಗಿ ಆ ಸಭೆಯಲ್ಲಿ ಕಲೆತು ಮಾತುಗಳಲ್ಲಿ ಬೆರತು ನಗುತ್ತ ಇರಬೇಡ! ಆ ಸುಖಪ್ರಾಪ್ತಿ ಅವನ ಹಣೆಯಲ್ಲಿ ಬರೆದಿರಲಿಲ್ಲ. ಅವನಿಗೆ ನಾಗರಾಜನ ಜಂಬವನ್ನು ಕಂಡರೆ ಆಗದು. ಅತ್ತೆಯ ಬಿಂಕವನ್ನು ಕಂಡರೆ ಸಹಿಸದು. ತಾನು ಅಲ್ಲಿಗೆ ಹೋದರೆ ತನ್ನ ವಿಚಾರ ಏನು ಮಾತು ಹೊರಡಬಹುದೋ ಎಂಬ ಶಂಕೆ ಬೇರೆ. ಒಟ್ಟಿನಲ್ಲಿ ಸೀತಾರಾಮು ಮನಸಿನಲ್ಲೇ ಕುದಿಯುತ್ತ ಬಿದ್ದುಕೊಂಡಿದ್ದನು.

ರಾತ್ರಿ ಒಂಬತ್ತೂವರೆ ಗಂಟೆಗೆ ಸಭೆ ಚೆದರಿತು. ಆಗ ಸರೋಜಳಿಗೆ ತನ್ನ ಗಂಡನ ಜ್ಞಾಪಕ ಬಂತು. ತಾನು ಅಷ್ಟು ಹೊತ್ತು ಕುಳಿತುಬಿಟ್ಟೆನಲ್ಲಾ ಎಂದು ಸ್ವಲ್ಪ ಭಯವೂ ಆಯಿತು. ಎಲೆಯಡಿಕೆ ತಟ್ಟೆಯನ್ನು ಸಂವರಿಸಿಕೊಂಡು ಮೆಟ್ಟಲುಗಳನ್ನು ಹತ್ತಿಹೋದಳು. ಕೊಟಡಿಯ ಬಾಗಿಲು ತೆರೆದಿತ್ತು, ದೀಪ ಉರಿಯುತ್ತಿತ್ತು. ಮಂಚದ ಮೇಲೆ ಗಂಡ ಮಗ್ಗುಲಾಗಿ ಗೋಡೆಗೆ ಮುಖ ಮಾಡಿಕೊಂಡು ಮೇಲುಹೊದಿಕೆ

ಯಿಲ್ಲದೆ ಮಲಗಿದ್ದನು. ಸರೋಜ ಒಳಕ್ಕೆ ಹೋಗಿ ಬಾಗಿಲು ಹಾಕಿದಳು. ಮೇಜಿನ ಮೇಲೆ ತಟ್ಟೆಯನ್ನಿಟ್ಟು ಕೈಯಲ್ಲಿ ಅಡಿಕೆಪುಡಿಯನ್ನು ಹಿಡಿದು ಮಂಚದ ಪಕ್ಕಕ್ಕೆ ಹೋಗಿ, 'ನಿದ್ರೆ ಬಂದುಬಿಟ್ಟಿತೇ? ಇಷ್ಟು ಬೇಗನೆ ಅದೆಂತಹ ನಿದ್ರೆ! ಅಡಿಕೆಪುಡಿ ಹಿಡಿಯಿರಿ' ಎಂದು ಹೇಳುತ್ತ ಗಂಡನ ಮುಖವನ್ನು ತನ್ನ ಕಡೆಗೆ ತಿರುಗಿಸಲು ಪ್ರಯತ್ನಪಟ್ಟಳು. ಸೀತಾರಾಮು ಅವಳ ಕೈಯನ್ನು ಬಲವಾಗಿ ನೂಕಿಬಿಟ್ಟು, ಸರ್‍ರನೆ ಎದ್ದು, ಅವಳ ಬೆನ್ನಿನ ಮೇಲೆ ಪಟೀರನೆ ಎರಡು ಏಟು ಬಿಗಿದುಬಿಟ್ಟನು! ಸರೋಜ, 'ಅಯ್ಯೋ! ಅಮ್ಮ!' ಎಂದು ಮುಲುಗಿ ಹಿಂದಕ್ಕೆ ಸರಿದುಬಿಟ್ಟಳು. ಅವಳ ಕಣ್ಣುಗಳಿಂದ ಪಳಪಳನೆ ನೀರು ಹರಿಯುತ್ತಿತ್ತು.

'ತವರು ಮನೆಗೆ ಬಂದರೆ ಗಂಡನ ಯೋಚನೆ ಏನಾದರೂ ಬರುತ್ತದೆಯೆ? ಊಟ ಮುಗಿದು ಎರಡು ಗಂಟೆಯಾಯಿತು. ನಿನ್ನೆ ಸಿನೀಮಾ ನೋಟ! ಇವತ್ತು ಮದುವೆಯ ಹರಟೆ!' ಎಂದು ಸಿಡುಕಿನಿಂದ ಸೀತಾರಾಮು ನುಡಿದನು.

ಸರೋಜ ಅಲ್ಲಿದ್ದ ಕುರ್ಚಿಯಲ್ಲಿ ಕುಳಿತು ಮೇಜಿನ ಮೇಲೆ ಮುಖವಿಟ್ಟುಕೊಂಡು ಕಣ್ಣೀರ ಕಾಲುವೆಯನ್ನು ಹರಿಸಿದಳು. ಸರಸವಾಗಿರಬೇಕಾದ್ದು ವಿರಸವಾಗಿ ಹೋಯಿತು. ಸೀತಾರಾಮು ಕುರ್ಚಿಯ ಹತ್ತಿರಕ್ಕೆ ಹೋಗಲಿಲ್ಲ. ಮಂಚದ ಮೇಲೆ ಐದು ನಿಮಿಷ ಕುಳಿತಿದ್ದು ಮಲಗಿಬಿಟ್ಟನು. ಸರೋಜ ಒಳ್ಳೆಯ ಹುಡುಗಿ; ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡಳು. ಪುನಃ ಮಂಚದ ಬಳಿಗೆ ಹೋಗಿ ಗಂಡನಿಗೆ ಮೇಲುಹೊದಿಕೆಯನ್ನು ಹೊದಿಸಿದಳು. ಗಂಡನ ಕೋಪ ಇಳಿದಿದ್ದರೆ ತನ್ನ ಕೈಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಳ್ಳುತ್ತಾನೆ ಎಂಬುದು ಆಕೆಯ ಎಣಿಕೆಯಾಗಿತ್ತು. ಸೀತಾರಾಮು ಅವಳನ್ನು ಕೈಹಿಡಿದು ಕುಳ್ಳಿರಿಸಿಕೊಳ್ಳಲಿಲ್ಲ; ಅವಳೊಡನೆ ಮಾತು ಸಹ ಆಡಲಿಲ್ಲ.

'ಸರಿ. ಹೊಡೆದದ್ದು ಆಗಿಹೋಯಿತು. ಏಟೇನೂ ವಾಪಸು ಬರುವುದಿಲ್ಲ. ಇನ್ನೂ ಹೊಡೆಯಬೇಕೆಂದಿದ್ದರೆ ಹೊಡೆಯಿರಿ. ಏನೋ ಮದುವೆಯ ಮಾತಿನಲ್ಲಿ ತಡಮಾಡಿದೆ. ನನ್ನದು ತಪ್ಪಾಗಿ ಹೋಯಿತು. ಈ ಬಾರಿಗೆ ಕ್ಷಮಿಸಿಬಿಡಿ' ಎಂದು ಸರೋಜ ಕೇಳಿಕೊಂಡಳು. ಸೀತಾ

ರಾಮು ಮಾತನಾಡಲಿಲ್ಲ. ಆ ಹೊತ್ತಿಗಾಗಲೇ ತಾನು ಸರೋಜಳನ್ನು ಹೊಡೆದದ್ದು ತಪ್ಪಾಯಿತು; ಕೈದುಡುಕಿಬಿಟ್ಟೆತಃ–ಎಂಬುವ ಪರಿಜ್ಞಾನ ಅವನಲ್ಲಿ ಹುಟ್ಟಿತ್ತು. ಒಲವಿನ ಮಾತಿಗೆ, ನಲಿವಿನ ನಗುವಿಗೆ, ಉಕ್ಕುವ ಪ್ರಣಯಕ್ಕೆ ವಾತಾವರಣ ಕೆಟ್ಟುಹೋಯಿತಲ್ಲ ಎಂದು ಅವನು ಪೇಚಾಡುತ್ತಿದ್ದನು. ಆದರೂ ಗಂಡನ ಬಿಂಕ ಹೆಂಡತಿಯ ದೈನ್ಯವನ್ನೇ ಬಯಸುತ್ತದೆ. ತಾನು ಆಗಲಾದರೂ, 'ಹೋಗಲಿ ಬಿಡು. ಕೈದುಡುಕಿ ಹೊಡೆದುಬಿಟ್ಟೆ. ನನಗೆ ತಾಳ್ಮೆ ಇರಬೇಕಾಗಿತ್ತು. ಹತ್ತಿರ ಬಾ' ಎಂದು ಬಾಯಲ್ಲಿ ಆಡಬಹುದಾಗಿತ್ತು. ಇಲ್ಲವೇ ಅವಳನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಕುರುಳನ್ನು ನೇವರಿಸಿ ಕಣ್ಣೀರು ಒರಸಿ ಬೆನ್ನು ನೋವನ್ನು ಇಳಿಸಿ ಒಲಿಸಿಕೊಳ್ಳಬಹುದಾಗಿತ್ತು. ಅವನು ಯಾವುದನ್ನೂ ಮಾಡಲಿಲ್ಲ. ಸರೋಜ ದೀಪವನ್ನು ಆರಿಸಿ ಮಂಚದಮೇಲೆ ಒಂದು ಕಡೆ ಮಲಗಿಬಿಟ್ಟಳು.

ಸೀತಾರಾಮು ಬೆಳಗ್ಗೆ ಮುಖ ತೊಳೆದುಕೊಂಡು ಕಾಫಿಯನ್ನು ಕುಡಿದು, ಮನೆಯಿಂದ ಹೊರಬಿದ್ದನು. ಟೌನ್‌ಹಾಲ್ ಸುತ್ತ ಓಡಾಡಿ ಕೋರ್ಟಿನಲ್ಲಿ ಸತ್ರದವರೆಗೂ ಹೋಗಿ ತನ್ನ ನಡತೆಯನ್ನೆಲ್ಲ ತಾನೇ ವಿಮರ್ಶಿಸಿಕೊಳ್ಳುತ್ತ, 'ಇನ್ನುಮೇಲೆ ಸರೋಜ ಎಂಥ ತಪ್ಪನ್ನೇ ಮಾಡಲಿ, ಅವಳ ಮೇಲೆ ಕೈ ಎತ್ತುವುದಿಲ್ಲ' ಎಂದು ಶಪಥ ಮಾಡಿಕೊಳ್ಳುತ್ತ ಮನೆಗೆ ಹಿಂದಿರುಗುತ್ತಿದ್ದನು.

ಈ ಕಡೆ ಮನೆಯಲ್ಲಿ ಏನಾಗಿತ್ತು? ಸರೋಜ ಎಂದಿನಂತೆ ಸಹಜವಾಗಿ ಓಡಾಡಿಕೊಂಡಿದ್ದಳು. 'ಆ ದಿನ ಅಡಿಗೆ ಏನು? ಅಳಿಯ ಬಂದಿರುವಾಗ ಏನಾದರೂ ಹೆಚ್ಚುಕಟ್ಟಳೆ ಮಾಡಿಸುವುದಿಲ್ಲವೇ?' ಎಂದು ಮುಂತಾಗಿ ತಾಯಿಯೊಡನೆ ಮಾತನಾಡುತ್ತಿದ್ದಳು. 'ಆಗಲಮ್ಮ! ಏನಾದರೂ ಮಾಡಿಸುತ್ತೇನೆ. ಅವನಿಗೆ ಸಿಹಿ ಬೇಕೋ? ಖಾರ ಬೇಕೋ?' ಎಂದು ಆಕೆ ಕೇಳುತ್ತ, 'ಈ ದಿನ ಮಂಗಳವಾರ, ನಿನಗೆ ಎರೆದು ನಾಲ್ಕು ದಿನ ಆಗಿಹೋಯಿತು; ಹಿಂದಿನ ಶುಕ್ರವಾರ ಎರೆದದ್ದು-ಈ ದಿನ ಎರೆಯುತ್ತೇನೆ, ಬಾರಮ್ಮ!' ಎಂದು ನೀರುಮನೆಗೆ ಮಗಳನ್ನು ಕರೆದುಕೊಂಡು ಹೋದಳು. ಎಣ್ಣೆಯನ್ನು ಕಾಯಿಸಿ ಮಣೆಯನ್ನು ಹಾಕಿ

ಬಾಗಿಲನ್ನು ಓರೆ ಮಾಡಿ ಮಗಳನ್ನು ಮಣೆಯ ಮೇಲೆ ಕೂಡಿಸಿದಳು. ಸರೋಜ ತನ್ನ ಜಡೆಯನ್ನು ಬಿಚ್ಚಿಕೊಂಡು ಕುಳಿತಳು. ತಲೆಗೆ ಎಣ್ಣೆಯನ್ನು ಒತ್ತುತ್ತಿದ್ದಾಗ ಮಗಳ ಸೆರಗು ಬೆನ್ನಿಂದ ಕೆಳಕ್ಕೆ ಇಳಿದುಬಿತ್ತು. ಬೆನ್ನಿನಮೇಲೆ ಇಳಿದು ಬಿದ್ದಿದ್ದ ಕೇಶರಾಶಿ ಸ್ವಲ್ಪ ಓರೆಯಾಯಿತು. 'ಇದೇನೇ ಸರೋಜ! ಬೆನ್ನಮೇಲೆ.....' ತಾಯಿಯ ಮಾತು ಅರ್ಧದಲ್ಲಿಯೇ ನಿಂತಿತು. ಸರೋಜ ಸೆರಗನ್ನು ತಟ್ಟನೆ ಮುಚ್ಚಿಕೊಂಡುಬಿಟ್ಟಳು. 'ಈ ದಿನ ಎರೆಯುವುದೇನೂ ಬೇಡಮ್ಮ—ನಾನೇ ಮೈಗೆ ಸ್ನಾನ ಮಾಡುತ್ತೇನೆ' ಎಂದು ಎದ್ದು ನಿಂತು ನೀರಮನೆ ಬಾಗಿಲನ್ನು ಹಾಕಿಬಿಟ್ಟಳು. ದೊಡ್ಡ ಪ್ರಮಾದವಾಗಿ ಹೋಯಿತೆಂದು ಆಗಲೇ ಸರೋಜಳಿಗೆ ತಿಳಿದದ್ದು. ಹಿಂದಿನ ರಾತ್ರಿ ತನ್ನ ಗಂಡ ಹೊಡೆದ ಏಟೇಟು ತನ್ನ ಬಿಳಿಯ ಬೆನ್ನಿನಮೇಲೆ ನಿಂತು ಚಾಡಿ ಹೇಳುತ್ತದೆ ಎಂಬುದನ್ನು ಅವಳು ತಿಳಿದಿರಲಿಲ್ಲ. ಸೀತಾರಾಮುವಿನ ಹಸ್ತ ಮತ್ತು ಬೆರಳುಗಳು ಎರಡುಕಡೆ ಕೆಂಪಗೆ ಅಚ್ಚೊತ್ತಿದ್ದುವು. ತುಳಸಾಬಾಯಿ ಕೂಡಲೇ ನೆಟಿಕೆಗಳನ್ನು ಮುರಿದು, 'ಅವನ ಕೈ ಮುರಿದುಹೋಗಲಿ! ತುಂಬಿದ ಬಸಿರಿ! ಹಸಿಯ ಮೈ! ದನವನ್ನು ಹೊಡೆದಂತೆ ಹೊಡೆದಿದ್ದಾನಲ್ಲ!' ಎಂದು ಅಳುವುದಕ್ಕೆ ತೊಡಗಿದಳು. 'ನನ್ನ ಹೊಟ್ಟೆ ಉರಿದಂತೆ ಅವಳ ಹೊಟ್ಟೆಯೂ ಉರಿಯಲಿ' ಎಂದು ಬೀಗತ್ತಿಗೆ ಶಾಪವೂ ಆಯಿತು. ಆವೇಶ ಸ್ವಲ್ಪ ಇಳಿದಮೇಲೆ, 'ಏನಾಯಿತೆ ಸರೋಜ? ಅವನೇಕೆ ನಿನ್ನನ್ನು ಹೊಡೆದನೆ? ಅವನ ಕೈ ಮುರಿದುಹೋಗ!' ಎಂದಳು.

'ಅಮ್ಮ! ಇದನ್ನು ದೊಡ್ಡದು ಮಾಡಬೇಡ. ಏನೋ ಕೈದುಡುಕು. ನಿನ್ನೆ ರಾತ್ರಿ ನಾನು ನಾಗರಾಜನ ಮದುವೆಯ ಮಾತಿನಲ್ಲಿ ಹೆಚ್ಚು ಹೊತ್ತು ಕುಳಿತುಬಿಟ್ಟೆ. ಹಾಗೆ ಕುಳಿತುಕೊಳ್ಳಬಾರದಾಗಿತ್ತು. ನನ್ನದೇ ತಪ್ಪು.'

'ನಿನ್ನದೇನು ತಪ್ಪು? ಅಣ್ಣತಮ್ಮಂದಿರ ಮದುವೆ ಮಾತು ಎಂದರೆ ಕುಳಿತು ಆಡುವುದಿಲ್ಲವೇ? ಎಲ್ಲಿ? ಬೆನ್ನು ತೋರಿಸು. ಏನಾಗಿದೆಯೋ ನೋಡುತ್ತೇನೆ, ಎಣ್ಣೆಯನ್ನಾದರೂ ಹಚ್ಚುತ್ತೇನೆ.'

'ನಾನು ಬೆನ್ನು ತೋರಿಸುವುದಿಲ್ಲ. ನನಗೇನೂ ಆಗಿಲ್ಲ. ಬಿಳಿಯ ಮೈ, ಸ್ವಲ್ಪ ಗಟ್ಟಿಯಾಗಿ ಒತ್ತಿದರೆ ಬಾಸುಂಡೆ ಬಿದ್ದಹಾಗೆ ಕಾಣುತ್ತದೆ. ನೀನು ಹೊರಕ್ಕೆ ಹೋಗು. ನಾನು ಸ್ನಾನ ಮಾಡಿಕೊಂಡು ಬರತ್ತೇನೆ.'

'ನಾನು ಹೋಗುವುದಿಲ್ಲ. ಬೆನ್ನು ತೋರಿಸು' ಎಂದು ತಾಯಿ ಹಿಂದೆ ನಿಂತು ಬಲವಂತವಾಗಿ ಸೆರಗನ್ನು ತೆಗೆದು ಕಣ್ಣೀರು ಹಾಕುತ್ತ, 'ಆ ಹಾಳು ಮನೆಗೆ ಕೊಡಬೇಡಿ, ಕೊಡಬೇಡಿ ಎಂದು ಅಷ್ಟೆಲ್ಲ ನಾನು ಹೇಳಿದೆ. ನನ್ನ ಮಾತನ್ನು ನಿನ್ನಪ್ಪ ನಡಸಿದರೇ? ಹೆಂಗಸಿನ ಮಾತು ಎಂದರೆ ಲಕ್ಷ್ಯವೇ ಇಲ್ಲ' ಎಂದು ಅಳುತ್ತ ಮಗಳನ್ನು ಪುನಃ ಮಣೆಯ ಮೇಲೆ ಕೂಡಿಸಿ ಎರೆದ ಶಾಸ್ತ್ರವನ್ನು ಮಾಡಿದಳು.

ಸರೋಜ ಮಹಡಿಯ ಮೇಲಕ್ಕೆ ಹೋಗಿ ಹಾಸಿಗೆಯಲ್ಲಿ ಮಲಗಿಬಿಟ್ಟಳು. ತುಳಸಾಬಾಯಿ ದುಃಖದಿಂದ ನಿಂತಲ್ಲಿ ನಿಲ್ಲಲಾಗದೆ, 'ಈ ಹಾಳು ಹೊಟ್ಟೆಯನ್ನು ಸುಡಬೇಕು' ಎಂದು ಗೋಳಾಡುತ್ತ ಮಹಡಿಯ ಮೇಲೆ ಬಂದು ಮತ್ತೊಮ್ಮೆ ಕಾಫಿ ಕೊಟ್ಟು ಮಗಳನ್ನು ಆದರಿಸಿ ಕೆಳಕ್ಕಿಳಿದು ಹೋದಳು. ರಘು ಎದುರುಬಿದ್ದವನು, 'ಏಕಮ್ಮ ಕಣ್ಣೀರು? ಏಕೆ ಅಳುತ್ತಿದ್ದೀಯೆ?' ಎಂದು ಕೇಳಿದನು.

'ಏನಮ್ಮನೋ! ಏನಪ್ಪನೋ! ಹೆತ್ತ ಹೊಟ್ಟೆಗೆ ಕಲ್ಲು ಮುಳ್ಳು ಗಿಡಿಯಬೇಕು.'

ಅವನಿಗೆ ಅರ್ಥವಾಗಲಿಲ್ಲ. ಅಮ್ಮ ಅಳುತ್ತಿದಾಳೆ ಎಂದು ಗುಸುಗುಸು ಮನೆಯಲ್ಲಿ ಹರಡಿತು. ತಾಯಿ ಅಳುತ್ತಿದ್ದರೆ ಕಾರಣ ತಿಳಿಯದಿದ್ದರೂ ಮಕ್ಕಳಿಗೂ ಅಳು ಬರುವುದು ಸಹಜ. ಅವರ ಕಣ್ಣುಗಳಲ್ಲೂ ನೀರು! 'ಏನಾಯಿತಮ್ಮ? ನೀನೇಕೆ ಅಳುತ್ತಿದ್ದೀಯೆ?' ಎಂದು ಸುಕನ್ಯೆ ಕೇಳಿದಳು.

'ನಿನಗಾದರೂ ವಯಿನವಾದ ಕಡೆ ನಿಮ್ಮಪ್ಪ ಗಂಡನ್ನ ತರಲಮ್ಮ!' ಎಂದು ಬಿಕ್ಕುತ್ತ ತಾಯಿ ಹೇಳಿದಳು. 'ನೀವೆಲ್ಲ ಹೋಗಿ ಓದಿಕೊಳ್ಳಿ. ಏನೋ ಹೊಟ್ಟೆಯ ಸಂಕಟ! ಅಳು ಬಂತು! ಹೋಗಿ ಅಪ್ಪ! ಹೋಗಮ್ಮ ನೀನು' ಎಂದು ಅವರನ್ನೆಲ್ಲ ಕಳಿಸಿಬಿಟ್ಟು ತನ್ನ ಕೊಟಡಿಗೆ ಹೋಗಿ ಕುರ್ಚಿಯ ಮೇಲೆ ಕುಳಿತುಬಿಟ್ಟಳು. ಸುಕನ್ಯೆಗೆ ಭಾವನ

ವಿಚಾರ ಏನೋ ನಡೆದಿರಬೇಕು ಎಂದು ಅರ್ಥವಾಯಿತು. ನಾಗರಾಜನ ಕೊಟಡಿಗೆ ರಘು ಹೋಗಿ, 'ಅಣ್ಣ! ಅಮ್ಮ ಏಕೋ ಅಳುತ್ತಿದಾಳೆ' ಎಂದು ತಿಳಿಸಿದನು. ಅವನು ತಟ್ಟನೆ ಎದ್ದು ತಾಯಿಯ ಕೊಟಡಿಗೆ ಹೋದನು. 'ಅಯ್ಯೋ! ನಿನಗೆ ಯಾರು ಹೇಳಿದರಪ್ಪ ನಾಗರಾಜ ? ನಿನ್ನನ್ನು ಯಾರು ಕರೆತಂದರಪ್ಪ ?'

'ರಘು ಹೇಳಿದನಮ್ಮ! ನಾನೇ ಎದ್ದುಬಂದೆ. ಏಕೆ ಅಳುತ್ತಿದ್ದೀಯೆ ? ಏನು ಸಮಾಚಾರ ?'

'ಏನು ಸಮಾಚಾರವೂ ಇಲ್ಲಪ್ಪ. ಏನೋ ಮಕ್ಕಳನ್ನು ಹೆತ್ತವರು ನಲಿಯೋದುಂಟು, ಅಳೋದೂ ಉಂಟು.

'ಸರೋಜ ಎಲ್ಲಿ? ಆರೋಗ್ಯವಾಗಿದ್ದಾಳೋ ಇಲ್ಲವೋ ?'

'ಇದ್ದಾಳಪ್ಪ ಅವಳೂನೂ ಭೂಮಿ ಮೇಲೆ ನಾನಿದ್ದಹಾಗೆ !'

'ಏನು ನಡದಿದೆ ಹೇಳವ್ಮ ಸುಮ್ಮನೆ ಕಣ್ಣೀರೇಕೆ ಹರಿಸುತ್ತೀಯೆ?'

'ನೀನು ಈ ಮಾತುಗಳಿಗೆಲ್ಲ ಬರಬಾರದಪ್ಪ. ಮುಖ್ಯ ನನಗೆ ಬುದ್ಧಿಯಿಲ್ಲ. ನಾನೇಕೆ ನನ್ನ ದುಃಖ ಪ್ರಕಟ ಮಾಡಬೇಕು.'

'ನಿನಗೇಕೆ ದುಃಖ ಆಗಬೇಕು ?'

'ಕರುಳು ನುಲಿದರೆ ದುಃಖ ಆಗುತ್ತದೆಯಪ್ಪ!'

'ಸರೋಜಳನ್ನು ವಿಚಾರಿಸಿ ತಿಳಿದುಕೊಳ್ಳುತ್ತೇನೆ' ಎಂದು ಹೇಳುತ್ತ ನಾಗರಾಜ ಮಹಡಿಗೆ ಹೊರಟನು. ಹಿಂದೆಯೇ ತಾಯಿ ಸರ್‍ರನೆ ಬಂದಳು. 'ನೀನು ಮಹಡಿಯ ಮೇಲೆ ಹೋಗಬೇಡಪ್ಪ. ನಿನ್ನ ಕೊಟಡಿಗೆ ಹೋಗು. ಪರೀಕ್ಷೆಗೆ ಕಟ್ಟಿದ್ದೀಯೆ. ನಿನ್ನ ಪಾಡಿಗೆ ಓದಿಕೋ ಹೋಗು' ಎಂದು ನಾಗರಾಜನ ಕೈಹಿಡಿದು ತಾಯಿ ನಿಲ್ಲಿಸಿದಳು.

'ಕೈ ಬಿಡಮ್ಮ ನೀನು' ಎಂದು ಬಿಡಿಸಿಕೊಂಡು ನಾಗರಾಜ ಮೇಲಿನ ಕೊಟಡಿಯನ್ನು ಹೊಕ್ಕನು. ಹಿಂದೆಯೇ ತಾಯಿ ಹೊಕ್ಕು ಬಾಗಿಲನ್ನು ಹಾಕಿದಳು. ಸರೋಜಳನ್ನು ನೋಡುತ್ತಲೂ ತಾಯಿಗೆ ದುಃಖ ಉಕ್ಕುಕ್ಕಿ ಬಂತು, ತಡೆದುಕೊಳ್ಳಲಾಗಲಿಲ್ಲ. 'ಬೆನ್ನು ತಿರುಗಿಸಿಕೊಂಡು ಪಕ್ಕಕ್ಕೆ ಮಲಗಮ್ಮ ಸರೋಜ!' ಅಂಗತ್ತನಾಗಿ ಮಲಗಿದರೆ ನೋವಲ್ಲವೇ ?' ಎಂದು ಬಾಯಿ ತಪ್ಪಿ ಆಡಿಬಿಟ್ಟಳು.

ನಾಗರಾಜನನ್ನೂ ತಾಯಿಯನ್ನೂ ನೋಡಿದಾಗ ಸರೋಜ ಬೆಚ್ಚಿ ಬಿದ್ದಳು. 'ನಾಗರಾಜನಿಗೆ ತಾಯಿ ಎಲ್ಲವನ್ನೂ ತಿಳಿಸಿಬಿಟ್ಟಿದ್ದಾಳೆ. ಮುಂದೆ ಏನು ಗತಿ?' ಎಂದು ಚಿಂತಿಸಿ ತಟ್ಟನೆ ಎದ್ದು ಕುಳಿತು, 'ಅಮ್ಮ! ನಾಗರಾಜನಿಗೆ ಎಲ್ಲವನ್ನೂ ಏಕೆ ಹೇಳಿದೆ?' ಎಂದು ಕೇಳಿದಳು. 'ನಾನೇನೂ ಹೇಳಲಿಲ್ಲವಮ್ಮ ಬೇಕಾದರೆ ಅವನನ್ನೇ ಕೇಳು' ಎಂದು ತಾಯಿ ಉತ್ತರ ಕೊಟ್ಟಳು. ಆದರೆ ಈ ಪ್ರಶ್ನೋತ್ತರ ಗಳಿಂದ ಏನನ್ನೂ ಮುಚ್ಚಲಾಗಲಿಲ್ಲ. ತಾಯಿ ಅರ್ಧ ನುಂಗಿಕೊಂಡು, ಅರ್ಧ ಸ್ಪಷ್ಟವಾಗಿ ಸರೋಜಳನ್ನು ರಾತ್ರಿ ಅವಳ ಗಂಡ ಹೊಡೆದದ್ದನ್ನೂ, ಬೆಳಗ್ಗೆ ಎರೆಯುವುದಕ್ಕೆ ತೊಡಗಿದಾಗ ಬೆನ್ನಮೇಲೆ ಗುರುತು ಗಳಿದ್ದುದನ್ನೂ ತಿಳಿಸಬೇಕಾಯಿತು. ನಾಗರಾಜ ಕಣ್ಣಿಂದ ಕೆಂಡ ಗಳನ್ನು ಕಾರುತ್ತ, 'ಅವನು ಮನೆಗೆ ಬರಲಿ, ಸಿಗಿದು ತೋರಣ ಕಟ್ಟು ತ್ತೇನೆ' ಎಂದು ಹೇಳಿ ಮಹಡಿಯಿಂದ ಇಳಿದುಹೋದನು. ತಾಯಿ ಅವನ ಕೊಟಡಿಗೆ ಹೋಗಿ ಅವನನ್ನು ಸಮಾಧಾನ ಪಡಿಸುತ್ತಿದ್ದಳು. ಆಗ ಸುಮಾರು ಒಂಬತ್ತು ಗಂಟೆ.

ಸೀತಾರಾಮು ಮನೆಯನ್ನು ಪ್ರವೇಶಿಸಿದಾಗ ಅದು ಶೂನ್ಯ ಮಂದಿರ ದಂತೆ ಕಂಡುಬಂತು. ಹುಡುಗರು ಯಾರೂ ಹಾಲಿನಲ್ಲಿ ಕಂಡು ಬರಲಿಲ್ಲ; ಅತ್ತೆಯ ಓಡಾಟ ಕಂಡುಬರಲಿಲ್ಲ; ಸರೋಜ ಕಣ್ಣಿಗೆ ಬೀಳ ಲಿಲ್ಲ. ಶೂನ್ಯ ಮಂದಿರದ ಅಪಶಕುನವೆಂಬಂತೆ ಅವನಿಗೆ ಮನಸ್ಸಿನಲ್ಲಿ ಏನೋ ಒಂದು ಅವ್ಯಕ್ತಭಯ ಮನಸ್ಸಿನಲ್ಲಿ ಮೂಡಿತು. ಅವನು ಮನೆಗೆ ಬಂದುದು ಯಾರಿಗೂ ಗೊತ್ತಾಗಲಿಲ್ಲ. ಸದ್ದುಮಾಡದೆ ಮಹಡಿಯ ಮೇಲಕ್ಕೆ ಹೋದನು. ಮೇಲಿನ ಕೊಟಡಿಯಲ್ಲಿ ಸರೋಜ ಗೋಡೆಗೆ ಮುಖಮಾಡಿಕೊಂಡು ಮಲಗಿದ್ದಳು. ಎಚ್ಚರವಾಗಿದ್ದರೂ ಕಣ್ಣುಗಳನ್ನು ಮುಚ್ಚಿಕೊಂಡಿದ್ದಳು, ಹೊದಿಕೆಯನ್ನು ಹೊದ್ದು ಕೊಂಡಿದ್ದಳು. ಸರೋಜ ನಿದ್ರೆಮಾಡುತ್ತಿರಬಹುದೆಂದು ಭಾವಿಸಿ ಅವನು ಅವಳಗೊಡವೆಗೆ ಹೋಗದೆ ಟವಲ್ಲುಗಳನ್ನೂ ಪಂಚೆಯನ್ನೂ ತೆಗೆದುಕೊಂಡು ಸ್ನಾನಕ್ಕೆ ಹೋದನು. ಸ್ನಾನಮಾಡಿ ಹಿಂದಿರುಗು

ತ್ತಿದ್ದಾಗ ನಾಗರಾಜನ ಕೋಣೆಯ ಬಾಗಿಲು ಅರ್ಧ ತೆರೆದಿದ್ದುದನ್ನು ನೋಡಿದನು. ಒಳಗಿಂದ,

'ಅವನು ಸರೋಜಳನ್ನು ಇಟ್ಟುಕೊಂಡು ಬಾಳದೇ ಹೋದರೆ ಶನಿ ಬಿಟ್ಟಿತು. ನನಗೇನೂ ದುಃಖವಿಲ್ಲ. ಅವಳಿಗೆ ಬೇರೆ ಮದುವೆ ಮಾಡಿಸುವುದಕ್ಕೆ ನಾನು ಸಿದ್ಧ.'

ಎಂಬ ಮಾತು ಹೊರಕ್ಕೆ ಬಂತು. ಅದು ನಾಗರಾಜನ ಧ್ವನಿಯಾಗಿತ್ತು. ಸೀತಾರಾಮು ಮೆಟ್ಟಲನ್ನು ಹತ್ತದೆ ನಿಂತುಬಿಟ್ಟನು.

'ಹಾಗೆಲ್ಲ ಉಂಟೇ ನಾಗರಾಜ? ಏನು ಮಾತನಾಡುತ್ತೀಯೆ? ಬೇಗೆಯೋ ಹೊಡೆಯುವಾಗ ಹೊಡೆಯುತ್ತಾರೆ ಆದರಿಸುವಾಗ ಆದರಿಸುತ್ತಾರೆ. ಸಂಸಾರದಲ್ಲಿ ಗಂಡ ಹೆಂಡಿರ ಜಗಳಗಳು ಇದ್ದೇ ಇರುತ್ತವೆ. ಒರಟು ಜನಕ್ಕೆ ಕೈ ದುಡುಕು. ಏನು ಮಾಡುವುದಪ್ಪ! ಸರೋಜಳ ಹಣೆ ಬರಹಕ್ಕೆ ನಾವೇನು ಮಾಡಲಾಗುತ್ತೆ. ಸದ್ಯಃ ನೀನು ಈ ಮಾತಿಗೆ ಬರಬೇಡಪ್ಪ.'

ಅತ್ತೆಯ ಬಾಗಿಲಿಂದ ಹೊರಟ ಮಾತುಗಳನ್ನು ಸೀತಾರಾಮು ಕೇಳಿದನು. ಅವನಿಗೆ ಒಂದು ಕಡೆ ಜಂಘಾಬಲವೇ ಹೋದಹಾಗಾಯಿತು. ಎದೆ ಡವಡವನೆ ಹೊಡೆದುಕೊಳ್ಳಲಾರಂಭಿಸಿತು. ಕ್ಷಣದಲ್ಲಿ ಸರೋಜಳ ಮೇಲೆ ಉಗ್ರಕೋಪ ಉದ್ಭವಿಸಿತು. 'ಸರಿ! ನಾನು ನಿನ್ನೆ ರಾತ್ರಿ ಎರಡೇಟು ಹಾಕಿದ್ದನ್ನು ಅಣ್ಣನ ಹತ್ತಿರ ಅಮ್ಮನ ಹತ್ತಿರ ಹೇಳಿಕೊಂಡು ಪಂಚಾಯಿತಿ ಮಾಡಿದ್ದಾಳೆ. ಈಗ ಈ ಮನೆಯಲ್ಲಿ ನಾನು ಹೇಗಿರಲಿ?' ಎಂದು ಅವನು ಆಲೋಚಿಸುತ್ತ ನಿಂತಿರಲು ಸರೋಜ ಮೆಟ್ಟಲಿಳಿದು ಕೆಳಕ್ಕೆ ಬರುತ್ತಿದ್ದಳು.

'ಆಯಿತೋ? ಅಣ್ಣನಿಗೂ ಅಮ್ಮನಿಗೂ ಬೆನ್ನು ತೋರಿಸಿ ಪಂಚಾಯಿತಿ ಮಾಡಿದ್ದು? ಇನ್ನೂ ಏನಾದರೂ ಉಳಿದಿದೆಯೋ?' ಎಂದು ರೇಗಿ ಅವಳನ್ನು ಕೇಳಿದನು. ಈ ಕೂಗಾಟದಿಂದ ನಾಗರಾಜ, ಒಂದೆಯೋ ತುಳಸಾಬಾಯಿ ಕೊಟಡಿಯಿಂದ ಹಾಲಿಗೆ ಬಂದುಬಿಟ್ಟರು.

'ನಾನು ಹೇಳಲಿಲ್ಲ! ಪಂಚಾಯಿತಿ ಮಾಡಲಿಲ್ಲ!'

ಸರೋಜ ಕುಸಿದು ಕೆಳಗೆ ಬೀಳುವುದರಲ್ಲಿದ್ದಳು.

'ಹೇಳಲಿಲ್ಲ! ಮಾಡಲಿಲ್ಲ! ನಿನಗೆ ನಿನ್ನಣ್ಣ ಬೇರೆ ಮದುವೆ ಮಾಡಿಸುತ್ತಾನಂತೆ. ಮಾಡಿಸಿಕೊ!'

'ಮಾಡಿಸಿಯೇ ಮಾಡಿಸುತ್ತೇನೆ. you are a brute! you deserve to be whipped! (ನೀನೊಂದು ಮೃಗ! ನಿನಗೆ ಚಾಟಿಯಿಂದ ಬಿಗಿಯ ಬೇಕು!')

'All right! come on! whip me if you dare! (ಆಗಲಿ! ಬಾ! ಧೈರ್ಯವಿದ್ದರೆ ಚಾಟಿಯಿಂದ ಬಿಗಿ!)

ಎಂದು ಹೇಳಿ ಸೀತಾರಾಮರಾಯನು ಕೈಯಲ್ಲಿದ್ದ ಟವಲ್ಲನ್ನು ಕೆಳಕ್ಕೆ ಎಸೆದು ರೋಷಭೀಷಣನಾಗಿ ಸೆಡೆತು ನಿಂತನು. ಈ ಗಲಭೆಯಲ್ಲಿ ಹುಡುಗರೆಲ್ಲ ಹಾಲಿಗೆ ಬಂದುಬಿಟ್ಟರು. ನಾರಣಾಚಾರಿ ಅಡಿಗೆಯ ಮನೆಯಿಂದ ಹಾಲಿಗೆ ಬಂದು ನಿಂತನು.

ನಾಗರಾಜನ ತಾಯಿ, 'ಅಪ್ಪಾ ನಾಗರಾಜ! ನೀನು ಕೊಟಡಿಗೆ ಹೋಗಪ್ಪ! ನನ್ನ ಮಾತು ಕೇಳಪ್ಪ!' ಎಂದು ಅವನನ್ನು ಕೊಟಡಿಗೆ ತಳ್ಳುತ್ತಿದ್ದಳು.

'ನನ್ನ ಬಿಡಮ್ಮ ನೀನು! ಅವನಿಗೆ ಈ ದಿನ ಮಾಡ್ತೇನೆ ನೋಡು. ಇನ್ನು ಜನ್ಮ ಜನ್ಮಕ್ಕೂ ಅವಳ ತಂಟೆಗೆ ಹೋಗದಂತೆ ಬುದ್ಧಿ ಕಲಿಸುತ್ತೇನೆ.'

'ಅಪ್ಪಾ ಸೀತಾರಾಮು! ನೀನು ಮಹಡಿಗೆ ಹೊರಟುಹೋಗಪ್ಪ! ರಘು! ನಿನ್ನ ಭಾವನ್ನ ಕರೆದುಕೊಂಡು ಹೋಗಪ್ಪ! ದೊಡ್ಡ ಪ್ರಮಾದ ಆಗಿ ಹೋಯಿತಲ್ಲ!'

ನಾಗರಾಜ ತನ್ನ ತಾಯಿಯನ್ನು ತಳ್ಳಿ ಮುಂದೆ ನುಗ್ಗುವುದರಲ್ಲಿದ್ದನು.

ತುಳಸಾಬಾಯಿ ನಾಗರಾಜನನ್ನು ತಡೆದು, 'ನಾರಣಾಚಾರಿ! ಬೇಗ ಬಾರಪ್ಪ! ಇವನನ್ನು ಹಿಡಿದು ಕೊಟಡಿಗೆ ಸೇರಿಸಪ್ಪ' ಎಂದು ಕೂಗಿದಳು. ರಘು ಹೆದರಿಕೊಂಡು ಭಾವನ ಹತ್ತಿರ ಹೋಗದೆ ಸ್ವಲ್ಪ ದೂರದಲ್ಲಿ ನಿಂತುಬಿಟ್ಟನು. ನಾರಣಾಚಾರಿ ನಾಗರಾಜನನ್ನು ತಡೆದು ಕೊಟಡಿಗೆ ಸೇರಿಸಿ ಬಾಗಿಲನ್ನು ಎಳೆದು ಚಿಲಕಹಾಕಿ ಅಲ್ಲಿಯೇ

ನಿಂತಿದ್ದನು. ಸೀತಾರಾಮು ಎದುರಿಗಿದ್ದ ಸರೋಜಳನ್ನು ಒಂದೇಟತಕ್ಕೆ ಕೆಳಕ್ಕೆ ತಳ್ಳಿ ಸರಸರನೆ ಮೆಟ್ಟಲು ಹತ್ತಿ ಹೋದನು. ತುಳಸಾಬಾಯಿ 'ಅಯ್ಯೋ!' ಎಂದು ಚೀತ್ಕಾರಮಾಡುತ್ತ ಮಗಳ ಹತ್ತಿರಕ್ಕೆ ಧಾವಿಸಿದಳು. ಸರೋಜ ಮೆಲ್ಲಗೆದ್ದು ಚೇತರಿಸಿಕೊಳ್ಳುತ್ತ ಮಹಡಿಯಮೇಲೆ ಹೋಗಲು ಎರಡು ಮೆಟ್ಟಲು ಹತ್ತಿದಳು. ತಾಯಿ, 'ಅಮ್ಮ! ಸರೋಜ! ನೀನು ಈಗ ಅವನೆದುರಿಗೆ ಹೋಗಬೇಡಮ್ಮ! ಕೋಪದಲ್ಲಿ ಏನಾದರೂ ಅಪಾಯ ಮಾಡಿಬಿಟ್ಟಾನು' ಎಂದು ಹೇಳಿ ಸುಕನ್ಯೆಯ ವಶಕ್ಕೆ ಆವಳನ್ನು ಒಪ್ಪಿಸಿ, ತಾನು ಮಹಡಿಯ ಮೇಲಕ್ಕೆ ಹೋದಳು. ಅಲ್ಲಿ ಸೀತಾರಾಮು ತನ್ನ ಬಟ್ಟೆಬರೆಗಳನ್ನು ತನ್ನ ಟ್ರಂಕಿಗೆ ತುರುಕಿ, ಹಾಸಿಗೆಯನ್ನು ಬಿಗಿದು ಕಟ್ಟುವುದರಲ್ಲಿದ್ದನು. ಅಳಿಯ ಪ್ರಯಾಣ ಸನ್ನದ್ಧನಾಗಿದ್ದಾನೆಂದು ಆಕೆಗೆ ತಿಳಿಯಿತು. ಆಕೆ, 'ಅಪ್ಪ! ಸೀತಾರಾಮು! ನೀನೂ ನನಗೆ ಮಗನೇ ಅಪ್ಪ! ಏನೋ ನಡೆದು ಹೋಯಿತು. ಸಮಾಧಾನ ಮಾಡಿಕೋ. ಈಗ ಪ್ರಯಾಣ ಬೇಡ. ಸರೋಜ ನಮ್ಮ ಹತ್ತಿರ ಏನನ್ನೂ ಹೇಳಲಿಲ್ಲಪ್ಪ! ಅವಳು ನಿರಪರಾಧಿನಿ!'

'ಹೌದು! ಅವಳು ನಿರಪರಾಧಿನಿ! ನಾನು ದೊಡ್ಡ ಅಪರಾಧಿ! ಈಗೇಕೆ ಮಾತು. ಋಣಾನುಬಂಧ ತೀರಿತು.'

'ಹಾಗೆಲ್ಲ ಆಡಬೇಡಪ್ಪ! ನನ್ನ ಮಾತು ಪೂರ್ತಿ ಕೇಳು. ಸರೋಜ ಏನನ್ನೂ ಹೇಳಲಿಲ್ಲ. ದೇವರಾಣೆಗೂ ಹೇಳುತ್ತೇನೆ ಈ ದಿನ ಮಂಗಳವಾರ. ಅವಳಿಗೆ ಎರೆಯುವ ದಿನ. ಎಣ್ಣೆ ಹಚ್ಚುವಾಗ ಏನೋ ಎರಡು ಬೆರಳು ಒತ್ತಿದ್ದ ಹಾಗೆ ಕಂಡಿತು. ಆದೇನಮ್ಮ ಎಂದು ವಿಚಾರಿಸಿದೆ. ಅವಳು ಏನನ್ನೂ ಹೇಳಲಿಲ್ಲಪ್ಪ! ನಾನೇ ಊಹೆ ಮಾಡಿಕೊಂಡೆ. ಇಷ್ಟೇ ನಡದದ್ದು. ಮಗ ಬೇರೆ ನೀನು ಬೇರೆ ಅಲ್ಲ! ಹೀಗೆ ಕೋಪದಲ್ಲಿ ನೀನು ಹೋಗಬಾರದು. ಎರಡು ದಿನ ಇದ್ದು ಸಮಾಧಾನ ಮಾಡಿಕೊಂಡು ಹೋಗಪ್ಪ.'

'ನೀವು ಎಣ್ಣೆ ಒತ್ತಿದಿರಿ! ನಾಗರಾಜ ನೀರುಹಾಕಿದನೋ?' ಎನ್ನುತ್ತ ಸೀತಾರಾಮು ಮಹಡಿಯಿಳಿದು ಗಾಡಿ ತರುವುದಕ್ಕೆ ಹೊರಟು ಹೋದನು. ಎಲ್ಲ ಹತ್ತು ನಿಮಿಷಗಳಲ್ಲಿ ದೊಡ್ಡ ಬಿರುಗಾಳಿ ಎದ್ದು

ಸಂಸಾರನೌಕೆ ಬಂಡೆಗೆ ಅಪ್ಪಳಿಸಿಬಿಟ್ಟಿತು. ಸೀತಾರಾಮು ಗಾಡಿಗೆ ಹೋದನೆಂಬುದು ಮೊದಲು ಸರೋಜಳಿಗೆ ತಿಳಿಯಲಿಲ್ಲ. ತಾಯಿ ಕೆಳಕ್ಕಿಳಿದು ಬಂದು, 'ನಿನ್ನ ಗಂಡ ಪ್ರಯಾಣ ಮಾಡುವ ಹಾಗಿದೆ. ಗಂಟೂಮೂಟೆ ಕಟ್ಟಿದ್ದಾನೆ. ಗಾಡಿ ತರುವುದಕ್ಕೆ ಹೋಗಿದ್ದಾನೆ. ನಾನು ಸಮಾಧಾನ ಹೇಳಿದೆ. ಅವನಿಗೆ ಕೋಪ ಇಳಿಯಲಿಲ್ಲ. ಏನು ಮಾಡಬೇಕೋ ದಿಕ್ಕೇ ತೋಚುವುದಿಲ್ಲ' ಎಂದು ಹೇಳಿದಳು.

'ನೀನೂ ಅಣ್ಣ ಸೇರಿಕೊಂಡು ನನ್ನ ಸಂಸಾರ ಹುರಿದುಬಿಟ್ಟಿರಿ! ನನ್ನ ತಲೆಯ ಮೇಲೆ ಕಲ್ಲುಚಪ್ಪಡಿ ಎಳೆದುಬಿಟ್ಟಿರಿ!' ಎಂದು ಸರೋಜ ಬಿಕ್ಕಿಬಿಕ್ಕಿ ಅಳುವುದಕ್ಕೆ ತೊಡಗಿದಳು.

'ಈಗ ನಾನೇನು ಮಾಡಬೇಕು ಹೇಳು ಸರೋಜ! ನಿನ್ನ ಗಂಡನ ಕಾಲು ಹಿಡಿದುಕೊಳ್ಳಲೇ? ನಿನ್ನ ಸಂಸಾರ ಮುರಿಯಬೇಕು ಎಂಬುದು ನನ್ನಿಷ್ಟವೇ? ಹೇಗಾದರೂ ಮಾಡಿ ಅವನನ್ನು ಸಮಾಧಾನ ಪಡಿಸಿ ನಿಲ್ಲಿಸಿಕೊಂಡರೆ ಸಾಕು! ಅವರೂ ಊರಲ್ಲಿಲ್ಲ. ಸರ್ಕೀಟಿನಿಂದ ವಾಪಸುಬರುವ ವೇಳೆಗೆ ಹೀಗಾಗಿರಬೇಕೇ! ದೇವರೇ! ನಮ್ಮಪ್ಪ! ನೀನು ಹೇಳಿದ ಹಾಗೆ ಮಾಡುತ್ತೇನೆ ಸರೋಜ! ಹೇಳಮ್ಮ. ತುಂಬಿದ ಬಸಿರಿ! ನಿನಗೆ ಇಂಥ ಸಂಕಟ ಬರಬಹುದೇ!' ಎಂದು ತುಳಸಾಬಾಯಿ ಅಳ ತೊಡಗಿದಳು.

ಸೀತಾರಾಮು ಗಾಡಿಯನ್ನು ತಂದವನು ಸರಸರನೆ ಮಹಡಿ ಹತ್ತಿ ಹೋಗಿ ಟ್ರಂಕನ್ನೂ ಹಾಸಿಗೆಯನ್ನೂ ತಾನೇ ಹಿಡಿದುಕೊಂಡು ಕೆಳಕ್ಕೆ ಇಳಿದು ಬಂದನು. ಅತ್ತೆ ಎದುರುಬಂದು, 'ಸೀಪಪ್ಪ! ಅವನ್ನು ಕೆಳಗಿಡು. ಬೇಕಾದರೆ ರಾತ್ರಿಗಾಡಿಗೆ ಹೋಗುವಿಯಂತೆ. ಹಟ ಮಾಡಬೇಡ' ಎಂದಳು. ಸೀತಾರಾಮು ಹೊರಬಾಗಿಲ ಹತ್ತಿರ ಅವನ್ನು ಇಟ್ಟು ಗಾಡಿಯವನಿಗೆ, 'ಸಾಮಾನನ್ನು ಗಾಡಿಗೆ ಹಾಕು' ಎಂದು ಹೇಳಿದನು. ಸಾಮಾನು ಗಾಡಿಗೆ ಹೋಯಿತು. ಸರೋಜ ಅಳುತಳುತ ಬಂದು 'ನನ್ನನ್ನೂ ಕರೆದುಕೊಂಡುಹೋಗಿ. ಇಲ್ಲಿ ನಾನಿರುವುದಿಲ್ಲ' ಎಂದು ಕಾಲಮೇಲೆ ಬಿದ್ದಳು.

'ಈ ಒರಟು ಗಂಡನ ಕಾಲನ್ನೇಕೆ ಕಟ್ಟಿಕೊಂಡು ಅಳುತ್ತೀಯೆ? ನಾಳೆ ನಾಗರಿಕ ಗಂಡ ಬರುತ್ತಾನೆ! ಅವನನ್ನು ಕಟ್ಟಿಕೊಂಡು ಸುಖಪಡು' ಎಂದು ಕಟಕಿಯನ್ನಾಡಿ ಕಾಲುಬಿಡಿಸಿಕೊಂಡು ಸೀತಾರಾಮು ಹೊರಟುಹೋದನು. ರೈಲ್ವೆ ಸ್ಟೇಷನ್ನಿಗೆ ಬಂದಾಗ ರೈಲು ಹೊರಡುವುದಕ್ಕೆ ಐದು ನಿಮಿಷವಿತ್ತು. ಟಿಕೆಟ್ ತೆಗೆದುಕೊಂಡು ಗಾಡಿಯಲ್ಲಿ ಕುಳಿತನು. ರೈಲು ಹೊರಟಿತು. ಸಾಯಂಕಾಲ ಅವನು ತುಮಕೂರಿಗೆ, ತನ್ನ ಮನೆಗೆ ಹಿಂದಿರುಗಿದನು.

## ೪. ತಂದೆ ಮತ್ತು ಮಗ

ಸೀತಾರಾಮು ಹೊರಟುಹೋದಮೇಲೆ ಶಿವಮೊಗ್ಗದ ಮನೆಯಲ್ಲಿ ದುಃಖದ ಮೌನ ತುಂಬಿಕೊಂಡಿತ್ತು. ಸರೋಜ ಮತ್ತು ತುಳಸಾಬಾಯಿ ಕೃಷ್ಣರಾಯರ ಕೊಟಡಿಯಲ್ಲಿದ್ದರು. ಸರೋಜ ತಂದೆಯ ಹಾಸಿಗೆಯಲ್ಲಿ ಮಲಗಿದ್ದಳು; ತಾಯಿ ಪಕ್ಕದಲ್ಲಿ ಮೌನವಾಗಿ ಕುಳಿತಿದ್ದಳು. ಹುಡುಗರು ಊಟ ಮಾಡಿಕೊಂಡು ಸ್ಕೂಲುಗಳಿಗೆ ಹೊರಟು ಹೋದರು. ನಾಗರಾಜ ತನ್ನ ಕೊಟಡಿಯಲ್ಲಿ ತೆರೆದ ಪುಸ್ತಕವೊಂದನ್ನು ಮೇಜಿನ ಮೇಲಿಟ್ಟು ಕೊಂಡು ಅನ್ಯಮನಸ್ಕನಾಗಿ ಅರ್ಧ ಉದ್ವೇಗದಿಂದ ಕುಳಿತಿದ್ದನು. ಹನ್ನೊಂದು ಗಂಟೆ ಆಯಿತು. ಯಾರೂ ಊಟಕ್ಕೆ ಏಳಲಿಲ್ಲ. ನಾರಣಾಚಾರಿ ಬಂದು, 'ಎಲೆ ಹಾಕಲೇ?' ಎಂದು ಯಜಮಾನಿಯನ್ನು ಕೇಳಿದನು.

'ಹಾಕಪ್ಪ ಹಾಕು! ಹಾಳು ಊಟ ಯಾರಿಗೆ ಬೇಕಾಗಿದೆಯೋ' ಎಂದು ಯಜಮಾನಿ ಉದ್ಗಾರ ತೆಗೆದಳು.

'ಏಳಮ್ಮ ಸರೋಜ! ಊಟಮಾಡು ಏಳು. ಈಗೇನೋ ಕೋಪ ತಾಪಗಳಿಂದ ನಮ್ಮ ಮಾತು ಲಕ್ಷ್ಯಮಾಡದೆ ಹೋಗಿದ್ದಾನೆ. ಎರಡು ದಿನ ಕಳೆದ ಮೇಲೆ ದಾರಿಗೆ ಬಂದಾನು.'

'ನೀನು ಹೋಗಿ ಊಟ ಮಾಡು. ನಾನೀಗ ಊಟ ಮಾಡು ವುದಿಲ್ಲ.'

'ಎರಡು ಜೀವಗಳಿಂದ ಇದ್ದೀಯಮ್ಮ! ಹಾಗೆಲ್ಲ ಹಟಮಾಡ ಬೇಡ. ಅವನಂತೂ ನನ್ನ ಮಾತು ಕೇಳದೆ ಹೊರಟುಹೋದ. ಹೊಟ್ಟೆಯಲ್ಲಿ ಹುಟ್ಟಿದ ನೀನೂ ನನ್ನ ಮಾತು ಕೇಳುವುದಿಲ್ಲವೇ?'

'ಅವರನ್ನು ಬರಿ ಹೊಟ್ಟೆಯಲ್ಲಿ ಕಳಿಸಿಬಿಟ್ಟು ಇಲ್ಲಿ ನಾನು ಹೊಟ್ಟೆ ಬಿರಿಯ ಉಣ್ಣಲೇ!'

'ಅವನನ್ನು ಬರಿಯ ಹೊಟ್ಟೆಯಲ್ಲಿ ನಾನು ಕಳಿಸಿಬಿಟ್ಟೆನೇ? ಬೇಡಪ್ಪ: ಬೇಡ ಎಂದು ಅಡ್ಡಡ್ಡ ಕಟ್ಟಿದೆ. ಕಾಲಿಗೊಂದು ಬೀಳಲಿಲ್ಲ.

ರಾತ್ರಿ ಗಾಡಿಗೆ ಹೋಗಪ್ಪ, ಹಟಮಾಡಬೇಡ ಎಂದು ಗೋಗರೆದೆ. ನನ್ನ ಮಾತು ಲಕ್ಷ್ಯಮಾಡದೆ ಹೊರಟುಹೋದ. ನಾನೇನು ಮಾಡಲಿ ಹೇಳಮ್ಮ? ಅವನು ಉಪವಾಸ ಹೊರಟುಹೋದ ಎಂದು ತುಂಬಿದ ಬಸಿರಿ ನೀನು ಸಹ ಉಪವಾಸ ಇರುತ್ತೀಯಾ?'

'ಇದ್ದರೆ ಇರುತ್ತೇನೆ.'

'ಹಾಲೂ ನೀರೂ ಬೇರಾಗಲಿ, ಹೆತ್ತು ಹತ್ತು ದಿನ ಕಳೆದು ಹೋಗಲಿ. ಆಗ ನಿನ್ನಿಷ್ಟದಂತೆ ನಡೆ. ಈಗ ಹಾಗೆಲ್ಲ ಮಾಡಬಾರದು. ಏಳು.'

ತಾಯಿ ಮಗಳನ್ನು ಹೇಗೋ ಸಮಾಧಾನ ಮಾಡಿ ಊಟಕ್ಕೆ ಕರೆತಂದಳು. ನಾಗರಾಜನೂ ಬಂದು ಊಟಮಾಡಿಕೊಂಡುಹೋದನು.

ಸರೋಜ ದುಃಖದಿಂದ ಆಗಾಗ ಹಾಸಿಗೆಯಲ್ಲಿ ಎದ್ದುಕುಳಿತು ಕೊಳ್ಳುವುದು, ಮಧ್ಯದಲ್ಲಿ ಮಹಡಿ ಹತ್ತಿಹೋಗಿ ಕೊಟಡಿಯನ್ನು ನೋಡಿಕೊಂಡು ಬರುವುದು, ತಾಯಿ ಅವಳನ್ನು ಸಮಾಧಾನಪಡಿಸುತ್ತ ಧೈರ್ಯಹೇಳುತ್ತ ಇರುವುದು– ಈ ಪ್ರಕರಣಗಳು ನಡೆಯುತ್ತಿದ್ದುವು. ಕಡೆಗೆ ಸುಮಾರು ಎರಡು ಗಂಟೆಯ ಹೊತ್ತಿಗೆ ಸರೋಜ ಸ್ವಲ್ಪ ಕಣ್ಣುಮುಚ್ಚಿ ನಿದ್ರೆಮಾಡತೊಡಗಿದಳು.

ಮೂರು ಗಂಟೆಗೆ ಕೃಷ್ಣರಾಯರು ಸರ್ಕೀಟಿನಿಂದ ವಾಪಸು ಬಂದರು. ಮೋಟಾರಿನ ಸದ್ದು ಕೇಳಿ ತುಳಸಾಬಾಯಿ ಹಾಲಿಗೆ ಭಯ ದಿಂದ ಎದ್ದು ಹೋದಳು. ಇನ್ನು ಗಂಡನಿಗೆ ಸಮಾಚಾರ ತಿಳಿದರೆ ಏನು ಪರಿಣಾಮವಾಗುತ್ತದೆಯೋ? ತಂದೆಗೂ ಮಗನಿಗೂ ಮಾತೇನು ಬೆಳೆಯು ವುದೋ? ಎಂದು ಚಿಂತಿಸುತ್ತ ಆಕೆ ಅಡಿಗೆಯ ಮನೆಗೆ ಹೋದಳು. ಕೃಷ್ಣರಾಯರು ತಮ್ಮ ಸೂಟು ಬೂಟುಗಳನ್ನು ಬಿಚ್ಚಿ ಪಂಚೆಯನ್ನುಟ್ಟು ಕೊಂಡು ನೀರ ಮನೆಗೆ ಹೋಗಿ ಕೈಕಾಲು ಮುಖ ತೊಳೆದುಕೊಂಡು ತಮ್ಮ ಕೊಟಡಿಗೆ ಬಂದರು. ತಮ್ಮ ಮಂಚದ ಮೇಲೆ ಸರೋಜ ಮಲ ಗಿದ್ದುದು ಕಂಡುಬಂತು. ಆ ಮುದ್ದುಮಗಳ ಮುಖವನ್ನು ಎರಡು ನಿಮಿಷ ನೋಡುತ್ತಿದ್ದು, ಆ ಮುಖದಲ್ಲಿ ದುಃಖದ ಕಲೆಗಳನ್ನು ಕಂಡು ಅವಳು ನೆಮ್ಮದಿಯಾಗಿರುವಳೋ ಇಲ್ಲವೋ ಎಂಬ ಶಂಕೆಯಿಂದ ಕೈ

ಹಿಡಿದು ನೋಡಿದರು. ಹಾಗೆ ನೋಡುತ್ತಿದ್ದಾಗ ಸರೋಜಳಿಗೆ ಎಚ್ಚರಿಕೆಯಾಗಿಹೋಯಿತು. 'ಮಲಗಿಕೊಳ್ಳಮ್ಮ ಮಲಗಿಕೋ. ಆಯಾಸ ಮಾಡಿಕೊಳ್ಳಬೇಡ,– ಎಂದು ಹೇಳಿ ಕೃಷ್ಣರಾಯರು ಹಿಂದಕ್ಕೆ ಸರಿದರು. ತಂದೆಯನ್ನು ನೋಡುತ್ತಲೂ ಸರೋಜಳಿಗೆ ದುಃಖದ ಕಟ್ಟೆ ಒಡೆದು ಹೋಯಿತು. ಮಂಚದಿಂದ ಇಳಿದು ತಂದೆಯ ಕಾಲುಗಳ ಮೇಲೆ ಬಿದ್ದು, 'ನಾನು ಈ ಮನೆಯಲ್ಲಿರುವುದಿಲ್ಲಪ್ಪ! ನನ್ನನ್ನು ತುಮಕೂರಿಗೆ ಕಳಿಸಿಬಿಡಪ್ಪ' ಎಂದು ಬಿಕ್ಕಿಬಿಕ್ಕಿ ಅಳತೊಡಗಿದಳು ಕೃಷ್ಣರಾಯರಿಗೆ ಆಕಾಶ ಕಳಚಿ ಬಿದ್ದಂತಾಯಿತು. ನಿಂತ ನೆಲ ಕುಸಿದುಹೋದಂತಾಯಿತು. 'ಇದೇನಮ್ಮ ನಿನ್ನ ಮಾತು! ಕಾಲು ಬಿಡು. ನಿನ್ನ ಗಂಡ ನೀನು ತುಮಕೂರಿಗೆ ಬರಬೇಕೆಂದು ಬಲವಂತ ಮಾಡುತ್ತಿದ್ದಾನೆಯೆ?'

'ಅವರು ಇಲ್ಲಿಲ್ಲ!'

'ಅವನು ಇಲ್ಲಿಲ್ಲ! ಏಕೆ? ಎಲ್ಲಿಗೆ ಹೋಗಿದ್ದಾನೆ ನಿನ್ನ ಗಂಡ?'

'ಅವರು ಬೆಳಗ್ಗೆ ತುಮಕೂರಿಗೆ ಹೊರಟುಹೋದರಪ್ಪ! ಅಪ್ಪ, ನಾಗರಾಜ ನನ್ನ ಸಂಸಾರ ಮುರಿದುಬಿಟ್ಟರು!'

ಕೃಷ್ಣರಾಯರು ಕುರ್ಚಿಯಲ್ಲಿ ಕುಸಿದುಬಿದ್ದರು. ಮಗಳನ್ನು ಮೆಲ್ಲಗೆ ಎಬ್ಬಿಸಿ, 'ನೀನು ಬಸಿರಿ, ಅಳಬೇಡ. ಏನು ನಡೆಯಿತು ಹೇಳು. ನಾಗರಾಜ ಏಕೆ ಇವಕ್ಕೆಲ್ಲ ಕೈಹಾಕಿದ?'

ಸರೋಜ ನಡೆದ ಸಂಗತಿಗಳನ್ನೆಲ್ಲ ಹೇಳುತ್ತಿದ್ದಾಗ ಅವಳ ತಾಯಿ ಉಪಾಹಾರವನ್ನೂ ಟೀಯನ್ನೂ ತೆಗೆದುಕೊಂಡು ಕೊಟಡಿಗೆ ಬಂದಳು. ಅವನ್ನು ಮೇಜಿನ ಮೇಲಿಟ್ಟು ತಾನೂ ಒಂದು ಕುರ್ಚಿಯಲ್ಲಿ ಕುಳಿತಳು. ಕೃಷ್ಣರಾಯರು ಎಲ್ಲವನ್ನೂ ಸಾವಧಾನವಾಗಿ ಕೇಳಿದರು. ಸರೋಜ ಆ ರಾತ್ರಿ ಸಿನೀಮಾದಿಂದ ತಾನು ಹಿಂದಿರುಗಿ ಬಂದಮೇಲೆ ನಡೆದದ್ದನ್ನು ಮೊದಲು ಮಾಡಿ ತನ್ನ ಗಂಡ ಜಟಕಾಗಾಡಿಯಲ್ಲಿ ಹೊರಟು ಹೋದ ಪರ್ಯಂತ ಎಲ್ಲ ವಿವರಗಳನ್ನೂ ಬಿಡದೆ ಹೇಳಿದಳು. 'ಅಮ್ಮನಿಗೂ ಅಣ್ಣನಿಗೂ ಏನು ಮಾತು ನಡೆಯಿತೋ ನನಗೆ ಗೊತ್ತಿಲ್ಲಪ್ಪ! ಮಹಡಿಯಿಂದ ನಾನಿಳಿದು ಬಂದಾಗ – ಆಯಿತೇ ಅಣ್ಣನಿಗೂ ಅಮ್ಮನಿಗೂ ಬೆನ್ನು ತೋರಿಸಿ ಪಂಚಾಯಿತಿ ಮಾಡಿದ್ದು? – ಎಂದು

ಅವರು ಗಟ್ಟಿಯಾಗಿ ಅಂದಾಗ ಅಮ್ಮ, ನಾಗರಾಜ ಕೊಟಡಿಯಿಂದ ಹೊರಕ್ಕೆ ಬಂದರು. ಅಷ್ಟೇ ನಾನು ನೋಡಿದ್ದು.'

'ನಿನಗೆ ಇಷ್ಟು ವಯಸ್ಸಾಗಿದೆ, ಅಷ್ಟು ಮಕ್ಕಳನ್ನು ಹೆತ್ತಿದ್ದೀಯೆ. ನಿನಗಿನ್ನೂ ವಿವೇಕ ಬಂದಿಲ್ಲವಲ್ಲ! ದೂರಾಲೋಚನೆ ಎಳ್ಳಷ್ಟೂ ಇಲ್ಲ. ಎಲ್ಲಾ ಅಬ್ಬರ ಅಟ್ಟಹಾಸ ಮಾಡಿ ಹುಡುಗಿಯನ್ನು ಸಂಕಟಕ್ಕೆ ಸಿಕ್ಕಿಸಿದೆ. ಪುಸ್ತಕ ಓದಿ ಪ್ಯಾಸ್ ಮಾಡಿದ್ದರೇನು? ನಿನ್ನ ಮಗನಿಗೆ ಲೋಕ ತಿಳಿಯದು; ಸಂಸಾರ ಎಂದರೆ ಏನು ಎನ್ನುವುದು ತಿಳಿಯದು.'

'ತುಂಬಿದ ಬಸಿರಿಯನ್ನು ಹೊಡೆದನಲ್ಲ ಎಂಬ ಸಂಕಟಕ್ಕೆ ಕಣ್ಣೀರು ಹಾಕಿದೆ ನಾನೇನು ಮಾಡಲಿ? ನಾನೂ ಎಷ್ಟೋ ತಡೆದು ಕೊಂಡೆ. ತಾಯಿ ಅಳುತ್ತಿದ್ದರೆ ಮಕ್ಕಳು ಸುಮ್ಮನಿರುತ್ತಾರೆಯೆ? ನಾನೂ ನಾಗರಾಜನಿಗೆ ಹೇಳುವ ಬುದ್ಧಿಯನ್ನೆಲ್ಲ ಹೇಳಿ ತಡೆದಿಟ್ಟೆ. ಇಲ್ಲದಿದ್ದರೆ ಹಣಾಹಣಿ ಆಗಿ ಇಬ್ಬರ ಜೀವಗಳೂ ಹೋಗುತ್ತಿದ್ದುವು.'

'ಹೋಗಿ ನಾಗರಾಜನನ್ನ ಕರೆದುಕೊಂಡು ಬಾ'

'ನೀವು ನಾಗರಾಜನ ಮಾತಿಗೆ ಹೋಗಬೇಡಿ! ಈಗ ನಾನೊಂದು ಅವಿವೇಕಮಾಡಿ ಅಳಿಯ ಮನೆ ಬಿಟ್ಟುಹೋದ ಪ್ರಮಾದ ಆಯಿತು. ಇನ್ನು ನೀವೊಂದು ಅವಿವೇಕಮಾಡಿ ಕೈಗೆಬಂದ ಮಗ ಮನೆ ಬಿಟ್ಟು ಹೋಗುವ ಪ್ರಮಾದ ಆದೀತು!'

'ಅವನು ಮನೆಬಿಟ್ಟು ಹೋಗುವ ಪ್ರಮಾದ ಆಗುವುದಿಲ್ಲ. ನಾನು ಮನೆಬಿಟ್ಟು ಹೋಗುವ ಪ್ರಮಾದ ಬೇಕಾದರೆ ಆಗುತ್ತೆ.'

'ಸದ್ಯಕ್ಕೆ ಇನ್ನಾವ ಪ್ರಮಾದಗಳೂ ಬೇಡ' ಎಂದು ಹೇಳುತ್ತ ತುಳಸಾಬಾಯಿ ಎದ್ದುಹೋಗಿ ನಾಗರಾಜನನ್ನು ಕರೆತಂದಳು.

'ಈಗ ನಡೆದುಹೋದದ್ದು ನಡೆದುಹೋಯಿತು. ಈಗ ಯಾರನ್ನು ಆಡಿದರೂ ಫಲವಿಲ್ಲ. ಮುಂದೆ ಏನು ಮಾಡಬೇಕು? ಸರೋಜಳ ಗತಿ ಏನಾಗಬೇಕು? ತಿಳಿಸು' ಎಂದು ಕೃಷ್ಣರಾಯರು ತಮ್ಮ ಹೆಂಡತಿಯನ್ನು ಕೇಳಿದರು

'ಈಗೇನೋ ಕೋಪದಿಂದ ಹೋಗಿದ್ದಾನೆ. ಶಾಂತವಾದ ಮೇಲೆ ಎರಡು ದಿನ ಬಿಟ್ಟುಕೊಂಡು ಬರುತ್ತಾನೆ. ಸರೋಜ ಎರಡು ಕಾಗದ

ಗಳನ್ನು ಬರೆದು ಸಮಾಧಾನ ಮಾಡಲಿ. ಬೇಕಾದರೆ ನೀವೂ ಅವನಿಗೆ ಕಾಗದ ಬರೆಯಿರಿ.'

'ಅವನು ಜವಾಬು ಕೊಡದಿದ್ದರೆ?'

'ಹೆಂಡತಿ ಎಂದರೆ ಯಾರಿಗಾದರೂ ಆಸೆಯಿರುತ್ತದೆ. ಏನೋ ಹುಡುಗು ಬುದ್ಧಿ! ಅದೇನು ಸ್ಥಿರವಾಗಿರುತ್ತದೆಯೆ? ನಾಳೆ ಮಗನೋ ಮಗಳೋ ಹುಟ್ಟಬಹುದು. ನೋಡಬೇಕೆಂದು ಆಸೆ ಇರುವುದಿಲ್ಲವೆ? ಬಿಗುಮಾನಕ್ಕೆ ಎರಡು ದಿನ ಸುಮ್ಮನಿರಬಹುದು. ಒಂದು ಕುಂಟು ನೆಪ ಸಿಕ್ಕರೆ ಮತ್ತೆ ಬರಬಹುದು. ಇದನ್ನೆಲ್ಲ ಹೆಚ್ಚು ಬೆಳಸಬೇಡಪ್ಪ, ಸರೋಜ ಬಸುರಿಯಾಗಿದ್ದಾಳೆ, ಅವಳನ್ನು ಸಂಕಟಗೊಳಿಸಬೇಡ, ದೊಡ್ಡ ಮನಸ್ಸುಮಾಡಿ ಬಾ, ನಿನ್ನ ತಾಯಿಯನ್ನೂ ಕರೆದುಕೊಂಡು ಬಾ – ಎಂದು ನೀವು ಕಾಗದ ಬರೆದರೆ ತಳ್ಳಿಹಾಕಲಾರ.'

'ನನಗೆ ಆ ಭರವಸೆ ಇಲ್ಲ. ಸಾಕಿ ಸಲಹಿ ಮನೆಯಲ್ಲೇ ಬೆಳಸಿದ ಹುಡುಗರಾದರೂ ಅಳಿಯ ಎಂದು ಮಾಡಿಕೊಂಡ ಮೇಲೆ ಅವರ ಬುದ್ಧಿ ಬದಲಾಯಿಸಿ ಹೋಗುತ್ತದೆ. ವಯಸ್ಸು ಹುಡುಗರು ತಟವಟಮಾಡಿ ಆಡಿಬಿಡುತ್ತಾರೆ, ನಮ್ಮ ಮರ್ಯಾದೆಯನ್ನು ಕಳೆದುಬಿಡುತ್ತಾರೆ. ಅವನೇನೂ ನಮ್ಮ ಮನೆಯಲ್ಲಿ ಬೆಳೆದ ಹುಡುಗನಲ್ಲ.'

'ಆದರೂ ನಿಮ್ಮ ಸ್ನೇಹಿತರು ಶ್ರೀನಿವಾಸರಾಯರ ಮಗನಲ್ಲವೆ? ಮಾವನಿಗೆ ಗೌರವ ಕೊಡದಿದ್ದರೂ ತಂದೆಯ ಸ್ನೇಹಿತರು ಎಂದು ಗೌರವ ಕೊಡದೆ ಹೋಗುತ್ತಾನೆಯೆ? ಬೇಕಾದರೆ ಒಂದು ದಿನ ರಜ ತೆಗೆದುಕೊಂಡು ತುಮಕೂರಿಗೆ ಹೋಗಿಬಿಟ್ಟು ಬನ್ನಿ.'

'ಸರಿ. ನಿನ್ನ ಸಲಹೆಯಂತೂ ಆಯಿತು. ಏನಪ್ಪ ನಾಗರಾಜ! ನೀನೇನು ಹೇಳುತ್ತೀಯೆ? ನೀನು ಬುದ್ಧಿಶಾಲಿಯೇ ಹೌದು. ಆದರೆ ನಾಲ್ಕು ಗೋಡೆಗಳೊಳಗಿನ ವಿಶ್ವವಿದ್ಯಾನಿಲಯದಲ್ಲಿ ಫಸ್ಟ್‌ಕ್ಲಾಸ್ ಫಸ್ಟ್ ಬರಬಹುದು. ನಾಲ್ಕು ಗೋಡೆಗಳ ಹೊರಗಿರುವ ವಿಶ್ವವಿದ್ಯಾನಿಲಯದಲ್ಲಿ ತೇರ್ಗಡೆಯಾಗುವುದೇ ಕಷ್ಟ; ಇನ್ನು ಫಸ್ಟುಗಿಸ್ಟು ಎಲ್ಲಿಂದ ಬರಬೇಕು?'

‘ Marriage is only a social contract (ಮದುವೆ ಎನ್ನು ವುದು ಒಂದು ಸಾಮಾಜಿಕ ಒಡಂಬಡಿಕೆ ಮಾತ್ರ). ನಾವೇಕೆ ಹೋಗಿ ಅವನ ಕಾಲಿಗೆ ಬೀಳಬೇಕು? ಸರೋಜ ಅಂಥ ಕಿರಾತನೊಡನೆ ಬಾಳುವೆ ಮಾಡಬೇಕು ಎಂದು ನಾವೇಕೆ ನಿರ್ಬಂಧ ಮಾಡಬೇಕು?’

‘ ಬಾಳುವೆ ಮಾಡೋವಳು ಸರೋಜ. ಅವಳ ಅಭಿಪ್ರಾಯದಂತೆ ತಾನೆ ನಾವು ಹೋಗಬೇಕು. ಏನಮ್ಮ ಸರೋಜ? ನೀನು ಏನು ಹೇಳುತ್ತೀಯೆ?’

‘ ಅವರು ಕಿರಾತರೇನೂ ಅಲ್ಲಪ್ಪ! ನನ್ನ ಮೇಲೆ ಎಂದೂ ಕೈಎತ್ತಿದವರಲ್ಲ. ಆ ದಿನ ಏನೋ ನನ್ನ ಗ್ರಹಚಾರ, ನನ್ನ ತಪ್ಪು. ನನ್ನನ್ನು ತುಮಕೂರಿಗೆ ಕಳಿಸಿ ಬಿಡು. ನಾನು ಹೋಗುತ್ತೇನೆ.’

‘ ಏನು ಹೇಳುತ್ತೀಯಪ್ಪ ನಾಗರಾಜ?’

‘ What does the poor girl know! (ಪಾಪ! ಆ ಹುಡುಗಿ ಗೇನು ಗೊತ್ತು!) ಇವಳನ್ನು ತುಮಕೂರಿಗೆ ಕಳಿಸುವುದಕ್ಕೆ ನಾನು ಸುತರಾಂ ಒಪ್ಪುವುದಿಲ್ಲ. ಈಗ ಅವನು ಕೋಪದಿಂದ ಬೇರೆ ಹೋಗಿದ್ದಾನೆ. ಅವನ ಹತ್ತಿರ ಸರೋಜಳನ್ನು ಕಳಿಸುವುದು ಶುದ್ಧ ಅವಿವೇಕ. ಬೇಕಾದರೆ ಕಾಗದ ಬರೆಯಿರಿ. ಅವನಾಗಿ ಬಂದರೆ ಸಂತೋಷ ನಿಮಗಂತೂ ಅವನು ಅಳಿಯ. ನೀವು ಅವನೊಡನೆ ಮಾತುಕಥೆ ಆಡದೆ ವಿಧಿಯಿಲ್ಲ. ನನಗೇನು? ನಾನು ಅವನೊಡನೆ ಮಾತುಗೀತು ಆಡುವುದಿಲ್ಲ.’

‘ ಈಗ ನೀನು ಅವನನ್ನು ರೇಗಿಸಿ ಕಳಿಸಿಬಿಟ್ಟಿದ್ದೀಯಲ್ಲ. ಅದರ ಜವಾಬ್ದಾರಿ ನಿನ್ನದು ತಾನೆ?’

‘ ನನ್ನದು ಜವಾಬ್ದಾರಿ ಏನೂ ಇಲ್ಲ. ಅವನು ನನ್ನ ತಂಗಿಯನ್ನು—ಅದರಲ್ಲಿಯೂ ಬಸಿರಿಯನ್ನು—ಹೊಡೆದ. ನಾನು ನಪುಂಸಕನಂತೆ ಸುಮ್ಮನಿರಬೇಕೇ? ಅವನನ್ನು ಹಿಡಿದು ತದಕಬೇಕಾಗಿತ್ತು. ಅಮ್ಮ ಅಡ್ಡ ಬಂದಳು.’

‘ ಅವನಿಗೇನಾದರೂ ಅಪಾಯವಾಗಿದ್ದರೆ ನಮಗೆ ತಾನೆ ನಷ್ಟವಾಗು ತ್ತಿತ್ತು? ಸರೋಜ ತನ್ನ ಗಂಡನ್ನ ನೀನು ತದಕುತ್ತಿದ್ದರೆ ಸಂತೋಷಪಡ

ಬೇಕಾಗಿತ್ತೋ? ಅವಳ ಗಂಡನಿಗೆ ಅಪಾಯವಾಗಿದ್ದರೆ ಸರೋಜ ಸಂಕಟ ಪಡುತ್ತಿರಲಿಲ್ಲವೇ ? '

'ಗಂಡ ಕ್ರೂರಿಯಾಗಿ ಹಿಂಸೆ ಕೊಡುತ್ತಿದ್ದರೆ ಅವನೊಡನೆ ಬಾಳುವೆ ಮಾಡುವುದು ಸಂಕಟವಲ್ಲವೇನು ? ಅದಕ್ಕೆ ಬದಲು ಬೇರೆ ಮದುವೆ ಮಾಡಿಕೊಳ್ಳುವುದೇ ಮೇಲು. ನನ್ನನ್ನು ನೀವು ಕೇಳಿದರೆ, ಸರೋಜಳಿಗೆ ಬೇರೆ ಮದುವೆ ಮಾಡಬೇಕು ಎಂದು ಹೇಳುತ್ತೇನೆ. '

'ಬೇರೆ ಮದುವೆ ಮಾಡಬೇಕೇ ! ಟ್ರಯಲ್ ಮ್ಯಾರೇಜಸ್, ಕಂಪಾನಿಯನೇಟ್ ಮ್ಯಾರೇಜಸ್ ಮಾಡುತ್ತ ಹೋಗಬೇಕೇ ? ಸರೋಜ ಒಬ್ಬಳು ಸೂಳೆ ಎಂದು ತಿಳಿದುಕೊಂಡೆಯಾ ನಾಗರಾಜ? ನಿನ್ನ ತಾಯಿ ನನ್ನೊಡನೆ ಎಷ್ಟೋಬಾರಿ ಎದುರು ವಾದಿಸುತ್ತಾಳೆ, ಕಿರುಕುಳ ಕೊಡುತ್ತಾಳೆ. ಸಂಸಾರ ಹೀಗೇ ನಡೆದುಕೊಂಡು ಹೋಗುತ್ತದೆ. ಸಂಸಾರವನ್ನು ಕೂಡಿಸುವುದಕ್ಕೆ ಬದಲು ಮುರಿಯುವುದಕ್ಕೆ ಹೋಗುವುದೇ? ನೀನು ಎಲ್ಲ ಓದಿದ್ದೀಯಲ್ಲ. ಸಿವಿಲ್ ಸರ್ವಿಸ್ಸಿಗೆ ಬೇರೆ ಕಟ್ಟಿದ್ದೀಯೆ. ಇಂಗ್ಲೆಂಡ್, ಅಮೆರಿಕಾ-ಎಲ್ಲವನ್ನೂ ತಲೆಯಲ್ಲಿ ತುಂಬಿಕೊಂಡಂತೆ ಮಾತನಾಡುತ್ತೀಯೆ. ನನಗೆ ಈಗ ಹೇಳು: ಡೈವೋರ್ಸ್ (ದಾಂಪತ್ಯ ವಿಚ್ಛೇದನ) ಕೇಸುಗಳಲ್ಲಿ ಜಡ್ಜಿ ಆ ಜಗಳವಾಡಿ ಬಂದ ದಂಪತಿಗಳಿಗೆ ರಾಜಿ ಮಾಡಿಸುವುದಕ್ಕೆ ಮೊದಲು ಪ್ರಯತ್ನ ಪಡುತ್ತಾನೆಯೋ ಇಲ್ಲವೋ ? ಅವರಿಗೆ ಬುದ್ಧಿ ಹೇಳಿ ಕಾಲಾವಕಾಶ ಕೊಟ್ಟು ಆ ಸಂಸಾರವನ್ನು ಕೂಡಿಸುವುದಕ್ಕೆ ತನ್ನ ಕೈಯಲ್ಲಾದ ಪ್ರಯತ್ನಗಳನ್ನು ಮಾಡುತ್ತಾನೆಯೋ ಇಲ್ಲವೋ? ಕೇಸ್ ಬಂದಕೂಡಲೇ ಡೈವೊರ್ಸಿಗೆ ಮಂಜೂರಾತಿ ಕೊಟ್ಟು ಬಿಡುತ್ತಾನೆಯೆ ? '

ನಾಗರಾಜ ಉತ್ತರವನ್ನೇನೂ ಕೊಡಲಿಲ್ಲ. ಅವನ ಮುಖದ ಕಳೆ ಸ್ವಲ್ಪ ಇಳಿದು ಹೋಯಿತು. ಯಜಮಾನಿ ಕೃಷ್ಣರಾಯರನ್ನು ಅಸಂತುಷ್ಟ ದೃಷ್ಟಿಯಿಂದ ನೋಡ ತೊಡಗಿದಳು. ಕೃಷ್ಣರಾಯರು ಮಾತನ್ನು ಮುಂದುವರಿಸುತ್ತ,

'ನೋಡಪ್ಪ ನಾಗರಾಜ ! ರಾಜೀ ಮನೋಭಾವ ಯಾವಾಗಲೂ ಒಳ್ಳೆಯದು. ಅದು ಎಲ್ಲೆಲ್ಲಿಯೂ ಮುಖ್ಯ. ನಮ್ಮ ಶತ್ರುಗಳೊಡನೆ

ಕೂಡ ರಾಜಿ ಮಾಡಿಕೊಳ್ಳಬೇಕಾಗುತ್ತದೆ. ಇನ್ನು ಮಾವ-ಅಳಿಯ, ಗಂಡ-ಹೆಂಡತಿ, ಅಣ್ಣ-ತಮ್ಮ ಇಂಥ ಅತಿ ಸಮೀಪ ಸಂಬಂಧಗಳಲ್ಲಿ ಒಂದೇಟು ಎರಡು ತುಂಡಿನ ವ್ಯವಹಾರವನ್ನು ಎಂದಿಗೂ ನಡಸಬಾರದು. ನಾವು ಹಿರಿಯರಾದವರು ರಾಜಿಗೆ ಪ್ರಯತ್ನಪಡುವುದು ಒಳ್ಳೆಯ ದಲ್ಲವೇ? ಅದರಲ್ಲಿಯೂ ನಮ್ಮ ಮಗಳ ಹಿತವನ್ನು ಸಾಧಿಸುವುದಕ್ಕೆ ಎಷ್ಟು ದೂರ ಬೇಕಾದರೂ ಹೋಗುವುದು ಒಳ್ಳೆಯದಲ್ಲವೆ? ಅವನು ಹೊಡೆದನೋ ಬಡಿದನೋ ಗಂಡ ಹೆಂಡತಿ ರಾಜಿಯಾಗಿದ್ದರು, ಕಹಿ ಪ್ರಕರಣಗಳನ್ನು ಮರೆತಿದ್ದರು. ನಿನ್ನ ತಾಯಿ ಮೊದಲು ಹದ ಕೆಡಿಸಿ ಬಿಟ್ಟಳು. ನೀನು ನಿನ್ನ ಜಂಬ ತೋರಿಸುವುದಕ್ಕೆ ಹೋಗಿ ನಿನ್ನ ಭಾವನನ್ನು ಬ್ರೂಟ್ ಎಂದು ಮುಂತಾಗಿ ಆಡಿ ಚಾಟಿಯಿಂದ ಹೊಡೆ ಯುತ್ತೇನೆ, ಸರೋಜಳಿಗೆ ಬೇರೆ ಮದುವೆ ಮಾಡಿಸುತ್ತೇನೆ ಎಂದು ಹೇಳಿದೆ. ಆ ಮಾತುಗಳನ್ನೆಲ್ಲ ಆಡದೇ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಅವನು ಅದೇ ಮಾತನ್ನು ಎತ್ತಿಕೊಂಡು ಹಂಗಿಸುತ್ತ ಹೋದ.'

'ನೀನು ಏನಾದರೂ ಹೇಳಪ್ಪ. ನನ್ನ ತಂಗಿಯ ಕಷ್ಟ ನೋಡಿ ದುಃಖ ಬಂತು, ಭಾವನ ಮೇಲೆ ಕೋಪ ಬಂತು. ಆಡಿಬಿಟ್ಟೆ.'

'ನಿನ್ನ ಭಾವ ಈಗ ಹಟಮಾಡಿಕೊಂಡು ಬಾರದೇ ಹೋದರೆ, ನಮ್ಮ ಮಾತು ಕೇಳದೆ ಹೋದರೆ ಆಗ ಸರೋಜಳಿಗೆ ಹೆಚ್ಚು ಕಷ್ಟ ಆಗುವುದಿಲ್ಲವೆ? ನಮಗೂ ವಯಸ್ಸಾಗುತ್ತ ಬಂತು. ಗಂಡು ಹುಡುಗರು ಪೋಲಿಬೀಳದೆ ಅವರವರ ಪಾಡಿಗೆ ಓದಿ ಪ್ಯಾಸ್‌ಮಾಡಿ ಸಂಪಾದನೆ ಮಾಡುತ್ತಿದ್ದರೆ ನಮ್ಮ ಜವಾಬ್ದಾರಿ ಇಳಿಯಿತಪ್ಪ ಎಂದು ನೆಮ್ಮದಿಯಿಂದ ನಾವಿರಬಹುದು. ಹೆಣ್ಣುಮಕ್ಕಳು ತಂತಮ್ಮ ಗಂಡಂದಿರ ಮನೆಯಲ್ಲಿ ಸಂಸಾರ ಮಾಡಿಕೊಂಡು ಇದ್ದುಬಿಟ್ಟರೆ ನಾವೂ ನಿಶ್ಚಿಂತೆಯಾಗಿದ್ದು ಬಿಡಬಹುದು. ಬೇಕಾದಾಗ ಮಕ್ಕಳೂ ಬರಲಿ, ಮೊಮ್ಮಕ್ಕಳೂ ಬರಲಿ, ನಾಲ್ಕುದಿನ ಇರಲಿ, ಮತ್ತೆ ತಂತಮ್ಮ ಮನೆಗಳಿಗೆ ಹೋಗಲಿ. ಅದು ಸಂತೋಷ, ಸುಖ.'

'ನಾನು ಬಯಸುವುದೂ ಅದೇ!' ಎಂದು ಯಜಮಾನಿ ಮಾತು ಜೋಡಿಸಿದಳು.

'ಈಗ ನನಗೆ ಸರೋಜಳ ಚಿಂತೆಯೇ ದೊಡ್ಡ ಚಿಂತೆ ಆಗಿ ಹೋಯಿತು. ಈ ಪ್ರಕರಣ ಸುಲಭದಲ್ಲಿ ಪರಿಹಾರವಾಗುವುದಿಲ್ಲ. ಆ ಬೀಗಿತ್ತಿ ದೊಡ್ಡ ಹಟಮಾರಿ. ಆಕೆಗೆ ಈ ಮದುವೆಯೇ ಇಷ್ಟವಿರಲಿಲ್ಲ. ಈಗ ತನ್ನ ಮಗ ಇಲ್ಲಿಂದ ಮುನಿಸಿಕೊಂಡು ಅಪಮಾನಪಟ್ಟುಕೊಂಡು ಹಿಂದಿರುಗಿದ್ದು ಅವಳಿಗೆ ಪರಮ ಲಾಭ. ಸೀತಾರಾಮು ಯೋಗ್ಯ. ಆ ಹುಡುಗನಿಗೂ ಈಗ ಪೇಚಾಟ. ಅವನು ನಾಳೆ ತಾಯಿಯ ಮಾತನ್ನು ನಡಸಿಯಾನೇ ಹೊರತು, ನನ್ನ ಮಾತನ್ನು ಕೂಡ ತಳ್ಳಿಹಾಕಿ ಬಿಡಬಹುದು. ಏನು ಮಾಡಲಿ? ಸರೋಜ ನಾಳೆ ಎಲ್ಲಿ ನಿಲ್ಲಬೇಕು? ನಾವೇನು ಶಾಶ್ವತ.'

'ಸರೋಜಳ ಚಿಂತೆ ನಿನಗೆ ಬೇಡಪ್ಪ! ಅವಳ ಜವಾಬ್ದಾರಿ, ಅವಳ ಹೊಟ್ಟೆಯಲ್ಲಿ ಹುಟ್ಟುವ ಮಗನ ಜವಾಬ್ದಾರಿ ನನಗಿರಲಿ. ನೀನು ನಿಶ್ಚಿಂತೆಯಾಗಿರು. ನನ್ನ ಮನೆಯಲ್ಲಿ ಅವಳು ಸುಖವಾಗಿರಬಹುದು.'

'ಅಲ್ಲೇ ನೋಡು ನಾಗರಾಜ, ಪ್ರಪಂಚ ತಿಳಿಯಬೇಕು ಎನ್ನುವುದು. ಗಂಡನ್ನ ಬಿಟ್ಟವಳು ಎಂದು ಹತ್ತು ಜನರ ಬಾಯಲ್ಲಿ ಆಡಿಸಿಕೊಳ್ಳುತ್ತ ಅವಳು ನಿನ್ನ ಮನೆಯಲ್ಲಿರುವುದೇ? ಅವಳಿಗೂ ತನ್ನ ಗಂಡ, ಮಕ್ಕಳು, ತನ್ನ ಸಂಸಾರ ಎಂದು ಅಭಿಮಾನ ಇರುವುದಿಲ್ಲವೆ? ನೀನೇನೋ ಅವಳನ್ನು ಅಕ್ಕರೆಯಿಂದ ನೋಡಿಕೊಳ್ಳುವ ಅಣ್ಣ. ಎಲ್ಲವೂ ಸರಿಯೆ. ನಾಳೆ ನಿನಗೂ ಒಂದು ಸಂಸಾರ ಗಂಟು ಬೀಳುತ್ತದೆಯಲ್ಲ. ನಿನ್ನ ಹೆಂಡತಿ ಸರೋಜಳನ್ನು ಆದರಿಸುತ್ತಾಳೆ ಎಂಬುದಕ್ಕೆ ಭರವಸೆ ಏನು? ನಿನಗೂ ನಾಲ್ಕು ಮಕ್ಕಳಾಗಿ ಸಂಸಾರ ದೊಡ್ಡದಾದರೆ ನಾಳೆ ನಿನ್ನ ಬಾಯಿಂದಲೇ ಒಂದು ಒಡಕು ಮಾತು ಬರಬಹುದು. ನಿನ್ನ ಹೆಂಡತಿ– ಯಜಮಾನಿ– ಏನನ್ನಾದರೂ ಅನ್ನಬಹುದು. ಆಳುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ಚಂದ್ರಮತಿ ಆ ಬ್ರಾಹ್ಮಣನ ಮನೆಯಲ್ಲಿದ್ದ ಹಾಗೆ ಸರೋಜ ನಿನ್ನ ಮನೆಯಲ್ಲಿರಬೇಕಾದ ಸ್ಥಿತಿ ಬಂದರೆ ಏನು ಮಾಡುವುದು? ನಿನಗೆ ಅಕ್ಕರೆಯಿದ್ದರೂ ನಿನ್ನ ಹೆಂಡತಿಯ ಇಷ್ಟಕ್ಕೆ ವಿರೋಧವಾಗಿ ನೀನೇನನ್ನೂ ಮಾಡುವುದಕ್ಕಾಗುವುದಿಲ್ಲ. ಯಾವುದಾದರೂ ನೆಪದಲ್ಲಿ ಹೆಂಗಸರು ಕುಕ್ಕಿ ಆಡಿಬಿಡುತ್ತಾರೆ. ನಮ್ಮ

ಮನೆಯ ಸಂಸಾರವನ್ನೇ ನೋಡು. ನನಗೆ ತಮ್ಮಂದಿರಲ್ಲವೇ ? ತಂಗಿ ಯರಿಬ್ಬರಿಲ್ಲವೇ ? ಅವರೇನಾದರೂ ಇಲ್ಲಿ ಹೆಚ್ಚಾಗಿ ಸುಳಿಯುತ್ತಾರೆಯೆ ? ನಿನ್ನ ತಾಯಿ ಅವರಿಗೆ ಅವಕಾಶ ಕೊಡುತ್ತಾಳೆಯೆ ? ನನ್ನ ತಂಗಿ, – ನನ್ನ ಮಗನನ್ನು ಇಂಟರ್ ಕಾಲೇಜಿಗೆ ಸೇರಿಸಬೇಕು. ನಿನ್ನ ಮನೆಯಲ್ಲಿಟ್ಟು ಕೊಂಡಿರು ಕಿಟ್ಟಣ್ಣ–ಎಂದು ಕೇಳಿಕೊಂಡಳು. ನಿನ್ನ ತಾಯಿ ಅದನ್ನು ಸಾಗಗೊಡಿಸಿದಳೆ? ಒಂದು ರಾದ್ಧಾಂತ ಮಾಡಿದಳೋ ಹಾಗೆ ಮಾಡಿದಳು. ನನ್ನ ಮಾತು ಏನು ನಡೆಯಿತು ? ನಾಳೆ ನಿನ್ನ ಮಾತೂ ಹಾಗೆಯೇ.'

'ಎಲ್ಲಿಂದ ಎಲ್ಲಿಗೆ ಮಾತು ತಿರುಗಿಸಿದಿರಿ ? ನಿಮ್ಮ ತಂಗಿಯರು ನಿಮ್ಮ ತಮ್ಮಂದಿರು, ನಿಮ್ಮ ಬಳಗ – ನಾನೇನು ಬೇಡವೆಂದೆನೆ ? ಬೇಕಾದಾಗ ಕರಸಿಕೊಳ್ಳುತ್ತೀರಿ, ಮನೆಯೆಲ್ಲ ಲೂಟಿ ಮಾಡಿಸುತ್ತೀರಿ, ಮತ್ತೆ ನನ್ನನ್ನೇ ಅನ್ನುತ್ತೀರಿ. ನಿಮ್ಮ ತಂಗಿಯ ಮಗ – ಶುದ್ಧ ಪೋಕರಿ, ಅಂಕೆಯಿಲ್ಲ ಶಂಕೆಯಿಲ್ಲ - ಅವನು ಇಲ್ಲಿ ಬಂದು ಸೇರಿಕೊಂಡು ನಮ್ಮ ಹುಡುಗರು ಕೆಟ್ಟು ಹೋದರೆ ನಾನು ತಾನೇ ಅಳಬೇಕು.'

'ಕೇಳಿದೆಯೇನಪ್ಪ ನಾಗರಾಜ ! ನಾಳೆ ನಿನ್ನ ಹೆಂಡತಿಯೂ ಸರೋಜಳ ವಿಚಾರದಲ್ಲಿ, ಅವಳ ಮಗನ ವಿಚಾರದಲ್ಲಿ ನಿನಗೆ ಕರ್ಟನ್ ಲೆಕ್ಚರ್ (Curtain lecture) ಕೊಡುವ ಮಾದರಿ ! ನೋಡಿಕೊಳ್ಳಪ್ಪ. ಇದು ಪ್ರಪಂಚ !'

'ಒಳ್ಳೇ ಕಗ್ಗಂಟಿನ ಸಮಸ್ಯೆ ಮುಂದಿಟ್ಟೆಯಲ್ಲ !' ಎಂದು ನಾಗರಾಜ ಉದ್ಗಾರ ತೆಗೆದು ಒಂದು ನಿಮಿಷ ಮೌನವಾಗಿದ್ದನು.

'ಈಗ ಹೇಳು. ಏನಾದರೂ ಪ್ರಯತ್ನಮಾಡಿ ಸರೋಜಳನ್ನ ಅವಳ ಗಂಡನೊಡನೆ ಸೇರಿಸುವುದೇ ಮೇಲಲ್ಲವೆ ? ಅವಳು ತನ್ನ ಪಾಡಿಗೆ ತನ್ನ ಗಂಡನೊಡನೆ ಸಂಸಾರಮಾಡಿಕೊಂಡು ಇರುವಂತಾದರೆ ನಮ್ಮೆ ಲ್ಲರಿಗೂ ನಿಶ್ಚಿಂತೆ, ಸಂತೋಷ ಆಗುವುದಿಲ್ಲವೇ ?'

'ಪ್ರಯತ್ನಮಾಡಿ, ಬೇಡವೆನ್ನುವುದಿಲ್ಲ.'

'ನೀನು ಸಹ ಪ್ರಯತ್ನ ಮಾಡಬೇಕು ನಾಗರಾಜ ! ಈಗ ನಾವೆಲ್ಲರೂ ಪ್ರಯತ್ನಪಟ್ಟು ಸೀತಾರಾಮುವನ್ನು ಸಮಾಧಾನಪಡಿಸಿ ಆ ಸಂಸಾರವನ್ನು ಕುದುರಿಸಬೇಕು.'

'ಈಗ ನಾನು ತುಮಕೂರಿಗೆ ಹೋಗಿ ಭಾವನ ಕ್ಷಮೆ ಬೇಡಿ ಇಲ್ಲಿಗೆ ಕರೆತರಬೇಕು ಎಂದು ಹೇಳುತ್ತೀಯೇನು ?'

ಅಸಮಾಧಾನದ ಆರ್ಧ ಪ್ರತಿಭಟನೆಯ ಧ್ವನಿಯಾಗಿತ್ತು.

'ನಾನು ಹಾಗೆ ಹೇಳುವುದಿಲ್ಲ. ನೀನು ಈಗ ತುಮಕೂರಿಗೆ ಹೋಗಲೂ ಬಾರದು. ಹಿರಿಯರು ನಾವುಗಳಾರೂ ಇಲ್ಲದೆ ಒಬ್ಬರನ್ನೊಬ್ಬರು ನೀವು ಸಂಧಿಸಲೂ ಬಾರದು. ಹೆಚ್ಚುಕಡಮೆ ಸಮವಯಸ್ಸಿನವರು ನೀವು. ನಿನಗಿಂತ ಅವನು ಮೂರುವರ್ಷ ದೊಡ್ಡವನು ಅಷ್ಟೇ! ನಿನಗೆ ಸೈರಣೆ ಕಡಮೆ, ಜಂಬ ಹೆಚ್ಚು. ಅವನು ಸರಸಿಯಲ್ಲ. ಆದ್ದರಿಂದ ನೀವಿಬ್ಬರೂ ಈಗ ಸಂಧಿಸಿದರೆ ರಾಜಿಗೆ ಬದಲು ಜಗಳವೇ ಆಗುತ್ತದೆ. ಸಮಯ ಬಂದಾಗ ನಿನಗೆ ತಿಳಿಸುತ್ತೇನೆ. ನೀನು ಸ್ವಲ್ಪ ತಾಳ್ಮೆಯಿಂದ ನಡೆದುಕೊಳ್ಳಬೇಕಪ್ಪ. ಅಷ್ಟೇ ನೋಡು.'

ನಾಗರಾಜನ ಮುಖ ಗಂಭೀರವಾಯಿತು. ಅವನು ಕಳವಳದಿಂದ ಸರೋಜಳ ಮುಖವನ್ನು ನೋಡಿ, 'ಸರೋಜ! ನೀನು ನನಗೆ ತಮ್ಮನಾಗಿ ಹುಟ್ಟದೆ ತಂಗಿಯಾಗಿ ಏಕೆ ಹುಟ್ಟಿದೆಯೋ?' ಎಂದನು.

ಕೃಷ್ಣರಾಯರು, 'ತಂಗಿಯಾಗಿ ಹುಟ್ಟಿದರೇನು? ತಮ್ಮನಾಗಿ ಹುಟ್ಟಿದರೇನು? ಒಬ್ಬೊಬ್ಬರದು ಒಂದೊಂದು ರೀತಿಯ ಸಮಸ್ಯೆ. ನಾನು ನಿನ್ನೆ ಬಂದಿದ್ದ ಹೆಣ್ಣಿನವರ ವಿಚಾರ ಮಾತನಾಡೋಣ, ನಿನ್ನ ಅಭಿಪ್ರಾಯ ತಿಳಿದುಕೊಂಡು ಅವರಿಗೇನಾದರೂ ಕಾಗದ ಬರೆದು ಹಾಕೋಣ ಎಂದು ಸಂತೋಷದಿಂದ ವಾಪಸುಬಂದರೆ ಒಂದೇ ದಿನದಲ್ಲಿ ಇಷ್ಟೊಂದು ಅವಾಂತರ ಮಾಡಿಟ್ಟಿದ್ದೀರಿ. ನೀನು ಸಿವಿಲ್ ಸರ್ವಿಸ್ ಪರೀಕ್ಷೆಗೆ ಕಟ್ಟಿರುವವನು, ಒಂದೇ ಸಮನೆ ಕಷ್ಟಪಟ್ಟು ಓದಬೇಕಾದ ಕಾಲದಲ್ಲಿ ಮನಶ್ಶಾಂತಿಯನ್ನು ಕೆಡಿಸಿಕೊಂಡು ಪೇಚಾಡುತ್ತಿದ್ದೀಯೆ. ಸರೋಜ ಬಸಿರಿ. ಹುಟ್ಟುವ ಮಗುವಿಗೆ ವಕ್ರಗಳೇನೂ ಆಗದಂತೆ ಸಂತೋಷವಾಗಿ ತವರುಮನೆಯಲ್ಲಿ ಓಡಾಡಿಕೊಂಡಿದ್ದು ಸುಖಪ್ರಸವ ಆಗುವ ಬದಲು ಸಂಕಟದಿಂದ ನರಳುವಂತೆ ಆಗಿ ಹೋಯಿತು. ಹೋಗಲಿ, ಆ ಮಾತುಗಳು ಬೇಡ. ಈಗ

ಅವರಿಗೇನು ಕಾಗದ ಬರೆಯಲಿ? ಹುಡುಗಿಯನ್ನು ನೀನು ಒಪ್ಪಿದೆಯೋ ಹೇಗೆ?'

'ಜಾತಕಗಳನ್ನು ತೋರಿಸಬೇಕು ಎಂದು ಬರೆದುಹಾಕಿ' ಎಂದು ಯಜಮಾನಿ ಹೇಳಿದಳು.

'ಹಾಗಾದರೆ ನಾಗರಾಜನೂ ನೀನೂ ಆ ಹೆಣ್ಣನ್ನು ಒಪ್ಪಿದ್ದೀರಿ. ಆಕ್ಷೇಪಣೆ ಏನೂ ಇಲ್ಲ? ಜಾತಕಗಳು ಕೂಡಿಬಂದರೆ ಮುಂದಿನ ಮಾತುಗಳನ್ನು ಆಡೋಣ – ಎಂದು ಅವರಿಗೆ ತಿಳಿಸಲೆ?'

'ನೀನು ಅವನ್ನೆಲ್ಲ ಬರೆಯಬೇಡಪ್ಪ. ನಾನು ಏನನ್ನೂ ಈಗಲೇ ಹೇಳಲಾರೆ.'

'ಹಾಗೆಂದರೇನು ನಾಗರಾಜ! ಮದುವೆಯಿಲ್ಲದೆ ಸಂನ್ಯಾಸಿಯಾಗಿರುತ್ತೀಯಾ ನೀನು? ಹುಡುಗಿಯನ್ನು ನೀನು ಒಪ್ಪಿಲ್ಲದಿದ್ದರೆ ಹಾಗೆ ಹೇಳಿಬಿಡು. ಬೇರೆ ಕಡೆ ನಿಷ್ಕರ್ಷೆ ಮಾಡೋಣ. ನಿನ್ನೆಯ ರಾತ್ರಿ ಆ ಹುಡುಗಿಯನ್ನು ಒಪ್ಪಿದಂತೆ ಮಾತನಾಡಿದೆ. ನಿನ್ನ ಪರೀಕ್ಷೆಯ ರಿಸಲ್ಟ್ ಬರುತ್ತಲೂ ಮುಹೂರ್ತ ಗೊತ್ತುಮಾಡಬಹುದು ಎಂದು ಹೇಳಿದೆಯಲ್ಲ. ಈಗೇತಕ್ಕೆ ಬದಲಾಯಿಸಿಬಿಟ್ಟೆ?, ಎಂದು ತುಳಸಾಬಾಯಿ ಕೇಳಿದಳು.

'ಇಲ್ಲಿ ನಿಮಗೆ ಅನುಕೂಲವಾಗುವ ಹಾಗಿಲ್ಲ, ನೀವು ಬೇರೆ ಕಡೆ ಪ್ರಯತ್ನಪಟ್ಟುಕೊಳ್ಳಿ – ಎಂದು ಅವರಿಗೆ ಬರೆದು ಹಾಕಲೇನಪ್ಪ? ಅವರನ್ನು ಅನಿಶ್ಚಯದಲ್ಲಿಡಬಾರದು.'

'ಬರೆದು ಹಾಕು.'

ನಾಗರಾಜ ಸರೋಜಳನ್ನು ಕರುಣೆಯಿಂದ ದೃಷ್ಟಿಸುತ್ತ ಗಂಭೀರ ಮುಖಭಾವದೊಡನೆ ತನ್ನ ಕೊಟಡಿಗೆ ಎದ್ದುಹೋದನು. ಹಿಂದೆಯೇ ಸರೋಜಳೂ ಅವನ ಕೊಟಡಿಗೆ ಹೋದಳು.

ಯಜಮಾನಿ, 'ಎಲ್ಲ ನೀವು ಮಾಡಿದ್ದು! ನಿನ್ನೆ ರಾತ್ರಿ ಹುಡುಗ ನಗು ನಗುತ್ತ ಮದುವೆಗೆ ಒಪ್ಪಿದ್ದ. ಈ ದಿನ ಮದುವೆಯೇ ಬೇಡ ಗೊಡ್ಡು ಬ್ರಹ್ಮಚಾರಿಯಾಗಿರುತ್ತೇನೆ ಎಂದು ಮನಸ್ಸು ಬದಲಾಯಿಸಿದ. ಅವನ ಮನಸ್ಸನ್ನೆಲ್ಲ ಕಲಕಿಬಿಟ್ಟಿರಿ. ನಗು ನಗುತ್ತಾ ಇದ್ದ ಮುಖ

ಅಳುಮುಖ ಆಗಿಹೋಯಿತು. ವಯಸ್ಸು ಹುಡುಗ! ನಾಳೆ ಅಸಿಸ್ಟೆಂಟ್ ಕಮಿಷನರ್ ಆಗಿ ನಿಮ್ಮನ್ನು ಮೀರಿಸುವ ಮಗ!– ಅವನೊಡನೆ ನಡೆದುಕೊಳ್ಳುವ ರೀತಿಯೇ ನಿಮಗೆ ಗೊತ್ತಿಲ್ಲ. ಇಂಥ ಗಂಡನ್ನ ಕಟ್ಟಿಕೊಂಡ ನಾನು ಏಗಬೇಕಾಗಿದೆ' ಎಂದು ಅಸಮಾಧಾನದಿಂದ ಹೇಳಿದಳು.

'ನನ್ನನ್ನು ಕಟ್ಟಿಕೊಂಡು ಏಗಬೇಡ. ನಿನ್ನ ಮಗ ನಿನಗೂ ಎರಡನೆಯ ಮದುವೆ ಮಾಡಿಸುತ್ತಾನೆ! ಬೇಕಾದರೆ ನಾನೂ ಆ ಮದುವೆಗೆ ಬರುತ್ತೇನೆ!'

ಯಜಮಾನಿ ಕೊಟಡಿಯಿಂದ ಎದ್ದು ಹೊರಟುಹೋದಳು.

## ೫. ರಾಮಣ್ಣನ ಬುದ್ಧಿವಾದ

ವಾಲ್ಮೀಕಿಯ ಸೀತಾರಾಮನಿಗೆ ಕೌಸಲ್ಯೆಗೆ ಬದಲು ಕಾವೇರಮ್ಮ ನಂಥವಳು ತಾಯಿಯಾಗಿದ್ದಿದ್ದರೆ ಆ ಸೀತಾರಾಮ ಹೇಗೆ ನಡೆದು ಕೊಳ್ಳು ತ್ತಿದ್ದನು ? ಎಲ್ಲ ಆದರ್ಶ ತಾಯಿಯರು, ಆದರ್ಶ ಪುತ್ರರು, ಆದರ್ಶ ಅತ್ತೆಯರು ನಮ್ಮ ಮಹಾಕಾವ್ಯಗಳಲ್ಲಿ ತುಂಬಿದ್ದಾರೆ. ಲೋಕದ ತುಂಬ ಅಂಥ ಆದರ್ಶ ವ್ಯಕ್ತಿಗಳೇ ಇರುತ್ತಾರೆಯೆ ?

ಮಂಗಳವಾರ ಸಾಯಂಕಾಲ ಸೀತಾರಾಮು ತುಮಕೂರಿಗೆ ವಾಪಸು ಬಂದನೆಂದು ಹಿಂದೆ ಹೇಳಿದೆಯಷ್ಟೆ. ಗುರುವಾರದ ಟಪ್ಪಾಲಿನಲ್ಲಿ ಅವನಿಗೆ ಎರಡು ಕಾಗದಗಳು ಬಂದುವು. ಒಂದನ್ನು ಸರೋಜ ಬರೆದಿದ್ದಳು, ಎರಡನೆಯದನ್ನು ಕೃಷ್ಣರಾಯರು ಬರೆದಿದ್ದರು. ಕೃಷ್ಣ ರಾಯರು ತಮ್ಮ ಕಾಗದದಲ್ಲಿ, ತಾವು ಊರಲ್ಲಿಲ್ಲದಾಗ ಮನೆಯಲ್ಲಿ ನಡೆದ ವಿಷಾದ ಘಟನೆಗಳಿಗಾಗಿ ಬಹಳ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ, ಎಲ್ಲರ ಪರವಾಗಿ ತಾವು ಕ್ಷಮಾಪಣೆ ಕೇಳಿಕೊಳ್ಳುವುದಾಗಿ ತಿಳಿಸಿದ್ದರು. ಆ ಘಟನೆಗಳನ್ನೆಲ್ಲ ಮರೆತುಬಿಟ್ಟು ಒಮ್ಮೆ ಶಿವಮೊಗ್ಗಕ್ಕೆ ಬರಬೇಕೆಂದೂ, ತಾವುಕೂಡ ತುಮಕೂರಿಗೆ ಬರುವ ಯೋಚನೆ ಮಾಡುತ್ತಿರುವುದಾಗಿಯೂ ಅವರು ತಿಳಿಸಿದ್ದರು. ಸರೋಜ ತನ್ನ ಕಾಗದದಲ್ಲಿ,– ತಾನು ಸಿನೀಮಾ ನೋಡುವುದಕ್ಕೆ ಹೋದದ್ದು ದೊಡ್ಡ ತಪ್ಪೆಂದೂ ಮಾರನೆಯ ದಿನ ರಾತ್ರಿ ಹತ್ತು ಗಂಟೆಯವರೆಗೂ ಇತರರೊಡನೆ ಮದುವೆಯ ಮಾತುಗಳನ್ನಾಡುತ್ತ ತಾನು ನಿಂತುಬಿಟ್ಟು ಕೊಟಡಿಯಲ್ಲಿ ಗಂಡನನ್ನು ಕಾಯಿಸಿದ್ದು ದೊಡ್ಡ ತಪ್ಪೆಂದೂ ಬರೆದಿದ್ದಳು. ಏಟುಗಳ ಪ್ರಕರಣದಲ್ಲಿ ತಾನು ಯಾವ ಪಂಚಾಯತಿಯನ್ನೂ ಮಾಡಲಿಲ್ಲವೆಂಬುದನ್ನು ಎಲ್ಲ ವಿವರಗಳೊಡನೆ ತಿಳಿಸಿದ್ದಳು. ನಾಲ್ಕಾರು ಕಡೆ, 'ದಯವಿಟ್ಟು ಕ್ಷಮಿಸಬೇಕು,' 'ಕೋಪ ಮಾಡಿಕೊಳ್ಳಬಾರದು,' 'ಕೈಹಿಡಿದ ಹೆಣ್ಣಿನ ಮೇಲೆ ಕೃಪೆ ತೋರ ಬೇಕು,' 'ಬಸಿರಿನ ಭಾರಕ್ಕಿಂತ ಹೃದಯದ ಭಾರ ಹೆಚ್ಚಾಗಿದೆ' ಎಂದು ಮುಂತಾಗಿ ಒಕ್ಕಣಿಸಿದ್ದಳು. ಕಾಗದದಲ್ಲಿ ಅಲ್ಲಲ್ಲಿ ಕಣ್ಣೀರು ಬಿದ್ದಿದ್ದ ಕಲೆಗಳಿದ್ದುವು. ಕೊನೆಯಲ್ಲಿ, 'ತಮ್ಮ ಪ್ರಿಯತಮೆ ಸರೋಜ' ಎಂದು

ಮೊದಲು ಬರೆದಿದ್ದುದನ್ನು ಹೊಡೆದು ಹಾಕಿ, 'ತಮ್ಮ ಚರಣದಾಸಿ ಸರೋಜ' ಎಂದು ಬರೆದಿತ್ತು. ಸೀತಾರಾಮು ತನ್ನ ಮಾವನ ಕಾಗದವನ್ನು ಒಂದು ಬಾರಿ ಮಾತ್ರ ಓದಿ ಜೇಬಿನಲ್ಲಿಟ್ಟುಕೊಂಡನು; ಹೆಂಡತಿಯ ಕಾಗದವನ್ನು ಎರಡು ಮೂರು ಬಾರಿ ಓದಿ ಆಲೋಚನಾಮಗ್ನನಾದನು.

ಆ ವೇಳೆಗೆ ಅವನ ಸ್ನೇಹಿತನಾದ ರಾಮಣ್ಣ ಅವನ ಕೊಟಡಿಗೆ ಬಂದು ಚಾಪೆಯ ಮೇಲೆ ಕುಳಿತುಕೊಂಡನು. ರಾಮಣ್ಣ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಒಬ್ಬ ಗುಮಾಸ್ತೆ. ಲೌಕಿಕಜ್ಞಾನ ಚೆನ್ನಾಗಿದ್ದ ಮನುಷ್ಯ. 'ಏನೋ ಕಾಗದ ಬಂದ ಹಾಗಿದೆಯಲ್ಲ. ಶಿವಮೊಗ್ಗದಿಂದ ಬಂದಿರಬೇಕು. ಹೌದೋ?' ಎಂದು ಅವನು ಕೇಳಿದನು.

'ಹೌದು. ಶಿವಮೊಗ್ಗದಿಂದ ಬಂದದ್ದೆ. ಬೇಕಾದರೆ ಓದಿ ನೋಡಿಕೋ' ಎಂದು ಕಾಗದವನ್ನು ಸೀತಾರಾಮು ಚಾಚಿಹಿಡಿದನು.

'ನಿನ್ನ ಮಾವನ ಕಾಗದವಾದರೆ ನಾನು ಓದಬಹುದು. ನಿನ್ನ ಹೆಂಡತಿಯ ಕಾಗದವಾಗಿದ್ದರೆ ನಾನು ಓದಬಾರದು. ನೀನು ಕೊಡಲೂ ಬಾರದು.'

'ಅದರಲ್ಲಿ ಅಂತಹ ಪ್ರೇಮರಹಸ್ಯಗಳಿಲ್ಲ. ಅದು ಪ್ರೇಮ ಪತ್ರವಲ್ಲ.'

'ಆದರೂ ನಾನು ನೋಡತಕ್ಕದ್ದಲ್ಲ. ಹೆಂಡತಿ ಮತ್ತು ಗಂಡ– ಇವರ ಮಧ್ಯೆ ಓಡಾಡುವ ಪತ್ರಗಳಲ್ಲಿ ಏನಿದ್ದರೂ ಅವು ಪ್ರೇಮಪತ್ರಗಳೇ. ಅವನ್ನು ಇತರರಿಗೆ ತೋರಿಸಬಾರದು. ಇತರರು ಓದಲೂ ಬಾರದು. ಬೇಕಾಗಿದ್ದರೆ ಸಾರಾಂಶ ತಿಳಿಸು. ಈ ಕಿವಿಯಲ್ಲಿ ಕೇಳಿ ಆ ಕಿವಿಯಲ್ಲಿ ಬಿಟ್ಟು ಬಿಡುತ್ತೇನೆ.'

'ನಿನಗೆ ನಾನು ತಿಳಿಸಿದ್ದ ವಿಚಾರವೇ! ನಾನು ತಪ್ಪು ತೀರ್ಮಾನಕ್ಕೆ ಬಂದಿದ್ದೆ. ಕಣ್ಣಿಗೆ ಕಂಡದ್ದು ಕಿವಿಗೆ ಕೇಳಿಸಿದ್ದು – ಎರಡನ್ನೂ ಜೋಡಿಸಿ ತೀರ್ಮಾನಕ್ಕೆ ಬಂದಿದ್ದೆ. ಆಗ ಸಂದರ್ಭ ಹಾಗಿತ್ತು. ವಿಚಾರ ಮಾಡುವುದಕ್ಕೆ ಅವಕಾಶವಿರಲಿಲ್ಲ, ಬುದ್ಧಿಗೂ ಹೊಳೆಯಲಿಲ್ಲ.'

'ನಾನು ನಿನಗೆ ಹೇಳಿದ್ದೇನು? ಜ್ಞಾಪಿಸಿಕೋ.'

‘ ಆದರೂ ಮನಸ್ಸಿನಲ್ಲಿ ಕೋಪ ಇನ್ನೂ ಅಡಗಿಲ್ಲವಲ್ಲ. ಅಕಾರಣವೋ ಸಕಾರಣವೋ ಕೋಪ ತಲೆಯೆತ್ತುತ್ತಲೇ ಇದೆ. ಮಾವನವರೂ ಕಾಗದ ಬರೆದಿದ್ದಾರೆ. ಅವರು ದೊಡ್ಡ ಮನುಷ್ಯರು. ನನ್ನ ಕ್ಷಮಾಯಾಚನೆಮಾಡಿದ್ದಾರೆ ! ’

‘ ಈಗ ಈ ಕಾಗದಗಳಿಗೆ ಜವಾಬು ಕೊಡುತ್ತೀಯೋ ಇಲ್ಲವೋ ? ’

‘ ನಾನು ಜವಾಬುಗಳನ್ನು ಕೊಡುವುದಿಲ್ಲವೆಂದು ನಿರ್ಧಾರ ಮಾಡಿಕೊಂಡಿದ್ದೇನೆ.’

‘ ಹೆಂಡತಿಯ ಕಾಗದಕ್ಕೆ ? ’

‘ ಅದಕ್ಕೂ ಸಹ. ’

‘ ಹೀಗೆ ನೀನು ಮನಸ್ತಾಪ ಬೆಳಸುವುದು ಸರಿಯಲ್ಲ. ಏನೋ ವಿಷಘಳಿಗೆ ! ಒಂದು ಅಚಾತುರ್ಯ ನಡೆದು ಹೋಯಿತು. ಇಂತಹ ಘಟನೆಗಳೂ ಇದಕ್ಕಿಂತ ಹೆಚ್ಚಿನವೂ ಅತ್ತೆಯರ ಮನೆಗಳಲ್ಲಿ ನಡೆದದ್ದುಂಟು. ಗಂಡ-ಹೆಂಡತಿ, ಮಾವ-ಅಳಿಯ ಇವರಿಗೆ ಲಟಾಪಟಿ ಜಗಳಗಳಾದದ್ದುಂಟು. ಅಳಿಯನ ಮುಖ ನೋಡುವುದಿಲ್ಲವೆಂದು ಮಾವಂದಿರುಗಳೂ, ಮಾವನ ಮುಖ ನೋಡುವುದಿಲ್ಲವೆಂದು ಅಳಿಯಂದಿರುಗಳೂ ಶಪಥಗಳನ್ನು ಮಾಡಿಕೊಂಡು ನಡೆದದ್ದುಂಟು. ಮಾವ ಅಳಿಯಂದಿರ ಸಂಬಂಧಗಳು ಹೇಗಾದರೂ ಇರಲಿ. ಗಂಡ ಹೆಂಡಿರು ಮತ್ತೆ ಒಟ್ಟಾಗಿ ಸಂಸಾರ ನಡಸಿದ ಸಂದರ್ಭಗಳು ಹೆಚ್ಚಾಗಿವೆ. ನೋಡು ಸೀತಾರಾಮು ! ಸಂಸಾರದ ವಿಚಾರಗಳಲ್ಲಿ ತಾಯಿಯ ಮಾತನ್ನೇ ಪ್ರಾಮುಖ್ಯವೆಂದು ತಿಳಿದು ಅದರಂತೆ ನಡೆಯುತ್ತ ಹೋಗಬಾರದು. ತಾಯಿಯನ್ನು ಆದರಿಸಬೇಕು ; ಕೈಬಿಡಬಾರದು. ಆದರೆ ತಾಯಿಗೂ ಮಗನ ವಿಚಾರದಲ್ಲಿ ಹೆದರಿಕೆ ಇರುವುದು ಒಳ್ಳೆಯದು. ಅನ್ಯಾಯದ ಮಾತನ್ನು ಹೇಳಿದರೆ ಕೋಪಮಾಡಿಕೊಳ್ಳುತ್ತಾನೆ, ನಡಸುವುದಿಲ್ಲ ; ನ್ಯಾಯವಾದದ್ದನ್ನು ಹೇಳಿದರೆ ನಡಸಿಕೊಡಬಹುದು – ಎಂಬ ಭಾವನೆ ತಾಯಿಗಿರಬೇಕಲ್ಲದೆ, ನಾನು ಹೇಳಿದಂತೆಲ್ಲ ಕೇಳುತ್ತಾನೆ, ನಾನು ಕುಣಿಸಿದಂತೆಲ್ಲ ಕುಣಿಯುತ್ತಾನೆ ಎಂಬುವ ನಂಬಿಕೆ ಆಕೆಗೆ

ಬರಲೇ ಬಾರದು. ಏನು ಹೇಳುತ್ತೀಯೆ? ನನ್ನ ಮಾತು ಮನಸ್ಸಿಗೆ ಹಿಡಿಯಿತೇ?'

ಈ ಪ್ರಶ್ನೆ ಮುಗಿಯುವ ಹೊತ್ತಿಗೆ ಕಾವೇರಮ್ಮ ಕೊಟಡಿಯನ್ನು ಪ್ರವೇಶಿಸಿದಳು.

'ಅದೇನು ಸೀತಾರಾಮು ಆ ಕಾಗದ? ಆ ತಾಟಕಿತ್ತಿ ಬರೆದದ್ದೋ ನಿನ್ನ ಮಾವ ಬರೆದದ್ದೋ?' ಎಂದು ಕೇಳಿದಳು.

'ಇದು ಸರೋಜ ಬರೆದದ್ದು. ಮಾವ ಬರೆದ ಕಾಗದವೂ ಬಂದಿದೆ.'

'ಏನು ಬರೆದಿದ್ದಾರೆ?—ಶಿವಮೊಗ್ಗಕ್ಕೆ ಬಾರಪ್ಪ! ಬಸಿರಿ ನೋಡ ಬೇಕೂಂತ ಬಯಸುತ್ತಾಳೆ!—ಎಂದು ಒಕ್ಕಣೊಕ್ಕಣೆಯಾಗಿ ಬರೆದಿದ್ದಾರೆಯೆ?'

'ಹೌದು, ಬರೆದಿದ್ದಾರೆ.'

'ನಿನ್ನಂಥ ಬೆಪ್ಪು ಅವರಿಗೆ ಅಳಿಯನಾಗಿ ಸಿಕ್ಕಿರುವಾಗ ಅವರಿಗೇನಪ್ಪ! ಹೇಗಂದರೆ ಹಾಗೆ ಕುಣಿಸುತ್ತಾರೆ. ಮಾಡಬಾರದ್ದನ್ನೆಲ್ಲ ಮಾಡಿ ಆಡಬಾರದ್ದನ್ನೆಲ್ಲ ಆಡಿ ಎಲ್ಲವನ್ನೂ ಜೀರ್ಣಿಸಿಕೊಳ್ಳುತ್ತಾರೆ. ನೀನೂ ನನ್ನ ಹೊಟ್ಟೆಯಲ್ಲಿ ಹುಟ್ಟಿದೆ! ನಿನ್ನ ಅಪ್ಪನ ಹಠ ರೋಷ ನಿನಗೆ ರವಷ್ಟೂ ಇಲ್ಲ. ನೀವಾದರೂ ಸ್ವಲ್ಪ ಬುದ್ಧಿ ಹೇಳಿಯಪ್ಪ—ರಾಮಣ್ಣೋರಲ್ಲವೇ ನೀವು?—ನನ್ನ ಮಗನಿಗೆ ಸ್ವಲ್ಪ ಬುದ್ಧಿ ಹೇಳಿಯಪ್ಪ.'

'ಅದೇ ಕೆಲಸ ಮಾಡುತ್ತಿದ್ದೇನೆ.'

'ಚೆನ್ನಾಗಿ ಬುದ್ಧಿ ಹೇಳಿಯಪ್ಪ. ಪ್ಯಾಸ್ ಮಾಡಿದ್ದಾನೆ. ಆದರೆ ಪ್ರಯೋಜನ ಏನು? ತಾನು ಬದುಕೋ ಮಾರ್ಗ ತಿಳಿಯದು. ಅವಳು! ನನ್ನ ಸೊಸೆ! ಅಯ್ಯೋ! ಎಲ್ಲಿಯ ಸೊಸೆಯೋ ಎಲ್ಲಿಯ ಅತ್ತೆಯೋ! ನನ್ನನ್ನೇನು ಅತ್ತೆ ಎಂದು ಒಂದು ದಿನ ಮರ್ಯಾದೆ ಮಾಡಿದ್ದುಂಟೇ? ನನ್ನ ಕಷ್ಟ ಸಂಕಟ ಏನು ಎಂದು ವಿಚಾರಿಸಿದ್ದುಂಟೇ? ಈ ಮನೆ ಹೊಸಿಲು ತುಳಿದಳೋ ಇಲ್ಲವೋ ನನ್ನ ತಲೆಗೆ ಬಂತು ಈ ಮುಸುಕು! ಆ ಸೊಸೆ ಈ ಬೆಪ್ಪು ಗಂಡನ್ನ ಹಾರಿಸಿಕೊಂಡು ಹೊರಟು ಹೋಗೋಣ ಎಂದು ಒಂದು ಮಾಯಾಮಾಟ ಮಾಡ್ತಾಳೋ ಹಾಗೆ ಮಾಡ್ತಾಳೆ. ನಮ್ಮ ಸೀತಾರಾಮು ತಾನು ದೊಡ್ಡ ಮನುಷ್ಯರ ಅಳಿಯ

ಆದೆನಲ್ಲ ಎಂದು ಹಿಗ್ಗಿಹಿಗ್ಗಿ ಬುಡಕ್ಕನೆ ಸರಕ್ಕನೆ ಅಲ್ಲಿಗೆ ಓಡೋಡಿ ಹೋಗುತ್ತಾನೆ. ದೊಡ್ಡ ಮನುಷ್ಯರ ಮನೆ ಅಳಿಯ ಎಂದರೆ ಏನು ರಾಮಣ್ಣನವರೇ ? ದೊಡ್ಡ ಮನುಷ್ಯರ ಮನೆ ಆಳು– ನೋಡಿಕೊಳ್ಳಿ. ಸೀತಾರಾಮು ! ಇಲ್ಲಿ ನೋಡು ! ಗೋಡೆಕಡೆ ಏನು ನೋಡುತ್ತೀಯೆ ? ನೀನು ಆ ಕಾಗದಗಳಿಗೆ ಜವಾಬು ಕೊಡಬೇಡ, ಖಂಡಿತ ಕೊಡಬೇಡ. ನಾನು ಹೇಳಿದ ಮಾತನ್ನು ಆಲೋಚಿಸು. ನೀನು ಬದುಕೋ ಮಾರ್ಗ ಹೇಳಿದ್ದೇನೆ. ನಿನ್ನ ತಮ್ಮಂದಿರು, ತಂಗಿಯರು ಬದುಕೋ ಮಾರ್ಗ ಹೇಳಿದ್ದೇನೆ. ಅವರ ಕೈಬಿಡಬಾರದಪ್ಪ ! ನಿನ್ನಪ್ಪ ಹೋದಮೇಲೆ ಅವರ ಜವಾಬ್ದಾರಿಯೆಲ್ಲ ನಿನ್ನ ತಲೆಗೆ ಕಟ್ಟಿದ್ದು. ನೋಡಪ್ಪ ! ನನ್ನದೇನು ? ಈ ಒಂದು ಕಟ್ಟಿಗೆ ! ಭಿಕ್ಷೆ ಬೇಡಿದರೂ ಆಯಿತು ; ಮೆಣಸಿನಪುಡಿ, ಅವಲಕ್ಕಿ ಕುಟ್ಟಿ ಕೂಲಿಮಾಡಿದರೂ ಆಯಿತು. ನಿನ್ನಪ್ಪ ಯಾವಾಗ ಕಣ್ಣುಮುಚ್ಚಿಕೊಂಡರೋ, ಅವರು ಯಾವಾಗ ನನ್ನನ್ನು ನಡುನೀರಲ್ಲಿ ಕೈಬಿಟ್ಟು ಹೋದರೋ ಆಗಲೇ ನಾನು ಪರದೇಸಿಯಾಗಿ ಹೋದೆ. ನನ್ನ ವಸ್ತು ಹೋದಮೇಲೆ ನನಗೇನಿದೆ ಹೇಳಿಯಪ್ಪ ರಾಮಣ್ಣೋರೆ ? '

'ಹಾಗೆಲ್ಲ ನೀವು ನೊಂದುಕೊಳ್ಳಬಾರದು. ನಿಮ್ಮ ಮಗ ನಿಮ್ಮನ್ನೇಕೆ ಕೈಬಿಡುತ್ತಾನೆ ? ಸೀತಾರಾಮು ಅಂಥ ಮನುಷ್ಯ ಅಲ್ಲವಲ್ಲ. ಅವನು ನಿಮ್ಮನ್ನು ಕೈಬಿಡಬಾರದು, ಕೈಹಿಡಿದ ಹೆಂಡತಿಯನ್ನೂ ಕೈಬಿಡಬಾರದು. ಹೌದೋ ಅಲ್ಲವೋ ? '

'ಏನು ರಾಮಣ್ಣೋರೆ ನಿಮ್ಮ ಮಾತು ? '

'ನಾನು ನ್ಯಾಯವಾದ ಮಾತನ್ನು ಹೇಳಿದ್ದೇನಮ್ಮ. ನೀವು ಸೀತಾರಾಮುವನ್ನು ಸಮಾಧಾನಪಡಿಸಿ ಬುದ್ಧಿಹೇಳಬೇಕು. ನೀವೂ ನಿಮ್ಮ ಸೊಸೆಯ ಮೇಲಿನ ಆಗ್ರಹ ಬಿಡಬೇಕು.'

'ಮನೆ ಮುರುಕ ಸೊಸೆಯ ಮಾತು ಆಡಬೇಡಿ ರಾಮಣ್ಣೋರೆ ! ಸೊಸೆಯಂತೆ ಸೊಸೆ !– ಐದನೆಯ ತಿಂಗಳು, ಗರ್ಭಿಣಿಯಾಗಿದ್ದೀಯೆ. ನಿನಗೆ ಹೂವು ಮುಡಿಸುವ ಶಾಸ್ತ್ರವನ್ನು ನಾವು ಮಾಡಬೇಕಮ್ಮ. ಅದನ್ನು ಮುಗಿಸಿಕೊಂಡು ಹೋಗುವೆಯಂತೆ. ತವರು ಮನೆಗೆ ಏಳನೆಯ ತಿಂಗಳಲ್ಲಿ ಕಳಿಸುವುದೇ ಪದ್ಧತಿ. ಹೋಗಲಿ, ಐದನೆಯ ತಿಂಗಳಲ್ಲಿಯೇ

ಹೋದರೂ ಹೋಗು, ದೊಡ್ಡಮನುಷ್ಯರ ಮಗಳು ನೀನು. ನಾವು ಮಾಡುವ ಶಾಸ್ತ್ರಮಾಡದಿದ್ದರೆ ನಾಳೆ ನಾಲ್ಕು ಜನದ ಮುಂದೆ ಮಾನ ಹೋಗುತ್ತದೆ. ನಮಗೆ ಗತಿಯಿರಲಿಲ್ಲ, ಮಾಡಲಿಲ್ಲ ಎಂದು ಜನರು ಆಡುತ್ತಾರೆ. ಅತ್ತೆಯನ್ನು ಸತ್ತಹಾಗೆ ಮಾಡಿಟ್ಟಿದ್ದಾಳೆ, ಎಳ್ಳಷ್ಟೂ ಲಕ್ಷ್ಯವಿಲ್ಲ ಎಂದು ಜನ ಹಾಸ್ಯಮಾಡುತ್ತಾರೆ. ಬೇಡಮ್ಮ, ಎರಡುದಿನ ತಾಳು–ಎಂದು ಆ ಸೊಸೆಯನ್ನು ಕೇಳಿಕೊಂಡೆ ಹಿರಿಯಳು ನಾನು! ಗಂಡನ ತಾಯಿ! ಅತ್ತೆ ಎನ್ನಿಸಿಕೊಂಡವಳು! ನನ್ನ ಮಾತನ್ನು ಹಾಗೆ ಕುಂಡಿಗೆ ಒರಸಿಹಾಕಿ ಹೊರಟೇ ಹೋದಳು. ಈ ಬೆಪ್ಪು ಆ ಹೆಂಡತಿಯ ಮಾತಿಗೆ, ಆ ಮಾವನ ದೊಡ್ಡಸ್ತಿಕೆಗೆ ಮರುಳಾಗಿ ನನ್ನನ್ನು ಲಕ್ಷಿಸದೆ ಅವಳನ್ನು ಕಳಿಸಿಯೇ ಬಿಟ್ಟನಪ್ಪ! ರಾಮಣ್ಣೋರೆ! ಕೇಳಿ. ಈ ಬಡಾವಣೆಯವರೆಲ್ಲ, ಹೀಗುಂಟೇ ಕಾವೇರಮ್ಮನವರೇ? ಹೀಗುಂಟೇ ಕಾವೇರಮ್ಮನವರೇ? ಏನೋ ಆರತಕ್ಷತೆ ಮಾಡುತ್ತೀರಿ, ನಮ್ಮನ್ನೂ ಕರೆಯುತ್ತೀರಿ ಎಂದಿದ್ದೆವು. ನಿಮ್ಮ ಸೊಸೆ ಹಾಗೆಯೇ ಹೊರಟು ಹೋದಳಲ್ಲ–ಎಂದು ನನ್ನನ್ನು ಎಲ್ಲರೂ ಕೇಳಿದವರೇ! ನಾನು ಬೀದಿಯ ಕಡೆ ಮುಖ ಇಡಲಿಕ್ಕಾಗಲಿಲ್ಲ. ಅಂಥ ಅಪಮಾನ ಅನುಭವಿಸಿದೆ. ಏಕೆ? ಹೇಳಿ ರಾಮಣ್ಣೋರೆ? ನನ್ನ ವಸ್ತು ಬದುಕಿದ್ದಿದ್ದರೆ ನನಗೂ ಮರ್ಯಾದೆ ಬರುತ್ತಿತ್ತು. ಅವರು ಸೊಸೆಯನ್ನು ಹಾಗೆಯೇ ಕಳಿಸಿ ಕೊಡುತ್ತಿದ್ದರೇ? ಈ ಒಂದು ಸಣ್ಣವಿಚಾರದಲ್ಲೇ ನೋಡಿ! ಹೆತ್ತಮಗ ನನ್ನ ಕೈಬಿಟ್ಟು ಹೆಂಡತಿ ಕಡೆ ಸೇರಿಕೊಂಡ.'

'ಅದನ್ನೆಲ್ಲ ದೊಡ್ಡದು ಮಾಡಬಾರದು; ಮರೆತುಬಿಡಬೇಕು.'

'ಆಗಲಪ್ಪ! ನೀವು ಹೇಳಿದಿರಲ್ಲ! ಇನ್ನೇನು ಮರೆತುಬಿಡಬೇಕು ಹೇಳಿಯಪ್ಪ? ನಾನು ಈ ಭೂಮಿಯಮೇಲೆ ಬದುಕಿರೋದನ್ನೇ ಮರೆತು ಬಿಡಬೇಕು ಎನ್ನುತ್ತೀರಾ? ಈ ಸೀತಾರಾಮು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ ಎಂಬುದನ್ನೇ ಮರೆತುಬಿಡಬೇಕು ಎನ್ನುತ್ತೀರಾ? ಏನೋ ಬುದ್ಧಿವಂತಿಕೆ ಮಾತು ಆಡೋದಕ್ಕೆ ಬಂದಿದ್ದೀರಿ! ಇಲ್ಲಿ ನಿಮ್ಮೊಡನೆ ಮಾತಿಗೆ ನಿಂತುಬಿಟ್ಟು ಅಲ್ಲಿ ಬೇಳೆಯ ಗತಿ ಏನಾಯಿತೋ? ನೀವು ಹೇಳಿದರಲ್ಲಪ್ಪ, ಮರೆತುಬಿಡಬೇಕು ಅಂತ–ನಾನು ಮಾಡು

ತ್ತಿದ್ದ ಅಡಿಗೇನೂ ಮರೆತುಹೋಯಿತು' ಎನ್ನುತ್ತ ಕಾವೇರಮ್ಮ ಕೊಟಡಿಯನ್ನು ಬಿಟ್ಟು ಅಡಿಗೆಯ ಮನೆಗೆ ಹೋದಳು. ರಾಮಣ್ಣ ಮೇಲಕ್ಕೆದ್ದು, 'ಏನು ಸೀತಾರಾಮು? ನೀನು ಒಂದು ಮಾತನ್ನೂ ಆಡಲೇ ಇಲ್ಲವಲ್ಲ. ಮಾತಿನಲ್ಲಿ ಸೇರಿಕೊಳ್ಳಲೇ ಇಲ್ಲವಲ್ಲ' ಎಂದನು.

'ನೀನೇ ಎಲ್ಲವನ್ನೂ ಆಡಿದೆ, ಕೇಳಿದೆ. ನಾನು ಆಡುವುದೇನಿತ್ತು? ನಿನಗೆ ಹೊತ್ತಾಯಿತು, ನೀನು ಹೋಗಪ್ಪ' ಎಂದು ಸೀತಾರಾಮು ಉತ್ತರ ಕೊಟ್ಟು ರಾಮಣ್ಣನನ್ನು ಕಳಿಸಿಬಿಟ್ಟನು.

ಸೀತಾರಾಮುವಿಗೆ ತನ್ನ ತಾಯಿ ಕೊಟಡಿಗೆ ಬಂದು ರಾಮಣ್ಣನೊಡನೆ ಆ ಮಾತುಗಳನ್ನಾಡಿದ್ದು ಸರಿಬೀಳಲಿಲ್ಲ. ತನಗೆ ದೊಡ್ಡ ಅಪಮಾನವಾದಂತೆ ಅವನು ಭಾವಿಸಿಕೊಂಡನು. ತಾನು ತನ್ನ ಅಸಮಾಧಾನವನ್ನು ಸೂಚಿಸಿ ಏನಾದರೂ ಹೇಳಿದರೆ ತನ್ನ ತಾಯಿ ಎದೆಗಿದೆ ಬಡಿದುಕೊಂಡು ಇನ್ನೂ ಏನು ರಾದ್ಧಾಂತ ಮಾಡುವಳೋ ಎಂದು ಹೆದರಿ ಅವನು ಮಧ್ಯದಲ್ಲಿ ಪ್ರವೇಶಿಸಲಿಲ್ಲ. ಆಡುವುದಕ್ಕಿಲ್ಲ ಅನುಭವಿಸುವದಕ್ಕಿಲ್ಲ ಎಂಬಂಥ ಸ್ಥಿತಿಯನ್ನು ದೇವರು ತಂದಿಟ್ಟನಲ್ಲ ಎಂಬ ಚಿಂತೆಯಿಂದ ತಾಯಿಯ ಕಡೆಗೂ ನೋಡದೆ ರಾಮಣ್ಣನ ಕಡೆಗೂ ನೋಡದೆ, ಗೋಡೆಗಳನ್ನೂ ಮಾಳಿಗೆಯ ಹೆಂಚುಗಳನ್ನೂ ದೃಷ್ಟಿಸುತ್ತ ಎಂದಿಗೆ ತನ್ನ ತಾಯಿ ಅಡಿಗೆಯ ಮನೆಗೆ ಹಿಂತಿರುಗುವಳೋ ಎಂದು ನಿರೀಕ್ಷಿಸುತ್ತಿದ್ದನು. ಆದ್ದರಿಂದ ತಾಯಿ ಅಡಿಗೆಯ ಮನೆಗೆ ಹೊರಟದ್ದು ಅವನಿಗೆ ಎದೆಯ ಮೇಲಿದ್ದ ಭಾರ ಇಳಿದಂತಾಯಿತು. ಅವನು ಆಕೆಗೆ ತನ್ನ ಅಸಮಾಧಾನವನ್ನು ಸೂಚಿಸುವುದು ಒಳ್ಳೆಯದೆಂದೂ ಮುಂದೆ ಅಂತಹ ಪ್ರಕರಣಗಳಾಗದಂತೆ ನೋಡಿಕೊಳ್ಳುವುದು ಒಳ್ಳೆಯದೆಂದೂ ಭಾವಿಸಿ ಅಡಿಗೆಯ ಮನೆಗೆ ಹೋದನು.

ಬೇಳೆ ಬೆಂದು ಕುಳಿತದ್ದನ್ನು ಕಾವೇರಮ್ಮ ನೋಡಿ, 'ಅಯ್ಯೋ! ಅಂಗಡಿ ಬೇಳೆಯೇನೋ ಬೆಂದು ಕುಳಿತಿದೆ. ನನ್ನ ಬೇಳೆ ನನ್ನ ಮಗನ ಹತ್ತಿರ ಬೇಯೋ ಹಾಗೆ ಕಾಣೆನಲ್ಲ!' ಎಂದು ಗೊಣಗುಟ್ಟುತ್ತ ಎಣಿಸೆಯ ಹಣ್ಣನ್ನು ತೆಗೆದುಕೊಳ್ಳುತ್ತಿದ್ದಳು. ಸೀತಾರಾಮು ಬಂದದ್ದನ್ನು ನೋಡಿ, 'ಏನಪ್ಪ! ಅಡಿಗೆ ಆಗುತ್ತಾ ಇದೆ. ಮಾತಿಗೆ ಕುಳಿತುಬಿಟ್ಟೆ. ಬೆಂದ

ಬೇಳೆ ಬೆಂದಹಾಗೆಯೇ ನಿಂತು ಹೋಯಿತು. ಇನ್ನೇನು, ಹಣ್ಣು ಕಿವುಚಿ ಹಾಕಿ ಉಪ್ಪುಕಾರ ಸುರಿದು, ಒಗ್ಗರಣೆ ಹಾಕಿ ಬಿಡುತ್ತೇನೆ' ಎಂದಳು.

ಸೀತಾರಾಮು, 'ನಾನು ಅಡಿಗೆ ವಿಚಾರಿಸುವುದಕ್ಕೆ ಬರಲಿಲ್ಲಮ್ಮ. ನೀನು ಕಂಡವರ ಮುಂದೆಯೆಲ್ಲ ನನ್ನ ಮಾನ ಕಳೆಯುತ್ತೀಯಲ್ಲ! ನಾನದಕ್ಕೇನು ಮಾಡಲಿ? ಆ ರಾಮಣ್ಣ ಬಂದಿದ್ದರೆ ಅವನೊಡನೆ ಪಂಚಾಯತಿಗೆ ಪ್ರಾರಂಭಿಸಿ ಏನೇನೋ ಮಾತು, ಗೃಹಕೃತ್ಯದ ಗುಟ್ಟು-ಎಲ್ಲ ಆಡಿ, ಅವನೆದುರಿಗೆ ನನ್ನನ್ನ ಬೆಪ್ಪುಗಿಪ್ಪು ಎಂದು ಹೀಯಾಳಿಸಿದೆ. ಇನ್ನು ಮುಂದೆ ಹೀಗೆಲ್ಲ ಮಾಡಬೇಡಮ್ಮ. ನನ್ನ ಮಾನ ತೆಗೆಯಬೇಡ. ನಿನ್ನನ್ನ ಬೇಡಿಕೊಳ್ಳುತ್ತೇನೆ' ಎಂದು ದುಃಖದಿಂದ ಹೇಳಿದನು.

'ಯಾರಿಗೂ ತಿಳಿದಿಲ್ಲದ ಗುಟ್ಟು ನಾನೇನಾಡಿದೆ ಸೀತಾರಾಮು? ನಿನ್ನ ಹೆಂಡತಿ ಬರೆದ ಕಾಗದವನ್ನು ರಾಮಣ್ಣನಿಗೆ ತೋರಿಸುತ್ತ ಆ ತಾಟಕಿತ್ತಿ ಬರೆದ ಒಕ್ಕಣೆಯನ್ನೆಲ್ಲ ನೀನು ಹೇಳುತ್ತಿದ್ದೆ. ಅವನೇನೋ ನಿನಗೆ ಬುದ್ಧಿ ಹೇಳುತ್ತಿದ್ದ! ಅದು ಅಪಮಾನ ಆಗಲಿಲ್ಲವೇ ನಿನಗೆ? ಚಾಟಿಯಿಂದ ಹೊಡೆಯುತ್ತೇನೆ ಎಂದು ಭಾವಮೈದುನನ ಹತ್ತಿರ ಅನ್ನಿಸಿ ಕೊಂಡು ಬಂದೆಯಲ್ಲ! ನಿನಗೆ ಇನ್ನೂ ಏನು ಮಾನ ಉಳಿದಿದೆ? ಹೇಳಪ್ಪ. ಅದೇನು ಚಾಟಿಯೇಟು ತಿಂದುಕೊಂಡೇ ಬಂದೆಯೋ ಏನೋ! ನನ್ನ ಹತ್ತಿರ ಭೂಷಣಕ್ಕೆ ಭಾವಮೈದ ಚಾಟಿಯಿಂದ ಹೊಡೆಯುತ್ತೇನೆ ಎಂದ ಎಂದುಮಾತ್ರ ಹೇಳಿದೆ. ನಿನ್ನಪ್ಪ ಬದುಕಿದ್ದರೆ ನಿನ್ನತ್ತೆ ಮನೆಯವರು ನಿನ್ನನ್ನು ಹಾಗೆ ಕಸಕ್ಕಿಂತ ಕಡೆಯಾಗಿ ಕಾಣುತ್ತಿದ್ದರೇನು? ಅವರ ಮನೆ ಅಡಿಗೆಯವನಾದರೂ ವಾಸಿ ನೋಡಪ್ಪ! ಚಾಟಿಯೇಟು ತಿನ್ನೋದಿಲ್ಲ.'

ಸೀತಾರಾಮು ಉಸಿರೆತ್ತದೆ ತನ್ನ ಕೊಟಡಿಗೆ ಹಿಂದಿರುಗಿ ಬಂದು ಚಾಪೆಯಮೇಲೆ ಬಿದ್ದುಕೊಂಡನು ಕೆಲವು ವಿವರಗಳನ್ನೆಲ್ಲ ತನ್ನ ತಾಯಿಗೆ ಹೇಳಬಾರದಾಗಿತ್ತು, ತನ್ನ ಮನಸ್ಸಿನಲ್ಲೇ ನುಂಗಿ ಕೊಂಡಿದ್ದರೆ ಚೆನ್ನಾಗಿತ್ತು. ಸಹಾನುಭೂತಿ ತೋರಿಸುವ ತಾಯಿಗೆ ಹೇಳಿದರೆ ಸಂಕಟ ಕಡಮೆಯಾಗಬಹುದೆಂದು ಆಗ ತೋರಿತು, ಎಲ್ಲವನ್ನೂ ಹೇಳಿದ್ದಾಯಿತು.

ಇದೇನು ? ನನಗೆ ದೂರಾಲೋಚನೆಯೇ ಇಲ್ಲವೋ ? ನನಗೆ ಬುದ್ಧಿಯೇ ಕಡಮೆಯೋ ? ನನ್ನ ಗ್ರಹಚಾರವೋ ? ನನ್ನ ದುರದೃಷ್ಟವೋ ? ಯಾವ ಕೆಲಸ ಮಾಡ ಹೋಗಲಿ ಯಾವ ಮಾತು ಆಡ ಹೋಗಲಿ ತೊಡಕಿನಲ್ಲೇ ಸಿಕ್ಕಿಬೀಳುತ್ತೇನಲ್ಲ – ಎಂದು ಮುಂತಾಗಿ ದುಃಖಿಸುತ್ತ, ಆಲೋಚಿಸುತ್ತ ಮಲಗಿದ್ದನು. ಒಗ್ಗರಣೆಯ ವಾಸನೆ ಬಂತು. ಸ್ವಲ್ಪಹೊತ್ತಿಗೆಲ್ಲ ತಾಯಿ ಬಂದು, 'ಊಟಕ್ಕೇಳಪ್ಪ ! ನೀನು ಸುಮ್ಮನೆ ಚಿಂತೆ ಮಾಡುತ್ತ, ಕೊರಗುತ್ತ, ನಿನ್ನ ಆರೋಗ್ಯ ಕೆಡಿಸಿಕೊಳ್ಳಬೇಡ. ಮನಸ್ಸು ಗಟ್ಟಿ ಮಾಡು. ಈಗ ಊಟಕ್ಕೇಳು' ಎಂದು ಹೇಳಿ ಸೀತಾರಾಮುವನ್ನು ಕರೆದುಕೊಂಡು ಹೋದಳು.

## ೬. ಹೆರಿಗೆ

ದಿನಗಳು ಕಳೆದುವು. ಶಿವಮೊಗ್ಗದಿಂದ ಮೂರು ನಾಲ್ಕು ಪತ್ರಗಳು ಬಂದುವು. ಸೀತಾರಾಮು ಯಾವುದಕ್ಕೂ ಜವಾಬು ಕೊಡಲಿಲ್ಲ. ಕೃಷ್ಣರಾಯರು ಮಧ್ಯದಲ್ಲಿ ಒಮ್ಮೆ ತುಮಕೂರಿಗೆ ಬಂದು ಹೋದರು. ಆದರೆ ಸೀತಾರಾಮು ಆಗ ಊರಲ್ಲಿರಲಿಲ್ಲ. ಬೆಂಗಳೂರಿಗೋ ಮೈಸೂರಿಗೋ ಹೋಗಿದ್ದಾನೆಂದು ತಿಳಿದುಬಂತು. ಕೃಷ್ಣರಾಯರು ಸೀತಾರಾಮರಾಯನ ಮನೆಗೆ ಹೋಗಿ ವಿಚಾರಿಸಲಿಲ್ಲ. ಅಳಿಯನನ್ನು ಪ್ರತ್ಯೇಕವಾಗಿ ಕಂಡು ಮಾತನಾಡೋಣವೆಂದು ಅವರು ಹಂಚಿಕೆ ಹಾಕಿದ್ದರು. ಬಂದವರು ಸೀತಾರಾಮರಾಯನಿಗೆ ಯಾರು ಆಪ್ತರು? ಯಾರ ಮಾತನ್ನು ಅವನು ಕೇಳಬಹುದು ಎಂಬುದನ್ನೆಲ್ಲ ವಿಚಾರಿಸಿಕೊಂಡರು. ರಾಮಣ್ಣನೊಬ್ಬ ಆಪ್ತನೆಂದೂ, ಏನಾದರೂ ಕಾರ್ಯಸಾಧನೆ ಆಗಬೇಕಾದರೆ ಅವನ ಸಹಾಯವನ್ನು ಪಡೆಯಬೇಕಾದೀತೆಂದೂ ಕೃಷ್ಣರಾಯರು ತಿಳಿದುಕೊಂಡರು. ಸೀತಾರಾಮರಾಯನ ಮನೋಭಾವ ಹೇಗಿದೆ? ಕಾವೇರಮ್ಮನ ಮನೋಭಾವ ಹೇಗಿದೆ? ಎಂಬುದನ್ನೆಲ್ಲ ಸರಿಯಾಗಿ ಶೋಧನೆಮಾಡಿ ತಮಗೆ ತಿಳಿಸಬೇಕೆಂದು ರಾಮಣ್ಣನಿಗೆ ಹೇಳಿ ಅವರು ಶಿವಮೊಗ್ಗಕ್ಕೆ ವಾಪಸು ಹೋಗಿದ್ದರು. ಕಾಲ ಸ್ವಲ್ಪ ಕಳೆದರೆ ಉದ್ವೇಗ ಕಡಮೆಯಾಗುವ ಸಂಭವ ಉಂಟು; ಉದ್ವೇಗ ಕಡಮೆಯಾದಾಗ ತಮ್ಮ ಮಾತು ಹಿಡಿಸಬಹುದು ಎಂದು ಆಲೋಚಿಸಿ ಕೃಷ್ಣರಾಯರು ಮೇಲಿಂದ ಮೇಲೆ ತುಮಕೂರಿಗೆ ಬರಲಿಲ್ಲ. ಆದರೆ ಕಾಗದಗಳನ್ನು ತಪ್ಪದೆ ಸೀತಾರಾಮರಾಯನಿಗೆ ಆಗಾಗ ಬರೆದು ಸರೋಜಳ ಆರೋಗ್ಯ ಅನಾರೋಗ್ಯಗಳ ವಿಚಾರವನ್ನು ತಿಳಿಸುತ್ತಿದ್ದರು. ಸರೋಜ ತನಗೆ ಗಂಡನಿಂದ ಜವಾಬು ಬರದಿದ್ದರೂ ವಾರಕ್ಕೊಂದು ಬಾರಿ ತಪ್ಪದೆ ಕಾಗದ ಬರೆಯುತ್ತಿದ್ದಳು. ಹೆರಿಗೆಯ ಕಾಲ ಸಮೀಪಿಸುತ್ತಿರುವುದರಿಂದ ಒಮ್ಮೆ ಬಂದು ಹೋಗಬೇಕೆಂದು ಪ್ರಾರ್ಥಿಸುತ್ತಿದ್ದಳು. ಆದರೆ ಸೀತಾರಾಮುವಿನಿಂದ ಯಾರ ಕಾಗದಕ್ಕೂ ಯಾವ ಪ್ರಾರ್ಥನೆಗೂ ಉತ್ತರ ಬರಲಿಲ್ಲ. ಅದಕ್ಕೆ ಬದಲು ಕಾವೇರಮ್ಮ ತನ್ನ ಮಗನಿಗೆ ಬೇರೆ ಮದುವೆ

ಮಾಡಿಸುವುದಕ್ಕೆ ಪ್ರಯತ್ನಿಸುತ್ತಿದಾಳೆ ಎಂಬುದಾಗಿ ಗಾಳಿ ವರ್ತಮಾನ ಕೇಳುತ್ತ ಬಂತು.

'ಏನಮ್ಮ ಸರೋಜ! ನಿನ್ನ ಗಂಡನ ಹಟವೇಕೋ ಹುಚ್ಚು ಹಟ ಆಗಿದೆ. ನೀನು ಅಷ್ಟೊಂದು ಕಾಗದಗಳನ್ನು ಬರೆದೆ. ನಿನ್ನ ತಂದೆಯೂ ಅಷ್ಟೊಂದು ಕಾಗದಗಳನ್ನು ಬರೆದರು. ಅವನ ಮನಸ್ಸು ಕರಗಲಿಲ್ಲವಲ್ಲ. ಇಲ್ಲಿಗೆ ಬಾರದಿದ್ದರೆ ಬೇಡ. ಕಾಗದ ಬಂತು, ನಾನು ಆರೋಗ್ಯವಾಗಿದ್ದೇನೆ, ನನ್ನ ಹೆಂಡತಿ ಹೇಗಿದ್ದಾಳೆ – ಎಂದು ಇಷ್ಟು ಬರೆಯುವುದಕ್ಕೆ ಅವನಿಗೆ ಕೈಯಿಲ್ಲವೆ? ಅವನ ಮನಸ್ಸು ಇಷ್ಟು ಕಲ್ಲು ಎಂದು ನಾನು ತಿಳಿದಿರಲಿಲ್ಲ' ಎಂದು ತುಳಸಾಬಾಯಿ ನಿಟ್ಟುಸಿರುಬಿಡುತ್ತ ಹೇಳಿದಳು.

'ಹೌದು. ಅವರ ಮನಸ್ಸು ಕಲ್ಲಾಗಿ ಹೋಯಿತು. ಅದನ್ನು ಕಲ್ಲಾಗಿ ಯಾರು ಮಾಡಿದವರು?' ಎಂದು ಸರೋಜ ಕೇಳಿದಳು.

'ಯಾರು ಮಾಡಿದರೋ ಏನೋ! ದೇವರೇ ಮಾಡಿದನು. ಮುಖ್ಯವಾಗಿ ನೋಡು, ಹೆಣ್ಣು ಹೆತ್ತವರು ಏನು ಸಂಕಟ ಬರಲಿ, ನುಂಗಿಕೊಳ್ಳಬೇಕು, ಪ್ರಕಟಿಸಬಾರದು. ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೇ ಆಗಲಿ, ಕೈ ಹಿಡಿದ ಗಂಡನೇ ಆಗಲಿ ಯಾರ ಹತ್ತಿರವೂ ಹೇಳಬಾರದು. ಇಂಥ ಪ್ರಮಾದ ಆಗುತ್ತದೆಂದು ನಾನು ಎಣಿಸಿರಲಿಲ್ಲ. ನಿನಗೋ ಹೆರಿಗೆಯ ದಿನ ಹತ್ತಿರ ಬಂತು. ಹೊಟ್ಟೆಗಿಲ್ಲದೆ ನೆತ್ತಿಗಿಲ್ಲದೆ, ನಿದ್ದೆಯಿಲ್ಲದೆ ನೆಮ್ಮದಿಯಿಲ್ಲದೆ ತೃಣವಾಗಿ ಹೋಗಿದ್ದೀಯೆ. ನೀನು ವಕ್ರಗಳಿಲ್ಲದೆ ಹೆತ್ತು ಕ್ಷೇಮವಾಗಿ ಎದ್ದು ಹತ್ತು ದಿನ ಕಳೆದರೆ ಸಾಕಾಗಿದೆ.'

'ನಾನು ಹಾಗೆಯೇ ಕಣ್ಣುಮುಚ್ಚಿಕೊಂಡುಬಿಟ್ಟರೆ ಒಳ್ಳೆಯದು. ನನ್ನ ಕಷ್ಟವೂ ಪರಿಹಾರವಾಗುತ್ತೆ, ನಿಮ್ಮ ಕಷ್ಟವೂ ಪರಿಹಾರವಾಗುತ್ತೆ.'

'ಅಮಂಗಳದ ಮಾತು ಆಡಬೇಡ. ನೀನು ಬದುಕಿರೋವಾಗಲೇ ನಿನ್ನ ಆ ಅತ್ತೆ!–ಏನು ಪುಣ್ಯ ಮಾಡಿ, ಏನು ತಪಸ್ಸು ಮಾಡಿ ಪಡೆದೆಯೋ ನಮ್ಮಮ್ಮ ಆ ಅತ್ತೆಯನ್ನ! – ನಿನ್ನ ಆ ಅತ್ತೆ ಎರಡನೆಯ ಮದುವೆ ಮಾತು ಆಡುತ್ತಿದ್ದಾಳಂತೆ. ಸದ್ಯಃ ನಿನ್ನ ಮನೆಗೆ ನಿನ್ನನ್ನು ಸೇರಿಸಿಬಿಟ್ಟರೆ ನಾನು ಧನ್ಯಳಾದೇನು! ನನಗೋ ಎದೆರೋಗ. ನಿನಗೆ ತಿಳಿದೇ ಇದೆ. ಕ್ಷಣವಿದ್ದ ಹಾಗೆ ಕ್ಷಣ ಇರುವುದಿಲ್ಲ. ಇನ್ನು ಸುಕನ್ಯೆಯ

ಮದುವೆ ಬೇರೆ ಆಗಬೇಕಾಗಿದೆ. ಅವಳೋ ಬೆಳೆದು ನಿಂತಿದ್ದಾಳೆ. ಇನ್ನೂ ಹುಡುಗರು ಮುಂದಕ್ಕೆ ಬರೋವರು ಇದ್ದಾರೆ. ನಿನ್ನಣ್ಣ ನಾಗ ರಾಜ ಯಾವ ಹೆಣ್ಣು ಬಂದರೂ – ಮದುವೆಯ ಮಾತು ಆಡಬೇಡಿ, ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡಿ ಎನ್ನುತ್ತಾನೆ.'

'ತಾನು ಮದುವೆಯನ್ನೇ ಮಾಡಿಕೊಳುವುದಿಲ್ಲ ಎಂದು ನಾಗರಾಜ ನನ್ನೊಡನೆ ಹೇಳಿದನಮ್ಮ.'

'ಏನು ಹೇಳಿದನೋ ಸರೋಜ! ಇದುವರೆಗೂ ನಿನ್ನ ತಂದೆಯ ಹೆಸರು ಹೇಳಿದರೆ ಅಂಥ ಗೌರವ ಇತ್ತು! ನಮ್ಮ ಮನೆತನ ಎಂದರೆ ನಾನು ತಾನು ಎಂದು ಹೆಣ್ಣು ಕೊಡುವುದಕ್ಕೆ ಹೆಣ್ಣು ತೆಗೆದುಕೊಳ್ಳುವು ದಕ್ಕೆ ಮೇಲಿಂದ ಮೇಲೆ ಬರುತ್ತಿದ್ದರು. ಈಗ ನಿನ್ನಿಂದ ನಾಗರಾಜ ನಿಂದ ನಾವು ತಲೆ ಎತ್ತೋ ಹಾಗೇ ಇಲ್ಲ. ಏನು ಮಾಡುವುದು?'

'ನಾನೇನು ಮಾಡಿದೆನಮ್ಮ?'

'ನೀನೇನೂ ಮಾಡಲಿಲ್ಲ ಅನ್ನು. ಬುದ್ಧಿಯಿಲ್ಲದೆ ನಾನು ಮಾಡಿದ್ದೆ! ಈಗ ಒದಗಿರುವ ಪ್ರಮಾದ ಪರಿಹಾರ ಆಗಿ ನೀನು ನಿನ್ನ ಗಂಡನ ಮನೆ ಸೇರಿ ಸಂಸಾರ ಮಾಡುತ್ತಿದ್ದರೆ ನಮ್ಮ ಮನೆಗೆ ಒಳ್ಳೆಯ ಕೀರ್ತಿ. ಹಾಗಿಲ್ಲವೋ ನಮ್ಮ ಮನೆಗೆ ಅಪಕೀರ್ತಿ. ಸುಕನ್ಯೆಗೆ ವರನ್ನ ಹುಡುಕು ವುದಕ್ಕೆ ಹೋದರೆ, – ಹೆಣ್ಣು ಮಕ್ಕಳೆಲ್ಲ ಗಂಡನ್ನ ಬಿಟ್ಟು ತವರು ಮನೆ ಸೇರಿ ಕೊಳ್ಳುತ್ತಾರೆ, ಗಂಡು ಮಕ್ಕಳೆಲ್ಲ ಮದುವೆಯಿಲ್ಲದೆ ಗೂಳಿಗಳ ಹಾಗೆ ಮೆರೆಯುತ್ತಾರೆ – ಎಂದು ಜನ ಆಡೋದಿಲ್ಲವೆ? ಇನ್ನು ಆ ಮಾರಾಯ ಗಿತ್ತಿ, ನಿನ್ನ ಅತ್ತೆ ಏನೇನು ಸುದ್ದಿ ಹರಡಿ ನಮ್ಮ ಮನೆಯ ಹೆಸರು ಕೆಡಿ ಸುತ್ತಾಳೋ! ನಿನಗೆ ಏನೇನು ಕೆಟ್ಟ ಹೆಸರು ತಲೆಗೆ ಕಟ್ಟುತ್ತಾಳೋ! ನೋಡಿದೆಯಾ ಸರೋಜ? ಆ ದಿನ ನಾನು ನನ್ನ ದುಃಖವನ್ನು ನುಂಗಿ ಕೊಂಡಿದ್ದೆನೇ ಎಷ್ಟು ಬುದ್ಧಿವಂತಳಾಗುತ್ತಿದ್ದೆ! ನಿನಗೂ ಈ ಸಂಕಟ ಬರುತ್ತಿರಲಿಲ್ಲ. ನಮಗೂ ಈ ಸಂಕಟ ಬರುತ್ತಿರಲಿಲ್ಲ. ನಿನ್ನ ಗಂಡ ಇಷ್ಟು ಹೊತ್ತಿಗೆ ಎರಡು ಮೂರು ಬಾರಿ ಬಂದು ಬಸಿರಿಯನ್ನು ಆದರಿಸಿ ಹೋಗುತ್ತಿದ್ದ. ನೀನೂ ನಗುನಗುತ ಓಡಾಡಿಕೊಂಡು, ದೇವರು

ಕಣ್ತೆರೆಯೋ ಕಾಲಕ್ಕೆ ಗಂಡುಮಗುವನ್ನೋ ಹೆಣ್ಣುಮಗುವನ್ನೋ ಕೈಗೆತ್ತಿ ಕೊಳ್ಳುತ್ತಿದ್ದೆ.'

'ನೀನೇನೂ ನನ್ನ ವಿಚಾರದಲ್ಲಿ ಪೇಚಾಡಿಕೊಳ್ಳಬೇಡ. ನಾನು ಮನಸ್ಸಿನಲ್ಲಿ ಆಗಲೇ ನಿರ್ಧಾರ ಮಾಡಿಕೊಂಡಿದ್ದೇನೆ. ನಾನು ಯಾರಿಗೂ ಭಾರವಾಗಿರುವುದಿಲ್ಲ. ಯಾರಿಗೂ ಕೆಟ್ಟಹೆಸರು ಬರುವ ಹಾಗೆ ಮಾಡುವುದಿಲ್ಲ.'

ಎಂದು ಸರೋಜ ಹೇಳಿದಳು. ಆ ಮಾತು ಮುಗಿಯುವ ಹೊತ್ತಿಗೆ ಆಕೆ ಏನೋ ಒಂದು ಸಂಕಟವನ್ನು ಅದುಮಿಡುತ್ತಿದ್ದಂತೆಯೂ, ಆದರೆ ಅದುಮಿಡಲಿಕ್ಕಾಗದೆ ಮುಖ ಸಪ್ಪೆಬಿದ್ದು ಕಣ್ಣೀರು ಕೂಡಿದಂತೆಯೂ ತಾಯಿಗೆ ಕಂಡುಬಂತು.

'ನಿನಗೆ ಏನಾಗುತ್ತಿದೆಯಮ್ಮ ಸರೋಜ? ಬೇನೆ ಪ್ರಾರಂಭ ವಾಗಿದೆಯೆ?

ಎಂದು ತಾಯಿ ಕೇಳಿದಳು. ಚೊಚ್ಚಲ ಹೆರಿಗೆಯಾದ್ದರಿಂದ ಸರೋಜಳಿಗೆ ಹೆರಿಗೆಯು ಬೇನೆ ಹೇಗಿರುತ್ತದೆ ಎಂಬುದು ತಿಳಿದಿರಲಿಲ್ಲ.

'ನಿನ್ನೆ ರಾತ್ರಿಯಿಂದ ಏನೋ ಸೊಂಟದಲ್ಲಿ, ಪಕ್ಕೆಯಲ್ಲಿ ಸಣ್ಣ ನೋವು. ಈಗೇಕೋ ಇಕ್ಕುಳದಿಂದ ಹಿಡಿದಂತೆ ನೋವಮ್ಮ!'

ಒಡನೆಯೇ ತಾಯಿ ಆಳನ್ನೂ ರಘುವನ್ನೂ ಕರೆದು, 'ಸೂಲಗಿತ್ತಿ ಯನ್ನು ಕರೆದು ತನ್ನಿರಪ್ಪ – ಬೇಗ ಹೋಗಿ. ರಘು! ನೀನು ಮೋಟಾರಿ ನಲ್ಲಿ ಆಸ್ಪತ್ರೆಗೆ ಹೋಗಿ ನೋಡಪ್ಪ. ಲೇಡಿ ಡಾಕ್ಟರ್ ಎಲ್ಲಿದ್ದರೂ ಕರೆದು ಕೊಂಡುಬರಬೇಕು. ಮೊದಲು ಕಚೇರಿಗೆ ಹೋಗಿ ನಿನ್ನ ತಂದೆಗೆ ವರ್ತಮಾನ ಕೊಡು' ಎಂದು ಗಾಬರಿಯಿಂದ ಹೇಳಿ ಕಳಿಸಿಕೊಟ್ಟಳು. ಒಂದು ಕೊಟಡಿಯನ್ನು ಖಾಲಿ ಮಾಡಿಸಿ ಅಲ್ಲಿ ಸರೋಜಳಿಗೆ ಹಾಸಿಗೆ ಯನ್ನು ಅಣಿಮಾಡಿಕೊಟ್ಟಳು. 'ಸರೋಜ! ನನಗೆ ಕೈಕಾಲೇ ಬಿದ್ದು ಹೋಯಿತಮ್ಮ. ಕಷ್ಟಗಳ ಸಮಯ ಸಂದರ್ಭ ಬಂದಾಗ ಧೈರ್ಯ ಬೇಕು. ನನಗೋ ಮೊತ್ತಮೊದಲೇ ಎದೆ ಧಸಕ್ ಎನುತ್ತದೆ' ಎಂದು ಹೇಳುತ್ತ ನಾರಣಾಚಾರಿಯನ್ನು ಕರೆದಳು. 'ಬೇಗ ಕಾಫಿಮಾಡಪ್ಪ! ಡಿಕಾಕ್ಷನ್ ಇಟ್ಟಿದ್ದೀಯೋ ಇಲ್ಲವೋ? ಬೇಗ ಮಾಡು. ನೀರೊಲೆಯಲ್ಲಿ

ಬೆಂಕಿ ಇದೆಯೋ ಇಲ್ಲವೋ ನೋಡು. ಹಂಡೇಲಿ ಬಿಸಿನೀರು ಸಿದ್ಧ ವಾಗಿರಲಿ' ಎಂದು ಮೊದಲಾಗಿ ಮುಂಜಾಗ್ರತೆಯ ಏರ್ಪಾಟುಗಳನ್ನು ಮಾಡಿ ತನ್ನ ಯಜಮಾನರನ್ನೂ ಲೇಡಿ ಡಾಕ್ಟರನ್ನೂ ಸೂಲಗಿತ್ತಿಯನ್ನೂ ನಿರೀಕ್ಷಿಸುತ್ತಿದ್ದಳು. ಸುಮಾರು ಅರ್ಧಗಂಟೆಯೊಳಗೆ ಮೋಟಾರಿನಲ್ಲಿ ಎಲ್ಲರೂ ಬಂದಿಳಿದರು.

ಸರೋಜ ಬಹಳ ಮಾನಿಷ್ಠೆ. ನೋವು ಹೆಚ್ಚುತ್ತಿದ್ದರೂ 'ಉಸ್, ಉಂ' ಎಂದು ಸಣ್ಣದಾಗಿ ಮುಲುಗುತ್ತಿದ್ದುದು ಕೂಡ ಯಾರ ಕಿವಿಗೂ ಬೀಳುತ್ತಿರಲಿಲ್ಲ. ಲೇಡಿ ಡಾಕ್ಟರ್ ಕೊಟಡಿಯನ್ನು ಹೊಕ್ಕು ಸರೋಜಳನ್ನು ಪರೀಕ್ಷೆ ಮಾಡಿದಳು. 'ಈಗ ಮೂರು ಗಂಟೆ. ನಾಲ್ಕೂವರೆ, ಐದರೊಳಗೆ ಪ್ರಸವವಾಗುತ್ತದೆ. ಸ್ಥಿತಿ ಸಮರ್ಪಕವಾಗಿದೆ. ಸುಖಪ್ರಸವವೇ ಆಗುತ್ತದೆ' ಎಂದು ಆಕೆ ಹೇಳಿದಳು. ಕೃಷ್ಣರಾಯರು ತಮ್ಮ ಮನಸ್ಸಿನ ಕಳವಳವನ್ನು ಪ್ರಕಟಮಾಡದೆ ಗಂಭೀರವಾಗಿ ಕುರ್ಚಿಯಲ್ಲಿ ಕುಳಿತಿದ್ದರು. ಯಜಮಾನಿ ದೇವರ ಮನೆಗೆ ಹೋಗಿ ನಂದಾ ದೀಪಕ್ಕೆ ಎಣ್ಣೆ ಹೊಯ್ದು ದೊಡ್ಡ ಬತ್ತಿಗಳನ್ನು ಎರಡು ಸೇರಿಸಿ ದೀಪವನ್ನು ದೊಡ್ಡದು ಮಾಡಿದಳು. ಜತೆಗೆ ತುಪ್ಪದ ಎರಡು ನೀಲಾಂಜನಗಳನ್ನು ಹಚ್ಚಿಟ್ಟಳು. ದೇವರಿಗೆ ಹರಕೆಹೊತ್ತು ಐದು ರೂಪಾಯಿಗಳನ್ನು ಮುಡುಪು ಕಟ್ಟಿಟ್ಟಳು. ದೇವರಿಗೆ ನಮಸ್ಕಾರ ಮಾಡಿ, ಉಕ್ಕುತ್ತಿರುವ ಕಣ್ಣೀರಿನೊಂದಿಗೆ ಹಾಲಿಗೆ ಬಂದಳು. ಗಂಡನನ್ನು ನೋಡಿ,

'ಈಗ ಸರೋಜ ಹೆತ್ತರೆ, ಅವಳನ್ನು ಮುಟ್ಟಿಕೊಂಡು ಯಾರಿರ ಬೇಕು? ಮಗುವನ್ನು ನೋಡಿಕೊಳ್ಳುವವರು ಯಾರು? ಹತ್ತು ದಿನ ಸುಧಾರಿಸಬೇಕಲ್ಲ. ನಮ್ಮ ಕಷ್ಟಕಾಲಕ್ಕೆ ಯಾರಾಗುತ್ತಾರೆ? ಬೇನೆ ತಿನ್ನುವಾಗ ಹತ್ತಿರ ಇದ್ದು ಧೈರ್ಯ ಹೇಳುವ ನಂಟು ಒಂದೂ ಇಲ್ಲವೇ! ಯಾವಾಗಲೋ ನಿಮ್ಮ ಬಂಧು ಬಳಗ ಬಂದು ಲೂಟಿ ಮಾಡಿಬಿಟ್ಟು ಹೋಗುತ್ತಾರೆ' ಎಂದು ಆಕ್ಷೇಪಿಸಿದಳು.

'ಅವರಾರನ್ನೂ ನೀನು ನಿನ್ನ ಮನೆಗೆ ಸೇರಿಸೋದಿಲ್ಲ. ಅವರಾಗಿ ಬಂದಾಗ ಸಿಡುಕಿನ ಮಾತಾಡುತ್ತೀಯೆ! ನಾರಣಾಚಾರಿಯ ಮುಂದೆ ಪಂಚಾಯತಿ ಮಾಡುತ್ತೀಯೆ! ಅವರು ನಿನ್ನ ಕಷ್ಟಕ್ಕೆ ಆಗಬೇಕು ಎಂದು

ಮಾತ್ರ ಬಯಸುತ್ತೀಯೆ! ಈಗೇನೂ ಕಾಲ ಮೀರಿಹೋಗಿಲ್ಲ. ಏರ್ಪಾಟು ಮಾಡಿಕೊಡುತ್ತೇನೆ. ಬಂದವರನ್ನ ಸ್ವಲ್ಪ ಒಳ್ಳೆಯ ಮಾತಾಡಿಸಿ ಆದರಿಸಿ ಇಟ್ಟುಕೊಂಡಿರಬೇಕು' ಎಂದು ಕೃಷ್ಣರಾಯರು ಹೇಳಿ ರಘುವನ್ನು ಕರೆದರು. ಅವನು ಬಂದು, 'ಏನಪ್ಪ?' ಎಂದನು.

'ಮೋಟಾರಿನಲ್ಲಿ ದೊಡ್ಡ ಬ್ರಾಹ್ಮಣರ ಕೇರಿಗೆ ಹೋಗಪ್ಪ! ಅಲ್ಲಿ ಮಾಧವರಾಯರ ಮನೆಯಲ್ಲಿ ನಿನ್ನ ಚಿಕ್ಕತ್ತೆ ಇದ್ದಾಳೆ. ಈ ದಿನ ಬೆಳಗ್ಗೆ ಬಂದಳು ಆಕೆ. ನಾನು ಬರಹೇಳಿದೆ ಎಂದು ತಿಳಿಸಿ ಕೂಡಲೆ ಕರೆದುಕೊಂಡು ಬಾ ಹೋಗು' ಎಂದು ಕೊಟ್ಟು ಕಳುಹಿಸಿದರು.

ಕಾಲು ಗಂಟೆಯೊಳಗಾಗಿ ಕೃಷ್ಣರಾಯರ ತಂಗಿ – ಆ ಇಂಟರ್ ಮಿಾಡಿಯೇಟ್ ತರಗತಿಯ ಹ.ಡ.ಗನ ತಾಯಿ – ಮೋಟಾರಿನಲ್ಲಿ ಬಂದು ಇಳಿದಳು. ತನ್ನ ಮಗನಿಗೆ ತನ್ನ ಅಣ್ಣನ ಮನೆಯಲ್ಲಿ ಆಶ್ರಯ ದೊರೆಯಲಿಲ್ಲವಾದ್ದರಿಂದ ಆಕೆ ತನ್ನ ಮಗನನ್ನು ತನ್ನ ಭಾವನವರ – ಗಂಡನ ಅಣ್ಣನ – ಮನೆಯಲ್ಲಿ ಬಿಟ್ಟಿದ್ದಳು. ಆ ದಿನ ಬೆಳಗ್ಗೆ ಕಾರ್ಯಾಂತರವಾಗಿ ಆಕೆ ಶಿವಮೊಗ್ಗಕ್ಕೆ ಬಂದಿದ್ದಳು. ಆದ್ದರಿಂದ ಆಕೆಯ ನೆರವು ಸಕಾಲಕ್ಕೆ ದೊರೆಯಿತು. ಆಕೆ ಮನೆಯೊಳಕ್ಕೆ ಬರುತ್ತಿದ್ದಂತೆಯೇ, 'ಏನು ಕಿಟ್ಟಣ್ಣ! ಬೆಳಗ್ಗೆ ನೀನು ಬಂದಿದ್ದಾಗಲೇ ನನಗೆ ಹೇಳಿದ್ದರೆ ಆ ಕೂಡಲೇ ಹೊರಟು ಬರುತ್ತಿದ್ದೆನಲ್ಲ. ಏಕೆ ಹೇಳಲಿಲ್ಲ? ಪಾಪ! ಅತ್ತಿಗೆಯ ಸಹಾಯಕ್ಕೆ ಇಲ್ಲಿ ದೊಡ್ಡ ಹೆಂಗಸರು ಯಾರೂ ಇಲ್ಲ' ಎಂದು ಹೇಳಿದಳು.

'ಆಗ ಸರೋಜಳ ಸ್ಥಿತಿ ನಮಗೆ ತಿಳಿದಿರಲಿಲ್ಲವ್ಮ. ಇನ್ನೂ ಎರಡು ದಿನ ತಳ್ಳಬಹುದೋ ಏನೋ ಎಂದು ನಾನಿದ್ದೆ. ಮಧ್ಯಾಹ್ನ ಮೂರು ಗಂಟೆಗೆ ನನಗೆ ಸಮಾಚಾರ ತಿಳಿಯಿತು. ಕಚೇರಿಯಿಂದ ಹೊರಟು ಬಂದೆ. ನಿನ್ನ ಅತ್ತಿಗೆ ನಿನ್ನನ್ನು ಕರೆಸಬೇಕು ಎಂದು ಹೇಳಿದಳು ಆದರಂತೆ ನಿನಗೆ ಹೇಳಿಕಳಿಸಿದೆ.'

'ಸರಿಯಪ್ಪ ನೀನು ಮಾಡಿದ್ದು. ಸೂಲಗಿತ್ತಿ ಬಂದಿದ್ದಾಳೋ ಇಲ್ಲವೋ?'

'ಸೂಲಗಿತ್ತಿ, ಲೇಡಿ ಡಾಕ್ಟರ್ ಎಲ್ಲರೂ ಬಂದಿದ್ದಾರೆ. ಹೋಗಿ

ನೋಡಮ್ಮ. ಸರೋಜ ನಿನ್ನನ್ನು ನೋಡಿದರೆ ಧೈರ್ಯಗೊಳ್ಳುತ್ತಾಳೆ. ಅವಳದೇನು ಬೇನೆ ಸಂಕಟವೊಂದೇನೇ!'

ಸರೋಜ ತನ್ನ ಚಿಕ್ಕತ್ತೆಯನ್ನು ನೋಡಿ, 'ಬಂದೆಯಾ ಅತ್ತೆ! ನೋವೇಕೋ ಸಹಿಸುವುದಕ್ಕಾಗುವುದಿಲ್ಲ' ಎಂದಳು. ಯಾವ ನೆಂಟರಿದ್ದು ಏನು ಮಾಡುತ್ತಾರೆ? ಯಾವ ಡಾಕ್ಟರಿದ್ದು ಏನು ಮಾಡುತ್ತಾರೆ? ಹೆರುವ ಹೆಂಗಸು ಬೇನೆ ಅನುಭವಿಸಬೇಕಲ್ಲದೆ ಉಳಿದವರು ಹಂಚಿಕೊಂಡಾರೇ? ಲೇಡಿ ಡಾಕ್ಟರ್ ಹೇಳಿದ್ದಂತೆಯೇ ನಾಲ್ಕೂವರೆ ಗಂಟೆಗೆ ಪ್ರಸವವಾಯಿತು. ಸರೋಜ ಗಂಡುಮಗುವನ್ನು ಹೆತ್ತಳು. ಹೆರಿಗೆಯ ಮನೆಯಿಂದ **ಕಾವ್ ಕಾವ್** ಎಂದು ಹುಟ್ಟಿದ ಮಗುವಿನ ಅಳು ಗಟ್ಟಿಯಾಗಿ ಕೇಳಿ ಬಂತು. ಯಜಮಾನಿಯ ಸಂತೋಷ ಸಂಭ್ರಮ ಹೇಳತೀರದು. ಆ ಮೊಮ್ಮಗನ ಅಳು ಕೇಳಿ, 'ಏಕೆ ಗಟ್ಟಿಯಾಗಿ ಅಳ್ತೀಯೋ ನನ್ನಪ್ಪ! ನಿನ್ನಪ್ಪ ನಿನ್ನ ನೋಡಲಿಕ್ಕಾದರೂ ಬಂದಾನೆಯೋ!' ಎಂದು ಉದ್ಗಾರ ತೆಗೆದಳು. ಕೃಷ್ಣರಾಯರಿಗೂ ಮೊಮ್ಮಗ ಹುಟ್ಟಿದ್ದಕ್ಕೆ ಬಹಳ ಸಂತೋಷವಾಯಿತು. ಮಗುವಿನ ಬಾಣಂತಿಯ ಶುಶ್ರೂಷೆಗಳೆಲ್ಲ ಆಗಿ ಮಗುವನ್ನು ಬೆತ್ತದ ಚೌಕ ತಟ್ಟೆಯಲ್ಲಿ ಮಲಗಿಸಿ ಕೊಟಡಿಯ ಬಾಗಿಲನ್ನು ಸೂಲಗಿತ್ತಿ ತೆಗೆದಳು. ಮಗುವನ್ನು ನೋಡಿ, 'ಎಲ್ಲ ಅವನ ಮುಖವೇ!' ಎಂದಳು ಹೊಸ ಅಜ್ಜಿ. ಕೃಷ್ಣರಾಯರು ಲೇಡಿ ಡಾಕ್ಟರೊಂದಿಗೆ ಸರೋಜಳ ವಿಚಾರ ಸ್ವಲ್ಪ ಮಾತನಾಡುತ್ತಿದ್ದು ಆಕೆಯನ್ನು ಮೋಟಾರಿನಲ್ಲಿ ಹಿಂದಕ್ಕೆ ಕಳಿಸಿಕೊಟ್ಟರು. ಬಳಿಕ ಪುನಃ ಕೊಟಡಿಯನ್ನು ಹೊಕ್ಕು ಸರೋಜಳನ್ನು ಎರಡು ಮಾತನಾಡಿಸಿ, 'ಆಯಾಸಪಡಿಸ ಬೇಡಿ, ಮಗುವನ್ನು ಅವಳ ಪಕ್ಕದಲ್ಲಿಡಿ' ಎಂದು ಹೇಳಿ ಹಿಂದಕ್ಕೆ ಬಂದರು.

ಹೆರಿಗೆಯ ಸಂಭ್ರಮವೆಲ್ಲ ಮುಗಿದು ಸ್ವಲ್ಪ ಶಾಂತವಾತಾವರಣ ಏರ್ಪಡುತ್ತಲೂ ಕೃಷ್ಣರಾಯರು ತಮ್ಮ ಹೆಂಡತಿಯನ್ನು ಕೊಟಡಿಗೆ ಕರೆದುಕೊಂಡು ಹೋದರು.

'ಸರಿ. ಮೊಮ್ಮಗ ಹುಟ್ಟಿದ ಸಂತೋಷ ಒಂದಾಯಿತು. ನಿನಗೆ ಇನ್ನೊಂದು ಸಂತೋಷದ ಸಂಗತಿ ತಿಳಿಸುತ್ತೇನೆ. ಕುಳಿತುಕೋ.'

'ಏನು ಸೀತಾರಾಮು ಬರುತ್ತಾನೆಯೋ? ಬರುತ್ತೇನೆಂದು ಕಾಗದ

ಬರೆದಿದ್ದಾನೆಯೆ? ದೇವರೇ! ನಿನಗೆ ಪಂಚಾಮೃತ ಅಭಿಷೇಕ ಮಾಡಿ ಸುತ್ತೇನಪ್ಪ' ಎಂದು ಆಕೆ ಆತುರವಾಗಿ ಹೇಳಿದಳು.

'ಅಷ್ಟೆಲ್ಲ ಆತುರಪಡಬೇಡ. ನಿನ್ನ ಅಳಿಯ ಇಲ್ಲಿಗೆ ಬರುವ ಸಮಾಚಾರ ಏನೂ ಗೊತ್ತಿಲ್ಲ. ತುಮಕೂರಿನಿಂದ ಅವನ ಸ್ನೇಹಿತ ರಾಮಣ್ಣ ಎಂಬುವನು ಕಾಗದ ಬರೆದಿದ್ದಾನೆ.'

'ಸರಿಯೆ. ಅವನು ಬರೆದರೇನು, ಅವನ ಸ್ನೇಹಿತ ಬರೆದರೇನು? ತಾನು ಬರೆಯುವುದಕ್ಕೆ ಸಂಕೋಚಪಟ್ಟುಕೊಂಡು ಸ್ನೇಹಿತನಿಗೆ ಹೇಳಿ ಬರೆಸಿದ್ದಾನೆ. ನಮಗೆ ಎರಡೂ ಒಂದೇನೇ! ಸರೋಜಳ ವಿಚಾರ ಏನಾದರೂ ಬರೆದಿದ್ದಾನೆಯೆ? ಅಮ್ಮ! ನಿನ್ನ ಗಂಡ ಕಾಗದ ಬರಸಿದ್ದಾನೆ–ಎಂದು ಒಂದು ಮಾತನ್ನು ಅವಳಿಗೆ ಹೇಳಿದರೆ ಎಷ್ಟೋ ಸಂತೋಷಪಟ್ಟಾಳು.'

'ಈಗೇನನ್ನೂ ತಿಳಿಸಬೇಡ. ಯಾವುದೂ ಪಕ್ವಕ್ಕೆ ಬಂದಿಲ್ಲ. ಸೀತಾರಾಮುವಿನ ಮನೋಭಾವ, ಕಾವೇರಮ್ಮನ ಮನೋಭಾವ, ಅವರ ಉದ್ದೇಶಗಳು, ಮೊದಲಾದುವನ್ನೆಲ್ಲ ಪತ್ತೆ ಮಾಡಿ ಕಾಗದ ಬರೆಯಪ್ಪ ಎಂದು ಹೇಳಿದ್ದೆ. ಸೀತಾರಾಮುವನ್ನು ಉಪಾಯದಿಂದ ದಾರಿಗೆ ಕರೆದುಕೊಂಡು ಬಾರಪ್ಪ ಎಂದು ಹೇಳಿದ್ದೆ. ಆದರ ಮೇಲೆ ಅವನೂ ಪ್ರಯತ್ನಪಡುತ್ತಿದ್ದಾನೆ. ನಮಗೆ ಸಮಾಚಾರ ತಿಳಿಸಿದ್ದಾನೆ, ಅಷ್ಟೇ.'

'ಸೀತಾರಾಮು ಏನು ಹೇಳುತ್ತಾನಂತೆ?'

'ಈಗ ಅವನಿಗೆ ಮೊದಲಿನ ಕೋಪ ಇಲ್ಲ. ಮನಸ್ಸು ಸಮಾಧಾನ ಸ್ಥಿತಿಗೆ ಬರುತ್ತಿದೆ. ಸರೋಜಳ ಮಾತು ಎತ್ತಿದಾಗ ಮುಖ ಇಳಿಬಿಟ್ಟುಕೊಂಡು ಎಲ್ಲವನ್ನೂ ಕೇಳುತ್ತಾನಂತೆ. ಈಗ ಹೆಂಗೆಯ ದಿನ—ಎಂದು ಸ್ನೇಹಿತನೊಡನೆ ಹೇಳಿದನಂತೆ. ಆಗಾಗ ತನ್ನ ತಾಯಿಯ ಮೇಲೆ ಅಸಮಾಧಾನ ತೋರಿಸುತ್ತಾನೆ, ಸಣ್ಣ ಪುಟ್ಟ ವ್ಯಾಜ್ಯಗಳಾಗುತ್ತಿವೆ. ಆದರೂ ತಾಯಿಯ ಮಾತು ಇನ್ನೂ ಪಥ್ಯವಾಗಿದೆ.'

'ಈಗ ನೀವೊಂದು ಕೆಲಸ ಮಾಡಿ! ಹುಡುಗ ನಮ್ಮ ದಾರಿಗೆ ಬಂದುಬಿಡುತ್ತಾನೆ.'

'ಏನು ಮಾಡಬೇಕು? ಹೇಳು, ನೋಡೋಣ.'

‘ನೀವು ಅಸಿಸ್ಟೆಂಟ್ ಕಮಿಷನರ್ ಆಗಿದ್ದೀರಿ. ದೊಡ್ಡ ಹುದ್ದೆಯಲ್ಲಿದ್ದೀರಿ. ನಿಮಗೆ ಮೇಲಿನವರೆಲ್ಲ ಎಷ್ಟೋ ಜನ ತಿಳಿದವರಿದ್ದಾರೆ. ನಿಮ್ಮ ಮಾತು ನಡೆಯುತ್ತದೆ. ಸೀತಾರಾಮುವಿಗೆ ಒಂದು ಪ್ರಮೋಷನ್ ಕೊಡಿಸುವ ಏರ್ಪಾಡು ಮಾಡಿ. ನಿಮ್ಮ ಶಿಫಾರಸಿನಿಂದ ಅದು ಆದಂತೆ ಅವನಿಗೆ ತಿಳಿಯಲಿ. ನನ್ನ ಮೇಲೆ ಅವನಿಗೆ ಖಾರ ಸ್ವಲ್ಪ ಇರಬಹುದು. ನಿಮ್ಮ ವಿಚಾರದಲ್ಲಿ ಬಹಳ ಗೌರವ ಇಟ್ಟಿದ್ದಾನೆ. ಆಗ ನೀವು ಸೀತಾರಾಮುಗೆ ಒಂದು ಮಾತು ಹೇಳಿದರೆ ಅವನು ತಳ್ಳಿಹಾಕುವುದಿಲ್ಲ. ಆಲೋಚನೆ ಮಾಡಿ ನೋಡಿ.’

‘ಪ್ರಮೋಷನ್ ಗಿಮೋಷನ್ ಕೈಯ್ಯಾಸೆ ತೋರಿಸಿ ದಾರಿಗೆ ತರುವುದಕ್ಕಾಗುವುದಿಲ್ಲ. ನಿನಗೆ ಭ್ರಾಂತಿ. ಏನಿದ್ದರೂ ಸರೋಜಳ ಮೇಲಿನ ಗಾಢಪ್ರೇಮದಿಂದ ಅವನು ನಮ್ಮ ಕಡೆಗೆ ತಿರುಗಬೇಕು. ಅವನಿಗೇನೋ ಅವಳಲ್ಲಿ ಆ ಪ್ರೇಮ ಇದೆ.’

‘ಅದು ಹೇಗೆ ಗೊತ್ತು ನಿಮಗೆ? ಮತ್ತೆ ಅವನೇಕೆ ಅವಳ ಒಂದು ಕಾಗದಕ್ಕೂ ಜವಾಬು ಕೊಡಲಿಲ್ಲ.’

‘ಸರೋಜಳ ವಿಚಾರ ತಿಳಿದುಕೊಳ್ಳಬೇಕು ಎಂಬ ಕುತೂಹಲವೇ ಅವನಿಗೆ ಅವಳಲ್ಲಿ ಪ್ರೇಮವಿರುವುದನ್ನು ತೋರಿಸುತ್ತದೆ. ರಾಮಣ್ಣ ಮಧ್ಯಸ್ಥಿಕೆಗೆ ನಿಂತಿದ್ದಾನೆ ಎಂಬುದು ಅವನಿಗೆ ಗೊತ್ತಿರುವ ವಿಷಯ. ತನ್ನ ಸಮಾಚಾರವೆಲ್ಲ ನಮಗೆ ರಾಮಣ್ಣನ ಮೂಲಕ ತಿಳಿಯುತ್ತದೆ ಎಂಬುದನ್ನೂ ಅವನು ಬಲ್ಲ. ಇದು ಈಗಿರುವ ಸಂದರ್ಭ. ಅವನು ಮತ್ತೆ ಕಾಗದವನ್ನೇಕೆ ಬರೆಯಲಿಲ್ಲ? ಎಂದು ಕೇಳಿದೆ. ಆ ವಿಚಾರ ತಿಳಿಸುತ್ತೇನೆ. ಅದನ್ನೂ ರಾಮಣ್ಣ ಬರೆದಿದ್ದಾನೆ. ನಾಗರಾಜ ಆ ದಿನ ಸೀತಾರಾಮುವನ್ನು ಚಾಟಿಯಿಂದ ಹೊಡೆಯುತ್ತೇನೆ– ಎಂದು ಮುಂತಾಗಿ ಆಡಿಬಿಟ್ಟ ನೋಡು. ಅದು ಅವನ ತಾಯಿಗೂ ತಿಳಿದುಹೋಗಿದೆ. ತನ್ನ ಮಗನನ್ನ ನಾಗರಾಜ ಚಾಟಿಯಿಂದ ಹೊಡೆದನೆಂದೇ ಆಕೆ ನಂಬಿದ್ದಾಳೆ. ನಂಬಿದ್ದಾಳೋ ಇಲ್ಲವೋ ಅಂತೂ ಆ ಮಾತನ್ನು ಆಗಾಗ ಎತ್ತಿ ಹಂಗಿಸುತ್ತಾಳೆ. ಅವನಿಗೆ ಮಾಗುತ್ತಿರುವ ಗಾಯದ ಮೇಲೆ ಮತ್ತೆ ಚಾಟಿ ಏಟು ಬಿದ್ದಹಾಗೆ ಆಗುತ್ತದೆ.’

'ಏನು ಮಾಡೋದು! ನಾಗರಾಜ ದುಡುಕು, ಕೋಪಿ. ಆ ದಿನ ಅವನೇನೋ ಇಂಗ್ಲಿಷಿನಲ್ಲಿ ಅಂದ. ಅದಕ್ಕೆ ಸೀತಾರಾಮುವೂ ಇಂಗ್ಲಿಷಿನಲ್ಲಿ ಜವಾಬು ಕೊಟ್ಟ. ನನಗೆ ಎರಡೂ ಅರ್ಥವಾಗಲಿಲ್ಲ. ಆದರೆ ಅವನು ಸೆಡೆತು ನಿಂತದ್ದನ್ನು ನೋಡಿ ನಾನು ನಡುಗಿಹೋದೆ. —ಓಹೋ! ಈ ದಿವಸ ಜೀವಗಳೆರಡು ಹೋಗಿಬಿಡುತ್ತವೆ– ಎಂದು ಕೊಂಡು ಸಾಹಸ ಮಾಡಿ ನಾಗರಾಜನನ್ನು ಕೊಟಡಿಗೆ ಸೇರಿಸಿ ನಾರಣಾ ಚಾರಿಯನ್ನು ಕಾವಲು ಹಾಕಿದೆ. ಆಮೇಲಾಮೇಲೆ ನನಗೆ ಆ ಇಂಗ್ಲಿಷ್ ಮಾತುಗಳ ಅರ್ಥವನ್ನು ಸರೋಜ ಹೇಳಿದಳು. ಆಗಲೇ ಅಂದು ಕೊಂಡೆ: ನಾವು ಕೆಟ್ಟೆವು. ಸರೋಜಳ ಸಂಸಾರವನ್ನು ಮುಳುಗಿಸಿ ದೆವು ಎಂದು ಅಂದುಕೊಂಡೆ. ಈಗ ಏನು ಮಾಡಬೇಕು? ಹೇಳಿ'

'ಈಗಿನ ಸ್ಥಿತಿ ಹೇಳುತ್ತೇನೆ; ಗಾಬರಿ ಆಗಬೇಡ, ಸಂತೋಷ ವನ್ನೂ ಪಡಬೇಡ. ಕಾವೇರಮ್ಮ ಅವನಿಗೆ ಬೇರೆ ಮದುವೆ ಮಾಡಿಸುವ ಪ್ರಯತ್ನದಲ್ಲಿದ್ದಾಳೆ. ಅವನು ಬೇರೆ ಮದುವೆಯ ಯೋಚನೆ ಇಟ್ಟು ಕೊಂಡಹಾಗೆ ಕಾಣುವುದಿಲ್ಲ. ತಾಯಿಯನ್ನು ತೃಪ್ತಿಪಡಿಸುವುದಕ್ಕೆ ಬೇಕಾದರೆ ಸರೋಜಳನ್ನು ಕರೆಸಿಕೊಳ್ಳದೆ, ಸರೋಜಳಿಗೆ ಕಾಗದ ಗೀಗದ ಬರೆಯದೆ ಮದುವೆಯಾಗದವನಂತೆ ಇದ್ದುಬಿಟ್ಟಾನು. ತಾಯಿಯ ಕಾಟ ಹೆಚ್ಚಾದರೆ ನಿರ್ಬಂಧಕ್ಕೆ ಮದುವೆ ಆದಾನೋ ಊರು ಬಿಟ್ಟು ಎಲ್ಲಿಯಾ ದರೂ ಹೊರಟುಹೋದಾನೋ! ಈಗ ಹೇಳುವುದಕ್ಕಾಗುವುದಿಲ್ಲ. ಆ ತಾಯಿ ಇಲ್ಲದಿದ್ದರೆ ಸೀತಾರಾಮುವಿಗೆ ಹೇಗೋ ಬುದ್ಧಿ ಹೇಳಿ ಶಿವಮೊ ಗ್ಗಕ್ಕೆ ಕರೆದುಕೊಂಡು ಬಂದೇನು – ಎಂದು ಮುಂತಾಗಿ ರಾಮಣ್ಣ ತಿಳಿಸಿದ್ದಾನೆ.'

'ಆ ಹಾಳು ರಾಕ್ಷಸಿಯನ್ನು ಅವನು ಏಕೆ ಕಟ್ಟಿಕೊಂಡು ಅಳು ತ್ತಾನೋ! ಒಂದು ಕಡೆ ಸೊಸೆಯನ್ನು ಹುರಿದು ತಿನ್ನುತ್ತಾಳೆ, ಇನ್ನೊಂದು ಕಡೆ ಮಗನನ್ನು ಕಡಿದು ತಿನ್ನುತ್ತಾಳೆ. ನೀನು ಹಾಳಾಗಿ ಹೋಗು— ಎಂದು ತಾಯಿಗೆ ಹೇಳಿ ಅವನು ಶಿವಮೊಗ್ಗಕ್ಕೆ ಬಂದುಬಿಡಬಾರದೇ? ಅವನಿಗೆ ಶಿವಮೊಗ್ಗಕ್ಕಾದರೂ ವರ್ಗವಾಗುವಂತೆ ಮಾಡಿ. ಕಣ್ಣೆದುರಿ ಗಿದ್ದರೆ ನಾವು ಏನಾದರೂ ಮಾಡಬಹುದು.'

'ಅವನು ಶಿವಮೊಗ್ಗಕ್ಕೆ ವರ್ಗವಾಗಿ ಬಂದರೆ ತಾನೆ ಏನು? ಆ ತಾಯಿಯನ್ನೂ ಆ ಸಂಸಾರವನ್ನೂ ಬಿಟ್ಟು ಬಿಟ್ಟು ನಿನ್ನ ಮನೆಗೆ ಬಂದಿರುತ್ತಾನೆಯೇ?'

'ಹಾಗಾದರೆ ಈಗ ಏನು ಮಾಡಬೇಕು ಎನ್ನುತ್ತೀರಿ?'

'ಅದನ್ನೇ ಆಲೋಚನೆ ಮಾಡಬೇಕಾಗಿದೆ. ನಾನು ಕೆಲವು ದಿನಗಳ ಹಿಂದೆ ಸರೋಜಳ ಫೋಟೋ ತೆಗಿಸಿ, ಅವಳು ಹೇಗೆ ಕೊರಗಿ ಸೊರಗಿ ಹೋಗಿದ್ದಾಳೆ ಎಂಬುದನ್ನು ಸೀತಾರಾಮು ನೋಡಲಿ ಎಂದು ರಾಮಣ್ಣನಿಗೆ ಕಳಿಸಿಕೊಟ್ಟಿದ್ದೆ. ಈಗ ಹೆಂಗೆಯ ದಿನ— ಎಂದು ಸೀತಾರಾಮು ಆಡಿದಾಗ ರಾಮಣ್ಣ ಆ ಫೋಟೋವನ್ನು ಅವನಿಗೆ ಕೊಟ್ಟನಂತೆ. ಅವನು ಅದನ್ನೇ ದೃಷ್ಟಿಸುತ್ತಿದ್ದು ಪಳಪಳನೆ ಕಣ್ಣೀರು ಸುರಿಸಿ,— ಇದು ನನ್ನ ಹತ್ತಿರ ಇರಲಿ. ಮದುವೆಯಾದಾಗ ತೆಗೆದ ಫೋಟೋವನ್ನು ಗೋಡೆಗೆ ತಗುಲಿಹಾಕಿದ್ದೇನೆ. ಇದನ್ನು ನನ್ನ ಎದೆಗೆ ತಗುಲಿಹಾಕಿಕೊಳ್ಳುತ್ತೇನೆ ಎಂದು ಹೇಳಿ ಇಟ್ಟುಕೊಂಡಿದ್ದಾನಂತೆ.'

'ಸೀತಾರಾಮು ಅಪರಂಜಿಯಂಥ ಹುಡುಗ! ನೀವು ನನಗೆ ಯಾವುದನ್ನೂ ತಿಳಿಸಲೇ ಇಲ್ಲವಲ್ಲ.'

'ಎಲ್ಲವನ್ನೂ ನಿನ್ನ ಹಾಗೆ ಪ್ರಕಟ ಮಾಡಬೇಕಾಗಿತ್ತೇ?'

'ಈಗ ಆ ಮಾತೆತ್ತಿ ನನ್ನನ್ನು ಕುಕ್ಕಬೇಡಿ. ಈಗ ಮುಂದೆ ನಾವೇನು ಮಾಡಬೇಕು? ಅವನು ನಮ್ಮ ಮನೆಗೆ ಬಂದರೆ ಸಾಕು. ಹೆಜ್ಜೆ ಹೆಜ್ಜೆಗೂ ಸವರನ್ ಸುರಿದು ಪಾದಪೂಜೆ ಮಾಡಿಯೇನು!'

'ಈಗ ರಾಮಣ್ಣ ಬರೆದಿದ್ದಾನೆ: ಒಂದು ದಿನ ಪುರುಸತ್ತು ಮಾಡಿಕೊಂಡು ಬಂದು ಸೀತಾರಾಮುವನ್ನು ಕಂಡರೆ ಒಳ್ಳೆಯದು, ಅವನ ತಾಯಿಯನ್ನು ಕಂಡು ಸಮಾಧಾನ ಪಡಿಸಿದರೆ ಮುಂದೆ ಈ ಪ್ರಮಾದ ಬೆಳೆಯದೆ ಮುಕ್ತಾಯ ಆಗಬಹುದು— ಎಂದು ತಿಳಿಸಿದ್ದಾನೆ.'

'ಹಾಗಾದರೆ ಹೋಗಿಬಿಟ್ಟು ಬನ್ನಿ. ಹುಡುಗನೊಡನೆ ಒಳ್ಳೆಯ ಮಾತನಾಡಿ. ನಿನ್ನ ಅತ್ತೆ ನಿನ್ನ ಹಂಬಲೇ ಹಚ್ಚಿಕೊಂಡಿದ್ದಾಳಪ್ಪ! ಹಗಲೂ ರಾತ್ರಿ ನಿನ್ನ ಮಾತನ್ನೇ ಆಡುತ್ತಿದ್ದಾಳೆ. ಅಪರಂಜಿಯಂಥ ಅಳಿಯ! ನಮ್ಮ ದುರದೃಷ್ಟ! ಇದುವರೆಗೂ ಏಕೋ ಬಂದಿಲ್ಲ ಎನ್ನುತ್ತಿ

ದ್ದಾಳೆ—ಎಂದೆಲ್ಲ ಹೇಳಿ. ಈಗ ಅವನಿಗೆ ಮಗ ಹುಟ್ಟಿರುವ ಸಮಾಚಾರ ವನ್ನು ಮೊದಲು ಬರೆದುಹಾಕಿ. ಆಮೇಲೆ ಹೋಗಿ ಮಾತನಾಡಿಕೊಂಡು ಬನ್ನಿ.'

'ನಾನು ಹೇಳುವ ಒಂದು ಮಾತನ್ನು ಕೇಳುತ್ತೀಯಾ? ನನ್ನ ಮಾತನ್ನು ನಡಸುತ್ತೀಯಾ?'

'ನೀವು ಬೇಕಾದ್ದನ್ನು ಹೇಳಿ ಕೇಳುತ್ತೇನೆ, ನಡಸುತ್ತೇನೆ. ಇಷ್ಟು ವರ್ಷ ನನ್ನೊಡನೆ ಸಂಸಾರ ಮಾಡಿದರಲ್ಲ! ಈ ಹೆಂಡತಿಯ ಮರ್ಮ ತಿಳಿದುಕೊಳ್ಳಲಿಲ್ಲವೇ? ನಿಮ್ಮ ಮಾತಿಗೆ ಎಂದಾದರೂ ಪ್ರತಿ ಹೇಳಿ ದ್ದೇನೆಯೇ? ಪ್ರತಿ ಮಾಡಿದ್ದೇನೆಯೇ? ಏನೋ ಬೇಸರಿಕೆಯಾದಾಗ ಒಂದು ಅಡ್ಡ ಮಾತು ಆಡಿರಬಹುದು. ಅದೇನು ದೊಡ್ಡದು!'

'ನೀನೂ ತುಮಕೂರಿಗೆ ಬರಬೇಕು! ನಿನ್ನ ಬೀಗಿತ್ತಿಯೊಡನೆ ನೀನೇ ಮಾತನಾಡಬೇಕು. ನಾನು ಗಂಡಸು ಆಡುವುದಕ್ಕಿಂತ ನೀನು, ಹೆಂಗಸು ಬೀಗಿತ್ತಿಯಾದವಳು ಬಂದು ಮಾತನಾಡಿದರೆ ಒಳ್ಳೆಯದು. ಆಕೆ ಸಮಾಧಾನಪಟ್ಟಾಳು.'

'ನಾನು ಬರಬೇಕು ಅನ್ನುತ್ತೀರಾ? ಮೂರೂ ಬಿಟ್ಟು ಅವಳೊ ಡನೆ ಮುಖಕೊಟ್ಟು ಮಾತನಾಡಬೇಕು ಅನ್ನುತ್ತೀರಾ?' ಎಂದು ಅಸ ಮಾಧಾನದಿಂದ ಗಟ್ಟಿಯಾಗಿ ತುಳಸಾಬಾಯಿ ಕೇಳಿದಳು. ಎರಡು ನಿಮಿಷ ಮೌನವಾಗಿದ್ದಳು. ಆಕೆಯ ಮುಖ ಕೋಪದಿಂದ ದುಃಖಕ್ಕೆ ತಿರುಗಿ ಕಣ್ಣೀರು ಹರಿಯತೊಡಗಿತು. ಬಳಿಕ ಸಮಾಧಾನದಿಂದ, 'ಏನು ಮಾಡುವುದು? ಮಗಳು ಮಾನವಾಗಿ ಬದುಕಬೇಕಾದರೆ ಹೆತ್ತವರು ತಗ್ಗಿ ಹೋಗಬೇಕು. ಆಗಲಿ, ಬರುತ್ತೇನೆ. ನಾಮಕರಣಕ್ಕೆ ಅಳಿಯ ಬರುವ ಹಾಗೆ ಮಾಡಿದರೆ ಜನರ ಬಾಯಲ್ಲಿ ನಾವು ಬೀಳುವುದಿಲ್ಲ. ಇಲ್ಲದಿ ದ್ದರೆ ಅಳಿಯ ಏಕೆ ಬರಲಿಲ್ಲ? ಬೀಗಿತ್ತಿ ಏಕೆ ಬರಲಿಲ್ಲ? ಎಂದು ಎಲ್ಲರೂ ಕೇಳುತ್ತಾರೆ. ಅವರಿಗೆ ಜವಾಬು ಕೊಡುವುದು ಕಷ್ಟ. ಆ ದಿನ ನಡೆದ ಜಗಳ ಈ ಬಂಗಲೆಯಲ್ಲಿ ನಡೆಯಿತು. ಅಕ್ಕಪಕ್ಕ ಯಾರಿಗೂ ಏನೂ ತಿಳಿಯಲಿಲ್ಲ. ದೊಡ್ಡ ಬ್ರಾಹ್ಮಣರ ಕೇರಿಯೋ ಚಿಕ್ಕ ಬ್ರಾಹ್ಮಣರ ಕೇರಿಯೋ ಆಗಿದ್ದರೆ ಮರುದಿನವೇ ಊರಲ್ಲೆಲ್ಲ ಡಂಗುರವಾಗುತ್ತಿತ್ತು.

ನಾನೂ ಸಾರಣಾಚಾರಿಗೆ, – ಭದ್ರ! ಎಲ್ಲಿಯಾದರೂ ಬಾಯಿ ಬಿಟ್ಟೀಯೆ ಎಂದು ಆ ದಿನವೇ ಎಚ್ಚರಿಕೆ ಕೊಟ್ಟು ಬಾಯಿಮುಚ್ಚಿಸಿದ್ದೇನೆ' ಎಂದು ಹೇಳಿದಳು.

'ಆ ಮಾತು ಬಿಡು' ಈಗ ನಾಮಕರಣದ ಹೊತ್ತಿಗೆ ಅವರನ್ನು ಬರಮಾಡಿಕೊಳ್ಳುವುದಕ್ಕೆ ಆಗುತ್ತದೆಯೋ ಇಲ್ಲವೋ ಹೇಳಲಾರೆ. ಒಂದು ವೇಳೆ ನಾಮಕರಣವನ್ನು ಮುಂದಕ್ಕೆ ಇಟ್ಟುಕೊಂಡರೆ ಪ್ರಯತ್ನ ಪಟ್ಟು ನೋಡಬಹುದು. ಈಗ ತಾನೆ ಸರೋಜ ಹೆತ್ತಿದ್ದಾಳೆ. ಇನ್ನು ಹತ್ತುದಿನ ಇಲ್ಲಿಂದ ನೀನು ಕದಲುವಹಾಗಿಲ್ಲ.'

'ಹೌದು. ನೀವು ಹೇಳಿದ್ದು ಸರಿ. ಹತ್ತುದಿನ ಕಳೆಯೋವರೆಗೂ ಏನು ಮಾಡುವುದಕ್ಕೂ ಆಗುವುದಿಲ್ಲ. ಆಮೇಲೆ ಇಬ್ಬರೂ ಹೋಗಿ ಬಿಟ್ಟು ಬರೋಣ.'

'ಇನ್ನೊಂದು ಮಾತು. ಅದನ್ನು ನಡಸುತ್ತೀಯಾ?'

'ಏನು? ಹೇಳಿ.'

'ನಾಗರಾಜನನ್ನ ದಾರಿಗೆ ತಂದುಕೊ. ಅವನು ತನ್ನ ಭಾವನ ಕ್ಷಮೆಕೇಳಿಕೊಳ್ಳುವುದು ಒಳ್ಳೆಯದು.'

'ನೀವೇ ಏತಕ್ಕೆ ಅವನೊಡನೆ ಮಾತನಾಡಬಾರದು?'

'ನೀನು ತಾಯಿ. ನಿನ್ನ ಮಾತು ನಡಸುವ ಸಂಭವ ಹೆಚ್ಚು. ನಾನು ಅವನ ಹತ್ತಿರ ಹೆಚ್ಚು ಸಲಿಗೆಯಿಂದ ಮಾತನಾಡುವುದಿಲ್ಲ. ಆ ದಿನವೇ ನಾನು ಅವನಿಗೆ ಸೂಕ್ಷ್ಮ ತಿಳಿಸಿದ್ದೇನೆ. ಸಮಯ ನೋಡಿ ಕೊಂಡು ಅದನ್ನು ಅವನಿಗೆ ಜ್ಞಾಪಿಸುತ್ತೇನೆ.'

'ಒಳ್ಳೆಯ ಕೆಲಸ ನನ್ನ ತಲೆಗೆ ಕಟ್ಟಿದಿರಿ!'

## ೭. ಐದು ರೂಪಾಯಿ ಭತ್ಯ

ಸೀತಾರಾಮರಾಯನಿಗೆ ಸಂಬಳ ಕೈಗೆ ಬಂದು ನಾಲ್ಕು ದಿನಗಳಾಗಿದ್ದುವು. ಅವನು ಸಬ್‌ಡಿವಿಜನ್ ಕಚೇರಿಯಲ್ಲಿ ಹೆಡ್‌ಗುಮಾಸ್ತೆ. ತಿಂಗಳಿಗೆ ಐವತ್ತು ರೂಪಾಯಿ ಸಂಬಳ. ಮೇಲೆ ಐದು ರೂಪಾಯಿ ಅಲೋಯನ್ಸ್. ಹಿಂದೆ ಅವನ ತಂದೆ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಕೆಲಸದಲ್ಲಿದ್ದು ಸರ್ವಿಸಿನಲ್ಲಿದ್ದಾಗಲೇ ತೀರಿಕೊಂಡದ್ದರಿಂದ ಮೇಲಧಿಕಾರಿಗಳು ದಯೆ ತೋರಿ ಸೀತಾರಾಮುವಿಗೆ ಬಡ್ತಿ ಕೊಟ್ಟು ಸಬ್ ಡಿವಿಜನ್ ಕಚೇರಿಯಲ್ಲಿ ಹೆಡ್‌ಗುಮಾಸ್ತೆಯಾಗಿ ಹಾಕಿದರು. ಅವನು ಗ್ರಾಜುಯೇಟ್ ಆಗಿದ್ದುದರಿಂದ ಸಿವಿಲ್, ಕ್ರಿಮಿನಲ್ ಮೊದಲಾದ ಲೋಕಲ್ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿದರೆ ಮುಂದೆ ಅಮಲ್ದಾರ್, ಅಸಿಸ್ಟೆಂಟ್ ಕಮಿಷನರ್ ಆಗುವ ಸಂಭವವಿತ್ತು. ಶ್ರೀನಿವಾಸರಾಯರು ತಾವು ಬದುಕಿದ್ದಾಗಲೇ ಅವನಿಗೆ ಅಕೌಂಟ್ಸ್ ಹೈಯರ್ ಪರೀಕ್ಷೆಗೆ ಕಟ್ಟಿಸಿದ್ದರು. ಅವನು ಫಸ್ಟ್‌ಕ್ಲಾಸಿನಲ್ಲಿ ತೇರ್ಗಡೆಯಾಗಿದ್ದನು. ಆ ಬಗ್ಗೆ ಐದು ರೂಪಾಯಿ ಅಲೋಯನ್ಸ್ ಬರುತ್ತಿತ್ತು. ನ್ಯಾಯವಾಗಿ ಅವನು ಬೆಂಗಳೂರಿನಲ್ಲಿರುವ ಕಂಟ್ರೋಲರ್ ಅವರ ಕಚೇರಿಗೆ ವರ್ಗವಾಗಿ ಹೋಗಬೇಕಾಗಿತ್ತು. ಆದರೆ ಶ್ರೀನಿವಾಸರಾಯರ ಸಂಪಾದನೆಯಲ್ಲಿ ಆ ಸಂಸಾರದ ನಿರ್ವಾಹ ಸಾಧ್ಯವಿಲ್ಲವಾಗಿತ್ತು. ಆದ್ದರಿಂದ ಮಗನನ್ನು ತುಮಕೂರಿನಲ್ಲಿಯೇ ಕೆಲಸಕ್ಕೆ ಸೇರಿಸಿದರು. ತಂದೆ ಮಗ– ಇಬ್ಬರ ಸಂಪಾದನೆಯಿಂದ ಸಂಸಾರದ ಖರ್ಚು ಏಳುತ್ತಿತ್ತು. ತಂದೆ ಬದುಕಿದ್ದಾಗ ಸೀತಾರಾಮು ತನ್ನ ಖರ್ಚಿಗೆ ಐದು ರೂಪಾಯಿಗಳನ್ನು ಉಳಿಸಿಕೊಂಡು ಮಿಕ್ಕಿದ್ದನ್ನು ತಂದೆಯ ಕೈಗೆ ಕೊಟ್ಟುಬಿಡುತ್ತಿದ್ದನು. ತಂದೆ ತೀರಿಹೋದಮೇಲೆ ಸಂಸಾರದ ಜವಾಬ್ದಾರಿಯೆಲ್ಲ ತನ್ನೊಬ್ಬನ ತಲೆಯ ಮೇಲೆ ಬಿತ್ತು. ತಂದೆಯ ಇನ್‌ಷೂರೆನ್ಸ್ ಹಣ ಅವನ ತಾಯಿಗೆ ನಾಮಿನೇಷನ್ ಆಗಿದ್ದುದರಿಂದ ಆಕೆಯ ಕೈಗೆ ಹೋಯಿತು. ಆಕೆ, 'ನೀನು ಸಂಪಾದನೆ ಮಾಡುತ್ತಿರುವ ಗಂಡಸು. ನಿನಗೇನು? ನಾನು ಕೆಟ್ಟು ಕೂಳಿತವಳು. ಆ ಹಣವನ್ನು ಯಾರಿಗೂ ಕೊಡುವುದಿಲ್ಲ. ಅದನ್ನು

ನನ್ನ ಹೆಸರಿನಲ್ಲಿಯೇ ಬ್ಯಾಂಕಿನಲ್ಲಿ ಹಾಕಿಟ್ಟು ಕೊಂಡಿರುತ್ತೇನೆ– ಎಂದು ಹೇಳಿದಳು. ಸೀತಾರಾಮು ಆಕ್ಷೇಪಣೆಮಾಡಲಿಲ್ಲ. ಹಣ ಆಕೆಯ ಹೆಸರಿನಲ್ಲಿ ಬ್ಯಾಂಕಿನಲ್ಲಿತ್ತು.

ಐವತ್ತೈದು ರೂಪಾಯಿಗಳಲ್ಲಿ ಇನ್‌ಷೂರೆನ್ಸ್ ಚಂದಾ ಕಳೆದು ಸೀತಾರಾಮುವಿನ ಕೈಗೆ ಬರುತ್ತಿದ್ದುದು ನಲವತ್ತೈದು ರೂಪಾಯಿ. ಅವನು ಸರ್ಕಾರದ ಶಾಖೆಯಲ್ಲಿಯೂ ಪ್ರಜಾಶಾಖೆಯಲ್ಲಿಯೂ ಇನ್‌ಷ್ಯೂರ್ ಮಾಡಿದ್ದುದರಿಂದ ತಿಂಗಳಿಗೆ ಪತ್ತು ರೂಪಾಯಿಗಳನ್ನು ಸಂಬಳದಲ್ಲಿ ಹಿಡಿಯುತ್ತಿದ್ದರು ನಲವತ್ತೈದು ರೂಪಾಯಿಗಳಲ್ಲಿ ಅವನ ಸಂಸಾರ ಹೇಗೆ ನಡೆಯಬೇಕು ? ಅವನ ಮನೆಯಲ್ಲಿ ತಾಯಿ, ಮೂವರು ತಮ್ಮಂದಿರು ಇಬ್ಬರು ತಂಗಿಯರು ಇದ್ದರು. ಹುಡುಗರಿಗೆ ಹೈಸ್ಕೂಲಿನಲ್ಲಿ ಓದುತ್ತಿದ್ದ ಇಬ್ಬರಿಗೆ–ಅರ್ಧಫೀಜು ಅವನು ಕಟ್ಟಬೇಕಾಗಿತ್ತು. ಇತರ ಖರ್ಚುಗಳೂ ಇದ್ದುವು. ಹೀಗೆ ಸೀತಾರಾಮುರಾಯನು ಕಷ್ಟವಲ್ಲಿದ್ದರೂ ಕಾವೇರಮ್ಮ ತನ್ನ ಗಂಡ ಸತ್ತಮೇಲೆ ತನ್ನ ಖರ್ಚಿಗೆ ಬೇಕೆಂದು ತಿಂಗಳು ತಿಂಗಳಿಗೂ ಐದು ರೂಪಾಯಿಗಳನ್ನು ಕೇಳಿ ತೆಗೆದುಕೊಳ್ಳುತ್ತಿದ್ದಳು. ತನ್ನ ತಾಯಿ ವಿಧವೆಯಾದ ಹೊಸತರಲ್ಲಿ ಅವನು ಸಹಜವಾದ ಭಕ್ತಿಯಿಂದಲೇ ಆ ಐದು ರೂಪಾಯಿಗಳನ್ನು ತಾಯಿಗೆ ಕೊಡುತ್ತ ಬಂದನು. ಆಕೆ ಇದ್ದುದರಲ್ಲಿ ಸಂತೋಷವಾಗಿರಲಿ, ತನ್ನ ಪ್ರಕೃತಸ್ಥಿತಿಗೆ ನೊಂದುಕೊಳ್ಳದಿರಲಿ ಎಂದು ತನಗೆ ಚೈತನ್ಯವಿಲ್ಲದಿದ್ದರೂ ಕೊಡುತ್ತಿದ್ದನು. ಆದರೆ ಎಷ್ಟು ದಿನ ಇದು ನಡೆದೀತು ? ಸೀತಾರಾಮುವಿಗೆ ಸಾಲಗಳು ಹೆಚ್ಚಿದುವು. ಜತೆಗೆ ತನ್ನ ಹೆಂಡತಿ ಅಸಿಸ್ಟೆಂಟ್ ಕಮಿಷನರವರ ಮಗಳು, ಇಂಟರ್ ಪರೀಕ್ಷೆ ಮಾಡಿದ ನಾಗರಿಕ ತರುಣಿ ಈ ಬಡ ಸಂಸಾರದಲ್ಲಿ ಬೇಸರಿಕೆಯಿಲ್ಲದೆ ಇರಬೇಕಲ್ಲ ಎಂದು ತನ್ನ ಚೈತನ್ಯಕ್ಕೆ ಮೀರಿ ಖರ್ಚುಮಾಡುತ್ತಿದ್ದನು. ಕೆಲವು ತಿಂಗಳ ತರುವಾಯ ಹೆಚ್ಚು ಸಂಪಾದನೆ ಮಾಡುಬೇಕೆಂದು ಉದ್ದೇಶಿಸಿ ಹೈಸ್ಕೂಲ್ ಹುಡುಗರು ಕೆಲವರಿಗೆ ಪಾಠ ಹೇಳಲು ಪ್ರಾರಂಭಿಸಿ ತಿಂಗಳಿಗೆ ಮೂವತ್ತು ರೂಪಾಯಿ ಸಂಪಾದಿಸುತ್ತಿದ್ದನು. ಹೀಗೆ ಸಂಪಾದನೆ ಹೆಚ್ಚಿದ ಮೇಲೆ ಅನ್ನ ಸಾರಿಗೆ ಕೊರತೆಯಿಲ್ಲ, ಹೆಚ್ಚು ಕಟ್ಟಳೆಗೆ ಅವಕಾಶವಿಲ್ಲ ಎಂಬಂತೆ ಸಂಸಾರ ನಡೆಯುತ್ತಿತ್ತು. ಅವನು

ತನ್ನ ತಾಯಿಗೆ ಕೊಡುತ್ತಿದ್ದ ಐದು ರೂಪಾಯಿಗಳ ಮೇಲೆ ಒಮ್ಮೊಮ್ಮೆ ಕಣ್ಣು ಹಾಕಿದ್ದುಂಟು. 'ನನ್ನ ಕಷ್ಟ ತಿಳಿದೂ ತಿಳಿದೂ ನಿರ್ದಾಕ್ಷಿಣ್ಯವಾಗಿ ನನ್ನ ಹತ್ತಿರ ಐದು ರೂಪಾಯಿ ವಸೂಲ್ ಮಾಡುತ್ತಾಳಲ್ಲ. ನಾನು ಕಂಡ ಹಾಗೆ ಏನೊಂದು ಖರ್ಚನ್ನೂ ಮಾಡುವುದಿಲ್ಲ. ಆ ಐದು ರೂಪಾಯಿಗಳನ್ನು ಸಂಸಾರಕ್ಕೆ ಹಾಕಿದರೆ ಇನ್ನಷ್ಟು ತರಕಾರಿ, ಮೊಸರು ತರಬಹುದು, ಸುಖವಾಗಿ ಜೀವಿಸಬಹುದು, ಹೆಂಡತಿಯ ಮುಂದೆ ಮರ್ಯಾದೆಯನ್ನು ಕಾಪಾಡಿಕೊಳ್ಳಬಹುದು – ಏತಕ್ಕೆ ಮಾಡಬಾರದು ?' ಎಂದು ಚರ್ಚಿಸಿಕೊಳ್ಳುತ್ತಿದ್ದನು ಆದರೆ ತಾಯಿಯ ಮಾತಿಗೆ ಹೋಗುವುದಕ್ಕೆ ಭಯ. ಆ ಭಯದಿಂದ ಭಕ್ತಿಯೂ ಕಡಮೆಯಾಗುತ್ತಿತ್ತು. ಶಿವಮೊಗ್ಗದ ಪ್ರಕರಣ ಆದಮೇಲೆ ಅವನ ಮನಸ್ಸಿಗೆ ಜುಗುಪ್ಸೆ ಹೆಚ್ಚಿತು. ತಾಯಿ ಆಡುತ್ತಿದ್ದ ಮಾತುಗಳಿಂದ ತಾಳ್ಮೆಯೂ ಕೆಡುತ್ತಿತ್ತು. ಹುಡುಗರಿಗೆ ಪಾಠ ಹೇಳುವ ಕೆಲಸ ಸರಿಯಾಗಿ ನಡೆಯದೆ ಆ ವರಮಾನವೂ ಕಡಮೆಯಾಗುತ್ತಿತ್ತು. ಆದ್ದರಿಂದ ತಾಯಿಗೆ ಕೊಡುತ್ತಿದ್ದ ಭತ್ಯವನ್ನು ಸ್ವಲ್ಪ ನಿಲ್ಲಿಸಿ ನೋಡೋಣ ಎಂದು ಅವನು ನಿರ್ಧರ ಮಾಡಿದನು ತಿಂಗಳ ಸಂಬಳ ಕೈಗೆ ಬಂದು ನಾಲ್ಕು ದಿನಗಳಾಗಿದ್ದರೂ ತಾಯಿಗೆ ಐದು ರೂಪಾಯಿಗಳನ್ನು ಕೊಡಲಿಲ್ಲ.

ಕಾವೇರಮ್ಮ ನಾಲ್ಕು ದಿನ ಕಾದು, 'ಏಕಪ್ಪ ಸೀತಾರಾಮು! ನಿನಗೆ ಸಂಬಳ ಬರಲಿಲ್ಲವೆ? ಅಂಗಡಿ ಸಾಲಕ್ಕೆ ಹಣ ಕಟ್ಟಿದೆಯೋ ಇಲ್ಲವೋ ?' ಎಂದು ಕೇಳಿದಳು.

'ಸಂಬಳ ಬಂತಮ್ಮ! ಅಂಗಡಿಯವನಿಗೂ ಹಣ ಕೊಟ್ಟಿದ್ದೇನೆ. ಉಳಿದದ್ದಕ್ಕೆ ಸ್ವಲ್ಪ ಸಾಮಾನು ತಂದು ಹಾಕಿದ್ದೇನೆ. ಹಾಲೂ ಮೊಸರಿನವರಿಗೆ ಇನ್ನೂ ದುಡ್ಡು ಕೊಟ್ಟಿಲ್ಲ. ಕೈಯಲ್ಲಿ ಕಾಸಿಲ್ಲದೆ ಪೇಚಾಡುತ್ತಿದೇನೆ.'

'ಅದೇಕಪ್ಪ ನಿನಗೆ ಪೇಚಾಟ ? ಪ್ರತಿ ತಿಂಗಳೂ ಬರುತ್ತಿದ್ದ ಹಣ ಈಗೇನಾಯಿತು ? ಎಂದಿನಂತೆ ನಿನ್ನ ಸಂಸಾರ ಇದೆಯಲ್ಲ. ಆಗ ಪೇಚಾಟ ಇಲ್ಲದೆ ನಡೀತಿದ್ದುದೇನು ? ಈಗ ಪೇಚಾಟ ಬರುವುದಕ್ಕೆ ಕಾರಣವೇನು ?'

' ಹಿಂದೆಯೂ ಪೇಚಾಟ ಇತ್ತಮ್ಮ. ನಾನು ನಿನ್ನೊಂದಿಗೆ ಹೇಳುತ್ತಿರಲಿಲ್ಲ. ಸಾಲವೋ ಸೋಲವೋ ಹೇಗೋ ನಡಸುತ್ತಿದ್ದೆ. ಈಗ ನನಗೂ ಕೈಮೀರಿಹೋಯಿತು.'

' ಅದಕ್ಕೇನೇ ನನಗೆ ಕೊಡುತ್ತಿದ್ದ ಐದು ರೂಪಾಯಿ ನಿಲ್ಲಿಸಿದೆಯಾ ಅಪ್ಪ ? '

' ನಿಲ್ಲಿಸದೆ ಏನು ಮಾಡಲಿ ? ನನ್ನ ಅವಸ್ಥೆ ನನ್ನ ಕಷ್ಟ ಯಾರ ಮುಂದೆ ಹೇಳಿಕೊಳ್ಳಲಿ ?'

' ಆ ತಾಟಕಿತ್ತಿ ಒಳಗೊಳಗೇನೇ ಕಾಗದಗಳನ್ನು ಬರೆಯುತ್ತಿದ್ದಳು. ಅವಳಿಗೇನಾದರೂ ಹಣ ಮನಿಯಾರ್ಡರ್ ಕಳಿಸಿದೆಯೋ ಏನೋ ?– ಬಿಂಗೈ ಮಾಡಿಕೊಂಡು ನನ್ನ ಮುಂದೆ ಹೇಳಿಕೊಂಡರೆ ನಾನೇನು ಮಾಡಿಯೇನಪ್ಪ ? ನನಗೆ ಕೊಡೋ ಐದು ರೂಪಾಯಿ ನಿಲ್ಲಿಸಬೇಡ ನನ್ನ ಖರ್ಚುಗಳಿಗೆ ಬೇಕು. ಅದನ್ನು ಇತ್ತ ಕೊಟ್ಟು ಎರಡನೆಯ ಮಾತಾಡು.'

' ನನ್ನ ಹೆಂಡತಿಯ ಮಾತು ಏತಕ್ಕೆ ಎತ್ತುತ್ತೀಯೆ ? ನನ್ನ ಪಾಲಿಗೆ ನಿನ್ನ ಪಾಲಿಗೆ ಅವಳು ಸತ್ತಳು ! ಅವಳಿಗೇಕೆ ನಾನು ಹಣ ಕಳುಹಿಸುತ್ತೇನೆ ? ಸಂಸಾರಕ್ಕೇನೆ ನನ್ನ ಸಂಬಳದ ಹಣ ಸಾಕಾಗುವುದಿಲ್ಲ. ನಿನ್ನ ಐದು ರೂಪಾಯಿ ಒದಗಿದರೆ ಹಾಲೂ ಮೊಸರಿಗಾದರೂ ಸ್ವಲ್ಪ ಆಗುವುದಿಲ್ಲವೆ ? ನಿನಗೇನಿದೆ ಖರ್ಚು ? ನಿನ್ನ ಅನ್ನ ಬಟ್ಟೆ ಎಲ್ಲ ಖರ್ಚುಗಳನ್ನೂ ನಾನೇ ಮಾಡುತ್ತಿದ್ದೇನಲ್ಲ. ಮಧ್ಯೆ ಮಧ್ಯೆ ದೇವಸ್ಥಾನಕ್ಕೆ ಹೋಗಬೇಕು, ಆ ವ್ರತ ಮಾಡಬೇಕು, ಈ ವ್ರತ ಮಾಡಬೇಕು ಎಂದು ಚಿಲ್ಲರೆ ತೆಗೆದುಕೊಳ್ಳುತ್ತಲೇ ಇರುತ್ತೀಯೆ. ಈಗ ಐದು ರೂಪಾಯಿ ಕೊಡುವುದಕ್ಕಾಗುವುದಿಲ್ಲಮ್ಮ! ತಾಯಿಯಾದವಳು ಮಗನ ಕಷ್ಟವನ್ನೂ ಸ್ವಲ್ಪ ನೋಡಬೇಕು.'

' ನಿನಗೇನಿದೆ ಖರ್ಚು? ಎಂದು ಕೇಳುವಷ್ಟು ತಯಾರಾಗಿದ್ದೀಯಾ ಅಪ್ಪ ? ನಿನ್ನಪ್ಪ ಕಣ್ಣುಮುಚ್ಚಿಕೊಂಡಾಗಲೇ ನನಗೆ ಗೊತ್ತು. ಎರಡು ದಿನ ಆದಮೇಲೆ ನೀನು ನನ್ನ ಮೇಲೆ ತಿರುಗಿಬೀಳುತ್ತೀಯೋ ಎಂದು ಅಂದುಕೊಂಡೆ. ಏನೋ ಒಂದು ಕುಂಟುನೆಪ ಎತ್ತಿ ಬೇರೆ ಹೋಗುತ್ತೀಯೆ ಎಂದು ಅಂದುಕೊಂಡೆ. ಅದೀಗ ತಾರ್ಕಣ್ಯಕ್ಕೆ ಬಂತು.

ಏನಪ್ಪ ಸೀತಾರಾಮು? ನಿನಗೆ ಯಾರು ಹೇಳಿಕೊಟ್ಟರಪ್ಪ? ಆ ಮಧ್ಯಸ್ಥಿಕೆಗೆ ಓಡಾಡೋ ರಾಮಣ್ಣ ಬಂದು ಕಿವಿ ಹಿಂಡಿದನೆ? ನಾನೂ ಇಷ್ಟು ವಯಸ್ಸಾದವಳು, ಆರೇಳು ಮಕ್ಕಳನ್ನು ಹೆತ್ತವಳು, ನನ್ನನ್ನು ಝಂಕಿಸಿ ಕೇಳುತ್ತಿದ್ದೀಯಲ್ಲ? ನಿನ್ನ ಬುದ್ಧಿ ಏಕೆ ಹೀಗಾಗಿ ಹೋಯಿತು? ನಿನ್ನಪ್ಪ ಬದುಕಿರೋವಾಗ ನನ್ನನ್ನು ಒಂದು ಲೆಕ್ಕ ಕೇಳಿದವರಲ್ಲ. ಸಪ್ಪಗೋ ಗಿಪ್ಪಗೋ, ಗೊಡ್ಡು ಸಾರೋ ಬೇಳೇ ಸಾರೋ ಏನು ಹಾಕಿದರೆ ಅದನ್ನು ತಿಂದುಕೊಂಡು ಹೋಗುತ್ತಿದ್ದರು. ನಿನಗೇನಿದೆ ಖರ್ಚು? ಎಂದು ಕೇಳುತ್ತೀಯಲ್ಲ? ನನಗೆ ಖರ್ಚುಗಳೇ ಇಲ್ಲವೇ? ಒಳ್ಳೆಯದಪ್ಪ! ನಾಳೆಯಿಂದ ಲೆಕ್ಕ ಬರಿಸಿಡುತ್ತೇನೆ–ಈ ಹಾಳು ಮುಂಡೆಗೆ ಓದು ಬರಹ ಬಾರದು–ಬರೆಸಿಡುತ್ತೇನಪ್ಪ. ತಂದೆಯಿಲ್ಲದ ಮಕ್ಕಳು–ಸಣ್ಣವು, ಪೆಚ್ಚುಮೋರೆ ಹಾಕಿಕೊಂಡು ಈ ಪಾಪಿಷ್ಠ ತಾಯಿಯ ಹತ್ತಿರ ಬಂದು ನಿಲ್ಲುತ್ತವೆ. ನೀನು ರೆಕ್ಕೆಬಲಿತವನು–ಎಲ್ಲೋ ಕಾಫಿ ಕುಡಿಯುತ್ತೀಯೆ, ಎಲ್ಲೋ ತಿಂಡಿ ಪಂಡಿ ತಿನ್ನುತ್ತೀಯೆ. ಹಿಂದೆ ಆ ತೊನ್ನು ಹಿಡಿದವಳನ್ನು ಕರೆದುಕೊಂಡು ಸಿನೀಮಾ ನೋಟಕ್ಕೂ ಹೋಗುತ್ತಿದ್ದೆ. ಎಂದಾದರೂ ನಿನ್ನ ತಮ್ಮಂದಿರನ್ನೋ ತಂಗಿಯರನ್ನೋ ಕರೆದುಕೊಂಡು ಹೋಗಿದ್ದೀಯಾ ಅಪ್ಪ? ಎಂದಾದರೂ ಏನಾದರೂ ಒಂದು ಪೊಟ್ಣ–ಕಡೆಗೆ ಬುರುಗುಲು ಬತ್ತಾಸು ಪೊಟ್ಣ ಆದರೂ ತಂದು ಅವರಿಗೆ ಕೊಟ್ಟಿದ್ದೀಯಾ? ಈ ಹಾಳು ಹೆತ್ತಹೊಟ್ಟೆ! ಸಂಕಟ, ಆ ತಬ್ಬಲಿಗಳು ಏನಾದರೂ ಆಸೆಪಟ್ಟರೆ ತೆಗೆದುಕೊಡಬೇಡವೆ? ಅವರೇನಾದರೂ ನಿನ್ನೆದುರಿಗೆ ಒಂದು ದಿನವಾದರೂ ಬಂದು,–ಅಣ್ಣ! ನನಗೆ ಅದು ತೆಗೆದುಕೊಡು, ಇದು ತೆಗೆದುಕೊಡು–ಎಂದು ಕೇಳಿದ್ದಾರೆಯೆ? ಅವರನ್ನ ನೀನು ಹತ್ತಿರವೇ ಸೇರಿಸೋದಿಲ್ಲ. ಅವರು ಯಾರ ಹತ್ತಿರ ಹೋಗಬೇಕು? ಒಂದು ಸ್ಲೇಟೋ ಒಂದು ನೋಟು ಬುಕ್ಕೋ ಒಂದು ಪೆನ್ಸಿಲ್ಲೋ ಬೇಕಾದರೆ ಯಾವ ಅಪ್ಪನ್ನ ಕೇಳಬೇಕು? ಮೊನ್ನೆಯೆಲ್ಲ ಆ ಮುಂಡೇವು ಷರ್ಟು ಹರಿದುಕೊಂಡಿದ್ದುವು–ಹಾಗೆಯೇ ಸ್ಕೂಲಿಗೆ ಹೋಗುತ್ತಿದ್ದುವು. ನಿನ್ನ ಕಣ್ಣೇನಾದರೂ ಅದರ ಕಡೆ ಬಿತ್ತೇ? ಹೊಸ ಷರಟು ಇಲ್ಲದಿದ್ದರೂ ಚಿಂತೆಯಿಲ್ಲ, ಹಳೆಯವನ್ನೇ ರಿಪೇರಿ ಮಾಡಿಸೋಣ ಅಂತ ಮಾಡಿಸಿದೆನಪ್ಪ! ನಿನ್ನನ್ನು

ನಾನು ಕಾಸು ಕೇಳಿದೆನೆ? ಹರುಕು ಪಟ್ಟೆಗಳು ಹೇಗೆ ಸರಿ ಹೋದುವು ಎಂದೇನಾದರೂ ನೀನು ನೋಡಿದೆಯ? ನಿನ್ನ ಲೋಕವೆಲ್ಲ ಆ ತೊನ್ನು ಹಿಡಿದವಳ ಲೋಕ! ಅಲ್ಲಿ ಚಾಟಿಯೇಟು ತಿಂದು ಬಂದೆ! ಇಲ್ಲಿ ನಿನಗೇನಿದೆ ಖರ್ಚು? ಎಂದು ತಾಯಿಯನ್ನು ಕೇಳ್ತೀಯೆ! ಮೊದಲು ಆ ಐದು ರೂಪಾಯಿ ಕೊಟ್ಟುಬಿಟ್ಟು ಮುಂದಿನ ಕೆಲಸ ಮಾಡು!'

ಸೀತಾರಾಮರಾಯನು ತಲೆಯಮೇಲೆ ಕೈಗಳನ್ನಿಟ್ಟುಕೊಂಡು 'ಉಸ್ಸಪ್ಪ! ರಾಮ!' ಎಂದು ಉದ್ಗಾರ ತೆಗೆದನು. ತಾಯಿ ಹೇಳಿದ್ದ ರಲ್ಲಿ ಅರ್ಧ ಸತ್ಯವೂ ಇತ್ತು. ಏನು ಸಂಸಾರದ ಸುಖ! ಯೌವನದಲ್ಲಿ ಭಾವನಾಮಯವಾದ ಪ್ರಪಂಚವನ್ನು ಕಲ್ಪಿಸಿಕೊಳ್ಳುತ್ತ ನೈಜ ಪ್ರಪಂಚ ವನ್ನು ಎದುರಿಸಿ ನಿಲ್ಲಬೇಕಾದ ಸಂದರ್ಭದಲ್ಲಿ ಆಗುವ ಪ್ರತೀಕಾರ ಎಂತಹುದು? ತೀರಬಡತನದ ಸಂಸಾರಗಳಿಗೆ—ಕೂಲಿಗೀಲಿ ಮಾಡು ವವರಿಗೆ, ಬೆಂಗಳೂರಿನ ತರಗಿನ ಪೇಟೆಯ ಗಡಂಗುಗಳ ಹಿಂದೆ ಗೋಡೆ ಗಳ ಮರೆಯಲ್ಲಿಯೋ ಬಯಲಿನಲ್ಲೋ ಅಡಿಗೆ ಮಾಡಿಕೊಂಡು, ಬಟ್ಟೆ ಬರೆಗಳಿಲ್ಲದೆ ಹರಕುಚಿಂದಿಗಳನ್ನುಟ್ಟುಕೊಂಡು ಜೀವನ ನಡಸುವವರಿಗೆ ರೂಢಿಯ ಬಲದಿಂದ ಏನೋ ಒಂದು ವಿಧ ಸುಖವೂ ಉಂಟು, ಶಾಂತಿಯೂ ಉಂಟು. ಮಧ್ಯಮ ದರ್ಜೆಯವರ—ಅದರಲ್ಲಿಯೂ ಕೆಳಗಿನ ಮಧ್ಯಮ ದರ್ಜೆಯವರ ಸಂಸಾರಗಳಲ್ಲಿ ಒದಗುವ ಸಮಸ್ಯೆಗಳೂ ಕಷ್ಟಕಾರ್ಪಣ್ಯ ಗಳೂ ಆ ಬಯಲು ಜೀವನದ ಭಿಕ್ಷುಕರಿಗೆ ಕೂಲಿಯವರಿಗೆ ಇಲ್ಲ. ಈ ಮಧ್ಯಮ ದರ್ಜೆಯವರಿಗೆ ಒಂದು ಸಭ್ಯತೆ, ಒಂದು ನಾಗರಿಕತೆ, ಒಂದು ಜೀವನದ ಮಟ್ಟ, ಸಾಮಾಜಿಕ ಸಂಸ್ಕಾರಗಳು ಗಂಟು ಬಿದ್ದಿರುತ್ತವೆ. ಆ ತೊಡಕಿನಿಂದ ಬಿಡಿಸಿಕೊಳ್ಳುವುದು ಬಹಳ ಕಷ್ಟ. ಪ್ರಕೃತದಲ್ಲಿ ಸೀತಾ ರಾಮರಾಯನು ತಾಯಿಗೆ ಪ್ರತಿಹೇಳಲಾಗದೆ ತನ್ನ ಜೇಬಿನಲ್ಲಿದ್ದ ಐದು ರೂಪಾಯಿ ನೋಟನ್ನು ಆಕೆಗೆ ಕೊಟ್ಟುಬಿಟ್ಟು ಮತ್ತೆ ಚಾಪೆಯ ಮೇಲೆ ತೆಪ್ಪಗೆ ಕುಳಿತನು. ಕಾವೇರಮ್ಮ ಆ ನೋಟನ್ನು ಕೈಯಲ್ಲಿ ಹಿಡಿದು ಕೊಂಡು, 'ಏನಪ್ಪ ಸೀತಾರಾಮು! ಇದಕ್ಕೆ ಲೆಕ್ಕ ಬರಸಿಡಲೇ?' ಎಂದು ಕೇಳಿದಳು.

'ನೀನು ಏನು ಲೆಕ್ಕವನ್ನೂ ಬರಸಬೇಡಮ್ಮ. ತೆಗೆದುಕೊಂಡು

ಹೋಗು. ಇನ್ನು ಮುಂದೆ ಏನೇ ಆಗಿಹೋಗಲಿ, ಆಕಾಶವೇ ಕಳಚಿ ಬೀಳಲಿ ನಿನ್ನ ದುಡ್ಡನ್ನು ನಿಲ್ಲಿಸುವುದಿಲ್ಲಮ್ಮ!'

'ಅದೇಕಪ್ಪ ಸೀತಾರಾಮು ಹಾಗೆ ಬೇಸರಿಕೆಪಟ್ಟುಕೊಂಡು ಮಾತನಾಡುತ್ತೀಯೆ? ಈ ರಾಕ್ಷಸಿ ತಾಯಿಗೆ ನಿನ್ನ ಕಷ್ಟ ದುಃಖ ಏನೂ ಗೊತ್ತಾಗುವುದಿಲ್ಲ; ಇವಳೊಬ್ಬಳು ಧನಪಿಶಾಚಿ – ಎಂದು ನನ್ನನ್ನು ತಿಳಿದುಕೊಂಡೆಯೇನಪ್ಪ?'

'ನಾನೇಕೆ ತಿಳಿದುಕೊಳ್ಳಲಮ್ಮ? ನೀನು ತಾಯಿ! ನಾನೇಕೆ ನಿನ್ನನ್ನು ರಾಕ್ಷಸಿ, ಪಿಶಾಚಿ ಎಂದು ಹೇಳಲಿ? ನಾನು ಕೆಟ್ಟರೆ ನೀನು ದುಃಖಪಡುವುದಿಲ್ಲವೆ? ನಾನು ಏಳಿಗೆಗೆ ಬಂದರೆ ನೀನು ಸಂತೋಷಪಡುವುದಿಲ್ಲವೆ? ದೇವರು ನನಗೂ ಒಂದು ಅಮಲ್ದಾರಿ ಕೆಲಸವನ್ನೋ ಮತ್ತೆ ಯಾವುದನ್ನೋ ಕೊಡಿಸಿ ಕೈತುಂಬ ಸಂಬಳ ಬರುವಂತಾದರೆ ಈ ತಾಪತ್ರಯ ಹೋದೀತಲ್ಲ ಎಂದು ಯೋಚನೆ.'

'ನೀನೂ ಅಮಲ್ದಾರೀ ಮಾಡುತ್ತೀಯಪ್ಪ! ಅಸಿಸ್ಟೆಂಟ್ ಕಮಿಷನರೂ ಆಗುತ್ತೀಯಪ್ಪ! ನಿನ್ನಪ್ಪ ಅಂತೂ ಅಮಲ್ದಾರೀಗೇನೆ ಬರಲಿಲ್ಲ. ಅವರ ಸ್ನೇಹಿತರು ಕೃಷ್ಣರಾಯರು ಅಮಲ್ದಾರರೂ ಆದರು, ಅಸಿಸ್ಟೆಂಟು ಕಮಿಷನರೂ ಆದರು. ಅವರ ಹೆಂಡತಿ ತುಳಸಾಬಾಯಿ ಆಗ ಕಾಪಿ ಕಲರ್ ಸೀರೆಗೆ ಪರದಾಡುತ್ತಿದ್ದವಳು ಈಗ ನಿತ್ಯಗಟ್ಟಲೆಗೇನೇ ರಿಬ್ಬನ್ ಬಾರ್ಡರ್ ಸರಿಗೆಸೀರೆಗಳನ್ನು ಬಳಸುತ್ತಿದ್ದಾಳೆ.'

'ನಿನ್ನ ಆಶಿರ್ವಾದ ಬೇಗ ಫಲಿಸಲಮ್ಮ – ಸದ್ಯಕ್ಕೆ ಹತ್ತು ರೂಪಾಯಿ ಸಂಬಳ ಹೆಚ್ಚಿದರೆ ಸಾಕು.'

'ಕೃಷ್ಣರಾಯರ ಮಗಳದು ಹೀನ ಅದೃಷ್ಟ! ಅವಳದು ಬಹಳ ಕೆಟ್ಟ ಜಾತಕ! ಅವಳನ್ನು ಕೈಹಿಡಿದ ಗಂಡ ಏಳಿಗೆಗೆ ಬರೋದಿಲ್ಲ. ನನ್ನ ಆಶೀರ್ವಾದ ಏನು ಫಲಿಸೀತಪ್ಪ! ಈಜೋವನ ಕೊರಳಿಗೆ ದೊಡ್ಡ ಕಲ್ಲುಗುಂಡು ಕಟ್ಟಿದಹಾಗೆ ಏಳಿಗೆಗೆ ಬರುವ ನಿನ್ನ ಕೊರಳಿಗೆ ಅವಳು ಗಂಟು ಬಿದ್ದಿದ್ದಾಳೆ. ಅವಳನ್ನು ನೀನು ಕಟ್ಟಿಕೊಂಡು ಅಳುತ್ತಿದ್ದರೆ ನಿನಗೆ ಏಳಿಗೆಯೇ ಇಲ್ಲ. ಅವಳನ್ನ ಬಿಟ್ಟು ನೀನು ಬೇರೆ ಮದುವೆ ಮಾಡಿಕೊಂಡೆಯೋ ಸರಸರನೆ ಬಡ್ತಿಪಡೆದು ಅಮಲ್ದಾರಿಗೆ ಏರ್ತೀಯೆ.

ಈ ಮಾತು ಖಂಡಿತ. ಕೈಯಲ್ಲಿ ಕಾಸೂ ನಿಲ್ಲುತ್ತೆ. ಇಲ್ಲವೋ ನೀನು ಹೀಗೆಯೇ ನರಳುತ್ತೀಯೆ, ನಾಳೆ ಸಾಲಗಾರನಾಗಿ ಮುಳುಗಿ ಹೋಗುತ್ತೀಯೆ. ನನ್ನ ಮಾತು ಕೇಳು; ತಾಯಿ ಹೇಳುತ್ತಾಳಲ್ಲ ಎಂದು ಗೌರವಕೊಡು; ನೀನು ಬದುಕೋ ಮಾರ್ಗ ನೋಡು. ನಿನಗೆ ಮಾಡಬಾರದ ಅಪಮಾನವನ್ನೆಲ್ಲ ಮಾಡಿ ಕಳಿಸಿಬಿಟ್ಟರು. ನಿನ್ನನ್ನು ಚಾಟಿಯಿಂದ ಹೊಡೆದರು ಎಂದರೆ ಈ ಹೆತ್ತ ಹೊಟ್ಟೆ ಸಹಿಸುತ್ತದೆಯೆ? ಹೇಳಪ್ಪ! ನೀನು ಸಾವಿರ ತಪ್ಪುಮಾಡು, ನೀನು ನನ್ನನ್ನು ಬಯ್ಯಿ, ನನ್ನನ್ನು ಹೊಡೆ. ಏನುಬೇಕಾದರೂ ಮಾಡಪ್ಪ! ನನ್ನನ್ನು ಮನೆಬಿಟ್ಟು ಬೇಕಾದರೆ ಓಡಿಸಿ ಬಿಡಪ್ಪ! ಪಡಬಾರದ ಭಂಗಗಳನ್ನೆಲ್ಲ ನಾನು ಪಟ್ಟರೂ ನನ್ನ ಮಗನ್ನ ಜೈಲಿಗೆ ಹಿಡಿದುಕೊಂಡು ಹೋದರು ಎಂದು ಈ ಕಿವಿಯಲ್ಲಿ ಕೇಳಿದರೆ ನಾನು ಸಂಕಟಪಡುವುದಿಲ್ಲವೇ? ನಾನು ಗೊಳೋ ಎಂದು ಅಳುವುದಿಲ್ಲವೇ? ನಿನಗೊಂದು ನೋವಾದರೆ, ನಿನಗೊಂದು ರೋಗ ಬಂದರೆ, ನಿನಗೊಂದು ಅಪಮಾನ ಆದರೆ ನನ್ನ ಕರುಳು ನುಲಿಯುವುದಿಲ್ಲವೇ? ಏನೋ ನೀನು ಅವಳ ಬೆನ್ನಮೇಲೆ ಎರಡೇಟು ಹಾಕಿದ್ದಕ್ಕೆ ಅವಳ ತಾಯಿಯ ಹೊಟ್ಟೆ ಉರಿದುಹೋಯಿತಲ್ಲ! ಹೇಳಪ್ಪ ಸೀತಾರಾಮು!– ನನ್ನ ಮಗನ್ನ ಚಾಟಿಯಿಂದ ಹೊಡೆದದ್ದಕ್ಕೆ ನನ್ನ ಹೊಟ್ಟೆ ಏನಾಗಬೇಕು? ತುಳಸಾಬಾಯಿಯದು ಹೆತ್ತ ಹೊಟ್ಟೆ, ನನ್ನದು ಹೆತ್ತ ಹೊಟ್ಟೆ ಅಲ್ಲವೆ? ನನ್ನ ವಸ್ತು ಹೋಯಿತು! ನನ್ನ ಹೆತ್ತಹೊಟ್ಟೆಯೂ ಹೋಗಿಬಿಟ್ಟಿತೆ?'

'ನೀನು ತಪ್ಪು ತಿಳಿದುಕೊಂಡಿದ್ದೀಯಮ್ಮ! ನಾನೇಕೆ ಚಾಟಿಯೇಟು ತಿಂದು ಬರುತ್ತೇನೆ? ಅವನು ನನ್ನ ಹತ್ತಿರ ಬಂದಿದ್ದರೆ ಅಲ್ಲಿಯೇ ಹೂಳಿಬಿಡುತ್ತಿದ್ದೆ! ಅವನು ಬಾಯಲ್ಲಿ ಆಡಿಬಿಟ್ಟ, ಅಷ್ಟೇ.'

'ಏತಕ್ಕೆ ಭೂಷಣಮಾಡಿಕೊಳ್ಳುತ್ತೀಯಪ್ಪ! ಆಳು ಕಾಳು ಅಡಿಗೆಯವನು ಪರಿಚಾರಕ ಎಲ್ಲ ಬಂದು ಹಿಡಿದುಕೊಂಡುಬಿಟ್ಟರೆ ನೀನೇನು ಮಾಡುತ್ತೀಯಪ್ಪ! ಏಟು ತಿಂದು ಬರೋದಷ್ಟೇ! ಆ ಹಾಳು ಮಾತು ಬೇಡ. ಸುಮ್ಮನೆ ನನ್ನ ಹತ್ತಿರ ತರ್ಕಿಸಬೇಡ. ಈಗ ಮುಂದಿನ ಕೆಲಸ ಆಲೋಚಿಸು. ಮನಸ್ಸು ಗಟ್ಟಿಮಾಡು. ನೀನು ಆ ತೊನ್ನು ವೈಯವಳ

ಮೋಹಕ್ಕೆ ಬೀಳಬೇಡ. ಅವಳಿಂದ ಈ ಮನೆಗೇನೆ ವಿಪತ್ತು. ಅವಳು ನಿನ್ನ ಮೃತ್ಯು ಎಂದು ತಿಳಿದುಕೊ. ಅವಳಿಗೇನು? ಅಪ್ಪ ಅಮ್ಮ ಇದ್ದಾರೆ, ಅಣ್ಣ ತಮ್ಮ ಇದ್ದಾರೆ. ಬೇಕಾದ ಹಾಗೆ ಆದರಿಸುತ್ತಾರೆ. ನಿನಗೆ ಬೇರೆ ಮದುವೆ ಮಾಡಿಸುತ್ತೇನೆ. ಒಳ್ಳೆಯ ಹುಡುಗಿಯನ್ನೇ ಗೊತ್ತುಮಾಡುತ್ತೇನೆ. ಬಣ್ಣಗಿಣ್ಣ ಬಳಿದುಕೊಂಡು ನಾಟಕಕ್ಕೆ ಸಿನೀಮಾಕ್ಕೆ ಸೇರಿಕೊಳ್ಳೋ ಹೆಣ್ಣಲ್ಲ. ಗರತಿಯಾಗಿ, ಹೆದರಿ, ಅಡಗಿ ಸಂಸಾರ ಮಾಡೋ ಹೆಣ್ಣನ್ನ ತರುತ್ತೇನೆ. ನನ್ನ ಉಪಚಾರವನ್ನೂ ಅವಳು ಮಾಡುತ್ತಾಳಪ್ಪ! ನನಗೂ ಕೈಕಾಲು ಉಡುಗಿ ಹೋಯಿತು '

'ಬೇರೆ ಮದುವೆಯ ಮಾತು ಆಡಬೇಡಮ್ಮ. ನಿನಗೇನು ಬೇಕಾದ್ದು? ನಾನು ಸರೋಜಳನ್ನ ಹೆಂಡತಿ ಎಂದು ಆದರಿಸಬಾರದು, ಅವಳೊಡನೆ ಸಂಸಾರ ನಡಸಬಾರದು ಎಂದು ತಾನೇ? ನಿನ್ನಿಷ್ಟದಂತೆಯೇ ಆಗಿ ಹೋಗಲಿ. ಇನ್ನು ಎರಡನೆಯ ಮದುವೆ ಮಾತು ಆಡಬೇಡ.'

'ಆಡಬೇಡ ಎಂದರೆ ಹೇಗಪ್ಪ ಸೀತಾರಾಮು? ನೀನು ಸುಮ್ಮನೆ ದುಡಿಯುತ್ತಿದ್ದು ಮನೆಗೆ ಬಂದರೆ ಆದರಿಸುವ ಹೆಂಡತಿ ಇಲ್ಲದಿದ್ದರೆ ಹೇಗೆ? ಸಂಸಾರ ಮಾಡುತ್ತಿದ್ದ ಮಗ ಹೆಂಡತಿಯಿಲ್ಲದೆ ಕಷ್ಟಪಡುತ್ತಿದ್ದರೆ ನಾನು ಹೇಗೆ ಸಹಿಸಿಕೊಂಡಿರಲಿ? ನಿನಗೇನಪ್ಪ ವಯಸ್ಸಾಗಿರೋದು? ಹೆಂಡತಿಯನ್ನು ಕಳೆದುಕೊಂಡ ನಲವತ್ತೈದು ಐವತ್ತು ವರ್ಷದವರೆಲ್ಲ ಎರಡನೆಯ ಮದುವೆ, ಮೂರನೆಯ ಮದುವೆ ಮಾಡಿಕೊಳ್ಳುತ್ತಾರೆ. ನಿನಗೀಗೆಲ್ಲ ಇಪ್ಪತ್ತೈದು ವರ್ಷ!'

'ಬೇರೆ ಮದುವೆಯ ಮಾತು ಆಡಬೇಡಮ್ಮ. ನಾನು ಇನ್ನೊಂದು ಮದುವೆ ಮಾಡಿಕೊಳ್ಳುವುದಿಲ್ಲ.'

'ಹಾಗೆ ನೀನು ಹಟಹಿಡಿದರೆ ಹೇಗಾಗುತ್ತೆ? ನಿನ್ನ ತಮ್ಮಂದಿರ ಮುಂಜಿ ಮದುವೆ ಆಗಬೇಕಾಗಿದೆಯಲ್ಲ, ನಿನ್ನ ತಂಗಿಯರ ಮದುವೆ ಆಗಬೇಕಾಗಿದೆಯಲ್ಲ. ಹಸೆಯ ಮೇಲೆ ಕುಳಿತುಕೊಳ್ಳುವವರು ಯಾರು? ಗಂಡಸು – ಅದರಲ್ಲಿಯೂ ಪ್ರಾಯದಲ್ಲಿರುವ ಗಂಡಸು – ಮದುವೆಯಿಲ್ಲದೆ ಇರಬಾರದು. ಹೆಂಡತಿಯ ಅದೃಷ್ಟ ಚೆನ್ನಾಗಿದ್ದರೆ ಗಾಡಿ ಹೊಡೆಯುವ

ಗಂಡ ನಾಳೆ ಲಕ್ಷಾಧೀಶ್ವರನಾಗುತ್ತಾನೆ! ಬಂಗಲೆ ಗಿಂಗಲೆ ಮೋಟಾರು ಗೀಟಾರು ಇಟ್ಟುಕೊಂಡು ಮೆರೆಯುತ್ತಾನೆ. ನಿನಗೆ ಒಳ್ಳೆಯ ಯೋಗ ಇರುವ ಹುಡುಗಿಯನ್ನು ಮದುವೆ ಮಾಡಿಸುತ್ತೇನೆ! ನೀನೂ ಬೇಗ ಬೇಗ ಏಳಿಗೆಗೆ ಬಂದು ಅಮಲ್ದಾರಿ ಕೆಲಸಮಾಡುವುದನ್ನು ಈ ಕಣ್ಣಲ್ಲಿ ನೋಡ ಬೇಕಪ್ಪ. ತಾಯಿಯ ಮಾತನ್ನು ತಳ್ಳಿಹಾಕಬೇಡ. ಮೊನ್ನೆ ನಮ್ಮ ಹಳ್ಳಿಯಿಂದ ಶೀನಪ್ಪನವರು ಬಂದಿದ್ದಾಗ ನಾನು ಅವರೊಡನೆ ಪ್ರಸ್ತಾಪ ಮಾಡಿದೆ. ಅವರು,–ದಿವ್ಯವಾದ ಚೆಲೋ ಹೆಣ್ಣು ಇದೆ. ನನ್ನ ತಂಗಿಯ ಮಗಳು, ಒಬ್ಬಳೇ ಮಗಳು; ಮತ್ತೆ ಯಾವ ಜಂಜಾಟವೂ ಇಲ್ಲ– ಎಂದು ಹೇಳಿದಾರೆ.'

ಈ ಮಾತುಗಳಾಗುತ್ತಿದ್ದಾಗ ಅಂಚೆಯ ಜವಾನನು ಕಾಗದ ವೊಂದನ್ನು ಒಳಕ್ಕೆಸೆದು ಹೋದನು. ಹುಡುಗರು ಯಾರೋ ತಂದು ಸೀತಾರಾಮುವಿನ ಕೈಗೆ ಕೊಟ್ಟರು. ಮೇಲೆ ಕುಂಕುಮ ಹಚ್ಚಿದ್ದುದನ್ನು ನೋಡಿ ಕಾವೇರಮ್ಮ, 'ಅದೇನು ಲಗ್ನಪತ್ರಿಕೆಯೋ? ಏನಪ್ಪ ಕಾಗದ? ಎಲ್ಲಿಂದ ಬಂದಿದೆ? ನೋಡು, ನಾನು ಮದುವೆ ಮಾತು ಆಡುವ ಹೊತ್ತಿಗೆ ಕುಂಕುಮ ಹಚ್ಚಿದ ಲಗ್ನಪತ್ರಿಕೆ ಕೈಗೆ ಬಂದಿದೆ. ಒಳ್ಳೆಯ ಶಕುನ! ಶುಭ ಲಕ್ಷಣ!' ಎಂದಳು.

'ಇದು ಲಗ್ನಪತ್ರಿಕೆಯಲ್ಲಮ್ಮ! ಶಿವಮೊಗ್ಗದ ಕಾಗದ. ಬಹುಶಃ ಸರೋಜ ಹೆತ್ತಿರಬೇಕು. ಕಾಗದ ಬರೆದಿದ್ದಾರೆ' ಎಂದು ಅದನ್ನು ಒಡೆದು ನೋಡುತ್ತಿದ್ದನು.

'ಆದೇನು ಗಂಡೋ? ಹೆಣ್ಣೋ? ಏನು ಹುಟ್ಟಿದೆಯಂತೆ? ಇನ್ನೇನು ಬರೆದಿದ್ದಾರೆ?'

'ನಿನಗೆ ಮೊಮ್ಮಗ ಹುಟ್ಟಿದಾನಮ್ಮ!'

ಹೇಳಿದ ಧ್ವನಿಯಲ್ಲಿ ಸಂತೋಷ ಎದ್ದು ಕಾಣುತ್ತಿತ್ತು.

'ಸಂತೋಷವಪ್ಪ! ಎಲ್ಲಿಯಾದರೂ ಆಯುಸ್ಸು ಹೊಯ್ದು ಕೊಂಡು ಚೆನ್ನಾಗಿರಲಿ! ಇನ್ನೇನು ಬರೆದಿದ್ದಾರೆ? ಕಾಗದ ದೊಡ್ಡ ದಾಗಿದೆಯಲ್ಲ.'

'ಇನ್ನೇನು ಬರೆದಿರಬಹುದಮ್ಮ! ಸಂಪ್ರದಾಯವಾಗಿ ಬರೆಯುವ

ಮಾತುಗಳು ತಾನೆ. ಮಗು ಮತ್ತು ಬಾಣಂತಿ ಆರೋಗ್ಯವಾಗಿದ್ದಾರೆ. ಸಾಯಂಕಾಲ ನಾಲ್ಕುಗಂಟೆಗೆ ಮಗು ಹುಟ್ಟಿತು. ಸುಖಪ್ರಸವವೇ ಆಯಿತು. ಮನೆಯಲ್ಲೇ ಹೆರಿಗೆಗೆ ಏರ್ಪಾಟು ಮಾಡಿದ್ದೆವು. ಲೇಡಿ ಡಾಕ್ಟರು, ಸೂಲಗಿತ್ತಿ ಸಕಾಲಕ್ಕೆ ಬಂದು ಹೆರಿಗೆ ನಡಸಿದರು. ಸರೋಜ ಮಾತ್ರ ಸ್ವಲ ನಿಶ್ಶಕ್ತಿಯಿಂದ ಇದ್ದಾಳೆ. ದೊಡ್ಡ ಮನಸ್ಸು ಮಾಡಿ ತಾಯಿಯನ್ನು ಕರೆದುಕೊಂಡು ನಾಮಕರಣದ ವೇಳೆಗೆ ಬರಬೇಕು. ಹಿಂದೆ ಆದ ಘಟನೆಗಳನ್ನೆಲ್ಲ ಮರೆತುಬಿಟ್ಟು ಈ ಸಂತೋಷದ ಶುಭ ಸಂದರ್ಭದಲ್ಲಿ ಬರಬೇಕು. ತುಳಸಾಬಾಯಿ ನಿನ್ನ ತಾಯಿ ಕಾವೇರಮ್ಮ ನವರಿಗೆ ನಮಸ್ಕಾರ ಪೂರ್ವಕವಾಗಿ ಪ್ರಾರ್ಥನೆ ಮಾಡುತ್ತಾಳೆ: ಮೊಮ್ಮಗ ಹುಟ್ಟಿರುವುದನ್ನು ನೋಡುವುದಕ್ಕೆ ಖಂಡಿತ ಬರಬೇಕು. ಹಿಂದಿನ ಸ್ನೇಹ ವನ್ನು ನೆನಪಿಗೆ ತಂದುಕೊಳ್ಳಬೇಕು– ಎಂದು ಪ್ರಾರ್ಥಿಸುತ್ತಾಳೆ. ನಾಗರಾಜ ಬಹಳ ಪಶ್ಚಾತ್ತಾಪಪಟ್ಟುಕೊಳ್ಳುತ್ತಿದಾನೆ. ತನ್ನನ್ನು ಕ್ಷಮಿಸ ಬೇಕೆಂದು ಕೇಳಿಕೊಳ್ಳುತ್ತಿದಾನೆ. ಇಲ್ಲಿಗೆ ಬಂದಾಗ ಪ್ರತ್ಯಕ್ಷವಾಗಿಯೇ ಕ್ಷಮಾ ಯಾಚನೆ ಮಾಡುತ್ತಾನೆ. ಈ ಕಾಗದ ತಲುಪಿದ್ದಕ್ಕೂ ಯಾವಾಗ ಹೊರಟು ಬರುತ್ತೀರಿ ಎನ್ನುವುದಕ್ಕೂ ಒಂದು ಕಾರ್ಡು ಬರೆದು ಹಾಕಿದರೆ ನಮಗೆ ಸಂತೋಷವಾಗುತ್ತದೆ– ಇದು ಪತ್ರದ ಸಾರಾಂಶ. ತಿಳಿಯಿತೇ ನಮ್ಮ ?'

'ಮಗನ್ನ ನೋಡಬೇಕು ಎಂದು ಆಸೆಯಿದ್ದರೆ ನೀನು ಹೋಗಿ ಬಿಟ್ಟು ಬಾರಪ್ಪ!'

'ನಾನು ಹೋಗುವ ಯೋಚನೆ ಇಟ್ಟುಕೊಂಡಿಲ್ಲ. ನೀನು ಮೊಮ್ಮಗನನ್ನ ನೋಡಬೇಕು ಎಂದು ಆಸೆಪಟ್ಟರೆ ಜತೆಗೆ ಬೇಕಾದರೆ ಬಂದೇನು.'

'ನಾನು ಯಾರ ಮನೆಗೂ ಹೋಗುವುದಿಲ್ಲ, ಯಾರ ಮನೆಯ ಹೊಸಿಲೊಳಕ್ಕೂ ಕಾಲಿಡುವುದಿಲ್ಲ. ನಿನ್ನಪ್ಪ ಬದುಕಿರೋವಾಗ ಎಂದರೆ ಆ ರೀತಿ ಬೇರೆಯಿತ್ತು. ಈಗ ತಲೆಗೆ ಮುಸುಕೆಳೆದುಕೊಂಡು ಈ ವೇಷದಲ್ಲಿ ನಾನು ಮರ್ಯಾದೆ ಸ್ಥಳಕ್ಕೆ ಮುಖವಿಕ್ಕಲಾರೆ. ಅದರಲ್ಲಿಯೂ

ಆ ಬಿಕನಾಸಿಯ ಮನೆಗೆ! ನನ್ನ ಮುಂದೆ ಲಕ್ಷ ವರಹ ಸುರಿದರೂ ಅವಳ ಮನೆಗೆ ನಾನು ಕಾಲಿಕ್ಕುವುದಿಲ್ಲ.'

ಈ ಮಾತು ಮುಗಿಯುವ ಹೊತ್ತಿಗೆ ರಾಮಣ್ಣ, 'ಸೀತಾರಾಮು! ಸೀತಾರಾಮು!' ಎಂದು ಕರೆಯುತ್ತ ಮನೆಯೊಳಕ್ಕೆ ಬಂದನು. ತಾಯಿ ಮತ್ತು ಮಗ ಮಾತನಾಡುತ್ತಿದ್ದುದನ್ನೂ ಸೀತಾರಾಮುವಿನ ಕೈಯಲ್ಲಿ ಕುಂಕುಮ ಹಚ್ಚಿದ ಕಾಗದ ಇದ್ದುದನ್ನೂ ನೋಡಿ ಮಗ ಹುಟ್ಟಿದ್ದನ್ನು ತಿಳಿಸಿ ಬರೆದಿರುವ ಪತ್ರ ಎಂದು ಊಹೆ ಮಾಡಿದನು. ಅವನು ಮಾತನಾಡುವ ಮೊದಲೇ ಕಾವೇರಮ್ಮ, 'ಏನಪ್ಪ ರಾಮಣ್ಣೋರೆ! ನಮ್ಮ ಸೀತಾರಾಮುವಿಗೆ ಮಗ ಹುಟ್ಟಿದಾನಪ್ಪ!' ಎಂದು ಹೇಳಿದಳು.

'ಬಹಳ ಸಂತೋಷಮ್ಮ! ಮೊಮ್ಮಗ ಹುಟ್ಟಿದ್ದು ನಿಮಗೂ ಸಂತೋಷ ತಾನೆ?'

'ಸಂತೋಷವಲ್ಲವೇನಪ್ಪ? ಸೀತಾರಾಮು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ, ಅವನ ಹೊಟ್ಟೆಯಲ್ಲಿ ಹುಟ್ಟಿದ್ದು ಆ ಮೊಮ್ಮಗ! ಆ ಮೊಮ್ಮಗನ ಮೇಲೆ ನನಗೇನು ಛಲವೇ? ದ್ವೇಷವೇ? ಸೀತಾರಾಮು! ರಾಮಣ್ಣೋರಿಗೆ ಕಲ್ಸಕ್ಕರೆಯಿಟ್ಟು ತಾಂಬೂಲ ತಂದುಕೊಡಪ್ಪ. ಅಡಿಗೆಯ ಮನೆಯ ಅಲುಮಾರಿನಲ್ಲಿ ಸೀಸೆಯಲ್ಲಿ ಕಲ್ಸಕ್ಕರೆ ಇಟ್ಟಿದ್ದೇನೆ. ವೀಳ್ಯೆದೆಲೆ ಮನೆಯಲ್ಲಿಲ್ಲ, ಅಂಗಡಿಯಿಂದ ತರಿಸು.'

ಸೀತಾರಾಮು ತನ್ನ ತಾಯಿ ಅಷ್ಟುಮಾತ್ರ ಪ್ರಸನ್ನಳಾಗಿ ತನಗೆ ಆಜ್ಞೆ ಮಾಡಿದಳಲ್ಲ ಎಂದು ಸಂತೋಷಪಟ್ಟುಕೊಂಡು ಆಕೆಯ ಆಜ್ಞೆಯನ್ನು ನೆರವೇರಿಸಿದನು. ಕಾವೇರಮ್ಮ ಅಡಿಗೆಯ ಮನೆಗೆ ಹೊರಟು ಹೋದಳು.

ರಾಮಣ್ಣ ತನ್ನ ಜೇಬಿನಲ್ಲಿದ್ದ ಕಾಗದವನ್ನು ಹೊರಕ್ಕೆ ತೆಗೆದು, 'ಸೀತಾರಾಮು! ಕೃಷ್ಣರಾಯರು ನನಗೂ ಕಾಗದವನ್ನು ಬರೆದಿದ್ದಾರೆ. ನಿನಗೆ ಮಗ ಹುಟ್ಟಿದ್ದು ಕೇಳಿ ನನಗೆ ಪರಮಾನಂದವಾಯಿತು. ನಿನಗೆ ಸಂತೋಷ ಆಗಿಲ್ಲವೆ? ನಿನ್ನ ತಾಯಿಗೇನೆ ಸಂತೋಷ ಆದಹಾಗೆ ಕಂಡಿತು. ನನಗೆ ಕಲ್ಸಕ್ಕರೆ ತಾಂಬೂಲ ಕೊಡಿಸಿದರು.' ಎಂದು ಹೇಳಿದನು.

'ನನಗೆ ಸಂತೋಷ ದುಃಖ ಎರಡೂ ಇದೆಯಪ್ಪ!'

'ನ್ಯಾಯವೇ ಅನ್ನು. ಮಗ ಹುಟ್ಟಿದ್ದಕ್ಕೆ ಸಂತೋಷ. ನಿನ್ನ ಹೆಂಡತಿಯನ್ನು ಅನಾದರಿಸಿದ್ದಕ್ಕೆ ದುಃಖ. ಹೌದೋ ಅಲ್ಲವೋ?'

ಸೀತಾರಾಮು ಉತ್ತರ ಕೊಡಲಿಲ್ಲ. ರಾಮಣ್ಣನೇ ಮಾತು ಮುಂದುವರಿಸಿ.

'ಅದಕ್ಕೆ ಪರಿಹಾರ ನಿನ್ನ ಕೈಯಲ್ಲೇ ಇದೆ. ಈಗ ನೀನು ಶಿವ ಮೊಗ್ಗಕ್ಕೆ ಹೋಗಿ ಬಾ. ನಾಮಕರಣಕ್ಕೆ ಬರಬೇಕೆಂದು ಆಹ್ವಾನ ಕೊಟ್ಟಿರಬೇಕು. ಅದು ಸಂಪ್ರದಾಯ. ನಿನ್ನ ತಾಯಿ ಆ ವಿಚಾರದಲ್ಲಿ ಏನು ಹೇಳುತ್ತಾಳೆ?' ಎಂದು ಕೇಳಿದನು.

'ರಾಮಣ್ಣ! ಆಕೆ ಏನೋ ಹೇಳುತ್ತಾಳೆ. ಆಕೆಯನ್ನು ಸಂತೋಷ ಪಡಿಸುವುದು ಬಹಳ ಕಷ್ಟ. ಬಾಯಲ್ಲೇನೋ—ನಿನ್ನ ಮಗನ್ನ ನೋಡ ಬೇಕು ಎಂದು ಆಸೆ ಇದ್ದರೆ ಹೋಗಿಬಿಟ್ಟು ಬಾ, ಎಂದು ಹೇಳಿದಳು. ನಾನು ಹೊರಡಲು ಸಿದ್ಧಮಾಡಿಕೊಂಡೆನೋ ಗುಡುಗು ಸಿಡಿಲು ನನ್ನ ತಲೆಯಮೇಲೆ ಎರಗುತ್ತವೆ ಎಂಬುವ ಭಯ ನನಗಿದೆ. ಆಕೆಗೆ ಮೊಮ್ಮಗ ಹುಟ್ಟಿದ್ದು ಒಂದು ಕಡೆ ಸಂತೋಷ ಇದೆ. ಆದರೆ ನನ್ನ ಹೆಂಡತಿಯ ಮೇಲೆ ನನ್ನ ಅತ್ತೆಯ ಮೇಲೆ ದ್ವೇಷ ಬಲವಾಗಿಯೇ ಇದೆ. ನನ್ನ ಮನಸ್ಸಿನಲ್ಲೂ ಹೋಗಲೇ ಬೇಕೆನ್ನುವಷ್ಟು ಕಾತರ ಹುಟ್ಟಿಲ್ಲ.'

'ನನ್ನ ಮಾತು ಕೇಳು. ಈಗ ನೀನು ಹೋಗಿಬರುವುದು ಒಳ್ಳೆಯದು. ನಿನ್ನ ತಾಯಿಗೂ ಈಗಿರುವ ದ್ವೇಷ, ಕೋಪ ಇನ್ನೆರಡು ವರ್ಷಕ್ಕೆ ಇರಲಾರವು. ನಿನ್ನ ಒಡವೆಯನ್ನು ನೀನು ಜೋಪಾನ ಮಾಡಿಕೋ. ಬಾಣಂತಿ ನಿಶ್ಶಕ್ತಿಯಿಂದ ಇದ್ದಾಳೆ ಎಂದು ನಿನಗೂ ಕೃಷ್ಣರಾಯರು ಬರೆದಿರಬೇಕು. ಈಗ ನೀನು ಹೋದರೆ ಆಕೆಯ ಆರೋಗ್ಯ ಸುಧಾರಿಸುತ್ತದೆ. ಒಂದುವೇಳೆ ನಿನ್ನ ತಾಯಿಗೆ ಇಷ್ಟವಿಲ್ಲದಿದ್ದರೂ ಹೋಗಿ ಬಾ. ನನ್ನನ್ನು ಕೇಳಿದರೆ, ನಿನ್ನ ತಾಯಿಗೆ ಸ್ವಲ್ಪ ವಿರೋಧವಾಗಿ ನಡೆಯುವುದು ಒಳ್ಳೆಯದೆಂದೇ ಹೇಳುತ್ತೇನೆ; ಆಗ ಆಕೆಗೂ ಬುದ್ಧಿ ಬರುತ್ತದೆ. ಎರಡು ದಿನ ಕೂಗಾಡಿಯಾಳು. ಆಮೇಲೇ ನಿನ್ನ ಗೊಡವೆಗೆ ಹೆಚ್ಚಾಗಿ ಬರುವುದಿಲ್ಲ; ನಿನಗೆ ಕಾಟವನ್ನು

ಹೆಚ್ಚಾಗಿ ಕೊಡುವುದಿಲ್ಲ. ಮೆತು ಮನುಷ್ಯರನ್ನು ಕಂಡರೆ ಎಲ್ಲರೂ ಸವಾರಿ ಮಾಡುತ್ತಾರೆ. ಸೀತಾರಾಮು! ಅದಕ್ಕೆ ಅವಕಾಶ ಕೊಡ ಬೇಡ.'

'ಮನಸ್ಸು ಹಿಂಜರಿಯುತ್ತಿದೆ ರಾಮಣ್ಣ! ತಾಯಿಯ ಮಾತು ಒಂದೇ ಅಲ್ಲ.'

'ಇದುವರೆಗೂ ನಾನು ನಿನ್ನನ್ನು ಖಂಡಿಸಿ ಕೇಳಿರಲಿಲ್ಲ. ನನ್ನ ನಿನ್ನ ಸ್ನೇಹದಮೇಲೆ ಆಣೆಯಿಟ್ಟು ಹೇಳು. ಈ ಪ್ರಮಾದಗಳಿಗೆಲ್ಲ ಮೂಲ ಕಾರಣ ನೀನೇ ತಾನೆ! ನಿನ್ನ ಹೆಂಡತಿ ಸ್ವಲ್ಪ ತಡವಾಗಿ ಕೊಟ ಡಿಗೆ ಬಂದಳು ಎಂದು ಆಕೆಯ ಮೇಲೆ ಮೊಗಲಾಯ್ ದೌಲತ್ತು ನಡಸಿದೆ ಯಲ್ಲ! ಬಸಿರಿ ಎನ್ನುವುದನ್ನೂ ಗಣಿಸಿದೆ ಕೈದುಡುಕಿದೆಯಲ್ಲ! ನಿನ್ನ ವಿದ್ಯೆ, ನಿನ್ನ ಸಂಸ್ಕೃತಿ—ಎಲ್ಲವನ್ನೂ ಕಾಮಾಗ್ನಿಯಲ್ಲಿ ಸುಟ್ಟುಬಿಟ್ಟೆಯಲ್ಲ! ಕೈ ದುಡುಕಿ ಅವಿವೇಕ ಮಾಡಿದೆ. ನಿನಗೆ ಪಶ್ಚಾತ್ತಾಪ ಹುಟ್ಟಬೇಡ? ನಿನ್ನದು ತಪ್ಪು ಎಂದು ಈಗಲಾದಲೂ ಮನವರಿಕೆ ಆಗಿದೆಯೋ ಇಲ್ಲವೋ? ಬಾಯಿಬಿಟ್ಟು ಹೇಳು.'

'ಅದನ್ನೇತಕ್ಕೆ ಕೇಳುತ್ತೀಯೆ?'

'ನೀನು ರಸಿಕನಾಗಿದ್ದಿದ್ದರೆ, ಸರಸಿಯಾಗಿದ್ದಿದ್ದರೆ ನಾಟಕದಲ್ಲಿ ಮಾಡುವಹಾಗೆ ಆಕೆಯ ಕಾಲಿಗೆರಗಿ ಕ್ಷಮಾಪಣೆಯನ್ನು ಕೇಳುತ್ತಿದ್ದೆ. ಈಗ ಆ ಮಾತಿರಲಿ. ನಿನ್ನ ತಪ್ಪು ನಿನಗೆ ಮನವರಿಕೆಯಾಗಿದೆಯಲ್ಲ. ತಪ್ಪನ್ನು ನೇರ್ಪಡಿಸಿಕೋ. ಶಿವಮೊಗ್ಗಕ್ಕೆ ಹೋಗಿಬಾ. ನಾನೂ ನಿನ್ನ ಜತೆಯಲ್ಲಿ ಬರಲೇ?'

'ರಾಮಣ್ಣ! ನನ್ನ ಹೆಂಡತಿಯ ವಿಚಾರದಲ್ಲಿ ನನಗೆ ಕೋಪ ಇಲ್ಲ. ಆಕೆಯ ಮನಸ್ಸನ್ನು ನೋಯಿಸಿದೆನಲ್ಲ ಎಂದು ಕೊರಗುತ್ತಿದೇನೆ. ಆದರೆ ನಾಗರಾಜನ ವರ್ತನೆಯನ್ನು ನೆನಸಿಕೊಂಡುಬಿಟ್ಟರೆ ಮೈ ಉರಿದು ಹೋಗುತ್ತದೆ.'

'ಅವನ ಮೇಲಿನ ಕೋಪಕ್ಕೆ ನಿನ್ನ ಹೆಂಡತಿಯನ್ನೂ ನಿನ್ನ ಮಗ ನನ್ನೂ ಕೈಬಿಡಬಹುದೇ? ಅವನು ಕೆಟ್ಟ! ಅವನನ್ನು ಆಚೆಗೆ ತಳ್ಳು. ನಾಳೆ ಅವನು ಸಂಸಾರ ಮಾಡುವಾಗ ಅವನ ಮನೆಗೆ ನೀನು ಹೋಗ

ಬೇಡ, ನಿನ್ನ ಹೆಂಡತಿಯನ್ನು ಕಳಿಸಬೇಡ. ಅಷ್ಟೇತಾನೆ? ಯಾರ ಮೇಲಿನ ಕೋಪ ಯಾರಮೇಲೆ ತೀರಿಸುತ್ತೀಯೆ ಸೀತಾರಾಮು? ಸಮಯ ಸಿಕ್ಕಿದಾಗ ಅವನ ಮುಖದ ನೀರು ಇಳಿಸುವುದು ಎಷ್ಟರಲ್ಲಿದೆ? ಇಷ್ಟಾಗಿ, ನೀನು ಹೊರಟುಬಂದಮೇಲೆ ಕೃಷ್ಣರಾಯರು ಅವನನ್ನು ಸುಮ್ಮನೆ ಬಿಟ್ಟರೆಂದು ತಿಳಿದೆಯೇನು? ತಾಯಿಯೊಂದು ಕಡೆ, ತಂದೆಯೊಂದು ಕಡೆ ಸೂಜಿ ಡಬ್ಬಳ ತೆಗೆದುಕೊಂಡು ಚುಚ್ಚುತ್ತಿದ್ದರೆ ಅವನಿಗೆ ಹೇಗಿದ್ದಿರಬೇಕು? ಅವನ ಜಂಬ ಯಾವಾಗಲೋ ಭೂಮಿಗಿಳಿದು ಹೋಯಿತು. ಈಗ ಅದನ್ನೆಲ್ಲ ನೆನಸಿಕೊಳ್ಳಬೇಡ. ಶಿವಮೊಗ್ಗಕ್ಕೆ ಹೋಗಿಬಾ. ನೀನೇನು ಬುದ್ಧಿವಂತನಲ್ಲವೇ? ಯಾರು ಯಾರು ಹೇಗೆ ಹೇಗೆ ನಡೆದುಕೊಳ್ಳುತ್ತಿದ್ದಾರೆಂಬುದನ್ನು ಗಮನಿಸು. ನೀನು ಮನೆಯೊಳಕ್ಕೆ ಕಾಲಿಡುವಾಗಲೇ ನಾಗರಾಜ ಕ್ಷಮಾಪಣೆ ಕೇಳಿಕೊಂಡರೆ, ಇಲ್ಲ, ರೈಲ್ವೆ ಸ್ಟೇಷನ್ನಿಗೆ ಮೋಟಾರ್ ತೆಗೆದುಕೊಂಡು ಅವನೇ ಬಂದಿದ್ದರೆ, ಏನು ಮಾಡುತ್ತೀಯೆ? ಪರೀಕ್ಷಿಸಿ ನೋಡು. ಇದರಲ್ಲಿ ಅಪಮಾನವೇನೂ ಇಲ್ಲ. ನಿನ್ನ ಘನತೆ ಹೆಚ್ಚುತ್ತದೆ. ಮಗ ಹುಟ್ಟಿದ ಶುಭ ಸಂದರ್ಭದಲ್ಲಿ ಈ ದುರಂತ ಪ್ರಕರಣ ಮುಕ್ತಾಯವಾಗುತ್ತದೆ.'

'ರಾಮಣ್ಣ! ಹೋಗುವ ಹಾಗಿದ್ದರೆ ತಾಯಿಯನ್ನು ಜತೆಯಲ್ಲಿ ಕರೆದುಕೊಂಡು ಹೋಗಬೇಕು. ನಾನೊಬ್ಬನೇ ಹೋಗಬಾರದು. ನನ್ನ ತಾಯಿಗೆ ಸಮಾಧಾನ ಆದರೆ ಎಲ್ಲವೂ ಸರಿ ಹೋಗುತ್ತದೆ. ನಾನೊಬ್ಬನೇ ಹೋದರೆ, ನನ್ನ ತಾಯಿಯ ಅಸಮಾಧಾನ ಹೆಚ್ಚುತ್ತದೆ. ಈ ಪ್ರಕರಣ ಮತ್ತಷ್ಟು ವಿಷಮಿಸುತ್ತದೆ.'

'ಆಕೆ ಏನೆನ್ನುತ್ತಾಳೆ? ಮೊಮ್ಮಗ ಹುಟ್ಟಿದ ಸಂತೋಷದಲ್ಲಿ ಆಕೆ ಕ್ಷಮೆ ತೋರಿಯಾಳೆ?'

'ನನಗೇನೂ ಕಾಣಲಿಲ್ಲ. ಆಕೆಯ ಹೃದಯದಲ್ಲಿ ಹುಟ್ಟುವ ಭಾವಗಳೂ ಆವೇಶಗಳೂ ಬಹಳ ಜಟಿಲವಾದುವು. ಆಕೆಯ ವಾದ ಸರಿಯೋ ತಪ್ಪೋ ನಾನು ನಿರ್ಣಯಿಸಲಾರೆ. ನಾನು ಉತ್ತರ ಹೇಳುವುದಕ್ಕೆ ಆಗದಂತೆ ಹೇಗೋ ಅಂತೂ ಜೋಡಿಸಿ ಪೋಣಿಸಿ ಹೇಳುತ್ತಾಳೆ. ತಾಯಿಯ ವಾತ್ಸಲ್ಯ ಎದ್ದು ಕಾಣುತ್ತದೆ. ಛಲ ದ್ವೇಷ ಅಡಗುವಂತೆ

ಕಾಣುವುದಿಲ್ಲ. ನಿನಗೆ ನ್ಯಾಯವಾಗಿ ಕಾಣುವುದು ಆಕೆಗೆ ಅನ್ಯಾಯವಾಗಿ ಕಂಡುಬರುತ್ತವೆ. ನೀನು ಆಕೆಯ ವಾದದ ಸರಣಿಯನ್ನು ನೋಡಿದ್ದೀಯಲ್ಲ. ಆಕೆಯ ಮುಂದೆ ಈ ಮಾತುಗಳನ್ನೇ ಆಡು. ನೀನು ಗೆದ್ದು ಬರುವುದನ್ನು ನೋಡುತ್ತೇನೆ!'

'ಹಾಗಾದರೆ ಈಗೇನು ಮಾಡಬೇಕೆಂದಿದ್ದೀಯೆ? ಶಿವಮೊಗ್ಗಕ್ಕೆ ಹೋಗುವುದಿಲ್ಲವೋ?'

'ನಾನು ಆಗಲೇ ಹೇಳಿದೆನಲ್ಲ. ಈ ಸಮಸ್ಯೆಗೆ ಪರಿಹಾರ ಕೊಡುವುದು ನನ್ನ ತಾಯಿಯ ಕೈಯಲ್ಲಿದೆ. ಆಕೆ ಏನಾದರೂ ದೊಡ್ಡ ಮನಸ್ಸು ಮಾಡಿ, ಭಗವಂತ ಆಕೆಯ ಹೃದಯದಲ್ಲಿ ಪ್ರೇರೇಪಣೆ ಮಾಡಿ,–ಸೀತಾರಾಮು! ಹೋಗಿಬರೋಣ ನಡೆ. ಅವರ ಮಾತೇನು ನಮಗೆ? ನಮ್ಮ ಮಗು ಅದು! ಅದನ್ನು ಎತ್ತಿಕೊಂಡು ಬಂದುಬಿಡುವುದಕ್ಕೂ ನಮಗೆ ಹಕ್ಕಿದೆ–ಎಂದು ಹೇಳಿದರೆ ಈ ಕ್ಷಣ ಹೊರಟುಬಿಟ್ಟೇನು.'

'ಬಂದ ಕಾಗದಕ್ಕೆ ಜವಾಬನ್ನಾದರೂ ಬರೆದುಹಾಕುತ್ತೀಯಾ? ಅದನ್ನಾದರೂ ಹೇಳು. ಶಿವಮೊಗ್ಗದ ಪ್ರಯಾಣಕ್ಕೆ ಇನ್ನೂ ದಿನಗಳಿವೆ. ಆಲೋಚನೆ ಮಾಡಬಹುದು.'

'ಒಂದು ಕಾರ್ಡು ಬರೆಯೋಣವೆಂದಿದ್ದೇನೆ. ಶಿವಮೊಗ್ಗಕ್ಕೆ ಪ್ರಯಾಣ ಮಾಡುವ ಸೂಚನೆಯನ್ನೇನೂ ತಿಳಿಸುವುದಿಲ್ಲ.'

'ಹಾಗೆಯೇ ಮಾಡು. ನಿನ್ನಿಂದ ಜವಾಬು ಹೋದರೆ ಅವರಿಗೂ ಸಂತೋಷವಾಗುತ್ತದೆ. ಮುಂದೆ ನೋಡೋಣ.'

ರಾಮಣ್ಣ ಹೊರಟುಹೋದನು. ಸೀತಾರಾಮು ತನ್ನ ಮಾವನವರಿಗೆ ಒಂದು ಕಾರ್ಡು ಬರೆದು ಹಾಕಿದನು: 'ತಮ್ಮ ಆಶೀರ್ವಾದ ಪತ್ರ ಬಂದು ಸೇರಿತು. ಶುಭ ಸಮಾಚಾರವನ್ನು ಕೇಳಿ ನನಗೂ ನನ್ನ ತಾಯಿಗೂ ಬಹಳ ಸಂತೋಷ ಆಗಿದೆ. ಮಗು ಮತ್ತು ಬಾಣಂತಿ ಆರೋಗ್ಯವಾಗಿದ್ದಾರೆಂದು ನಂಬುತ್ತೇನೆ' ಎನ್ನುವಷ್ಟೇ ಒಕ್ಕಣೆಯನ್ನು ಬರೆದಿದ್ದನು.

## ೮. ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ್

ಮರುದಿನ ಸೀತಾರಾಮರಾಯನ ಕಾರ್ಡು ಶಿವಮೊಗ್ಗವನ್ನು ಮುಟ್ಟಿತು. ಮೂರೇ ಪಂಕ್ತಿ ಒಕ್ಕಣೆಯಿದ್ದು ನಾಮಕರಣಕ್ಕೆ ಬರುವ ಸಮಾಚಾರವನ್ನು ತಿಳಿಸದೇ ಇದ್ದರೂ ಆ ಕಾರ್ಡು ಎಲ್ಲರಿಗೂ ಸಂತೋಷ ವನ್ನುಂಟುಮಾಡಿತು. ಕೃಷ್ಣರಾಯರು ಮೊದಲು ಆ ಸುದ್ದಿಯನ್ನು ಸರೋಜಳಿಗೆ ತಿಳಿಸಿದರು.

'ಅಮ್ಮಾ ಸರೋಜ! ನಿನ್ನ ಗಂಡ ಕಾಗದ ಬರೆದಿದ್ದಾನೆ!' ಎಂದು ಅವರು ಹೇಳುತ್ತಲೂ ನಿಶ್ಶಕ್ತಿಯಿಂದ ಏಳಲಾಗದಿದ್ದ ಸರೋಜ ತಟ್ಟನೆ ಎದ್ದು ಕುಳಿತು, 'ಏನು ಬರೆದಿದ್ದಾರಪ್ಪ? ಮಗ ಹುಟ್ಟಿದಮೇಲಾದರೂ ಅವರ ಮನಸ್ಸು ಕರಗಿತಲ್ಲ! ನನ್ನ ಮೇಲೆ ಕರುಣೆ ಹುಟ್ಟಿತಲ್ಲ!' ಎಂದು ಹರ್ಷಾಶ್ರುಗಳನ್ನು ಸುರಿಸಿದಳು.

'ನೀನಿನ್ನೂ ನಾಲ್ಕು ದಿವಸಗಳ ಬಾಣಂತಿ! ಮೊದಲೇ ನಿಶ್ಶಕ್ತಿ ಎಚ್ಚರಿಕೆಯಿಂದಿರಮ್ಮ! ಮಗ ಹುಟ್ಟಿದ್ದಕ್ಕೆ ಅವನಿಗೂ ಅವನ ತಾಯಿಗೂ ಬಹಳ ಸಂತೋಷವಾಗಿದೆ.'

'ಇಲ್ಲಿಗೆ ಬರುವ ಮಾತೇನಾದರೂ ಬರೆದಿದ್ದಾರೆಯೆ?'

'ಅದನ್ನೇನೂ ಬರೆದಿಲ್ಲ. ನಮ್ಮಿಂದ ಇನ್ನೊಂದು ಕಾಗದ ಹೋದರೆ ಬಹುಶಃ ಬಂದಾನು.'

'ಅತ್ತೆಯವರನ್ನು ಕರೆದುಕೊಂಡು ಬರಬೇಕೆಂದು ಬರೆಯಪ್ಪ ನಾನೊಂದು ಕಾಗದವನ್ನು ಅವರಿಗೆ ಬರೆಯಲೇ?'

'ಆಗಲಿ, ಬರೆಯುವಿಯಂತೆ, ಈಗ ಮಲಗಿಕೋ. ಹೆಚ್ಚಾಗಿ ಆ ಆಲೋಚನೆಗಳನ್ನಿಟ್ಟುಕೊಳ್ಳಬೇಡ. ಹೇಗೂ ಕಾಗದ ಬರೆಯುವುದಕ್ಕೆ ಮತ್ತೆ ಪ್ರಾರಂಭಿಸಿದನಲ್ಲ. ಅದು ಶುಭ ಸೂಚನೆ' ಎಂದು ಹೇಳಿ ಕೃಷ್ಣ ರಾಯರು ಹೊರಕ್ಕೆ ಬಂದರು. ತಮ್ಮ ಹೆಂಡತಿಗೂ ಆ ಸಮಾಚಾರ ವನ್ನು ತಿಳಿಸಿದರು. ಆಕೆ, 'ಸರೋಜ! ಸರೋಜ!' ಎಂದು ಕೂಗುತ್ತ ಬಾಣಂತಿಯ ಕೊಠಡಿಗೆ ಧಾವಿಸುತ್ತಿದ್ದಳು. ಕೃಷ್ಣರಾಯರು ತಮ್ಮ ಮಗಳಿಗೆ ಆಗಲೇ ವರ್ತಮಾನ ಕೊಟ್ಟಿರುವುದಾಗಿ ಹೇಳಿದ್ದರ ಮೇಲೆ

ಅಲ್ಲಿಗೆ ಹೋಗದೆ ತನ್ನ ಗಂಡನ ಜತೆಯಲ್ಲಿ ಬೇರೆ ಕೊಟಡಿಗೆ ಹೋದಳು. 'ಏನು ಬರೆದಿದ್ದಾನೆ?' ಎಂದು ಮುಂತಾಗಿ ಕೇಳಿ ತಿಳಿದುಕೊಂಡು, 'ಆದೇಕೆ ಅವನು ನಾಮಕರಣಕ್ಕೆ ಬರುವ ಪ್ರಸ್ತಾಪವನ್ನೇ ಮಾಡಲಿಲ್ಲ?' ಎಂದು ಕೇಳಿದಳು.

'ರಾಮಣ್ಣನೂ ಕಾಗದ ಬರೆದಿದ್ದಾನೆ. ತುಮಕೂರಿನಲ್ಲಿ ನಡೆದ ಸಮಾಚಾರವನ್ನೆಲ್ಲ ವಿಶದವಾಗಿ ತಿಳಿಸಿದ್ದಾನೆ. ನಾನು ನಿನಗೆ ಹಿಂದೆ ಹೇಳಿದ ಹಾಗೆ ನಾವಿಬ್ಬರೂ ತುಮಕೂರಿಗೆ ಹೋಗಿ ಬರಬೇಕು. ಈಗ ಹುಡುಗನ ಮನಸ್ಸು ಸಮಾಧಾನಸ್ಥಿತಿಯಲ್ಲಿದೆ. ನಮ್ಮನ್ನು ನಿರೀಕ್ಷಿಸು ತ್ತಿದ್ದಾನೆ. ನಾವೂ ಹೋಗಿ ಅವನಿಗೆ ಎರಡು ಒಳ್ಳೆಯ ಮಾತುಗಳನ್ನು ಹೇಳಬೇಕು. ಅವನ ತಾಯಿಯನ್ನು ಸಮಾಧಾನಪಡಿಸಿ, ಒಲಿಸಿ ಕೊಂಡು ಜತೆಯಲ್ಲೇ ಕರೆದುಕೊಂಡು ಬರಬೇಕು' ಎಂದು ಕೃಷ್ಣ ರಾಯರು ಉತ್ತರ ಹೇಳಿದರು.

'ಸರೋಜಳಿಗೆ ನೀರಾಗಲಿ, ಹೋಗಿಬರೋಣ ಆ ಲಂಕಿಣಿಯ ಕಾಲುಕಟ್ಟಿಕೊಳ್ಳುವ ಸ್ಥಿತಿ ನನಗೆ ಬಂತು! ನಾನು ಮಾಡಿಕೊಂಡದ್ದು ತಾನೇ! ಆ ದಿನ ಗಂಭೀರವಾಗಿ ನನ್ನ ದುಃಖವನ್ನು ನಾನು ನುಂಗಿ ಕೊಂಡಿದ್ದಿದ್ದರೆ ಯಾವ ಪ್ರಸಂಗಗಳೂ ನಡೆಯುತ್ತಿರಲಿಲ್ಲ. ಆ ಮಾನ ಕೆಟ್ಟವಳು ನಾಮಕರಣಕ್ಕೆ ಬರದಿದ್ದರೂ ಸೀತಾರಾಮು ಬಂದುಬಿಡುತ್ತಿದ್ದ. ಈಗ ಅವನನ್ನ ಅವಳು ಬಿಗಿಹಿಡಿದಿದ್ದಾಳೆ. ಪಾಪ! ಅವನೇನು ಮಾಡು ತ್ತಾನೆ? ನಾಮಕರಣಕ್ಕೆ ಬರುತ್ತೇನೆ ಎಂದು ಹೇಗೆ ಬರೆದಾನು? ಆ ಮಾರಿಗೆ ನಾನು ಬಲಿಯಾಗಬೇಕು! ಅವಳನ್ನು ನನ್ನ ತಲೆಯಮೇಲೆ ಕೂರಿಸಿಕೊಳ್ಳಬೇಕು! ಆಗ– ನಾನು ಬರುವುದಿಲ್ಲ. ಮಗನನ್ನ ಕಳಿಸಿ ಕೊಡುತ್ತೇನೆ– ಎಂದು ಮಾತ್ರ ಮಾತಿನ ಮುತ್ತು ಸುರಿಯಬಹುದು'

ಎಂದು ತುಳಸಾಬಾಯಿ ಹೇಳಿದಳು. ಕೃಷ್ಣರಾಯರಿಗೆ ತಮ್ಮ ಹೆಂಡತಿಯ ವಿಚಾರದಲ್ಲಿ ಸ್ವಲ್ಪ ಮರುಕವುಂಟಾಯಿತು. ಆದರೆ ಸಂದ ರ್ಭಕ್ಕೆ ತಕ್ಕಂತೆ ತಗ್ಗುವುದನ್ನು ಕಂಡು ಸಂತೋಷವೂ ಆಯಿತು.

ಹೀಗೆ ಶಿವಮೊಗ್ಗದಲ್ಲಿ ಒಂದು ಸಂತೋಷದ ವಾತಾವರಣ ನೆಲಸಿ ದ್ದಾಗ ಆ ಸಂತೋಷವನ್ನು ಹೆಚ್ಚಿಸುವ ಮತ್ತೊಂದು ಪ್ರಸಂಗ

ನಡೆಯಿತು. ನಾಗರಾಜನಿಗೆ ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮೊದಲನೆಯ ರ್‍ಯಾಂಕ್ ಬಂದು ಅವನನ್ನು ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರಾಗಿ ನೇಮಕ ಮಾಡಿರುವ ಟೆಲಿಗ್ರಾಂ ಊಟದ ಹೊತ್ತಿಗೆ ಬಂತು. ನಾಗರಾಜ ಮನೆಯಲ್ಲೇ ಇದ್ದ. ಎಲ್ಲರೂ ಊಟಕ್ಕೇಳುವ ಸಮಯ. ಎಲೆಗಳನ್ನು ಹಾಕಿತ್ತು. ಟೆಲಿಗ್ರಾಂ ಒಡೆದು ನೋಡಿಕೊಂಡು ನಾಗರಾಜ ಮೊದಲು ತಾಯಿಗೂ ಅನಂತರ ತಂದೆಗೂ ಸಂಗತಿ ಹೇಳಿದನು. ಆಕೆಗೆ ಸಂತೋಷಾಧಿಕ್ಯದಲ್ಲಿ ಒಂದು ತರಹ ಮೂರ್ಛೆ ಬಂದಂತಾಗಿ ಆಕೆ ಕೆಳಕ್ಕೆ ಬಿದ್ದುಬಿಟ್ಟಳು. ತುಳಸಾಬಾಯಿಗೆ ಹೃದಯ ಸಂಬಂಧವಾದ ಯಾವುದೋ ರೋಗ ಇದ್ದುದರಿಂದ ಆಕೆಗೆ ಹೆಚ್ಚು ಸಂತೋಷವನ್ನಾಗಲಿ ಹೆಚ್ಚು ದುಃಖವನ್ನಾಗಲಿ ತಡೆದುಕೊಳ್ಳುವುದಕ್ಕಾಗುತ್ತಿರಲಿಲ್ಲ. ಅಲ್ಲದೆ ವಾಯುಗುಣ ವ್ಯತ್ಯಾಸಗಳಾದಾಗಲೂ ಆ ರೋಗದ ಫಲ ಆಗಾಗ ಕಂಡುಬರುತ್ತಿತ್ತು. ಆಕೆ ಪ್ರಜ್ಞೆತಪ್ಪಿ ಬೀಳುತ್ತಲೂ ಮನೆಯೆಲ್ಲ ಅಲ್ಲಕಲ್ಲೋಲವಾಯಿತು. ಹುಡುಗರು ಅಳುವುದಕ್ಕೆ ತೊಡಗಿದರು, ನಾಗರಾಜ ತಾಯಿಯನ್ನು ಹಿಡಿದುಕೊಂಡು ಕಣ್ಣೀರು ಹಾಕಿದನು. ಕೃಷ್ಣರಾಯರು ಧೈರ್ಯಗೆಡದೆ, ಆಕೆಯ ತಲೆಗೆ ನೀರುತಟ್ಟಿ ಮೂಗಿಗೆ ವಾಸನೆಯ ಉಪ್ಪನ್ನು ಹಿಡಿದು, ಲೇಡಿ ಡಾಕ್ಟರಿಗೆ ಹೇಳಿಕಳಿಸಿದರು. ಕಾಲುಗಂಟೆಯಾದರೂ ಪ್ರಜ್ಞೆಬರಲಿಲ್ಲ. ಆದರೆ ಉಸಿರಾಡುತ್ತಿತ್ತು. ಅಂಗೈ ಮತ್ತು ಅಂಗಾಲುಗಳಿಗೆ ಕರ್ಪೂರ ತೈಲವನ್ನು ತಿಕ್ಕಿ, ಆಕೆಯನ್ನು ಇದ್ದ ಸ್ಥಳದಲ್ಲಿಯೇ ಚಾಪೆಹಾಸಿ ದಿಂಬು ಕೊಟ್ಟು ಮಲಗಿಸಿದರು. ಸಂತೋಷದ ವಾತಾವರಣವೆಲ್ಲ ಕ್ಷಣದಲ್ಲಿ ದುಃಖದ ವಾತಾವರಣವಾಯಿತು. ಸರೋಜ ಕೊಟಡಿಯಿಂದ ಬರಲಾಗದೆ ಬಾಗಿಲು ಬಳಿ ನಿಂತು, ಕಣ್ಣೀರು ಹಾಕುತ್ತ, 'ಅಮ್ಮನ್ನ ನೋಡಬೇಕು, ನಾನು ಬರಲೇ?' ಎಂದು ಕೇಳುತ್ತಿದ್ದಳು. ಕೃಷ್ಣರಾಯರು ಮಗಳಿಗೆ, 'ನೀನು ಬರಬೇಡಮ್ಮ. ಅಲ್ಲೇ ಇರು. ಗಾಬರಿಗೇನೂ ಕಾರಣವಿಲ್ಲ. ಆಗಾಗ ನಿನ್ನ ತಾಯಿಗೆ ಪ್ರಜ್ಞೆ ತಪ್ಪುತ್ತಿರಲಿಲ್ಲವೇ? ಈಗಲೂ ಹಾಗೆಯೇ ತಪ್ಪಿದೆ. ಇನ್ನು ಸ್ವಲ್ಪ ಹೊತ್ತಿಗೆಲ್ಲ ಎದ್ದು ಕುಳಿತುಕೊಳ್ಳುತ್ತಾಳೆ' ಎಂದು ಹೇಳಿ ಸಮಾಧಾನ ಮಾಡಿದರು.

ಲೇಡಿ ಡಾಕ್ಟರ್ ಬಂದು ನಾಡಿಯನ್ನು ಹಿಡಿದು ನೋಡಿ, ಒಡನೆಯೇ ಒಂದು ಇಂಜೆಕ್ಷನ್ ಕೊಟ್ಟಳು. ಹೃದಯದ ಹೊಡೆತವನ್ನು ಗಮನಿಸಿ ಹತ್ತು ನಿಮಿಷ ಬಿಟ್ಟುಕೊಂಡು ಮತ್ತೊಂದು ಇಂಜೆಕ್ಷನ್ ಕೊಟ್ಟಳು. ತುಳಸಾಬಾಯಿಗೆ ಕ್ರಮೇಣ ಎಚ್ಚರವಾಯಿತು. ಆಕೆ ಕಣ್ಣುಬಿಟ್ಟು ಸುತ್ತಲೂ ನೋಡಿದಳು. 'ಆಕೆಗೆ ಸಂಪೂರ್ಣ ವಿಶ್ರಾಂತಿ ಕೊಡಬೇಕು–ಹೃದಯ ದೌರ್ಬಲ್ಯ ಹೆಚ್ಚಾಗಿದೆ. ಇನ್ನು ಅರ್ಧ ಗಂಟೆ ಬಿಟ್ಟುಕೊಂಡು ಈ ಮಾತ್ರೆಯನ್ನು ಕೊಡಿ. ನಾನು ಬೇರೆ ಔಷಧವನ್ನು ಕಳಿಸಿಕೊಡುತ್ತೇನೆ. ನನ್ನ ಜತೆಯಲ್ಲಿ ಯಾರನ್ನಾದರೂ ಕಳಿಸಿಕೊಡಿ' ಎಂದು ಹೇಳಿ ಒಂದು ಮಾತ್ರೆಯನ್ನು ಕೊಟ್ಟು ಆಕೆ ಹೊರಟಳು. ಆಕೆಯ ಜತೆಯಲ್ಲಿ ಆಳೊಬ್ಬನು ಹೋಗಿ ಔಷಧವನ್ನು ತಂದನು.

ಅರ್ಧಗಂಟೆಯ ತರುವಾಯ ತುಳಸಾಬಾಯಿಯನ್ನು ಕೃಷ್ಣರಾಯರ ಕೊಟಡಿಗೆ ಮೆಲ್ಲನೆ ಕರೆದುಕೊಂಡುಹೋಗಿ ಮಂಚದಮೇಲೆ ಮಲಗಿಸಿದರು. ಕೃಷ್ಣರಾಯರು, 'ನಾಗರಾಜ! ನೀನೂ ಹುಡುಗರೂ ಊಟ ಮಾಡಿ, ನಾನು ಆಮೇಲೆ ಊಟಮಾಡುತ್ತೇನೆ' ಎಂದು ಹೇಳಿ ತಮ್ಮ ಹೆಂಡತಿಗೆ ರಗ್ಗನ್ನು ಹೊದಿಸಿ ಮಂಚದ ಮೇಲೆಯೇ ಕುಳಿತಿದ್ದರು. ಅನಾಹುತವೇನೂ ಆಗದೆ ದೇವರ ದಯೆಯಿಂದ ಇಷ್ಟರಲ್ಲೇ ಮುಕ್ತಾಯವಾಯಿತಲ್ಲ ಎಂದು ಕೃಷ್ಣರಾಯರಿಗೆ ಸಮಾಧಾನವಾಯಿತು. ಅವರು ಯಾವಾಗಲೂ ತೀರ ಆಶಾವಾದಿಗಳಾಗಿದ್ದುದಿಲ್ಲ. ಸುಖ ಸಂತೋಷಗಳ ಘಟನೆಗಳು ಒದಗಿದಾಗ ಕಷ್ಟದುಃಖಗಳ ಘಟನೆಗಳು ಹೊಂಚು ಹಾಕುತ್ತಲೇ ಇರುತ್ತವೆ. ಅನೇಕ ಸಂದರ್ಭಗಳಲ್ಲಿ ನಾಟಕಗಳಲ್ಲಿ ತೋರಿಸುವ ದರ್ಬಾರ್ ದೃಶ್ಯದಿಂದ ಅರಣ್ಯದೃಶ್ಯಕ್ಕೆ ತಿರುಗುವ ಬದಲಾವಣೆಯಂತೆ ಅನಿರೀಕ್ಷಿತವಾಗಿ ಸಂತೋಷದಿಂದ ದುಃಖಕ್ಕೆ ಮಾರ್ಪಡುತ್ತವೆ. ಮನುಷ್ಯನು ಸಂತೋಷದಲ್ಲಿ ಮೈಮರೆಯಬಾರದು. ಇಂಥ ಸಂತೋಷ ಒದಗಿದೆಯಲ್ಲ, ಮುಂದೇನು ದುಃಖ ಸಂಘಟಿಸುವುದೋ–ಎಂದು ಸ್ವಲ್ಪ ಭಯಗ್ರಸ್ತನಾಗಿ ಮನಸ್ಸಿನಲ್ಲಿಯೇ ಭಾವಿ ದುಃಖದ ಅಥವಾ ಕಲ್ಪನೆಯ ದುಃಖದ ಅಲ್ಪಾನುಭವವನ್ನು ಮಾಡಿಕೊಳ್ಳುವ ಮನುಷ್ಯನಿಗೆ ದುಃಖ

ಸಂಘಟನೆಗಳು ದೂರದಲ್ಲಿಯೇ ಇರುತ್ತವೆ. ಒಂದುವೇಳೆ ಅವು ಸಂಭವಿಸಿದರೂ ಮುನ್ನೆಚ್ಚರಿಕೆಯ ಇನಾಕ್ಯುಲೇಷನ್ನುಗಳನ್ನು ತೆಗೆದುಕೊಂಡವರು ರೋಗಗ್ರಸ್ತರಾದಾಗ ಬದುಕಿಕೊಳ್ಳುವಂತೆ ದುಃಖ ಸಂಘಟನೆಗಳಿಂದ ಅಪಾಯಕ್ಕೀಡಾಗದೆ ಮುಕ್ತರಾಗುತ್ತಾರೆ. ಹಾಗೆಯೇ ದುಃಖಕ್ಕೊಳಗಾದ ಮನುಷ್ಯನು ಸಹ ಮುಂದೆ ಸಂತೋಷ ಲಭಿಸುವುದೆಂದು ಭಾವಿಸಿಕೊಂಡರೂ ಸಾಕು. ಆ ಭಾವನಾ ಮಾತ್ರದಿಂದ ತಾತ್ಕಾಲಿಕವಾಗಿ ದುಃಖ ಶಮನವೊಂದೇ ಅಲ್ಲದೆ ಮುಂದೆ ಶೀಘ್ರದಲ್ಲಿಯೇ ಸಂತೋಷ ಪ್ರಾಪ್ತಿಯೂ ಆಗುತ್ತದೆ. ಹೀಗೆ ಸಮಾಹಿತ ಚಿತ್ತನಾದವನು ಸಂತೋಷದಲ್ಲಿ ಉಬ್ಬಿಹೋಗುವುದಿಲ್ಲ, ದುಃಖದಲ್ಲಿ ಕುಗ್ಗಿಹೋಗುವುದಿಲ್ಲ.

ನಾಗರಾಜನಿಗೆ ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ್ ಕೆಲಸ ಆದ ಬಗ್ಗೆ ಆ ಸಂಸಾರದಲ್ಲಿ ಎಷ್ಟರಮಟ್ಟಿಗೆ ಶುದ್ಧ ಸಂತೋಷವಾಗಬೇಕಾಗಿತ್ತೋ ಅಷ್ಟು ಆಗದೆ ಆತಂಕಮಿಶ್ರ ಮಿತ ಸಂತೋಷ ಮಾತ್ರ ಲಭಿಸಿತು. ನಾಗರಾಜ ಜಂಬದ ಮನುಷ್ಯನಾಗಿದ್ದರೂ ಹಿಂದೆ ಸರೋಜಳ ವಿಚಾರದಲ್ಲಿ ತಾನು ಮಾಡಿದ ಅವಿವೇಕ, ಅದರಿಂದಾದ ಪ್ರಮಾದ, ತಾಯಿತಂದೆಗಳಿಂದಾದ ಛೀಮಾರಿ, ಮುಂದೆ ಸೀತಾರಾಮುವಿನಲ್ಲಿ ಕ್ಷಮಾಯಾಚನೆ ಮಾಡಲು ಒಪ್ಪಿಕೊಳ್ಳಬೇಕಾಗಿ ಬಂದ ಸಂದರ್ಭ– ಇವುಗಳೆಲ್ಲರ ಪರಿಣಾಮದಿಂದ ಅವನಿಗೆ ಆ ಜಂಬ ಬಹಳ ಮಟ್ಟಿಗೆ ಇಳಿದುಹೋಗಿತ್ತು. ಈಗ ತಾಯಿಗೆ ಉಂಟಾದ ಆಕಸ್ಮಿಕದಿಂದ ಮನಸ್ಸು ಆತಂಕಗ್ರಸ್ತವಾಗಿ ಅವನ ಸಂತೋಷ ಮಿತವಾಗಿತ್ತು. ಅವನು ಜಂಬದ ಮಾತುಗಳನ್ನೇನೂ ಆಡಲಿಲ್ಲ. ಅವನನ್ನು ಶಿವಮೊಗ್ಗದ ಡಿಸ್ಟ್ರಿಕ್ಟ್ ಕಚೇರಿಯಲ್ಲಿಯೇ ಶಿಕ್ಷಣಪಡೆಯುವುದಕ್ಕಾಗಿ ಹಾಕಿದ್ದರು.

ತುಳಸಾಬಾಯಿ ಎರಡು ದಿನಗಳ ಸಂಪೂರ್ಣ ವಿಶ್ರಾಂತಿಯನ್ನು ಪಡೆದು ಔಷಧ ಸೇವನೆ ಮಾಡಿ ಮತ್ತೆ ಮನೆಯಲ್ಲಿ ಓಡಾಡುವಂತಾದಳು. ಆಗ ನಾಗರಾಜನಿಗೆ ಪ್ರೊಬೇಷನರಿ ಕೆಲಸವಾದುದರ ಸಂತೋಷವನ್ನು ಆಕೆ ಅನುಭವಿಸಿ, ' ನಾಗರಾಜ! ಅವರು ಗುಮಾಸ್ತೆಯ ಕೆಲಸದಿಂದ ಮೆಲ್ಲಮೆಲ್ಲನೆ ಅಮಲ್ದಾರಿಗೆ ಬಂದು, ಏನೋ ನಾಲ್ಕೈದು ವರ್ಷಗಳ ಹಿಂದೆ ಈ ಅಸಿಸ್ಟೆಂಟ್ ಕೆಲಸಕ್ಕೆ ಬಡ್ತಿ ಪಡೆದರು . ಇನ್ನೇನು, ಅವರಿಗೆ

ಪಿಂಚಿನ್ ಆಗುವುದಕ್ಕೆ ಮೂರು ವರ್ಷಗಳು ಮಾತ್ರ ಇವೆ. ನೀನು ಮೊದಲೆತ್ತಿಕೊಳ್ಳುವಾಗಲೆ ಅಸಿಸ್ಟೆಂಟ್ ಕಮಿಷನರ್ ಕೆಲಸಕ್ಕೆ ಬಂದುಬಿಟ್ಟೆಯಪ್ಪ! ದೇವರು ನಿನಗೆ ಚೆನ್ನಾಗಿ ಆಯುಸ್ಸು ಕೊಟ್ಟು ಸೌಖ್ಯವಾಗಿಟ್ಟಿರಲಪ್ಪ! ನಾನೂ ಬದುಕಿದ್ದರೆ ನೀನು ಡೆಪ್ಯುಟಿ ಕಮಿಷನರ್ ಆಗುವುದನ್ನಾದರೂ ನೋಡಿಯೇನು! ಈ ಹಾಳು ರೋಗ ನನ್ನನ್ನು ಯಾವಾಗ ತಟ್ಟನೆ ತಿಂದುಬಿಡುತ್ತದೆಯೋ ಏನೋ! ನಿನಗೆ ಒಂದು ಮಾತನ್ನು ಹೇಳುತ್ತೇನಪ್ಪ ನಾಗರಾಜ! ಹಟಮಾಡಬೇಡ. ಮದುವೆ ಮಾಡಿಕೋ. ಮನೆಗೆ ಸೊಸೆ ಬರುವುದನ್ನು ನಾನು ನೋಡಬೇಕು. ಹಿಂದೆ ಬಂದಿದ್ದ ಹೆಣ್ಣು– ಬೆಂಗಳೂರಿನದು– ನನ್ನ ಮನಸ್ಸಿಗೆ ಒಪ್ಪಿತ್ತು. ಸರೋಜ ಸುಕನ್ಯೆ ಎಲ್ಲರೂ ಒಪ್ಪಿದ್ದರು. ನೀನು ಸಹ ಅವಳನ್ನು ಮೆಚ್ಚಿದಂತೆ ಕಂಡಿತ್ತು. ಮರುದಿನ ಪ್ರಮಾದ ಆಗಿಹೋಗಿ, ನಿನ್ನ ತಂದೆ ಆಡಿದ ಮಾತಿಗೆ ನಿನ್ನ ಮನಸ್ಸು ಕಲಕಿಹೋಗಿ,–ಮದುವೆ ಬೇಡ ಎಂದು ನೀನು ಹೇಳಿದೆ. ಆ ಹುಡುಗೀಗೆ ಬೇರೆಕಡೆ ಮದುವೆ ಆಗಿಹೋಯಿತು. ಈಗ ಹಾಗೆಲ್ಲಾ ಹೇಳಬೇಡ. ಇನ್ನು ಕೆಲವು ದಿವಸಗಳಿಗೆ ಮದ್ರಾಸಿನಿಂದ ಹೆಣ್ಣನ್ನು ಕರೆದುಕೊಂಡು ದೊಡ್ಡ ಮನುಷ್ಯರೊಬ್ಬರು ಬರುತ್ತಾರೆ. ಅವರಿಗೆ ಬೇಕಾದಷ್ಟು ಆಸ್ತಿ ಇದೆ. ಒಬ್ಬಳೇ ಮಗಳು, ಒಬ್ಬನೇ ಮಗ. ಅವರು ನಿನಗೆ ಬೇಕಾದ ವರದಕ್ಷಿಣೆ ಕೊಡುತ್ತಾರೆ, ನಿನಗೆ ಬೇಕಾದ ವರೋಪಚಾರ ಮಾಡುತ್ತಾರೆ. ಈಗ ನೀನೂ ಸಿವಿಲ್ ಸರ್ವಿಸಿನಲ್ಲಿ ರ್‍ಯಾಂಕು ಪಡೆದು ಅಸಿಸ್ಟೆಂಟ್ ಕಮಿಷನರ್ ಆಗಿದ್ದೀಯೆ. ಮದುವೆ ಮಾಡಿಕೊಂಡರೆ ಚೆನ್ನಾಗಿರುತ್ತದಪ್ಪ '—ಎಂದು ಹೇಳಿದಳು.

'ಈಗ ಯಾವ ಮಾತನ್ನೂ ಆಡಬೇಡಮ್ಮ! ತುಮಕೂರಿನ ಸಮಾಚಾರ ಏನಾದರೂ ಇದ್ದರೆ ಹೇಳು' ಎಂದು ನಾಗರಾಜ ಉತ್ತರ ಕೊಟ್ಟನು.

'ತುಮಕೂರಿನ ಸಮಾಚಾರ ಇನ್ನೂ ನಿನ್ನ ಕಿವಿಗೆ ಮುಟ್ಟಲಿಲ್ಲವೆ? ನಿನ್ನ ಭಾವನಿಗೆ ಅವರು ಒಂದು ಕಾಗದ ಬರೆದಿದ್ದರು. ಮಗ ಹುಟ್ಟಿದ ಸಮಾಚಾರ ತಿಳಿಸಿ, ನಾಮಕರಣಕ್ಕೆ ಬರಬೇಕು ಎಂದು ಬರೆದಿದ್ದರು. ನಿನ್ನ ಭಾವ—ಇದುವರೆಗೂ ಕಾಗದ ಗೀಗದ ಬರೆಯದೇ ಇದ್ದವನು ಈಗ

ಒಂದು ಕಾರ್ಡು ಬರೆದು,—ಮಗು ಹುಟ್ಟಿದ ಸಮಾಚಾರ ಕೇಳಿ ಸಂತೋಷವಾಗಿದೆ—ಎಂದು ಮಾತ್ರ ಬರೆದಿದ್ದಾನಪ್ಪ! ನಾಮಕರಣಕ್ಕೆ ಬರುವ ಮಾತನ್ನು ಮಾತ್ರ ಬರೆದಿಲ್ಲ. ಏನು ಮಾಡುತ್ತಾನೋ ಏನೋ? ಈಗ ನಾನೂ ನಿನ್ನ ತಂದೆ-ಇಬ್ಬರೂ ತುಮಕೂರಿಗೆ ಹೋಗಬೇಕೆಂದಿದ್ದೇವೆ. ಸರೋಜಳಿಗೆ ನೀರಾಗಲಿ ಎಂದು ಕಾದಿದ್ದೇವೆ. ಆಮೇಲೆ ನಾವು ಹೋಗಿ ನಿನ್ನ ಭಾವನ್ನ ಅವನ ತಾಯಿಯನ್ನ ಸಮಾಧಾನ ಪಡಿಸಿದರೆ ಅವರಿಬ್ಬರೂ ನಾಮಕರಣಕ್ಕೆ ಬಂದಾರು. ಅಲ್ಲಿಗೆ ನೋಡಪ್ಪ! ನನ್ನ ಹೊಟ್ಟೆಯಲ್ಲಿ ಹಾಲು ಹೊಯ್ದಂತೆ ಆಗುತ್ತದೆ!'

'ಅಪ್ಪ, ನೀನು ತುಮಕೂರಿಗೆ ಹೋಗಬೇಕೆ?'

ನಾಗರಾಜನ ಧ್ವನಿಯಲ್ಲಿ ಅರ್ಧ ಅಸಂತುಷ್ಟಿ ಅರ್ಧ ದುಃಖ ತುಂಬಿತ್ತು.

'ಹೋಗಬೇಕಪ್ಪ! ಏನು ಮಾಡುವುದು? ಈಗ ನಿನ್ನ ಭಾವ ಸಮಾಧಾನಸ್ಥಿತಿಯಲ್ಲಿದ್ದಾನಂತೆ. ನಾವು ಸರೋಜಳ ಸಂಸಾರವನ್ನು ಕೂಡಿಸಬೇಕಲ್ಲ! ಅವಳ ಬಾಣಂತಿತನ ಮುಗಿದಮೇಲೆ ಮಗನನ್ನೆತ್ತಿಕೊಂಡು ಅವಳು ತನ್ನ ಗಂಡನ ಮನೆ ಸುಖವಾಗಿ ಸೇರಿಬಿಟ್ಟರೆ ಆಗ ನಮ್ಮ ತಲೆಯಮೇಲಿರುವ ಭಾರ ಇಳಿಯುತ್ತದೆ.'

'ನೀವು ಹೋಗಬೇಡಿ. ನಾನೇ ಹೋಗಿ ಭಾವನ್ನ ಕಂಡು ಏನು ಸಮಾಧಾನ ಹೇಳಬೇಕೋ ಹೇಳಿ, ಅವನ ಕ್ಷಮಾಪಣೆಯನ್ನೂ ಕೇಳಿಕೊಂಡು, ಕರೆದುಕೊಂಡು ಬರುತ್ತೇನೆ. ಆಗಬಹುದೋ ಇಲ್ಲವೋ? ಹೇಳಮ್ಮ!'

'ನಾನೇನೂ ಹೇಳಲಾರೆ ನಾಗರಾಜ! ನಿನ್ನ ತಂದೆಯನ್ನು ಕೇಳಬೇಕಪ್ಪ. ನನಗೆ ಹೋಗುವುದಕ್ಕೆ ಇಷ್ಟವೇನೂ ಇಲ್ಲ. ಆದರೆ ಹೋಗಬೇಕು. ನಾನು ಹೋಗಿ, ನನ್ನ ಬೀಗಿತ್ತಿಯನ್ನು ಸಮಾಧಾನ ಪಡಿಸಿ, ಅವಳ ಕಾಲುಕಟ್ಟಿಕೊಂಡು,—ಕ್ಷಮಿಸಮ್ಮ ಮಹಾತಾಯಿ! ನೀನೂ ನಿನ್ನ ಮಗನೂ ಶಿವಮೊಗ್ಗಕ್ಕೆ ನಾಮಕರಣಕ್ಕೆ ಬನ್ನಿಯಮ್ಮ!—ಎಂದು ಕರೆಯ ಬೇಕಪ್ಪ! ಇಲ್ಲದಿದ್ದರೆ ಅವರು ಹೊರಟು ಬರುವುದಿಲ್ಲ.

ಸುಮ್ಮನೆ ನೀನೊಬ್ಬನು ಹೋದರೆ ಏನಾಗುತ್ತೆ? ಏನೂ ಆಗುವುದಿಲ್ಲ. ಇವೆಲ್ಲ ಕಷ್ಟದ ವ್ಯವಹಾರ ನಾಗರಾಜ!'

'ಮತ್ತೆ ನೀನು ನನ್ನನ್ನು ಮದುವೆ ಮಾಡಿಕೋ ನಾಗರಾಜ! ಎಂದು ಹೇಳಿ ಬಲವಂತ ಮಾಡುತ್ತಿದ್ದೀಯಲ್ಲ. ನಾಳೆ ನನಗೊಬ್ಬಳು ಮಗಳು ಹುಟ್ಟಿದರೆ, ನಾನೂ ನನ್ನ ಹೆಂಡತಿಯೂ ಹೋಗಿ ಬೀಗಿತ್ತಿಯ ಕಾಲುಕಟ್ಟಿಕೊಳ್ಳಬೇಕು. ಹೌದೋ ಅಲ್ಲವೋ?'

'ಮಗಳು ಹುಟ್ಟಿದ ಮಾತ್ರಕ್ಕೆ ಹಾಗೆ ಯಾರು ಮಾಡುತ್ತಾರಪ್ಪ? ಏನೋ ಸಾಮಾನ್ಯ ರೀತಿಯಲ್ಲಿ ಇದ್ದುಬಿಟ್ಟರೆ ಸಣ್ಣಪುಟ್ಟ ಮನಸ್ತಾಪ ಗಳು ಬಂದರೂ ಬಾಧಕವಿಲ್ಲ; ಅನ್ಯೋನ್ಯವಾಗಿ ಇದ್ದು ಬಿಡುತ್ತಾರೆ. ಈಗ ಲೋಕದಲ್ಲಿ ಹಾಗೆ ಎಷ್ಟೋ ಸಂಸಾರಗಳಿಲ್ಲವೇ? ಮಾನದ ಮೇಲೆ ಲಕ್ಷ್ಯ ಇಲ್ಲದವರು,– ನಮ್ಮ ಮಗಳು ನಮ್ಮ ಮನೆಯಲ್ಲೇ ಇರಲಿ, ಕಳಿಸೋದಿಲ್ಲ. ಅಳಿಯನಿಗೆ ಹೆಂಡತಿ ಬೇಕಾಗಿದ್ದರೆ ನಮ್ಮ ಮನೆಗೇನೆ ಬರಲಿ – ಎಂದು ಮಗಳನ್ನು ಇಟ್ಟುಕೊಂಡುಬಿಡುತ್ತಾರೆ. ಹಾಗೆ ಅಳಿಯಂದಿರು ಎಷ್ಟೋ ಮಂದಿ ಮಾವನವರ ಮನೆಗಳಲ್ಲೇ ನಿಂತು ಬಿಟ್ಟಿದ್ದಾರೆ. ಅಳಿಯ ಪೋಕರಿಯಾಗಿಯೋ ದುಷ್ಟನಾಗಿಯೋ ಇದ್ದು ಹೆಂಡತಿಯನ್ನು ತೊರೆದು ಬಿಟ್ಟರೆ ಆಗ ಹೆತ್ತವರು ಹೆತ್ತಪಾಪಕ್ಕೆ ತಮ್ಮ ಮಗಳನ್ನು ಕರೆದುಕೊಂಡು ಬಂದು ಆದರಿಸುತ್ತಾರೆ. ಹೀಗೆಲ್ಲ ಪ್ರಪಂಚ ನಡೆಯುತ್ತದಪ್ಪ! ಹೆಣ್ಣುಮಕ್ಕಳು ಅವರವರ ಗಂಡಂದಿರ ಮನೆಯಲ್ಲಿದ್ದು ಕೊಂಡು ವಯಿನವಾಗಿ ಸಂಸಾರ ಮಾಡುತ್ತಿದ್ದರೆ ಅವರಿಗೂ ಭೂಷಣ, ತವರು ಮನೆಗೂ ಕೀರ್ತಿ. ಅದಕ್ಕೋಸ್ಕರವೇ ಅಲ್ಲವೇ ನಾನೂ ನಿನ್ನ ತಂದೆ ಇಷ್ಟೊಂದು ಪಾಡುಪಡುತ್ತಿರುವುದು?'

ನಾಗರಾಜನ ಮನಸ್ಸು ಆ ಮಾತುಗಳನ್ನು ಕೇಳಿ ಮತ್ತಷ್ಟು ಇಳಿದುಹೋಯಿತು. ತನ್ನ ದೆಸೆಯಿಂದ ತನ್ನ ತಾಯಿ ತಂದೆಗಳು ತುಮ ಕೂರಿಗೆ ಹೋಗಿ ಭಾವನನ್ನೂ ಆ ಭಾವನ ತಾಯಿಯನ್ನೂ ಕಾಲುಕಟ್ಟಿ ಕೊಳ್ಳಬೇಕಾದ ಹೀನಸ್ಥಿತಿ ಬಂದಿತಲ್ಲ, ಇದು ಎಂಥ ಅಪಮಾನಕರವಾದ ಪ್ರಸಂಗ – ಎಂದು ಖಿನ್ನಮನಸ್ಕನಾಗಿ ತಂದೆಯನ್ನು ನೋಡುವುದಕ್ಕಾಗಿ ಕೃಷ್ಣರಾಯರ ಕೊಟಡಿಗೆ ಹೋದನು.

ಕೃಷ್ಣರಾಯರಿಗೆ ಮಗನನ್ನು ನೋಡಿ ಸಂತೋಷವಾಯಿತು. 'ಬಾ ನಾಗರಾಜ! ಮೊದಲನೆಯ ರ್‍ಯಾಂಕ್ ನನಗೆ ಬಾಸಲು ಎಂದು ನೀನೇನೋ ಧೈರ್ಯವಾಗಿ ಹೇಳುತ್ತಿದ್ದೆ. ದೇವರ ದಯೆ, ನಿನ್ನ ಶ್ರದ್ಧೆ, ನಿನ್ನ ಮೇಧಾಶಕ್ತಿ – ಎಲ್ಲವೂ ಕೂಡಿ ನೀನು ಹೇಳುತ್ತಿದ್ದಂತೆಯೇ ಆಯಿತು. ನನಗೆ ಬಹಳ ಸಂತೋಷ' ಎಂದು ಪಕ್ಕದಲ್ಲಿ ಕೂಡಿಸಿ ಕೊಂಡರು.

ಮಕ್ಕಳು ಹೀಗೆ ಪ್ಯಾಸುಗಳನ್ನು ಮಾಡಿ ದೊಡ್ಡ ಪದವಿಗೇರಿದರೆ ಯಾವ ತಾಯಿ ತಂದೆಗಳಿಗೆ ತಾನೆ ಹೆಮ್ಮೆ ಮತ್ತು ಸಂತೋಷ ಇರುವು ದಿಲ್ಲ? ಕೆಲವರಂತೂ ಏನೋ ನೆಪಗಳನ್ನು ಮಾಡಿಕೊಂಡು ಸ್ನೇಹಿತರನ್ನೂ ಬಂಧುಗಳನ್ನೂ ನೋಡುವುದಕ್ಕೆ ಹೋಗುವಂತೆ ಹೋಗಿ ಅವರಿಂದ ಅಭಿ ನಂದನೆಗಳನ್ನು ಸ್ವೀಕಾರಮಾಡುತ್ತ ತಮ್ಮ ಮಗನ ಬುದ್ಧಿಚಾತುರ್ಯ, ಅದೃಷ್ಟ, ಕೆಳಗಿನ ದರ್ಜೆಯಿಂದ ಹಿಡಿದು ಮೇಲಿನ ದರ್ಜೆಯ ಪೂರ್ತಿ ಎಲ್ಲ ಫಸ್ಟ್ ಕ್ಲಾಸ್ ಬಂದದ್ದು – ಎಲ್ಲವನ್ನೂ ಡಂಗುರ ಹೊಡೆಯುತ್ತ ಹೋಗುವುದುಂಟು. ಕೆಲವರು ತಮ್ಮ ಮನೆಗೆ ಯಾರು ಬರಲಿ, ಅವರು ಏನು ಮಾತನ್ನೇ ಆಡುತ್ತಿರಲಿ, ಮಧ್ಯೆ ತಮ್ಮ ಮಗನ ಪ್ಯಾಸನ್ನೂ ಪ್ರೊಬೇಷನರ್ ಆದುದನ್ನೂ ಅವರಿಗೆ ಹೇಳಿ ಮಾತನ್ನು ಅಡ್ಡ ತಿರುಗಿಸು ತ್ತಾರೆ.

ಒಬ್ಬ ದೊಡ್ಡಮನುಷ್ಯರು ತಮ್ಮ ಮಗನಿಗೆ ಎಸ್. ಎಸ್. ಎಲ್. ಸಿ. ಫಸ್ಟ್ ಕ್ಲಾಸಿನಲ್ಲಿ ಪ್ಯಾಸಾದುದನ್ನು ಪ್ರಚಾರ ಮಾಡಿದ ವೈಖರಿ ಜ್ಞಾಪಕಕ್ಕೆ ಬರುತ್ತದೆ. ಆ ಹುಡುಗ ವಯಸ್ಸಿಗೆ ತಕ್ಕಷ್ಟು ಬೆಳೆದಿರಲಿಲ್ಲ– ಗಿಡ್ಡ; ಮೂರಡಿ ನಾಲ್ಕಂಗುಲ ಇದ್ದನೋ ಏನೋ! ವಯಸ್ಸು ಹದಿ ನೈದು ಆಗಿದ್ದಿರಬಹುದು. ಪರೀಕ್ಷೆಯ ಫಲಿತಾಂಶ ಬಂದ ಮಾರನೆಯ ದಿನ ಬೆಳಗ್ಗೆ ಕಾಫಿಯನ್ನು ಸೇವನೆ ಮಾಡಿದಮೇಲೆ ತಮ್ಮ ಮಗನಿಗೆ ಒಳ್ಳೆಯ ಬಟ್ಟೆಯನ್ನು ಹಾಕಿಸಿ, ತಾವು ಕೋಟು ರುಮಾಲುಗಳನ್ನು ಧರಿಸಿಕೊಂಡು ಎಳ್ಳು ಬೀರುವ ಹೆಂಗಸರು ಮನೆಮನೆಗೂ ಹೋಗು ವಂತೆ, ಆ ಮಗನನ್ನು ಕರೆದುಕೊಂಡು ಹೊರಟರು. ದಾರಿಯಲ್ಲಿ ಸಿಕ್ಕ ಸ್ವಲ್ಪ ಪರಿಚಯದವರು ಹೆಚ್ಚು ಪರಿಚಯದವರಿಗೆಲ್ಲ, 'ನಮ್ಮ ಹುಡುಗ

ಎಸ್.ಎಸ್.ಎಲ್.ಸಿ.ಯಲ್ಲಿ ಫಸ್ಟ್ ಕ್ಲಾಸ್ ಬಂದಿದ್ದಾನೆ!' ಎಂದು ಆ ಹುಡುಗನನ್ನು ತಂದೆ ತೋರಿಸುವುದು, ಆ ಹುಡುಗ ಹೊಸದಾಗಿ ಮದುವೆಯಾದ ಹುಡುಗಿ ಗಂಡನೆದುರಿನಲ್ಲಿ ತಲೆ ತಗ್ಗಿಸಿಕೊಂಡು ನಿಲ್ಲುವಂತೆ ನಿಂತು ಆಗಾಗ ಸ್ವಲ್ಪ ತಲೆಯೆತ್ತಿ ಗಂಡನನ್ನು ಕದ್ದು ನೋಡುವಂತೆ ನೋಡುವುದು–ಹೀಗೆಯೇ ಮಾಡಿಕೊಂಡು ತಂದೆ ಮತ್ತು ಮಗ ನಡೆದರು. ಸ್ವಲ್ಪ ದೂರ ಹೋದಮೇಲೆ ಸ್ನೇಹಿತರೊಬ್ಬರ ಮನೆ ಸಿಕ್ಕಿತು. ಒಳಹೊಕ್ಕು ಕೊಟಡಿಯಲ್ಲಿ ತಲೆ ಹಾಕಿದರು. ಆ ಸ್ನೇಹಿತರು, 'ಬನ್ನಿ! ಬನ್ನಿ! ಅಪೂರ್ವವಾಗಿ ಬಂದಿದ್ದೀರಿ' ಎಂದು ಸ್ವಾಗತವನ್ನು ನೀಡಿ ಚಾಪೆಯ ಮೇಲೆ ಕುಳ್ಳಿರಿಸಿ, ಬಂದವರಿಗೆ ಕಾಫಿ ತರುವಂತೆ ಒಳಗಿನವರಿಗೆ ಕೂಗಿ ಹೇಳಿದರು. ಹುಡುಗನ ತಂದೆ, 'ನೋಡಿ! ನಮ್ಮ ಹುಡುಗ ಎಸ್. ಎಸ್. ಎಲ್. ಸಿ. ಪ್ಯಾಸ್ ಮಾಡಿದ್ದಾನೆ. ಫಸ್ಟ್ ಕ್ಲಾಸಿನಲ್ಲಿ ಬಂದಿದ್ದಾನೆ. ಇನ್ನೂ ಹದಿನೈದು ವರ್ಷ ಅಂದರೆ! ಮುಂದೆ ಏನು ಮಾಡಬೇಕ್ರಿ?' ಎಂದು ಕೇಳಿದರು. ಆ ಸ್ನೇಹಿತರು, 'ಕಾಲೇಜಿಗೆ ಸೇರಿಸಿ. ಮುಂದೆ ಓದಲಿ' ಎಂದು ಹೇಳಿ ಕಾಫಿ ಕೊಟ್ಟು ಉಪಚರಿಸಿದರು. ಅಲ್ಲಿ ಕಾಲುಗಂಟೆ ಇದ್ದು ಹುಡುಗನೂ ಅವನ ತಂದೆಯೂ ಮತ್ತೊಂದು ಮನೆಗೆ ಹೋದರು. ಅಲ್ಲಿಯೂ ಸ್ವಾಗತ ಕಾಫಿಗಳು ಆದುವು. ಹುಡುಗನ ತಂದೆ, 'ನೋಡಿ! ನಮ್ಮ ಹುಡುಗನಿಗೆ ಇನ್ನೂ ಹದಿನಾಲ್ಕು ವರ್ಷ ಅಂದರೆ! ಆಗಲೇ ಫಸ್ಟ್ ಕ್ಲಾಸಿನಲ್ಲಿ ಎಸ್. ಎಸ್. ಎಲ್. ಸಿ. ಮಾಡಿದ್ದಾನೆ. ಲೋವರ್ ಸೆಕಂಡರಿಯಲ್ಲೂ ಫಸ್ಟ್ ಕ್ಲಾಸ್ ಬಂದಿದ್ದ. ಮುಂದೆ ಏನು ಮಾಡಬೇಕೋ ಹೇಳ್ರಿ' ಎಂದು ಕೇಳಿದರು. ಆ ಸ್ನೇಹಿತ, 'ಭಲೆ! ಹದಿನಾಲ್ಕು ವರ್ಷಕ್ಕೆಲ್ಲ ಎಸ್.ಎಸ್.ಎಲ್.ಸಿ. ಫಸ್ಟ್ ಕ್ಲಾಸ್! ಒಳ್ಳೆಯ ಜಾಣ ಕಣಯ್ಯ ನೀನು' ಎಂದು ಹೇಳುತ್ತ ಹುಡುಗನ ಬೆನ್ನು ತಟ್ಟಿ, 'ಮುಂದೆ ಪ್ರೊಬೇಷನರ್ ಆಗಬಹುದು. ಹುಡುಗನಿಗೆ ಸ್ವಲ್ಪ ತಯಾರಿ ಕೊಟ್ಟು ಬೆಳೆಯುವ ಹಾಗೆ ಮಾಡಿ. ಕಾಲೇಜಿಗೆ ಸೇರಿಸಿ' ಎಂದು ತಂದೆಗೆ ಹೇಳಿ ಇಬ್ಬರನ್ನೂ ಕಳಿಸಿಕೊಟ್ಟನು. ಮುಂದೆ ಮತ್ತೊಂದು ಮನೆ ಹೊಕ್ಕು ಅಲ್ಲಿಯೂ ಉಪಚಾರಗಳಾಗುತ್ತಿದ್ದಾಗ, 'ನೋಡಿ ಅಂದ್ರೆ! ನಮ್ಮ ಹುಡುಗ ಇನ್ನೂ ಹದಿಮೂರೇ ವರ್ಷ!

ಆಗಲೇ ಎಸ್. ಎಸ್. ಎಲ್. ಸಿ. ಫಸ್ಟ್ ಕ್ಲಾಸ್! ಲೋವರ್ ಸೆಕೆಂಡರಿ ಯಲ್ಲೂ ಫಸ್ಟ್ ಕ್ಲಾಸ್ ಬಂದು ರ್ಯಾಂಕ್ ತೆಗೆದುಕೊಂಡಿದ್ದ. ಗೋಲಿ ಆಡಿಕೊಂಡೇ ಇದ್ದ! ಅದು ಹೇಗೆ ಪ್ಯಾಸ್ ಮಾಡಿದನೋ ಏನೋ! ಎಷ್ಟು ಬುದ್ಧಿಶಾಲಿ ಅಂತೀರಿ! ಮುಂದೆ ಏನು ಮಾಡಬೇಕೋ ಹೇಳ್ರಿ' ಎಂದು ತಂದೆ ಕೇಳಿದನು. ಆ ಸ್ನೇಹಿತ ಸ್ವಲ್ಪ ಪಟಿಂಗ. 'ಭೇಷ್! ವಯಸ್ಸು ಸಣ್ಣದಾದರೂ ಹುಡುಗ ಪ್ರೌಢನಾಗಿದ್ದಾನೆ. ಬೇಗ ಒಂದು ಮದುವೆ ಮಾಡಿಬಿಡಿ! ನಿಮಗೂ ಮೊಮ್ಮಗ ಹುಟ್ಟಲಿ!' ಎಂದು ಹೇಳಿದನು. ಹುಡುಗನ ತಂದೆಗೆ ಆ ಕಟಕಿ ಮಾತು ಅರ್ಥವಾದಂತೆ ತೋರಲಿಲ್ಲ. 'ಇನ್ನೂ ಹದಿಮೂರೇ ವರ್ಷ! ನಮ್ಮ ಹುಡುಗನಿಗೆ ತಕ್ಕ ಹುಡುಗಿ ಸಿಕ್ಕಬೇಕಲ್ಲಪ್ಪ!' ಎಂದು ಹೇಳುತ್ತ ಎದ್ದು ಹೊರಟನು. ಹೊರಕ್ಕೆ ಬಂದಮೇಲೆ ಆ ಹುಡುಗ, 'ಸಾಕಪ್ಪ! ನಮ್ಮ ಮನೆಗೆ ಹಿಂದಿರುಗೋಣ. ಮನೆಯಿಂದ ಮನೆಗೆ ನನ್ನ ವಯಸ್ಸು ಇಳಿದು ಹೋಗುತ್ತಾ ಇದೆ' ಎಂದು ಹೇಳಿದನಂತೆ. ತಂದೆ ಮತ್ತು ಮಗ ಮನೆಗೆ ಹಿಂದಿರುಗಿದರು. ಆ ಕಥೆ ಹಾಗೆ. ಈ ಕಥೆ ಬೇರೆ ರೀತಿ.

'ಈಗ ನಿನಗೆ ಶಿವಮೊಗ್ಗದಲ್ಲಿಯೇ ಕೆಲಸಕ್ಕೆ ಹಾಕಿದ್ದು ಬಹಳ ಅನುಕೂಲವಾಯಿತಪ್ಪ. ನಿನ್ನನ್ನು ಹಾಸನಕ್ಕೋ, ಚಿತ್ರದುರ್ಗಕ್ಕೋ ಬೇರೆ ಎಲ್ಲಿಗೋ ಹಾಕಿದ್ದಿದ್ದರೆ ತೊಂದರೆಯಾಗುತ್ತಿತ್ತು. ನೀನು ಅಲ್ಲಿ ಬೇರೆ ಸಂಸಾರ ಹೂಡಬೇಕಾಗಿತ್ತು. ನಿನ್ನ ಜತೆಗೆ ನಿನ್ನ ತಾಯಿ ಬರುವ ಹಾಗಿಲ್ಲ. ನೀನಿನ್ನೂ ಮದುವೆ ಮಾಡಿಕೊಂಡಿಲ್ಲ. ಎಲ್ಲೋ ಹೋಟಲಿ ನಲ್ಲಿರಬೇಕಾಗಿತ್ತು. ಇಲ್ಲದಿದ್ದರೆ, ಅಡಿಗೆಯವನನ್ನು ಗೊತ್ತುಮಾಡಿ ಕೊಂಡು ನಿನ್ನ ಅಂತಸ್ತಿಗೆ ತಕ್ಕಂತೆ ಒಂದು ಬಾಡಿಗೆ ಬಂಗಲೆಯಲ್ಲಿರ ಬೇಕಾಗಿತ್ತು. ಈಗ ಆ ಕಷ್ಟವೆಲ್ಲ ತಪ್ಪಿತು' ಎಂದು ಕೃಷ್ಣರಾಯರು ಹೇಳಿದರು.

'ನಾನೂ ಹಾಗೆಯೇ ಅಂದುಕೊಂಡೆ. ಬೇರೆ ಕಡೆಗೆ ಹಾಕಿದ್ದರೆ ಏನು ಮಾಡುವುದು? ಎಂದು ಆಲೋಚಿಸುತ್ತಿದ್ದೆ.'

'ನೋಡಪ್ಪ! ಈಗ ನೀನು ಹೊಸದಾಗಿ ದೊಡ್ಡ ಹುದ್ದೆಗೆ ಬಂದಿ ರುವ ಯುವಕ. ನೀನು ಬುದ್ಧಿಶಾಲಿಯೇ ಹೌದು. ಆದರೂ ಲೋಕಾ

ನುಭವ ಬರಬೇಕು. ನಿನಗೆ ಒಂದೆರಡು ಮಾತನ್ನು ಹೇಳುತ್ತೇನೆ. ಈಗ ನಿನ್ನಲ್ಲಿ ಯಾವ ದುರಭ್ಯಾಸಗಳೂ ಇಲ್ಲ. ಹೈ ಸ್ಕೂಲು ಕಾಲೇಜುಗಳಲ್ಲಿ ರುವಾಗಲೇ ಹುಡುಗರು ಸಿಗರೇಟು ಸೇದುವುದನ್ನು ಕಲಿತುಬಿಡುತ್ತಾರೆ. ನೀನೇನೋ ಇದುವರೆಗೂ ಅಂಥ ಅಭ್ಯಾಸ ಮಾಡಿಕೊಳ್ಳಲಿಲ್ಲ. ನನಗೆ ಆ ವಿಚಾರದಲ್ಲಿ ಬಹಳ ಸಂತೋಷ. ಮುಂದೆಯೂ ಅಷ್ಟೇ. ಸಿಗರೇಟು ಚುಟ್ಟಾ- ಇವುಗಳ ಗೋಜಿಗೆ ಹೋಗಲೇ ಬೇಡ. ನಮ್ಮಲ್ಲಿ ಕೆಲವರು ಅಧಿಕಾರಿಗಳು, ಅದರಲ್ಲಿಯೂ ನಿನ್ನ ಹಾಗೆ ಪ್ರೊಬೇಷನರ್ ಆದವರು, ಅಸಿಸ್ಟೆಂಟು ಕಮಿಷನರ್ ಮುಂತಾಗಿ ದೊಡ್ಡ ಹುದ್ದೆಯಲ್ಲಿ ಇರುವ ವರು ಬಾಯಲ್ಲಿಟ್ಟ ಸಿಗರೇಟು ಚುಟ್ಟಾಗಳನ್ನು ತೆಗೆಯೋದೇ ಇಲ್ಲ. ಅದೇನೋ ದೊಡ್ಡಸ್ತಿಕೆ! ಅದೇನೋ ಜಂಬ! ಇಂಗ್ಲೆಂಡ್ ಅಮೆರಿಕ ಗಳಿಂದ ಜಹಜಿಳಿದು ಬಂದವರಂತೆ- ಆ ಫರಂಗಿಯವರಿಗಿಂತ ಹೆಚ್ಚಾಗಿ-ಬಾಯಲ್ಲಿ ಇಷ್ಟು ಉದ್ದ ಚುಟ್ಟ ಇಟ್ಟುಕೊಂಡು ಠೀವಿ ಮಾಡು ತ್ತಾರೆ. ನೀನು ಅಂಥ ಠೀವಿಗೆ ಬೀಳಬೇಡ ನಾಗರಾಜ! ದೊಡ್ಡ ಅಧಿ ಕಾರಕ್ಕೂ ಸಿಗರೇಟು ಚುಟ್ಟಾಗಳಿಗೂ ಏನೇನೂ ಸಂಬಂಧವಿಲ್ಲ. ಆ ಇಂಗ್ಲಿಷ್ ಅಧಿಕಾರಿಗಳ ಅನುಕರಣದಿಂದ ನಮ್ಮ ಜನಕ್ಕೂ ಆ ಅಭ್ಯಾಸ ಬಂದುಬಿಟ್ಟದೆ. ಹಾಗೆ ನೀನು ಮಾಡುವುದಿಲ್ಲ ಎಂದು ನನಗೆ ಮಾತು ಕೊಡಬೇಕು.'

'ನಾನು ಹಿಂದೆಯೂ ಸಿಗರೇಟು ಚುಟ್ಟಾ ಸೇದಿಲ್ಲ. ಮುಂದೆಯೂ ಸೇದೋದಿಲ್ಲ. ನಿನಗೆ ಮಾತು ಕೊಡುತ್ತೇನೆ. ಖಂಡಿತ ತಪ್ಪುವುದಿಲ್ಲ.'

'ಸರಿ, ಸಂತೋಷ. ಕ್ಲಬ್ಬಿಗೆ ಸೇರಿದವರು—ಅದು ಶಿವಮೊಗ್ಗ ದಲ್ಲಿಲ್ಲ, ಬೆಂಗಳೂರು ಮೈಸೂರುಗಳಲ್ಲಿ ಹೆಚ್ಚಾಗಿದೆ—ವಿದೇಶೀ ಮದ್ಯ ಕುಡಿಯುವುದನ್ನು ಅಭ್ಯಾಸ ಮಾಡುತ್ತಾರೆ. ರಾತ್ರಿ ಹತ್ತು ಗಂಟೆಯ ಮೇಲೂ ಕ್ಲಬ್ಬಿಗೆ ಹೋಗಿ ಹೊಟ್ಟೆಗೆ ಸುರಿದುಕೊಂಡು ಮನೆಗೆ ಹೋಗು ತ್ತಾರೆ. ಆ ಕೆಟ್ಟ ಅಭ್ಯಾಸವನ್ನು ಖಂಡಿತವಾಗಿಯೂ ಕಲಿಯಬೇಡಪ್ಪ! ಹಗಲೆಲ್ಲ ಬಹಳ ದುಡಿದವರಂತೆಯೂ ರಾತ್ರಿ ಕುಡಿದು ಮಲಗಿದರೆ ಒಳ್ಳೆಯ ನಿದ್ರೆ ಬಂದು ಬೆಳಗ್ಗೆ ಲವಲವಕೆಯಿಂದ ಏಳುವುದಕ್ಕೆ ಸಹಕಾರಿ ಯೆಂದೂ ದೊಡ್ಡ ಮನುಷ್ಯರು ಹೇಳುವುದುಂಟು. ಅವುಗಳನ್ನೆಲ್ಲ

ನಂಬಬೇಡ. ಕ್ಲಬ್ಬಿನಲ್ಲಿ ಜತೆ ಅಧಿಕಾರಿಗಳು, ಮೇಲಿನ ಅಧಿಕಾರಿಗಳು ನಿನ್ನನ್ನು—ಏನು ಗೊಡ್ಡು ಬ್ರಾಹ್ಮಣ? ಮಡಿ ಮಗುಟ ತಂದಿದ್ದೀರೇನು! ಎಂದು ಲೇವಡಿ ಮಾಡಬಹುದು. ಸ್ವಲ್ಪ ರುಚಿ ನೋಡಿರಿ ಬಾಧಕವಿಲ್ಲ— ಎಂದು ಪ್ರಲೋಭನಗೊಳಿಸಬಹುದು. ಮೇಲಧಿಕಾರಿಗಳು ತಮ್ಮ ಗೋಷ್ಠಿಯಲ್ಲಿ ಸೇರಿಸಿಕೊಂಡು ಏನೋ ಬಹುಮಾನಿಸುವ ಹಾಗೆ ತಮ್ಮ ಮುಂದಿರುವ ಮದ್ಯದ ಬಟ್ಟಲನ್ನು ನಿನ್ನ ಮುಂದೆ ಇಟ್ಟು, ಮುಂದೆ ನಿನಗೆ ಬಡ್ತಿ ಕೊಡುವ ಹಾಗೆ ನಿನ್ನನ್ನು ಪ್ರಶಂಸೆ ಮಾಡಬಹುದು. ಅವಕ್ಕೆಲ್ಲಾ ಮರುಳಾಗಬೇಡ. ಖಂಡಿತವಾಗಿಯೂ ಕುಡಿಯುವ ಅಭ್ಯಾಸ ಮಾಡುವುದಿಲ್ಲ, ಮದ್ಯವನ್ನು ಮುಟ್ಟುವುದೂ ಇಲ್ಲ ಎಂದು ನನಗೆ ಮಾತು ಕೊಡು ನಾಗರಾಜ!'

'ನಾನು ಮದ್ಯವನ್ನು ಮುಟ್ಟುವುದಿಲ್ಲಪ್ಪ! ನಿನಗೇಕೆ ಆ ಭಯ? ಖಂಡಿತವಾಗಿಯೂ ನಾನು ಅದನ್ನು ದೃಷ್ಟಿಸಿ ಸಹ ನೋಡುವುದಿಲ್ಲ.'

'ಸಂತೋಷವಪ್ಪ! ದೊಡ್ಡ ಅಧಿಕಾರಕ್ಕೆ ಬಂದವನು ತನ್ನ ಜವಾಬ್ದಾರಿಯನ್ನು ತಿಳಿದುಕೊಂಡು ಜಂಬಗಿಂಬ ಇಲ್ಲದೆ ದಕ್ಷತೆಯಿಂದ ಕೆಲಸ ಮಾಡಿಕೊಂಡು ಹೋದರೆ ಸಾಕು. ಆದರೆ ಈಗಿನ ಕಾಲದಲ್ಲಿ ಬರಿ ಥಳಕು, ಉಡುಪಿನ ಠೀಕು, ಬಾಯಿಯ ಚುಟ್ಟ—ನೋಡಿಕೊಂಡು ಓಹೋ! ಅವನು ಒಳ್ಳೆಯ ದಕ್ಷ, ಚೂಟಿ, ಸಮಯ ವಿವೇಕಿ ಎಂದು ಹೊಗಳುತ್ತಾರೆ. ಇನ್ನೊಂದು ಮಾತು ಹೇಳುತ್ತೇನೆ ನಾಗರಾಜ! ಅದೇನೂ ಮುಖ್ಯ ವಿಷಯವಲ್ಲ ಅದು ನಿನ್ನ ಉಡುಪಿನ ವಿಚಾರ. ಈಗ ನಾನು ಹೇಗೆ ಉಡುಪು ಧರಿಸುತ್ತಿದೇನೆ— ನೋಡಿದೆಯೋ ಇಲ್ಲವೋ?'

'ನೋಡಿದ್ದೇನೆ. ಸೂಟು ಬೂಟು ಹಾಕುತ್ತೀಯೆ, ತಲೆಗೆ ಸರಿಗೆ ರುಮಾಲು ಇಟ್ಟುಕೊಳುತ್ತೀಯೆ.'

'ನೀನು ಸಹ ಹಾಗೆಯೇ ಮಾಡಬೇಕು ಎಂದು ನನ್ನ ಇಷ್ಟ. ಬೇಕಾದರೆ ಹ್ಯಾಟ್ ಹಾಕಿಕೊಳ್ಳಬಹುದು. ನಾನೇನೂ ಆಕ್ಷೇಪಣೆ ಮಾಡುವುದಿಲ್ಲ. ಮನೆಗೆ ಬಂದಾಗ ಪಂಚೆ ಉಟ್ಟುಕೊಳ್ಳಬೇಕು. ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ ದಗಲೆ ಚಡ್ಡಿಗಳನ್ನು ಹಾಕಿಕೊಂಡು

ಮನೆಯಲ್ಲಿ ಓಡಾಡಬೇಡ. ಈಗ ಹೇಗೆ ನೀನು ಇದ್ದೀಯೋ ಹಾಗೆಯೇ ಮುಂದಕ್ಕೂ ಇದ್ದುಬಿಡು. ಮನೆಯಲ್ಲಿ ಕೂಡ ಸೂಟುಗಳನ್ನು ಹಾಕಿಕೊಂಡು ಜಂಬದಿಂದ ಓಡಾಡಬೇಡ. ಸರ್ಕಾರದ ಕೆಲಸಕ್ಕೆ, ನಿನ್ನ ಅಧಿಕಾರಕ್ಕೆ ಎಷ್ಟು ಆವಶ್ಯಕವೋ ಅಷ್ಟರ ಮಟ್ಟಿಗೆ ಹೊರಗಿನ ಉಡುಪು; ಮನೆಗೆ ಬಂದುಬಿಟ್ಟರೆ ನಮ್ಮ ದೇಶೀಯ ಉಡುಪು— ಈ ರೀತಿ ನೀನಿದ್ದರೆ ನನಗೆ ಸಂತೋಷ.'

'ನೀನು ಹೇಳಿದಹಾಗೆಯೇ ಇರುತ್ತೇನಪ್ಪ!'

'ಊಟ ತಿಂಡಿ ವಿಚಾರದಲ್ಲಿ ಈಗಿನಂತೆ ಇದ್ದುಬಿಡು, ಅಭಕ್ಷ್ಯಗಳನ್ನು ಮುಟ್ಟಬೇಡ. ನೀನು ಆಚಾರ ಮಡಿ ಇಟ್ಟುಕೊಳ್ಳಬೇಕು ಎಂದು ನಾನು ಹೇಳುವುದಿಲ್ಲ. ಆದರೆ ಜಾತಿಕೆಟ್ಟ ಕೆಲವರು ಅಧಿಕಾರಿಗಳು ತಿನ್ನುವಂತೆ ನೀನು ತಿನ್ನಬೇಡ. ಅರ್ಥವಾಯಿತೇ ನಾಗರಾಜ!'

'ಅರ್ಥವಾಯಿತು.'

'ಸಹವಾಸ ದೋಷ! ನಮ್ಮ ಪ್ರೊಬೇಷನರುಗಳು ಹಲವರು ಜಂಬದಿಂದ ಎಲ್ಲ ದುರಭ್ಯಾಸಗಳನ್ನೂ ಕಲಿತಿದ್ದಾರೆ. ನಾನೇನೂ ಅವರಿಗೆ ಬುದ್ಧಿ ಹೇಳುವ ಹಾಗಿಲ್ಲ. ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗ, ಆದ್ದರಿಂದ ಹೇಳಿದ್ದೇನೆ. ದೇವರು ನಿನಗೆ ದೀರ್ಘಾಯುಸ್ಸನ್ನು ಕೊಡಲಿ. ನಾನು ಬದುಕಿರುವಾಗಲೇ ನೀನು ಡೆಪ್ಯುಟಿ ಕಮಿಷನರ್ ಆಗುವುದನ್ನು ನೋಡಬೇಕೆಂದು ಆಸೆ. ಈಗಾಗಲೇ ನಮ್ಮ ಮನೆತನದ ಮೇಲೆ ಎಲ್ಲರ ಕಣ್ಣು ಬೀಳುತ್ತದೆ, ಹಲವರಿಗೆ ಹೊಟ್ಟೆಯುರಿಯುತ್ತದೆ. ತಂದೆ ಅಸಿಸ್ಟೆಂಟ್ ಕಮಿಷನರ್! ಮಗನೂ ಅಸಿಸ್ಟೆಂಟ್ ಕಮಿಷನರ್! ಎಂದು ಆಡುತ್ತಾರೆ. ಈಗಾಗಲೇ ನನಗೆ ಹಲವರು ಹಿತೈಷಿಗಳು ಹಾಗೆ ಹೇಳಿ ಅಭಿನಂದಿಸಿದ್ದಾರೆ. ನಮ್ಮ ಡೆಪ್ಯುಟಿ ಕಮಿಷನರೇ ಹಾಗೆ ಹೇಳಿ ಅಭಿನಂದಿಸಿದರು. ಈಗ ನೀನು ಮದುವೆ ಮಾಡಿಕೊಂಡು ಗೃಹಸ್ಥನಾಗಿ ನಿಲ್ಲಬೇಕು. ನಿನ್ನ ತಾಯಿ ನಿನ್ನ ಮದುವೆಯ ವಿಚಾರ ಏನಾದರೂ ನಿನ್ನೊಡನೆ ಹೇಳಿದಳೆ?'

'ಹೇಳಿದಳಪ್ಪ! ಪ್ರೊಬೇಷನರ್ ಕೆಲಸ ಆದದ್ದಕ್ಕೆ ನನಗೆ ಸಂತೋಷವೇ ಇಲ್ಲ! ನಾಳೆ ಮದುವೆ ಆಗುವುದಕ್ಕೂ ಸಂತೋಷವೇ

ಇಲ್ಲ ! ನನ್ನ ಮನಸ್ಸೆಲ್ಲ ಬಹಳ ಕಲಕಿಹೋಗಿದೆ. ನನ್ನ ಅವಿವೇಕದಿಂದ, ನನ್ನ ದುಡುಕಿನಿಂದ, ನೀನೂ ಅಮ್ಮ ತುಮಕೂರಿಗೆ ಹೋಗಿ ಭಾವನ್ನ ಭಾವನ ತಾಯಿಯನ್ನ ಕಾಲುಕಟ್ಟಿಕೊಳ್ಳಬೇಕು ಎಂದು ತಿಳಿದು ಬಂತು. ನನಗೆ ತಡೆಯಲಾರದಷ್ಟು ದುಃಖ! ನಿಮ್ಮನ್ನ ಇಂಥ ಸಂಕಟಕ್ಕೆ ಗುರಿ ಮಾಡಿದೆನಲ್ಲ ಎಂದು ಕೊರಗಿಹೋಗುತ್ತಿದೇನೆ' ಎಂದು ಹೇಳುತ್ತ ನಾಗರಾಜ ಕೈವಸ್ತ್ರದಿಂದ ಕಣ್ಣೀರನ್ನೊರಸಿಕೊಂಡನು.

'ಇರಲಪ್ಪ ! ದುಃಖಿಸಬೇಡ. ಸದ್ಯದಲ್ಲಿ ಸರೋಜ ಹೆತ್ತು ಕ್ಷೇಮವಾಗಿ ಎದ್ದಳು. ಇನ್ನು ಕೆಲವು ದಿನ; ನೀರಾದಮೇಲೆ ಭಯವಿಲ್ಲ. ಅವಳ ಮುಂದಿನ ಗತಿ ? ಕಷ್ಟದ ಪ್ರಶ್ನೆ. ತುಮಕೂರಿಗೆ ಹೋಗಿ ಸಮಾಧಾನ ಹೇಳಿ ನಾಮಕರಣಕ್ಕೆ ಬರಮಾಡಿಕೊಳ್ಳಬೇಕು. ಅವರು, ಕಡೆಗೆ ನಿನ್ನ ಭಾವ ಒಬ್ಬ—ಬಂದರೆ ನಮ್ಮ ಸಂತೋಷಕ್ಕೆ ಪಾರವಿಲ್ಲ. ತಲೆಯೆತ್ತಿಕೊಂಡು ನಾವೂ ಓಡಾಡಬಹುದು. ಸರೋಜ ಸುಖವಾಗಿ ತನ್ನ ಗಂಡನ ಮನೆ ಸೇರಿ ಸಂಸಾರ ಮಾಡಿಕೊಂಡಿರ ಬಹುದು. ಇರಲಿ ನೋಡೋಣ. ನಾನೂ ಅವಳ ವಿಚಾರದಲ್ಲಿ ಬಹಳ ಆತಂಕಪಡುತ್ತಿದ್ದೇನೆ.'

## ೯. ಕಾಂತಾಮಣಿ

ಬಾಣಂತಿಗೆ ನಡೆಯಬೇಕಾದ ಉಪಚಾರಗಳು ಹತ್ತು ದಿನವೂ ನಡೆದುವು. ಹನ್ನೊಂದನೆಯ ದಿನ ಮಗು ಮತ್ತು ಬಾಣಂತಿಯರಿಗೆ ಸ್ನಾನವಾಯಿತು. ನಾಮಕರಣಕ್ಕೆ ಏರ್ಪಾಟು ಮಾಡಿರಲಿಲ್ಲ. ಅಳಿಯ ಬರುವುದಕ್ಕೆ ಅನುಕೂಲವಿಲ್ಲ, ಆದ್ದರಿಂದ ಅದನ್ನು ಮುಂದಕ್ಕೆ ಹಾಕಿದ್ದಾರೆ ಎಂದು ಕೆಲವರು ಆಡಿಕೊಂಡರು. ಆ ದಿನ ಸಾಯಂಕಾಲ ತೊಟ್ಟಿಲುಕಟ್ಟುವ ಶಾಸ್ತ್ರವನ್ನೇನೋ ತುಳಸಾಬಾಯಿ ನೆರವೇರಿಸಿದಳು. ಕೃಷ್ಣರಾಯರ ತಂಗಿ, 'ಕಿಟ್ಟಣ್ಣ! ನಾನು ಊರಿಗೆ ಹೋಗಬೇಕಪ್ಪ! ಅಲ್ಲಿ ನಿನ್ನ ಭಾವ ಕಷ್ಟಪಡುತ್ತಿದಾರೆ. ಇನ್ನೇನು ನೀರಾಯಿತು. ಮಗು ಬಾಣಂತಿ ಆರೋಗ್ಯವಾಗಿದ್ದಾರೆ. ನಾನು ಹೋಗಬೇಕು, ಕಳಿಸಿಕೊಡಪ್ಪ' ಎಂದು ಹೇಳಿದಳು. ಆಕೆಗೆ ತುಳಸಾಬಾಯಿ ಎಲೆಯಡಕೆ, ಕಾಯಿ, ಅರಿಸಿನ ಕುಂಕುಮ, ಮೂವತ್ತು ರೂಪಾಯಿ ಕೊಟ್ಟು ಬಹುಮಾನಿಸಿ ಕಳಿಸಿಕೊಟ್ಟಳು.

ಮಾರನೆಯ ದಿನ ಕೃಷ್ಣರಾಯರೂ ತುಳಸಾಬಾಯಿಯೂ ತುಮಕೂರಿಗೆ ಹೋಗಬೇಕಾಗಿತ್ತು. ಆದರೆ ಮದ್ರಾಸಿನವರು ತಾವು ಹೆಣ್ಣನ್ನು ಕರೆದುಕೊಂಡು ಬರುವುದಾಗಿ ಕಾಗದ ಬರೆದದ್ದರಿಂದ ಪ್ರಯಾಣವನ್ನು ಮುಂದಕ್ಕೆ ಹಾಕಬೇಕಾಯಿತು. ಬುಧವಾರ ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಒಂದು ಸೊಗಸಾದ ಭಾರಿ ಮೋಟಾರೊಂದು ಗೇಟಿನೊಳಕ್ಕೆ ಬಂದು ಮನೆಯ ಮುಂದೆ ನಿಂತಿತು. ಬಹುಶಃ ಆ ಮೋಟಾರಿಗೆ ೨೫-೩೦ ಸಾವಿರ ರೂಪಾಯಿಗಳ ಬೆಲೆ ಇದ್ದಿರಬಹುದು. ಮೋಟಾರ್ ನಡಸುವವನಿಗೆ ಒಳ್ಳೆಯ ಪೋಷಾಕು. ಅವನನ್ನು ನೋಡಿದರೇನೆ ದೊಡ್ಡ ಹುದ್ದೇದಾರನಂತೆ ಕಾಣುತ್ತಿದ್ದನು. ಗಾಡಿ ನಿಂತಮೇಲೆ ಆ ಸಾರಥಿ ತಟ್ಟನೆ ಇಳಿದು ಗಾಡಿಯನ್ನು ಸುತ್ತಿಬಂದು ಬಾಗಿಲನ್ನು ತೆರೆದನು. ಅವನು ತೆರೆದ ಮೇಲೆಯೇ ಒಳಗಿಂದ ಜನ ಇಳಿಯಲು ಸಂಭ್ರಮಿಸಿದ್ದು. ಬಾಗಿಲನ್ನು ತೆರೆದುಕೊಂಡು ತಾವೇ ಇಳಿಯುವುದು ಅವರ ದೊಡ್ಡಸ್ತಿಕೆಗೆ ಕಡಮೆ ಎಂದು ಭಾವಿಸಿದ್ದರೋ ಏನೋ! ಗಾಡಿಯಲ್ಲಿದ್ದವರು ನಾಲ್ಕು

ಜನ. ಅವರು ಮೆಲ್ಲನೆ ಇಳಿದರು. ಕೃಷ್ಣರಾಯರು ಮೋಟಾರಿನ ಬಳಿಯೇ ಹೋಗಿ ಸ್ವಾಗತವಿತ್ತರು. ತುಳಸಾಬಾಯಿ ಮೆಟ್ಟಲುಗಳ ಮೇಲಿದ್ದು ಸ್ವಾಗತವನ್ನು ಬಯಸಿದಳು. ಸುಕನ್ಯೆ ಮೊದಲಾದವರೆಲ್ಲ ಮುಂದಿನ ವಪ್ಪಾರದಲ್ಲಿ ನಿಂತು ಬೆರಗಾಗಿ ನೋಡುತ್ತಿದ್ದರು. ಹಾಲಿನಲ್ಲಿ ಸುಖಾಸನಗಳಲ್ಲಿ ಎಲ್ಲರೂ ಕುಳಿತರು.

ಬಂದಿದ್ದವರಲ್ಲಿ ಯಜಮಾನನಿಗೆ ಐವತ್ತು ವರ್ಷ. ಆತನು ಬಹಳ ವರ್ಚಸ್ವಿಯಾಗಿದ್ದನು. ಕಲಾಬತ್ತಿನ ಒಳ್ಳೆಯ ಪಂಚೆಯನ್ನುಟ್ಟಿದ್ದನು, ಒಳಗೆ ನೆಟ್‌ಬನಿಯನ್, ಮೇಲೆ ರೇಷ್ಮೆಯ ಷರಟು; ರೇಷ್ಮೆಯ ಅಂಗವಸ್ತ್ರವನ್ನು ಹೊದ್ದುಕೊಂಡಿದ್ದನು; ಕಿವಿಯಲ್ಲಿ ವಜ್ರದ ಕಡುಕುಗಳಿದ್ದುವು; ಬೋಳು ತಲೆ, ರುಮಾಲಾಗಲಿ ಟೋಪಿಯಾಗಲಿ ಇರಲಿಲ್ಲ. ಬೆಳ್ಳಿಯ ಕಟ್ಟು ಹಾಕಿದ್ದ ಕರಿಯ ಕೋಲನ್ನು ಹಿಡಿದಿದ್ದನು. ಮುದ್ರಾಸಿನಲ್ಲಿ ಕಾಗದದ ದೊಡ್ಡ ವ್ಯಾಪಾರಿ.

ಅವನ ಹೆಂಡತಿ: ಸುಮಾರು ನಲವತ್ತೈದು ವರ್ಷದವಳು, ಬೆಳ್ಳಗೇನೋ ಇದ್ದಳು. ಆದರೆ ಸ್ಥೂಲಕಾಯ. ನಡುವಿಗೆ ದೊಡ್ಡ ಡಾಬನ್ನು ಹಾಕಿಕೊಂಡಿದ್ದಳು. ಮಂದರ ಪರ್ವತಕ್ಕೆ ವಾಸುಕಿಯನ್ನು ಬಿಗಿದಂತೆ ಕಾಣುತ್ತಿತ್ತು. ಕಿವಿಯಲ್ಲಿ ವಜ್ರದೋಲೆಗಳು, ಮೂಗಿನಲ್ಲಿ ಎರಡು ಕಡೆಯೂ ಮೂಗುಬೊಟ್ಟುಗಳು. ಕೈಗಳಿಗೆ ಕೆಂಪು ಪಚ್ಚೆ ವಜ್ರಗಳನ್ನು ಕೆತ್ತಿದ್ದ ಬಂಗಾರದ ಬಳೆಗಳು. ತೋಳಿಗೆ ವಂಕಿ. ಕೊರಳು ತುಂಬ ಚೈನುಗಳು. ಮಂದರ ಪರ್ವತಕ್ಕೆ ಮೇರುಪರ್ವತ ಸೇರಿಕೊಂಡಿದ್ದಂತೆ ಕಾಣುತ್ತಿತ್ತು.

ಅವರ ಮಗ: ಸುಮಾರು ಇಪ್ಪತ್ತಮೂರು ವರ್ಷವಿದ್ದಿರಬಹುದು. ಸೊಗಸಾದ ಸರ್ಜ್‌ಸೂಟನ್ನು ಧರಿಸಿದ್ದನು; ಓಪನ್‌ಕಾಲರ್, ಟೈ ಎಲ್ಲವೂ ಇದ್ದುವು ಕ್ರಾಪನ್ನು ಅಂದವಾಗಿ ಬಾಚಿಕೊಂಡಿದ್ದನು. ಅಷ್ಟೇ ಅಲ್ಲದೆ, ಮೋಟಾರಿನಿಂದ ಇಳಿಯುವ ಮೊದಲು ಕೈಗನ್ನಡಿಯಲ್ಲಿ ನೋಡಿಕೊಂಡನು ಕೈಬಾಚಣಿಗೆಯಿಂದ ಅದನ್ನು ತಿದ್ದಿಕೊಂಡು. ಆ ಬಾಚಣಿಗೆಯಲ್ಲಿ ಹಲ್ಲುಗಳೂ ಬ್ರಷ್ಷೂ ಸೇರಿಕೊಂಡಿದ್ದುವು. ಹಾಲಿನಲ್ಲಿ ಕುಳಿತ ಐದು ನಿಮಿಷಗಳಿಗೆಲ್ಲ ಪುನಃ ಕೈಗನ್ನಡಿಯಲ್ಲಿ ನೋಡಿಕೊಂಡು

ತಿದ್ದಿಕೊಂಡನು. ಹೀಗೆಯೇ ಆಗಾಗ ಕೇಶಪ್ರಸಾಧನದ ಕಡೆಗೆ ಅವನ ಗಮನವಿದ್ದೇ ಇತ್ತು. ಅವನು ಕ್ರಿಶ್ಚಿಯನ್ ಕಾಲೇಜಿನಲ್ಲಿ ವ್ಯಾಸಂಗ ಮಾಡಿದವನು. ಬಿ.ಎ. (ಆನರ್ಸ್) ಇಂಗ್ಲಿಷ್ ಲಿಟರೇಚರ್ ಫಸ್ಟ್ ಕ್ಲಾಸ್ ಫಸ್ಟ್ ಆಗಿ ತೇರ್ಗಡೆ ಹೊಂದಿದ್ದ ಯುವಕ. ಬಣ್ಣ ಸ್ವಲ್ಪ ಕಪ್ಪು.

ಅವರ ಮಗಳು: ಹದಿನೆಂಟು ವರ್ಷದ ತರುಣಿ ಬಲಕ್ಕೆ ಎಡಕ್ಕೆ ಇಳಿಬಿಟ್ಟ ಜತೆ ಜಡೆ. ಸ್ವಲ್ಪವೇ ಸರಿಗೆಯಿದ್ದ ಸೊಗಸಾದ ಆಕಾಶ ವರ್ಣದ ಸೀರೆ. ಕಿವಿಯಲ್ಲಿ ವಜ್ರದೋಲೆಗಳು. ಕೈಗಳಲ್ಲಿ ನಾಲ್ಕಾರು ಬಗೆಯ ಬಂಗಾರದ ಬಳೆಗಳು. ಕೊರಳಿನಲ್ಲಿ ನಾಲ್ಕೆಳೆಯ ಅವಲಕ್ಕಿಯ ಸರ. ಮದ್ರಾಸಿನ ಕ್ವೀನ್‌ಮೇರೀಸ್ ಕಾಲೇಜಿನಲ್ಲಿ ಬಿ.ಎಸ್‌ಸಿ.,ಗೆ ಓದುತ್ತಿದ್ದ ಸುಂದರಿ. ಒಳ್ಳೆಯ ಚಟಲುಗಾತಿ. ಈಗೇನೋ ವಯಸ್ಸಿಗೆ ತಕ್ಕ ಬೆಳವಣಿಗೆ ಕಾಣುತ್ತಿತ್ತು, ಬಹಳ ಸುಖದಲ್ಲಿ ಬೆಳೆದ ಹುಡುಗಿಯಾಗಿಯೂ ಕಾಣುತ್ತಿದ್ದಳು. ಮುಂದೆ ವಯಸ್ಸಾಗ ಆ ಮಂದರ ಪರ್ವತಕ್ಕೆ ತಕ್ಕ ಮಗಳಾಗುತ್ತಿದ್ದಳೋ ಏನೋ! ಭವಿಷ್ಯ ಹೇಳುವ ಹಾಗಿರಲಿಲ್ಲ.

ನಮ್ಮ ನಾಗರಾಜನಿಗೆ ಹುಡುಗಿಯ ಮೇಲೆ ಮೊದಲು ಕಣ್ಣು ಓಡಲಿಲ್ಲ. ಹಿಂದೆ ತಾನು ಮಾಡುತ್ತಿದ್ದ ಜಂಬವನ್ನು ನೆನಸಿಕೊಂಡು ಈ ಮದ್ರಾಸ್ ಹುಡುಗ ತನಗಿಂತ ಜಂಬಗಾರನಾಗಿ ಶೋಕಿಗಾರನಾಗಿ ಕಾಣುತ್ತಾನಲ್ಲ ಎಂದು ನೋಟ ಅವನ ಮೇಲೆ ಹೋಯಿತು. ನಾಗರಾಜ ಸೂಟನ್ನೇನೂ ಹಾಕಿಕೊಂಡಿರಲಿಲ್ಲ. ಒಳ್ಳೆಯ ಸರಿಗೆಯ ಪಂಚೆಯನ್ನುಟ್ಟುಕೊಂಡಿದ್ದನು; ಬಿಳಿಯ ಷರ್ಟಿನ ಮೇಲೆ ಬಿಳಿಯ ರೇಷ್ಮೆ ವಲ್ಲಿಯನ್ನು ಹಾಕಿಕೊಂಡಿದ್ದನು. ಆ ದೇಶೀಯ ಉಡುಪಿನಲ್ಲಿ ನಾಗರಾಜ ಬಹಳ ಸುಂದರನಾಗಿ ಕಾಣುತ್ತಿದ್ದನು. ಅವನ ತಾಯಿಗೆ ಅವನಿಗೆ ಎಲ್ಲಿ ದೃಷ್ಟಿ ತಾಕುವುದೋ ಎಂದು ಹೆದರಿಕೆಯೂ ಆಯಿತು.

ಬಂದ ಯಜಮಾನನು ಕೃಷ್ಣರಾಯರ ಕೈಕುಲುಕಿ ಮಾತನಾಡಿಸಿದ್ದಲ್ಲದೆ ನಾಗರಾಜನ ಕೈಕುಲುಕಿ, 'ನಿಗೆಗೆ ಅಭಿನಂದನೆಗಳು' ಎಂದು ಅರ್ಥ ಬರುವ I congratulate you – ಎಂದು ಇಂಗ್ಲಿಷಿನಲ್ಲಿ

ಹೇಳಿದನು. ಅದು ತನ್ನ ಪ್ರೊಬೇಷನರ್ ಹುದ್ದೆಗೆಂದು ನಾಗರಾಜನಿಗೆ ಅರ್ಥವಾಯಿತು. 'Thank you' (–ನಿಮಗೆ ವಂದನೆಗಳು–) ಎಂದು ನಾಗರಾಜನು ಒಲಪಿನಿಂದ ಉತ್ತರ ಹೇಳಿ ಮದ್ರಾಸ್ ಹುಡುಗನ ಕಡೆಗೆ ತಿರುಗಿ ಅವನ ಕೈಕುಲುಕಿದನು. ಇಬ್ಬರೂ ಇಂಗ್ಲಿಷಿನಲ್ಲಿ ಮಾತನಾಡುತ್ತ ಒಬ್ಬರ ಪಕ್ಕದಲ್ಲೊಬ್ಬರು ಕುಳಿತರು. ಹುಡುಗಿ ಮತ್ತು ಅವಳ ತಾಯಿ ಸ್ವಲ್ಪ ದೂರದಲ್ಲಿ ತುಳಸಾಬಾಯಿಯ ಹತ್ತಿರ ಕುರ್ಚಿಗಳಲ್ಲಿ ಕುಳಿತರು. ಕೃಷ್ಣರಾಯರು ಯಜಮಾನನ ಎದುರಿನಲ್ಲಿ ಕುಳಿತಿದ್ದರು.

ಆ ಮದ್ರಾಸಿನ ಹುಡುಗಿಗೆ ನಮ್ಮ ಮೈಸೂರಿನ ಹುಡುಗ ನಾಗರಾಜನನ್ನು ನೋಡಿದ ಕೂಡಲೆ ದುರ್ದಮನೀಯವಾದ ಪ್ರೇಮ ಉದಯವಾಗಿ ಅವಳು ತನ್ನ ತಾಯಿಯ ಕಿವಿಯಲ್ಲಿ, 'ಇದನ್ನು ಗಟ್ಟಿಮಾಡಮ್ಮ! ಅವರು ಕೇಳಿದ್ದನ್ನು ಕೊಟ್ಟುಬಿಡೋಣ' ಎಂದು ಮೆಲ್ಲಗೆ ಹೇಳಿದಳು. ತನ್ನ ಅಣ್ಣನನ್ನು ನೋಡುವವಳಂತೆ ನೆಪಮಾಡಿಕೊಂಡು ನಾಗರಾಜನನ್ನು ಪ್ರೇಮಕಟಾಕ್ಷದಿಂದ ನೋಡುತ್ತ ಅವರಿಬ್ಬರ ಮಂದಹಾಸಭರಿತ ಮೃದು ಸಂಭಾಷಣೆಯನ್ನು ಕೌತುಕದಿಂದ ಗಮನಿಸುತ್ತ ಪಕ್ಕದಲ್ಲಿ ಮೇಜಿನ ಮೇಲಿದ್ದ ಟೈಮ್ಸ್ ಆಫ್ ಇಂಡಿಯಾ ವಾರ ಪತ್ರಿಕೆಯನ್ನು ಕೈಗೆ ತೆಗೆದುಕೊಂಡು, ಅದರಲ್ಲಿ ಪ್ರಕಟವಾಗಿದ್ದ ವಿವಾಹಿತರಾದ ವಧೂವರರ ಚಿತ್ರಗಳನ್ನು ನೋಡುತ್ತಿದ್ದಳು. ಯಜಮಾನನಿಗೂ ಕೃಷ್ಣರಾಯರಿಗೂ ಕುಶಲ ಸಂಭಾಷಣೆಗಳಿಗೆ ಪ್ರಾರಂಭವಾದುವು. ಸೋಮವಾರ ಮದ್ರಾಸಿನಿಂದ ಹೊರಟವರು ಮೋಟಾರಿನಲ್ಲಿಯೇ ಬೆಂಗಳೂರಿಗೆ ಬಂದು ಆಪ್ತ ಸ್ನೇಹಿತರೊಬ್ಬರ ಮನೆಯಲ್ಲಿ ಸೋಮವಾರ ಮತ್ತು ಮಂಗಳವಾರಗಳನ್ನು ಕಳೆದಿದ್ದರು. ಬುಧವಾರ ಊಟ ಮಾಡಿಕೊಂಡು ಹತ್ತು ಗಂಟೆಗೆ ಬೆಂಗಳೂರನ್ನು ಬಿಟ್ಟು ಶಿವಮೊಗ್ಗಕ್ಕೆ ಮಧ್ಯಾಹ್ನ ಮೂರು ಗಂಟೆಗೆ ತಲುಪಿದ್ದರು. 'ಪ್ರಯಾಣ ಸುಖವಾಗಿತ್ತು. ಆದರೆ ಕೆಲವು ಕಡೆಗಳಲ್ಲಿ ರಸ್ತೆ ತೀರ ಹೊಲಸಾಗಿತ್ತು. ನಿಮ್ಮ ಸರ್ಕಾರದವರು ರಸ್ತೆಗಳನ್ನೇಕೆ ಚೆನ್ನಾಗಿಡುವುದಿಲ್ಲ? ನಮ್ಮ ಕಡೆ ರಸ್ತೆಗಳು ಚೆನ್ನಾಗಿವೆ. ಇದೇನು ಮಾದರಿ ಸಂಸ್ಥಾನ ಎಂದು ಪ್ರಚಾರ ಮಾಡುತ್ತೀರೋ, ನೀವು!' ಎಂದು ಯಜಮಾನನು ನಗುತ್ತ ಹೇಳಿದನು.

'ನಮ್ಮ ಸಂಸ್ಥಾನವನ್ನು ಇತರ ಸಂಸ್ಥಾನಗಳೊಂದಿಗೆ ಹೋಲಿಸಿ ನೋಡಿ. ಆಗ ನಾವು ಹೇಳುವುದು ಸರಿಯೆಂದು ಕಾಣುತ್ತದೆ' ಎಂದು ಕೃಷ್ಣರಾಯರು ಉತ್ತರ ಕೊಟ್ಟರು.

ಹೀಗೆ ರಸ್ತೆಗಳೂ ಕಾರ್ಖಾನೆಗಳೂ ರೈಲುಗಳೂ– ಇವುಗಳ ಮಾತು ಸ್ವಲ್ಪ ನಡೆದ ಮೇಲೆ ಯಜಮಾನನು, 'ನಾನು ಜಾತಕಗಳನ್ನು ತೋರಿಸಿದ್ದೇನೆ. ನಮ್ಮ ಮದ್ರಾಸಿನಲ್ಲಿ ಪ್ರಸಿದ್ಧ ಜ್ಯೋತಿಷ್ಕರಿದ್ದಾರೆ. ಜಾತಕಗಳು ಬಹಳ ಚೆನ್ನಾಗಿ ಕೂಡಿಬರುತ್ತವೆ. ಇಬ್ಬರಿಗೂ ಗುರು ಬಲ ಕೂಡಿ ಬಂದಿದೆ. ಅಬ್ಬಬ್ಬ ಎಂದರೆ ಒಂದು ತಿಂಗಳು ಸಾವಕಾಶ ವಾಗಬಹುದು. ಈ ಮದುವೆ ಖಂಡಿತ ಆಗುತ್ತದೆ– ಎಂದು ಭರವಸೆ ಹೇಳಿದ್ದಾರೆ. ಒಬ್ಬರು ಜೋಯಿಸರಲ್ಲ– ನಾಲ್ಕು ಮಂದಿ ಘಟಾನು ಘಟಕರನ್ನು ವಿಚಾರಿಸಿದ್ದೇನೆ. ಹುಡುಗಿಯ ಜಾತಕ ನೋಡಿದ ಕೂಡಲೆ, ಸಿವಿಲ್ ಸರ್ವಿಸ್ ಪ್ಯಾಸಾದವನು ಗಂಡನಾಗುತ್ತಾನೆ, ಅಸಿಸ್ಟೆಂಟ್ ಕಲೆಕ್ಟರ ಹೆಂಡತಿಯಾಗುವ ಯೋಗವಿದೆ ಎಂದು ಹೇಳಿಬಿಟ್ಟರು. ಮದ್ರಾಸ್ ಕಡೆ ಅಸಿಸ್ಟೆಂಟ್ ಕಲೆಕ್ಟರ್ ಎಂದರೆ ನಿಮ್ಮ ಕಡೆ ಅಸಿಸ್ಟೆಂಟ್ ಕಮಿಷನರ್ ಹುದ್ದೆ ಇದ್ದಹಾಗೆ.'

'ತುಂಬಾ ಸಂತೋಷ. ನಾನೂ ಜಾತಕಗಳನ್ನು ತೋರಿಸಿ ದ್ದೇನೆ. ಹೊಂದಿಕೆಯಾಗಿವೆ ಎಂದು ಹೇಳಿದ್ದಾರೆ. ಪೂರ್ವದಿಕ್ಕಿನ ಕಡೆಯಿಂದ ಸೊಸೆ ಬರುತ್ತಾಳೆ ಎಂದು ಹೇಳಿದರು.'

'ಆಹಾ! ಸರಿ! ಮದ್ರಾಸ್ ಇರುವುದು ನಿಮಗೆ ಪೂರ್ವ ದಿಕ್ಕಿ ನಲ್ಲಿ ತಾನೆ! ನಾನು ಹುಡುಗಿಯ ಫೋಟೋ ಕಳಿಸಿದ್ದೆ– ಎರಡು ಮೂರು ಭಾವ ಭಂಗಿಗಳಲ್ಲಿ ಕಳಿಸಿಕೊಟ್ಟಿದ್ದೆ. ಅವುಗಳನ್ನು ನಿಮ್ಮ ಹುಡುಗ ನೋಡಿರಬಹುದು. ನಿಮ್ಮ ಹುಡುಗನ ಫೋಟೋ ನೋಡಿದ ಕೂಡಲೇ ನಮ್ಮ **ಕಾಂತಾಮಣಿ**— ಆ ಹುಡುಗಿಯ ಹೆಸರು ಕಾಂತಾಮಣಿ, ಹೆಸರು ಚೆನ್ನಾಗಿದೆಯಲ್ಲವೆ?– ತನ್ನ ಪೆಟ್ಟಿಗೆಯಲ್ಲಿಟ್ಟುಕೊಂಡುಬಿಟ್ಟಳು. ಕೈಗೆ ಕೊಡು ನೋಡೋಣ ಎಂದರೆ ಕೊಡಲಿಲ್ಲ. ನೀವೇ ಅರ್ಥ ಮಾಡಿ ಕೊಳ್ಳಿ.'

ಈ ಮಾತು ಮುಗಿಯುವ ಹೊತ್ತಿಗೆ ಕಾಂತಾಮಣಿ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯನ್ನು ತೆಗೆದುಕೊಂಡು, ವಧೂವರರ ಚಿತ್ರಗಳಿದ್ದ ಪುಟವನ್ನು ಅರ್ಧ ಮುಚ್ಚಿಕೊಂಡು ಎದ್ದುಹೋಗಿ ತನ್ನ ಅಣ್ಣನ ಕೈಗೆ ಕೊಟ್ಟು, ಅರ್ಧನಿಮಿಷ ನಿಂತು, ನಾಗರಾಜನನ್ನು ಇನ್ನೇನು ಆಲಂಗಿಸಿಕೊಂಡು ಬಿಡಬೇಕು ಎನ್ನುವಂಥ ತವಕದ ದೃಷ್ಟಿಯಿಂದ ನೋಡಿ, ತಾಯಿಯ ಹತ್ತಿರ ಬಂದು ಕುಳಿತಳು. ಅವಳ ಅಣ್ಣನು ಹಾಳೆಯನ್ನು ತೆರೆದಾಗ ವಧೂವರರ ಚಿತ್ರಗಳಿದ್ದುವು. ಅವನು 'ಓಹೋ!' ಎಂದು ನಗುತ್ತ ಚಪ್ಪಾಳೆ ತಟ್ಟಿದನು. ನಾಗರಾಜ ಮುಗುಳುನಗೆಯಿಂದ ಆ ಚಿತ್ರಗಳನ್ನೂ ಬಳಿಕ ಕಾಂತಾಮಣಿಯನ್ನೂ ನೋಡಿ ಮತ್ತೆ ಪಕ್ಕದಲ್ಲಿದ್ದವನ ಕಡೆಗೆ ತಿರುಗಿದನು. ಯಜಮಾನನು, 'ಅದೇನದು? ಅಷ್ಟು ಕೋಲಾಹಲ! ಇಲ್ಲಿ ತೆಗೆದುಕೊಂಡು ಬಾ ನೋಡೋಣ' ಎಂದು ಮಗನಿಗೆ ಹೇಳಿದನು. ಮಗನು ಎದ್ದುಹೋಗಿ ಅದನ್ನು ತಂದೆಗೆ ತೋರಿಸುತ್ತಲೂ, 'ಅಬ್ಬ! ಕಾಂತಾಮಣಿ! ಎಂಥ ಚತುರೆ! ನಾಗರಾಜರಾಯರನ್ನು ಮೋಟಾರಿನಲ್ಲಿ ಕೂರಿಸಿಕೊಂಡು ಈಗಲೇ ಮದ್ರಾಸಿಗೆ ಹೊರಟು ಹೋಗಬೇಕು ಎನ್ನುತ್ತೀಯಾ? ಅಬ್ಬಾ! ಕಾಲೇಜ್ ಹುಡುಗಿ! ಕಾಂತಾಮಣಿ! ನಿನ್ನ ಮದುವೆ ಆದಾಗ ಟೈಂಸ್ ಆಫ್ ಇಂಡಿಯಾ ಒಂದೇ ಏಕೆ? ಎಲ್ಲ ಪತ್ರಿಕೆಗಳಲ್ಲೂ ಹಾಕಿಸುತ್ತೇನೆ' ಎಂದು ಯಜಮಾನನು ಹೇಳಿದನು. ಮಗನಿಗೆ, 'ನಿನ್ನ ತಾಯಿಗೆ, ಕೃಷ್ಣರಾಯರಿಗೆ, ನಾಗರಾಜರಾಯರ ತಾಯಿಗೆ ತೋರಿಸು' ಎಂದು ಹೇಳಿದನು. ಅವನು ಹಾಗೆಯೇ ಎಲ್ಲರಿಗೂ ತೋರಿಸಿದಾಗ ಎಲ್ಲರೂ ನಗುವುದಕ್ಕೆ ತೊಡಗಿದರು. ತುಳಸಾಬಾಯಿ ಆ ಹುಡುಗಿಯ ಜಾಣತನಕ್ಕೆ ಬೆರಗಾಗಿ ಕೂಡಲೆ ಸೊಸೆಯನ್ನಾಗಿ ಮಾಡಿಕೊಂಡು ಬಿಡಬೇಕು ಎಂದು ಸಂಕಲ್ಪ ಮಾಡಿಬಿಟ್ಟಳು. ಈ ತಮಾಷೆಯನ್ನೆಲ್ಲ ಸರೋಜ ಬಾಣಂತಿಯ ಕೊಟಡಿಯ ಬಾಗಿಲ ಮುಂದೆ ಕುಳಿತು ನೋಡುತ್ತಿದ್ದಳು. ಸುಕನ್ಯೆ ಆ ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಯನ್ನು ಸರೋಜಳಿಗೆ ತೋರಿಸಿದಳು. ಇಬ್ಬರೂ ನಗುತ್ತಿದ್ದರು. ಯಜಮಾನನು,

'ಏನು ಕೃಷ್ಣರಾವ್‌ಜಿ! ನನ್ನ ನಿಮ್ಮ ಮಾತು ಹೆಚ್ಚಾಗಿ ಬೇಕಾಗೇ

ಇಲ್ಲವೆಂದು ಕಾಣುತ್ತದೆಯಲ್ಲ! ಅವರವರೇ ನಿಶ್ಚಯ ಮಾಡಿಕೊಳ್ಳುವ ಹಾಗೆ ಕಾಣುತ್ತದೆ' ಎಂದು ನಗುತ್ತ ಹೇಳಿದನು.

'ನನಗೂ ಹಾಗೆಯೇ ಕಾಣುತ್ತದೆ.- ಆದರೂ ನಮ್ಮ ಹುಡುಗನ ಅಭಿಪ್ರಾಯವನ್ನು ಏಕಾಂತವಾಗಿ ಕೇಳಿ ತಿಳಿದುಕೊಳ್ಳುವುದು ಆವಶ್ಯಕ. ನಮ್ಮ ಮನೆಯಾಕೆ, ಯಜಮಾನಿ ಇದ್ದಾಳೆ. ಆಕೆಯೊಡನೆ ಸಮಾಲೋಚಿಸಬೇಕು'

'ಓಹೋ ಆಗಲಿ! ಅಲ್ಲಿಯೇ ನಿಮ್ಮೆದುರಿಗೆ ನೋಡಿ! ನಿಮ್ಮ ನಾಗರಾಜರಾಯರೂ ನಮ್ಮ ಹುಡುಗನೂ ಹೇಗೆ ನಿಮಿಷದಲ್ಲಿ ಪ್ರಾಣ ಸ್ನೇಹಿತರಾಗಿದ್ದಾರೆ. ಭಾವ ಭಾವಮೈದುನರ ಹಾಗೆ ನಿಮ್ಮ ಕಣ್ಣಿಗೆ ಕಾಣುವುದಿಲ್ಲವೆ? ನಮ್ಮ ಹುಡುಗ ನಿಮ್ಮ ಹುಡುಗನ ಅಭಿಪ್ರಾಯವನ್ನು ತಿಳಿದುಕೊಳ್ಳುತ್ತಾನೆ. ಅವರ ಮುಖಭಾವ ನೋಡಿದರೆ ಹೊಸದಾಗಿ ತಿಳಿದುಕೊಳ್ಳಬೇಕಾದ್ದೇ ಇಲ್ಲ ಎಂದು ತೋರುತ್ತದೆ. ನಿಮ್ಮ ಮನೆಯಾಕೆಯೊಡನೆ ನನ್ನ ಮನೆಯಾಕೆ ಮಾತನಾಡುತ್ತಾಳೆ' ಎಂದು ಹೇಳುತ್ತ ಯಜಮಾನನು ತನ್ನ ಹೆಂಡತಿಯ ಕಡೆಗೆ ತಿರುಗಿ, 'ಏನು ಮಂದರಾದ್ರಿ! ಕುರ್ಚಿ ತುಂಬ ಕುಳಿತುಬಿಟ್ಟೆ. ಅವರೊಡನೆ ಮಾತನಾಡಿ ಅವರ ಅಭಿಪ್ರಾಯ ತಿಳಿಯಬೇಡ? ನಿನ್ನನ್ನು ಎಬ್ಬಿಸಲಿಕ್ಕೆ ಬರಲೇ' ಎಂದು ನಗುತ್ತ ಕೇಳಿದನು.

ನಾಗರಾಜನಿಗೆ ಮನಸ್ಸಿನಲ್ಲಿ ಒಂದು ಒಳತೋಟ ಪ್ರಾರಂಭವಾಯಿತು. ತಾನು ಮದುವೆಯಾಗುವುದಿಲ್ಲ ಎಂದು ಹಿಂದೆ ಸಂಕಲ್ಪಮಾಡಿಕೊಂಡದ್ದು ಸಡಿಲವಾಯಿತು. ಹೃದಯದಲ್ಲಿ ಪ್ರೇಮೋದಯವಾಗಿ ಎರಡು ದಿನಗಳ ಹಿಂದೆ ಇದ್ದ ಖಿನ್ನತೆ ನಿರುತ್ಸಾಹಗಳು ಮಾಯವಾದುವು. ಕಾಂತಾಮಣಿಯನ್ನು ನೋಡುತ್ತ ನೋಡುತ್ತ ಅಂಥ ಸುಂದರಿಯೂ ಚಟುಲಗಾತ್ರಿಯೂ ವಿದ್ಯಾವತಿಯೂ ಕಲಾವತಿಯೂ ಆದವಳನ್ನು ಏಕೆ ಮದುವೆಮಾಡಿಕೊಳ್ಳಬಾರದು? ತಾಯಿ ತಂದೆಗಳಂತೂ ತಾನು ಮದುವೆಯಾಗಬೇಕೆಂದು ಒತ್ತಾಯಪಡಿಸುತ್ತಿದಾರೆ. ಈ ಶ್ರೀಮಂತ ಹುಡುಗಿ ತನ್ನನ್ನು ಅತಿಶಯವಾಗಿ ಪ್ರೀತಿಸುತ್ತಾಳೆ. ಅವಳಿಗೆ ಯಾವುದರಲ್ಲಿಯೂ ಕೊರತೆಯಿಲ್ಲ. ಅವಳ ತಂದೆ ಲಕ್ಷಾಂತರ ರೂಪಾಯಿಗಳ ಆಸ್ತಿವಂತ

ನಾಗಿಯೂ ಇದ್ದಾನೆ. ತಾನು ತಂದಿರುವ ಮೋಟಾರನ್ನು ಅಲ್ಲಿಯೇ ತನಗೆ ವರೋಪಚಾರದ ಸಂಚಕಾರವನ್ನಾಗಿ ಬಿಟ್ಟು ಹೋಗುವಷ್ಟು ಐಶ್ವರ್ಯವಂತನಾಗಿದ್ದಾನೆ. ಒಲಿದು ಬಂದ ಸುಂದರಿಯನ್ನು ಕೈ ಹಿಡಿಯುವ ಸುಖಕ್ಕಿಂತ ಮಿಗಿಲಾದುದೇನು? ನನ್ನ ವಿದ್ಯೆಗೂ ಹುದ್ದೆಗೂ ರೂಪಕ್ಕೂ ಗುಣಕ್ಕೂ ಅನುಗುಣಳಾದ ಕಾಂತಾಮಣಿಯನ್ನು ವರಿಸಲೇ? ಎಲ್ಲವೂ ನನ್ನ ಒಂದು ಮಾತನ್ನು ಅವಲಂಬಿಸಿದೆ – ಎಂಬ ಮುಂತಾದ ಆಲೋಚನೆಗಳು ಹುಟ್ಟಿ ತನ್ನ ಭಾವೀ ದಾಂಪತ್ಯ ಸೌಖ್ಯದ ಚಿತ್ರಗಳನ್ನು ಕಲ್ಪಿಸಿಕೊಳ್ಳುತ್ತಿದ್ದನು. ವಿಶ್ವಾಮಿತ್ರ ಋಷಿಗಳು ಮೇನಕೆಯನ್ನು ಕಂಡಾಗ, 'ಭದ್ರೆ! ನಿನ್ನೊಡನೆ ಸಂಸಾರ ಮಾಡಬೇಕೆಂದು ಇಷ್ಟಪಡುತ್ತೇನೆ. ನನ್ನ ಆಶ್ರಮದಲ್ಲಿ ಇರು' ಎಂದು ಹೇಳಿದಂತೆ, 'ಕಾಂತಾಮಣಿ! ನಿನ್ನನ್ನು ಮದುವೆಯಾಗಬೇಕೆಂದು ಇಷ್ಟಪಡುತ್ತೇನೆ. ನೀನು ನನ್ನ ಮನೆಯಲ್ಲಿಯೇ ಇದ್ದು ಬಿಡು' ಎಂದು ಹೇಳಲೇ? ನಾನು ಹಿಂದೆ ಮಾಡಿಕೊಂಡಿದ್ದ ಸಂಕಲ್ಪ ಏನಾಯಿತು? ನನ್ನ ಮನಸ್ಸು ಹೀಗೆ ಚಪಲವೂ ಚಂಚಲವೂ ಆಗುವುದಕ್ಕೆ ನಾನು ಎಡೆಕೊಟ್ಟದ್ದು ನ್ಯಾಯವೆ? ಆ ದಿವಸ ಸರೋಜ ನನ್ನನ್ನು ಹಿಂಬಾಲಿಸಿ ನನ್ನ ಕೊಟಡಿಗೆ ಬಂದಾಗ 'ಸರೋಜ! ನಾನು ಸಂಸಾರ ಸೌಖ್ಯವನ್ನು ತ್ಯಜಿಸಿದ್ದೇನೆ. ನಿನಗಾಗಿ ಆಜೀವ ಬ್ರಹ್ಮಚಾರಿಯಾಗಿ ಇದ್ದು ಬಿಡುತ್ತೇನೆ. ನಿನ್ನನ್ನು ಕೈಬಿಡುವುದಿಲ್ಲ' ಎಂದು ನಾನು ಆಕೆಗೆ ಹೇಳಿದ ಮಾತುಗಳೆಲ್ಲಿ? ಈಗ ಕಾಂತಾಮಣಿಯನ್ನು ಬಯಸುವುದು ತಾನೆಲ್ಲಿ? ಆಗ ಸರೋಜಳೇ ದೈನ್ಯದಿಂದ, 'ಬೇಡಣ್ಣ! ಹಾಗೆಲ್ಲ ಹೇಳಬೇಡ. ನೀನು ಮದುವೆ ಮಾಡಿಕೋ. ನನ್ನ ಹೀನ ಅದೃಷ್ಟಕ್ಕೆ ನಿನ್ನ ಸುಖವನ್ನು ಬಲಿಕೊಡಬೇಡ. ನನ್ನ ಯೋಚನೆಯನ್ನೇ ಇಟ್ಟುಕೊಳ್ಳಬೇಡ. ನಾನು ಯಾರಿಗೂ ಭಾರವಾಗಿರುವುದಿಲ್ಲ. ನಾನು ನಿರ್ಧರ ಮಾಡಿದ್ದೇನೆ' ಎಂದು ಹೇಳಿದಾಗಲೂ ನಾನು ಭಾವೋದ್ರೇಕದಿಂದ, 'ನಿನ್ನನ್ನು ನಾನು ಕಷ್ಟಕ್ಕೆ ಗುರಿಮಾಡಿದೆ. ನಾನೂ ಕಷ್ಟವನ್ನೇ ಅನುಭವಿಸುತ್ತೇನೆ' ಎಂದು ಹೇಳಿದೆನಲ್ಲವೆ? ಹಾಗಾದರೆ ಈಗೇನು ಮಾಡಬೇಕು? ತಾಯಿ ತಂದೆಗಳು ಹೇಗೆ ಹೇಳುವರೋ ಹಾಗೆ ಮಾಡಲಿ? ಇಲ್ಲ, ಇದನ್ನು ಸರೋಜಳ ತೀರ್ಮಾನಕ್ಕೇನೇ

ಬಿಡಲಿ? ನನ್ನ ಸಂಕಲ್ಪಕ್ಕೆ ಭಂಗ ಬರದಂತೆ ಕಾಂತಾಮಣಿಯನ್ನು ಮದುವೆಯಾಗುವುದಕ್ಕೆ ಉಪಾಯವುಂಟೆ? ಎಂಬ ಆಲೋಚನಾತರಂಗಗಳೊಡನೆ ಮುಳುಗಿ ಏಳುತ್ತಿದ್ದನು.

ಕೃಷ್ಣರಾಯರು ನಾಗರಾಜನನ್ನೂ ತಮ್ಮ ಹೆಂಡತಿಯನ್ನೂ ಕರೆದುಕೊಂಡು ತಮ್ಮ ಕೊಟಡಿಗೆ ಹೋದರು. ಮದರಾಸಿನಿಂದ ಬಂದಿದ್ದವರು ಎದ್ದು ನಾಗರಾಜನ ಕೊಟಡಿಗೆ ಹೋದರು. ನಾಗರಾಜನ ಕೊಟಡಿಯಲ್ಲಿ ಅವನ ಉಡುಪುಗಳೂ, ಅವನ ಪುಸ್ತಕಗಳೂ, ಅವನ ಭಾವಚಿತ್ರಗಳೂ, ಟೆನ್ನಿಸ್ ಬ್ಯಾಟುಗಳೂ ಮಾತ್ರವಲ್ಲದೆ ಅವನು ಟೆನ್ನಿಸ್ ಪಂದ್ಯಗಳಲ್ಲಿ ಗೆದ್ದಿದ್ದ ಹಲವು ಬೆಳ್ಳಿಯ ನಿಲುಬಟ್ಟಲುಗಳಿದ್ದುವು. ಕಾಂತಾಮಣಿ ಗೋಡೆಗೆ ತಗುಲಹಾಕಿದ್ದ ನಾಗರಾಜನ ಭಾವಚಿತ್ರಗಳನ್ನು ಒಂದೊಂದಾಗಿ ನೋಡುತ್ತಿದ್ದಳು. ಒಂದರಲ್ಲಿ ಟೆನ್ನಿಸ್ ಆಟದ ವೈಖರಿ, ಇನ್ನೊಂದರಲ್ಲಿ ಕಾನ್ವೋಕೇಷನ್ ಉಡುಪಿನ ಠೀವಿ, ಮತ್ತೊಂದರಲ್ಲಿ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಜಂಬ – ಒಂದಕ್ಕೊಂದು ಮನೋಮೋಹಕವಾಗಿ ಆಕೆಗೆ ಕಂಡುಬಂದುವು. ಅವನ ಮೇಜಿನ ಮೇಲೆ ಸಣ್ಣ ಒಂದು ಭಾವಚಿತ್ರ ಅವನ ರುಜುವನ್ನು ಹಾಕಿದ್ದು ಬೆಳ್ಳಿಯ ಚೌಕಟ್ಟಿನಲ್ಲಿತ್ತು. ಅದನ್ನು ಕಾಂತಾಮಣಿ ಕೈಗೆ ಎತ್ತಿಕೊಂಡು ಅತ್ಯಂತ ಪ್ರೇಮದಿಂದ ದೃಷ್ಟಿಸುತ್ತ ಅದನ್ನು ಪುನಃ ಮೇಜಿನ ಮೇಲಿಟ್ಟು,

'ಅಪ್ಪ! ಚೆಕ್‌ಬುಕ್ ತಂದಿದ್ದೀಯೇನು?' ಎಂದು ತಟ್ಟನೆ ಕೇಳಿದಳು.

'ಏಕಮ್ಮ ಚೆಕ್‌ಬುಕ್? ಇದ್ದಕ್ಕಿದ್ದ ಹಾಗೆ ಚೆಕ್‌ಬುಕ್ ಕೇಳುತ್ತೀಯೆ' ಎಂದು ಅವಳ ತಾಯಿ ಎಂದಳು.

'ಹೇಳಪ್ಪ! ತಂದಿದ್ದೀಯೋ ಇಲ್ಲವೋ? ಅಮ್ಮನ ಮಾತಿರಲಿ.'

'ತಂದಿದೇನಮ್ಮ! ಅದು ಮೋಟಾರಿನಲ್ಲಿ ನನ್ನ ಕೈಪೆಟ್ಟಿಗೆಯಲ್ಲಿದೆ.'

'ಸರಿ ಹಾಗಾದರೆ. ಏನಣ್ಣ! ನೀನೂ ಅವರೂ ಮಾತನಾಡುತ್ತಿದ್ದಿರಲ್ಲ. ನನ್ನ ವಿಚಾರ ಏನು ಹೇಳಿದರು? ನೀನು ಕೇಳಲಿಲ್ಲವೆ?'

'ನಿನ್ನ ಮೇಲೆ ಅವನಿಗೂ ಪ್ರೇಮವಿದೆ ಎಂದು ತಿಳಿಯಿತು. ನಿನ್ನ ತಂಗಿಗೆ ಸಂಗೀತ ಬರುತ್ತದೆಯೆ? ಎಂದು ಕೇಳಿದ. ಸಂಗೀತವೂ

ಬರುತ್ತದೆ, ಭರತನಾಟ್ಯವೂ ಬರುತ್ತದೆ– ಎಂದು ನಾನು ಹೇಳಿದೆ. ನೀನು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆ ಕೊಟ್ಟುಹೋದಾಗ, ನಿನ್ನ ತಂಗಿ ಒಳ್ಳೆಯ ಚತುರೆ ಎಂದು ಹೇಳಿದ.'

ಯಜಮಾನನು, 'ನೀನು ಅವನೊಡನೆ ಮಾತನಾಡುತ್ತಿದ್ದೆಯಲ್ಲ! ಅವನ ವಿಚಾರದಲ್ಲಿ ನಿನ್ನ ಅಭಿಪ್ರಾಯವೇನು? ನೋಡುವುದಕ್ಕೆ ಮನ್ಮಥ ನಿದ್ದ ಹಾಗಿದ್ದಾನೆ. ಕಾಂತಾಮಣಿ ಅವನನ್ನು ನೋಡಿ ಆಗಲೇ ಪ್ರೇಮ ದಿಂದ ಕರಗೇಹೋದಳು' ಎಂದು ನಗುತ್ತ ಹೇಳಿದನು.

'ಅವನು ಬಹಳ ಓದಿದಾನೆ. ಬಹಳ ಮೇಧಾವಿ. ಎಕನಾಮಿಕ್ಸ್ ನಲ್ಲಿ (ಅರ್ಥಶಾಸ್ತ್ರದಲ್ಲಿ) ಒಳ್ಳೆಯ ಪಾಂಡಿತ್ಯವಿದ್ದ ಹಾಗಿದೆ. ಅವನಿಗೆ ಇಂಗ್ಲಿಷ್ ಲಿಟರೇಚರ್ (ಸಾಹಿತ್ಯ) ಕೂಡ ಬಹಳ ತಿಳಿದಿದೆ. ಐ.ಸಿ. ಎಸ್.ಗೆ ಕುಳಿತರೆ, ಪ್ಯಾಸ್ ಮಾಡುವುದಿರಲಿ, ಫಸ್ಟ್ ಬಂದುಬಿಡುತ್ತಾನೆ ಎಂದು ನನಗೆ ತೋರುತ್ತದೆ.'

'ನನಗೂ ಹಾಗೆಯೇ ತೋರಿತು. ಒಳ್ಳೆಯ ಕಳೆ, ಚುರುಕು, ಬುದ್ಧಿ ಶಕ್ತಿ – ಎಲ್ಲ ಇದೆ.'

ಹುಡುಗಿಯ ತಾಯಿ ಬಾಯಿಹಾಕಿ, 'ನಮ್ಮ ಕಾಂತಾಮಣಿ ನೋಡಿ! ನನ್ನ ಕಿವಿಯಲ್ಲಿ–ಇದನ್ನು ಹೇಗಾದರೂ ಮಾಡಿ ಗಟ್ಟಿಮಾಡಮ್ಮ! ಅವರು ಎಷ್ಟುಕೇಳಿದರೂ ಕೊಟ್ಟುಬಿಡೋಣ – ಎಂದಳು. ಸ್ವಲ್ಪವೂ ನಿಧಾನ ವಿಲ್ಲ. ನನಗೇನೋ ಹುಡುಗ ಒಪ್ಪಿದ್ದಾನೆ. ಆದರೆ ಸಂಸಾರ ದೊಡ್ಡದು, ಐದು ಮಕ್ಕಳಿದ್ದಾರೆ. ಅವನಿಗೇನು ಆಸ್ತಿ ಬಂದೀತು?' ಎಂದಳು.

'ನಾಳೆ ಅವನು ಡಿಸ್ಟ್ರಿಕ್ಟ್ ಕಲೆಕ್ಟರ್ ಆಗುತ್ತಾನೆ, ಆಸ್ತಿ ಮಾಡು ತ್ತಾನೆ. ಇಷ್ಟಾಗಿ ಅವನೇನು ದುಡಿದು ಮಾಡಬೇಕು. ಕಾಂತಾಮಣಿ ಯನ್ನು ಮದುವೆಯಾಗಲಿ, ನಾನೇ ಬೇಕಾದ ಆಸ್ತಿ ಕೊಡುತ್ತೇನೆ. ನಾವು ಬೆಂಗಳೂರಲ್ಲಿ ನೋಡಿದ ಹುಡುಗನಿಗಿಂತ ನೂರುಪಾಲು ಈ ಹುಡುಗ ಮೇಲು. ಹೌದೋ ಅಲ್ಲವೋ?'

'ನೂರುಪಾಲು? ಸಾವಿರಪಾಲು, ಲಕ್ಷಪಾಲು, ಕೋಟಿಪಾಲು ಎಂದು ಹೇಳಪ್ಪ!' ಎಂದು ಕಾಂತಾಮಣಿ ಉಸಿರುಬಿಡದೆ ಹೇಳಿದಳು. ತಂದೆ ತಾಯಿಗಳಿಗೆ ನಗುಬಂತು.

ಅತ್ತ ಕೃಷ್ಣರಾಯರ ಕೊಟಡಿಯಲ್ಲಿ ಸಮಾಲೋಚನೆ ನಡೆಯುತ್ತಿತ್ತು. ತುಳಸಾಬಾಯಿ,

'ನಾಗರಾಜ! ಈಗ ಬಂದಿರುವ ಹೆಣ್ಣನ್ನು ಒಪ್ಪಿಕೊಳ್ಳಪ್ಪ! ನನಗೂ ಅವಳನ್ನು ಸೊಸೆಯಾಗಿ ಮಾಡಿಕೊಳ್ಳಬೇಕೆಂದು ಆಶೆಯಿದೆ. ಜಾತಕಗಳೂ ಕೂಡಿ ಬಂದಿವೆ' ಎಂದು ಹೇಳಿದಳು.

ಕೃಷ್ಣರಾಯರು, 'ಈಗಾಗಲೆ ಏಳೆಂಟು ಹೆಣ್ಣುಗಳು ಬಂದಿದ್ದುವು. ದಿನ ಬೆಳಗಾದರೆ ಯಾರಾದರೂ ಬರುತ್ತಲೇ ಇರುತ್ತಾರೆ. ಇದುವರೆಗೂ ಸಿವಿಲ್ ಸರ್ವಿಸ್ ಪರೀಕ್ಷೆಯ ಫಲಿತಾಂಶ ಬರಲಿ ಎಂಬ ನೆಪ ಇತ್ತು. ಮುಂದೆ ಯಾವ ನೆಪವೂ ಇಲ್ಲ. ಈ ಹುಡುಗಿಯನ್ನು ಮದುವೆಮಾಡಿಕೊಂಡು ಗೃಹಸ್ಥನಾಗಿ ಬಾಳಪ್ಪ! ನನಗೂ ಸಂತೋಷ.!' ಎಂದು ಹೇಳಿದರು.

'ಒಳ್ಳೆಯ ಶ್ರೀಮಂತರು—ಒಬ್ಬಳೇ ಮಗಳು, ಒಬ್ಬನೇ ,ಮಗ. ಮದ್ರಾಸಿನಲ್ಲಿ ನಾಲ್ಕು ಬಂಗಲೆಗಳಿವೆ. ತಿಂಗಳುತಿಂಗಳಿಗೆ ಮನೆ ಬಾಡಿಗೆಯೇ ಸಾವಿರದಮೇಲೆ ಬರುತ್ತದೆ. ಎರಡು ಮೂರು ಮೋಟಾರುಗಳನ್ನು ಇಟ್ಟುಕೊಂಡಿದ್ದಾರೆ. ಇಂಥ ಕಡೆ ಮದುವೆಯಾದರೆ ನೀನೂ ಸುಖಪಡುತ್ತೀಯೆ. ಹಿಂದೆ ಬಂದಿದ್ದ ಬೆಂಗಳೂರ ಹೆಣ್ಣಿಗಿಂತ ಇದು ಮೇಲು. ಆಗಲಿ–ಎಂದು ಒಂದು ಮಾತು ಹೇಳಪ್ಪ ನಾಗರಾಜ!' ಎಂದು ತುಳಸಾಬಾಯಿ ಒತ್ತಾಯಪಡಿಸಿದಳು.

'ಸ್ವಲ್ಪ ಆಲೋಚನೆ ಮಾಡಿ ಹೇಳಬೇಕಮ್ಮ!'

'ಏನಿದೆ ನೀನು ಆಲೋಚನೆ ಮಾಡುವುದು? ತಾಯಿ ತಂದೆ ನಾವು ಒಪ್ಪಿದ್ದೇವೆ. ನಿನಗೂ ಹುಡುಗಿಯಮೇಲೆ ಪ್ರೇಮವಿರುವಹಾಗೆ ಕಂಡುಬಂತು. ಅವಳನ್ನೇ ನೋಡುತ್ತಿದ್ದೆ. ಈಗ ನಿನ್ನ ಮುಖ ಕೂಡ ಕಳಕಳಿಸುತ್ತಾ ಇದೆ, ಉಲ್ಲಾಸ ತೋರಿಬರುತ್ತಾ ಇದೆ. ಇವೆಲ್ಲ ಮದುವೆ ಮಾಡಿಕೊಳ್ಳಬೇಕು ಎಂಬ ಆಸೆಯ ಲಕ್ಷಣಗಳಪ್ಪ!'

'ನೀನು ಹೇಳುವುದು ನಿಜವಮ್ಮ! ಮದುವೆಯಾಗುವುದಾದರೆ ಈ ಹೆಣ್ಣನ್ನೇ ಆಗುತ್ತೇನೆ. ಆದರೆ ಮದುವೆ ಮಾಡಿಕೊಳ್ಳಬೇಕು ಎಂಬ ತೀರ್ಮಾನಕ್ಕೆ ನಾನಿನ್ನೂ ಬಂದಿಲ್ಲ. ಸ್ವಲ್ಪ ಆಲೋಚನೆ ಮಾಡಿ ಹೇಳ

ಬೇಕಮ್ಮ!' ಎಂದು ಹೇಳಿ ನಾಗರಾಜ ತಟ್ಟನೆ ಕೊಟಡಿಯನ್ನು ಬಿಟ್ಟು ಸರೋಜಳ ಕೊಟಡಿಗೆ ಹೊರಟುಹೋದನು.

ಕೃಷ್ಣರಾಯರೂ ತುಳಸಾಬಾಯಿಯೂ ಒಬ್ಬರ ಮುಖವನ್ನೊಬ್ಬರು ನೋಡುತ್ತ ನಿಂತರು. ಸ್ವಲ್ಪ ಹೊತ್ತಾದಮೇಲೆ, 'ಅದೇಕೆ ನಾಗರಾಜ ಹಾಗೆ ಹೇಳುತ್ತಾನೆ?' ಎಂದು ಆಕೆ ಕೇಳಿದಳು.

'ನೀನೇ ಆಲೋಚಿಸು. ನಾನೇಕೆ ಹೇಳಲಿ' ಎಂದು ಹೇಳಿ ಕೃಷ್ಣರಾಯರು ಸುಮ್ಮನಾದರು.

ಬಾಣಂತಿಯ ಕೊಟಡಿಯಲ್ಲಿ ನಾಗರಾಜ ಎರಡೇ ನಿಮಿಷ ಇದ್ದದ್ದು. ಅವನು ಬರುತ್ತಲೂ ಸರೋಜ, 'ಅಣ್ಣ! ನೀನು ಮದುವೆ ಮಾಡಿಕೋ. ಖಂಡಿತ ಮದುವೆ ಮಾಡಿಕೋ. ಈ ಹೆಣ್ಣನ್ನು ನೀನು ಮೆಚ್ಚಿದ್ದೀಯೆ. ಅವಳೂ ನಿನ್ನನ್ನು ಮೆಚ್ಚಿದ್ದಾಳೆ. ಇದು ಎಲ್ಲರಿಗೂ ಒಪ್ಪಿಕೆಯಾದ ಮದುವೆ' ಎಂದು ಹೇಳಿದಳು.

'ಹಾಗಾದರೆ ನಾನು ಮದುವೆಮಾಡಿಕೊಳ್ಳಬೇಕು ಎಂಬುದು ನಿನ್ನಿಷ್ಟವೇ ಸರೋಜ?'

'ಹೌದಣ್ಣ! ನೀನು ನನ್ನ ಚಿಂತೆ ಬಿಟ್ಟುಬಿಡು. ನೀನು ಸಂತೋಷದಿಂದ ನಗುತಾ ನಲೀತಾ ಇದ್ದರೆ ನನಗೂ ಸಂತೋಷ ನಲಿವು. ನೀನು ಮದುವೆಯಾಗದಿದ್ದರೆ ನನಗೋಸ್ಕರ ಅಣ್ಣ ಹೀಗಾದನಲ್ಲ ಎಂದು ನನಗೆ ಕೊರಗು. ನನಗೆ ಸಂತೋಷ ಎಲ್ಲಿರುತ್ತೆ?'

'ನೀನೂ ಸಹ ಒಪ್ಪಿದಮೇಲೆ ಆಲೋಚನೆ ಮಾಡಬೇಕಾದ್ದೇ!' ಎಂದು ಹೇಳುತ್ತ ನಾಗರಾಜ ಹಿಂದಿರುಗಿದನು.

ಪುನಃ ಹಾಲಿನಲ್ಲಿ ಎಲ್ಲರೂ ಸೇರಿದರು. ಮದ್ರಾಸಿನಿಂದ ಬಂದಿದ್ದ ಯಜಮಾನನು ಡ್ರೈವರನ್ನು ಕರೆದು, ಕೈಪೆಟ್ಟಿಗೆ ತರಿಸಿಟ್ಟುಕೊಂಡನು. ಕೃಷ್ಣರಾಯರ ಕಡೆಗೆ ತಿರುಗಿ,

'ಇನ್ನೇನು ರಾವ್‌ಜಿ! ಎಲ್ಲವೂ ಇತ್ಯರ್ಥವಾದ ಹಾಗೆಯೇ ನನಗೆ ಕಾಣುತ್ತದೆ. ನಮ್ಮ ಕಾಂತಾಮಣಿ ನಾಗರಾಜರಾಯರ ಕೊಟಡಿಯನ್ನು ನೋಡಿದಮೇಲೆ—ಅಪ್ಪ! ಚೆಕ್ ಬುಕ್ಕು ತಂದಿದ್ದೀಯಾ? ಎಂದು ಕೇಳಿದಳು. ತಂದಿದ್ದೇನಮ್ಮ ಎಂದು ನಾನು ಉತ್ತರ ಕೊಟ್ಟೆ.

ವರೋಪಚಾರ, ವರದಕ್ಷಿಣೆ ಮೊದಲಾದುವಕ್ಕೆಲ್ಲ ಚೆಕ್ ಕೊಡುತ್ತೇನೆ. ನಾನು ಬ್ಲಾಂಕ್ (ಖಾಲಿ) ಚೆಕ್‌ಗೆ ರುಜುಮಾಡಿ ಕೊಡುತ್ತೇನೆ. ನಮ್ಮ ಕಾಂತಾಮಣಿ ತನಗೆಷ್ಟು ಬೇಕೋ ಅದನ್ನು ಬರೆಯುತ್ತಾಳೆ. ನಾನೇನೂ ಅಡ್ಡ ಬರುವುದಿಲ್ಲ' ಎಂದು ಹೇಳುತ್ತ ಪೆಟ್ಟಿಗೆಯನ್ನು ತೆಗೆದು ಚೆಕ್ ಬುಕ್ಕನ್ನು ಕೈಯಲ್ಲಿ ಹಿಡಿದುಕೊಂಡನು.

ತುಳಸಾಬಾಯಿಗೆ ಬಹಳ ಸಂತೋಷವಾಯಿತು. ತನ್ನ ಮಗ ಪ್ರೊಬೇಷನರ್ ಆಗಿರುವಾಗ ಹತ್ತು ಸಾವಿರ ಆದರೂ ವರದಕ್ಷಿಣೆಗೆ, ಹತ್ತು ಸಾವಿರ ವರೋಪಚಾರಕ್ಕೆ ಏತಕ್ಕೆ ಕೇಳಬಾರದು? ಆ ಹುಡುಗಿ ಏನು ಬರೆದುಬಿಡುತ್ತಾಳೋ ಎಂದು ಆಕೆ ಯೋಚಿಸತೊಡಗಿದಳು. ಯಜಮಾನನು,

'ನಮ್ಮ ಕಾಂತಾಮಣಿಯ ಮದುವೆ ಆದಮೇಲೆ ನಮ್ಮ ಹುಡುಗನನ್ನು ಇಂಗ್ಲೆಂಡಿಗೆ ಐ.ಸಿ.ಎಸ್. ಪರೀಕ್ಷೆಗೆ ಓದಲು ಕಳಿಸಿ ಕೊಡುತ್ತೇನೆ. ನಾಗರಾಜರಾಯರೂ ಐ.ಸಿ.ಎಸ್.ಗೆ ಓದಲಿ. ನಿಮ್ಮಲ್ಲಿ ಏನು? ಅಸಿಸ್ಟೆಂಟ್ ಕಮಿಷನರ್, ಡೆಪ್ಯುಟಿ ಕಮಿಷನರುಗಳಿಗೆ ಹೆಚ್ಚು ಸಂಬಳಗಳಿಲ್ಲ. ನಮ್ಮ ಕಡೆ ಒಬ್ಬ ತಾಸೀಲ್‌ದಾರನಿಗೆ ಒಬ್ಬ ಮುನ್ಸೀಫಿಗೆ ಅಷ್ಟು ಕೊಡುತ್ತಾರೆ. ಐ. ಸಿ. ಎಸ್. ಆದರೆ ಕಲೆಕ್ಟರ್ ಪದವಿಗೆ ಬರಬಹುದು, ರೆವಿನ್ಯೂ ಬೋರ್ಡು ಮೆಂಬರಾಗಬಹುದು, ಅದೃಷ್ಟವಿದ್ದರೆ ಎಗ್ಸಿಕ್ಯುಟಿವ್ ಕೌನ್ಸಿಲರ್ ಆಗಬಹುದು. ಭಾವ, ಭಾವಮೈದ—ಇಬ್ಬರೂ ಒಟ್ಟಿಗೆ ಇಂಗ್ಲೆಂಡಿಗೆ ಹೋಗಿ ಐ. ಸಿ. ಎಸ್. ಮಾಡಿಕೊಂಡು ಬರಲಿ. ನಾಗರಾಜರಾಯರ ಖರ್ಚುಗಳನ್ನೆಲ್ಲ ನಾನೇ ವಹಿಸಿಕೊಳ್ಳುತ್ತೇನೆ. ಆಗಬಹುದೇ ಕೃಷ್ಣರಾವ್‌ಜೀ?'

'ಆ ಮಾತು ಆಡುವುದಕ್ಕೆ ಇನ್ನೂ ಸಾವಕಾಶವಿದೆ. ನಿಮ್ಮ ಹುಡುಗಿಗೆ ಸಂಗೀತವನ್ನೇನಾದರೂ ಹೇಳಿಸಿದ್ದೀರಾ? ನಮ್ಮ ನಾಗರಾಜನಿಗೆ ಸಂಗೀತದಮೇಲೆ ಬಹಳ ಪ್ರೇಮ.'

'ಓಹೋ! ಕರ್ಣಾಟಕ ಅಚ್ಚ ಸಂಗೀತವನ್ನು ಹೇಳಿಸಿಕೊಟ್ಟಿದ್ದೇನೆ. ನಮ್ಮ ಮನೆಯಲ್ಲೇ ಚಂಪಾಯಿ ವೈದ್ಯನಾಥ ಭಾಗವತರು ಹೇಳಿಕೊಟ್ಟಿದ್ದಾರೆ. ಭರತ ನಾಟ್ಯವನ್ನೂ ಸೊಗಸಾಗಿ ಕಲಿತಿದ್ದಾಳೆ. ಆ

ಹುಡುಗಿಯ ಒಬ್ಬಳ ಖರ್ಚೇ ನನಗೆ ತಿಂಗಳಿಗೆ ಐನೂರು ರೂಪಾಯಿ ಆಗುತ್ತದೆ!'

ಈ ಮಾತುಗಳನ್ನೆಲ್ಲ ತುಳಸಾಬಾಯಿ ಬಹಳ ಆಶ್ಚರ್ಯದಿಂದ ಕೇಳುತ್ತಿದ್ದಳು. ತನ್ನ ಮಗನಿಗೆ ತಿಂಗಳಿಗೆ ಇನ್ನೂರು ರೂಪಾಯಿ ಸಂಬಳವೆಂದರೆ, ಅದು ಬಹಳ ದೊಡ್ಡದಾಗಿ ಕಂಡಿತಲ್ಲ. ಈ ಹುಡುಗಿಯಮೇಲೆ ತಿಂಗಳಿಗೆ ಐನೂರು ರೂಪಾಯಿ ಖರ್ಚು ಮಾಡುತ್ತಿದಾರೆ! ಆ ಐನೂರರ ಜತೆಗೆ ಮತ್ತೆ ಐನೂರು ಸೇರಿಸಿ ತಿಂಗಳಿಗೆ ಸಾವಿರ ರೂಪಾಯಿಗಳನ್ನು ನಾಗರಾಜನ ಸಂಸಾರದ ಖರ್ಚಿಗೆ ಕಳಿಸಿದರೆ ಡೆಪ್ಯುಟಿ ಕಮಿಾಷನರವರ ಸಂಸಾರಕ್ಕಿಂತ ಮಿಗಿಲಾಗಿ ವೈಭವದಿಂದಿರಬಹುದು—ಎಂದು ಆಕೆ ಲೆಕ್ಕಾಚಾರ ಹಾಕುತ್ತಿದ್ದಳು. ನಾಗರಾಜನು ಮಾತ್ರ ಯಾವ ಮಾತನ್ನೂ ಆಡದೆ ಗಂಭೀರವಾಗಿ ಕುಳಿತಿದ್ದನು. ಕೃಷ್ಣರಾಯರು, 'ಏನಪ್ಪ ನಾಗರಾಜ! ಅವರು ಹೇಳಿದ್ದನ್ನೆಲ್ಲ ಕೇಳಿದೆಯಲ್ಲ! ಅವರಿಗೆ ನಾವು ಏನು ಉತ್ತರ ಹೇಳೋಣ? ಅವರು ಈಗಲೇ ಎಲ್ಲ ನಿಷ್ಕರ್ಷೆ ಮಾಡಿಕೊಂಡು ನಮ್ಮ ಖರ್ಚುಗಳಿಗೂ ನಿನ್ನ ಉಪಚಾರಕ್ಕೂ ಚೆಕ್ ಕೊಟ್ಟು ಹೋಗಬೇಕೆಂದಿದ್ದಾರೆ. ನಿನಗೆ ಏನು ಬೇಕು? ಎಷ್ಟು ಬೇಕು? ಎಂದು ನೀನೇನಾದರೂ ಹೇಳುವುದಾದರೆ ಹೇಳಿಬಿಡು' ಎಂದರು.

ಯಜಮಾನನು, 'ಬೇಕಾದರೆ ನಮ್ಮ ಕಾಂತಾಮಣಿಯೊಡನೆ ನಿಮ್ಮ ನಾಗರಾಜರಾಯರು ಆಲೋಚನೆ ಮಾಡಿ ಅವಳಿಗೆ ಹೇಳಲಿ. ಚೆಕ್ ಬರೆಯುವ ಜವಾಬ್ದಾರಿ ನಮ್ಮ ಹುಡುಗಿಗೆ ಸೇರಿದ್ದು. ಇಂಪೀರಿಯಲ್ ಬ್ಯಾಂಕ್ ಅಥವಾ ಮೈಸೂರು ಬ್ಯಾಂಕ್ ಚೆಕ್ ಕೊಡುತ್ತೇನೆ' ಎಂದು ಹೇಳಿದನು.

ಆಗ ನಾಗರಾಜ ಏನೋ ನಿರ್ಧಾರ ಮಾಡಿಕೊಂಡವನಂತೆ ತಟ್ಟನೆ ಎದ್ದು, 'ನಾಲ್ಕು ದಿನ ಬಿಟ್ಟುಕೊಂಡು ನನ್ನ ತೀರ್ಮಾನ ಹೇಳುತ್ತೇನೆ. ದಯವಿಟ್ಟು ಎಲ್ಲರೂ ಕ್ಷಮಿಸಿರಿ. ತಮಗೆಲ್ಲ ತೊಂದರೆ ಆಯಿತು' ಎಂದು ಹೇಳಿ ತನ್ನ ತಂದೆಯ ಕೊಟಡಿಗೆ ಹೊರಟುಹೋದನು. ಮದ್ರಾಸಿನವರಿಗೆ ಸಿಡಿಲು ಬಡಿದಂತಾಯಿತು.

'ಇದೇನು ಕೃಷ್ಣರಾವ್ ಈ ಮಾತು? ನಮ್ಮನ್ನು ನಾಲ್ಕು ದಿನ ಕಾಯಿಸಿದರೆ ಹೇಗೆ? ಹುಡುಗ ಹುಡುಗಿಯನ್ನು ಒಪ್ಪಿದ್ದಾನೋ ಇಲ್ಲವೋ ತಿಳಿಸಿಬಿಡಿ. ಅದು ಮುಖ್ಯ' ಎಂದು ಅಸಮಾಧಾನದಿಂದ ಯಜಮಾನನು ಹೇಳಿದನು.

'ಹುಡುಗಿಯನ್ನು ಒಪ್ಪಿದಾನೆ. ಆದರೆ ಅವನ ಮನಸ್ಸಿನಲ್ಲಿ ಏನೋ ಬೇರೆ ಆಲೋಚನೆಯಿದೆ. ಆದ್ದರಿಂದ ಕಾಲಾವಕಾಶವನ್ನು ಕೇಳಿದ್ದಾನೆ.'

'ರಾವ್‌ಜಿ! ನಾನು ಜಿಪುಣನಲ್ಲ. ನಮಗಿರುವವಳು ಒಬ್ಬಳೇ ಮಗಳು. ಪ್ರಾಣಕ್ಕಿಂತಲೂ ಹೆಚ್ಚಾಗಿ ಪ್ರೀತಿಸುತ್ತಿದ್ದೇವೆ. ಆ ಹುಡುಗಿ ಮೆಚ್ಚಿ ಮದುವೆಯಾಗುವುದೇ ನಮಗೆ ಬೇಕಾದ್ದು. ಅವಳ ಎತ್ತರಕ್ಕೆ ಹಣ ಸುರಿದೇನು! ಒಂದು ಮನೆ, ಒಂದು ಮೋಟಾರ್, ಕೈಗೆ ಹಣ, ನಾಳೆ ಇಂಗ್ಲೆಂಡಿನ ಖರ್ಚಿಗೆ ಹಣ–ಎಲ್ಲವನ್ನೂ ನಾನು ಕೊಡುವ ಸಂಕಲ್ಪ ಮಾಡಿದ್ದೇನೆ. ಇದೇನೂ ಒಬ್ಬರ ಬಲಾತ್ಕಾರ ವಿಚಾರವೇ ಅಲ್ಲ. ನನ್ನ ಸ್ವಂತ ಸಂತೋಷದಿಂದ ಕೊಡುವ ವಿಚಾರ. ದೇವರು ನನ್ನನ್ನು ಒಳ್ಳೆಯ ಸ್ಥಿತಿಯಲ್ಲಿಟ್ಟಿದ್ದಾನೆ. ಆದ್ದರಿಂದ ನಿಮ್ಮ ಹುಡುಗ ಏನು ಆಲೋಚನೆಯನ್ನೂ ಮಾಡಬೇಕಾದ್ದಿಲ್ಲ. ಆತನಿಗೆ ಏನು ಬೇಕೋ ಆತನೇ ಹೇಳಲಿ. ಬೇಕಾದರೆ ನೀವು ಹೇಳಿ, ನಿಮ್ಮ ಮನೆಯಾಕೆ ಹೇಳಲಿ. ಯಾರು ಹೇಳಿದರೂ ಸಾಕು. ಈ ಕ್ಷಣ ನಡಸಿಕೊಟ್ಟು ನಾವು ಸಂತೋಷವಾಗಿ ಮದ್ರಾಸಿಗೆ ಪ್ರಯಾಣಮಾಡುತ್ತೇವೆ.'

ಕಾಂತಾಮಣಿ ಖಿನ್ನತೆಯಿಂದ ತನ್ನ ತಾಯಿಯ ಮುಖವನ್ನು ನೋಡಿದಳು. ಆಕೆ ತುಳಸಾಬಾಯಿಯನ್ನು ಕೊಟಡಿಗೆ ಕರೆದುಕೊಂಡು ಹೋಗಿ, 'ನಿಮ್ಮ ಮನಸ್ಸಿನಲ್ಲಿ ಏನಿದೆಯಮ್ಮ? ಹೇಳಿಬಿಡಿ. ನಾವೇ ಎರಡು ಖರ್ಚುಗಳನ್ನೂ ವಹಿಸಿಕೊಳ್ಳುತ್ತೇವೆ. ನೀವು ಒಂದು ತಾಮ್ರದ ಬಿಡಿಕಾಸನ್ನೂ ಖರ್ಚುಮಾಡಬೇಕಾದ್ದಿಲ್ಲ. ನಿಮ್ಮ ಖರ್ಚುಗಳಿಗೆ ಏನು ಬೇಕು ಎಂಬುದನ್ನು ಹೇಳಿದರೆ ಕೊಟ್ಟುಬಿಡುತ್ತೇವೆ. ನೀವು ಒಂದು ಒಡವೆಯನ್ನೂ ಇಡಬೇಕಾದ್ದಿಲ್ಲ. ಆ ಹುಡುಗಿಗೆ ಅವರಪ್ಪ ಮಾಡಿಸಿ ಹಾಕಿರೋದೇ ಲಕ್ಷ ರೂಪಾಯಿ ಬೆಲೆ ಬಾಳುತ್ತದೆ. ನಾವು ನಿಮ್ಮನು

ಅಗೌರವದಿಂದ ಕಾಣುವುದಿಲ್ಲವ್ಮು! ಎಲ್ಲ ಮರ್ಯಾದೆಯನ್ನೂ ಮಾಡುತ್ತೇವೆ. ಕೆಲವರು ಹೆಣ್ಣಿನ ಕಡೆಯುವರು, ತಮ್ಮ ಹುಡುಗಿಗೆ ತಾಳಿ ಕಟ್ಟುವುದೊಂದೇ ತಡ, ಬೀಗರನ್ನು ಅಸಡ್ಡೆ ಮಾಡುತ್ತಾರೆ, ಅಪಮಾನ ಪಡಿಸುತ್ತಾರೆ; ಕಡೆಗೆ ಮದುವೆಯ ಮನೆಯಲ್ಲೇ ಜಗಳಗಳಾಗಿ ಗಂಡಿನ ಕಡೆಯುವರು ಕೋಪಗೊಂಡು ಹೊರಟು ಹೋದದ್ದುಂಟು. ನಾವು ಅಂಥವರಲ್ಲ. ನಮಗೆ ಒಬ್ಬಳೇ ಮಗಳು. ಬಹಳ ಅಕ್ಕರೆಯಿಂದ ಬೆಳಸಿದ್ದೇವೆ. ಅವಳು ಸುಖವಾಗಿರುವುದೇ ನಮಗೆ ಮುಖ್ಯ. ಬೇಕಾದ್ದನ್ನು ಮಾಡುತ್ತೇವೆ. ಅವಳು ಮೆಚ್ಚಿದ ಗಂಡನನ್ನು ಎಷ್ಟು ಖರ್ಚಾದರೂ ಅವಳಿಗೆ ತಂದು ಮದುವೆ ಮಾಡಬೇಕೆಂದಿದ್ದೇವೆ. ನೀವೂ ಹೆಣ್ಣು ಹೆತ್ತವರು. ಈ ಮದುವೆ ಆಗಲಿಲ್ಲವೋ ನಾಳೆ ನನ್ನ ಮಗಳು ಏನು ಮಾಡಿಕೊಂಡುಬಿಡುತ್ತಾಳೋ ಎಂದು ನನ್ನ ಜೀವ ಹೊಡೆದುಕೊಳ್ಳುತ್ತಿದೆ. ದೊಡ್ಡ ಮನಸ್ಸು ಮಾಡಿ ಹೇಳಿಯಮ್ಮ!'

'ನಮಗೇನೂ ಆಸೆಯಿಲ್ಲವ್ಮು! ನೀವಾಯಿತು ನಿಮ್ಮ ಮಗಳಾಯಿತು. ಆಕೆಗೆ ಏನೇನು ಕೊಡಬೇಕೆಂದು ನಿಮಗೆ ಇಷ್ಟವೋ ನೀವು ಮಾಡಿಕೊಳ್ಳಿ. ನೀವೇನು,ಕೊಟ್ಟರೂ ನಿಮ್ಮ ಮಗಳ ಸಂಸಾರಕ್ಕೆ ತಾನೆ. ನಮ್ಮ ಹುಡುಗ ಏಕೋ ನಾಲ್ಕು ದಿನ ವಾಯಿದೆ ಕೇಳಿದಾನೆ. ಬಹುಶಃ ಮದುವೆ ಮಾಡಿಕೊಳ್ಳಲು ಒಪ್ಪುತ್ತಾನೆ. ನಮಗೆಲ್ಲ ಈ ಮದುವೆಗೆ ಒಪ್ಪಿಕೆ ಇದೆ.'

'ಈಗ ನಾವೇನು ಮಾಡೋಣ? ಅನಿಶ್ಚಯದಲ್ಲಿ ಸಿಕ್ಕಿಕೊಂಡೆವಲ್ಲ! ನನ್ನ ಮಗಳು ಕಣ್ಣೀರು ಹಾಕುತ್ತ ಮೋಟಾರು ಹತ್ತಿದರೆ ನನಗೆ ಸಂಕಟವಾಗುತ್ತದೆಯಲ್ಲ!'

'ನಾನೇನು ಮಾಡಲಮ್ಮ! ನಮ್ಮ ನಾಗರಾಜ ತನ್ನ ನಿರ್ಧಾರವನ್ನು ಹೇಳಿಬಿಟ್ಟಿದ್ದಾನೆ. ನಾಲ್ಕು ದಿನ ನೀವೂ ಕಾಯಬೇಕು, ನಾವೂ ಕಾಯಬೇಕು.'

ಇಬ್ಬರೂ ಹಾಲಿಗೆ ಬಂದರು. ಮದ್ರಾಸಿನ ಯಜಮಾನ ತನ್ನ ಹೆಂಡತಿಯ ಮುಖವನ್ನು ನೋಡಿದನು. ಅದರಲ್ಲಿ ಪ್ರೋತ್ಸಾಹದ ಚಿಹ್ನೆಗಳೇನೂ ಕಂಡುಬರಲಿಲ್ಲ. ಆಕೆ, 'ಅವರ ಮಗ ಹೇಳಿದ ಮಾತನ್ನೇ

ಅವರೂ ಆಡುತ್ತಾರೆ. ಈಗ ನಾವು ಬೆಂಗಳೂರಿಗೆ ವಾಪಸು ಹೋಗೋಣ. ನಮಗೆ ಆದಷ್ಟು ಬೇಗ ವರ್ತಮಾನ ಕೊಡಲಿ. ಮತ್ತೊಮ್ಮೆ ಇಲ್ಲಿಗೆ ಬಂದು ಮುಂದಿನ ಮಾತುಕತೆಗಳನ್ನಾಡಬೇಕಾಗುತ್ತೆ. ಏನು ಮಾಡುವುದು?' ಎಂದು ಹೇಳಿದಳು. ಯಜಮಾನನು,

'ಏನು ಕೃಷ್ಣರಾವ್! ಹಾಗಾದರೆ ಈಗ ನಾವು ವಾಪಸು ಹೋಗೋಣವೇ? ನಿಮ್ಮ ಮಗನನ್ನ ಪುನಃ ಏನಾದರೂ ವಿಚಾರಿಸುತ್ತೀರಾ?' ಎಂದು ಕೇಳಿದನು.

'ಅವನನ್ನು ಪುನಃ ವಿಚಾರಿಸಬೇಕಾದ್ದಿಲ್ಲ. ನಾನು ನಿಮಗೆ ವರ್ತಮಾನ ಕೊಡುತ್ತೇನೆ. ನಿಮ್ಮ ಬೆಂಗಳೂರಿನ ಅಡ್ರೆಸ್ಸನ್ನು ಕೊಟ್ಟಿರಿ.'

'ತೆಗೆದುಕೊಳ್ಳಿ. ಇದೇ ನಮ್ಮ ಬೆಂಗಳೂರಿನ ಅಡ್ರೆಸ್ಸು. ನಾವು ಬೆಂಗಳೂರಲ್ಲೇ ಕಾದಿರುತ್ತೇವೆ. ದಯವಿಟ್ಟು ಟೆಲಿಗ್ರಾಂ ಕೊಡಿ. ಇನ್ನು ನಾಲ್ಕು ದಿನ ನಮಗೆ ನಾಲ್ಕು ಯುಗ' ಎಂದು ಹೇಳಿ ಯಜಮಾನನು ವಿಳಾಸವನ್ನು ಬರೆದುಕೊಟ್ಟನು.'

ಮದ್ರಾಸಿನವರು ಹೊರಡಲು ಎದ್ದರು. ನಾಗರಾಜ ಕೊಟಡಿಯಿಂದ ಎದ್ದು ಬಂದು, ಆ ಯುವಕನ ಮತ್ತು ಯಜಮಾನನ ಕೈಕುಲುಕಿ, ಇಂಗ್ಲಿಷಿನಲ್ಲಿ, 'ದಯವಿಟ್ಟು ಕ್ಷಮಿಸಬೇಕು. ನಾನು ಸಭ್ಯನಾಗಿ ನಡೆದುಕೊಳ್ಳತಕ್ಕವನು. ತಮ್ಮ ಮನಸ್ಸನ್ನು ನೋಯಿಸಬೇಕೆಂದೇನೂ ಇಷ್ಟವಿಲ್ಲ. ದಯವಿಟ್ಟು ನಾಲ್ಕು ದಿನ ವಿರಾಮ ಕೊಡಿ' ಎಂದು ಹೇಳಿದನು. ಕಾಂತಾಮಣಿಯನ್ನು ಒಮ್ಮೆ ದೃಷ್ಟಿಸಿದನು. ಮೋಟಾರಿಗೆ ಎಲ್ಲರೂ ಹೊರಟರು. ಆ ಹುಡುಗಿ ಮಾತ್ರ ಕೊನೆಯಲ್ಲಿ ನಿಂತಿದ್ದವಳು ಸ್ವಲ್ಪವೂ ಹೆಜ್ಜೆಯನ್ನು ಮುಂದಿಡದೆ, ಕೈವಸ್ತ್ರವನ್ನು ಕಣ್ಣಿನಬಳಿ ತಂದುಕೊಂಡು ನಿಂತೇ ಇದ್ದಳು. ಅವಳ ತಂದೆ ಹಿಂದಕ್ಕೆ ಬಂದು, 'ಅಮ್ಮ! ಜೋಯಿಸರು ಹೇಳಿದ್ದಾರೆ! ಧೈರ್ಯವಾಗಿರು! ಒಂದು ತಿಂಗಳಲ್ಲಿ ಖಂಡಿತವಾಗಿ ಮದುವೆಯಾಗುತ್ತೆ. ನಾಗರಾಜರಾಯರನ್ನು ಖಂಡಿತ ನಿನಗೆ ಸಂಪಾದನೆ ಮಾಡಿ ಕೊಡುತ್ತೇನೆ. ಬಾರಮ್ಮ! ಬಾ! ಮೋಟಾರು ಹತ್ತು. ನಾಲ್ಕು ದಿನ ಬೆಂಗಳೂರಲ್ಲಿದ್ದು ಮತ್ತೆ ಬರೋಣ' ಎಂದು ಗದ್ಗದ ಸ್ವರದಿಂದ ಹೇಳುತ್ತ, ಹೇಗೋ ಸಮಾಧಾನಪಡಿಸಿ ಕೈಹಿಡಿದು ಕರೆದುಕೊಂಡು ಹೋದನು. ಮೋಟಾರು ಗೇಟು ಬಿಟ್ಟು ಹೊರಟು ಹೋಯಿತು.

## ೧೮. ಅತ್ತೆಯ ಕರುಳು

ಮದ್ರಾಸಿನವರು ಬಂದ ಸಂಭ್ರಮ, ಆ ಯಜಮಾನನ ಮಾತಿನ ವೈಖರಿ, ಆ ಹುಡುಗಿ ಕಾಂತಾಮಣಿಯ ಚಾಕಚಕ್ಯತೆ, ಅವರ ಶ್ರೀಮಂತಿಕೆ–ಮೊದಲಾದ ವಿಚಾರಗಳಲ್ಲೆಲ್ಲ ವಿಪುಲವಾದ ಟೀಕೆಗಳೂ ಮೆಚ್ಚಿಕೆಯ ನುಡಿಗಳೂ ಶಿವಮೊಗ್ಗದಲ್ಲಿ ನಡೆದುವು. ಕೃಷ್ಣರಾಯರು ಮಾತ್ರ, 'ನಾಗರಾಜ! ನೀನು ಮದುವೆಗೆ ಒಪ್ಪಿಕೊಂಡಿದ್ದರೆ ಚೆನ್ನಾಗಿತ್ತು. ಬೇರೆ ವಿಚಾರಗಳಿಗೆ ನೀನು ಗಮನ ಕೊಡಬೇಕಾಗಿರಲಿಲ್ಲ. ನಿನ್ನ ಉದ್ದೇಶಗಳನ್ನೂ ಸದ್ಭಾವನೆಗಳನ್ನೂ ನಾನು ಮೆಚ್ಚದೇ ಹೋಗಿಲ್ಲ. ಆದರ ಪಾಡಿಗೆ ಅದು, ಇದರ ಪಾಡಿಗೆ ಇದು. ಒಬ್ಬೊಬ್ಬರ ಅದೃಷ್ಟ ಒಂದೊಂದು ರೀತಿ ಇರುತ್ತದೆ' ಎಂದು ಏಕಾಂತದಲ್ಲಿ ಹೇಳಿದರು. ನಾಗರಾಜ, 'ನಾನು ಯಾವುದನ್ನೂ ತಿರಸ್ಕರಿಸಿಲ್ಲ. ಕಾಲಾವಕಾಶವನ್ನು ಮಾತ್ರ ಕೇಳಿದೇನೆ. ಎಲ್ಲವೂ ಸುಮುಖವಾಗಿಯೇ ಸಂತೋಷವಾಗಿಯೇ ಪರಿಣಾಮ ಹೊಂದಲಿ' ಎಂದು ಉತ್ತರ ಕೊಟ್ಟನು.

ಮಾರನೆಯ ದಿನ ತುಮಕೂರಿಗೆ ಬೆಳಗಿನ ಗಾಡಿಯಲ್ಲಿ ಹೊರಡುವುದೇ ಅಥವಾ ರಾತ್ರಿಯ ಗಾಡಿಯಲ್ಲಿ ಹೊರಡುವುದೇ? ಎಂದು ತುಳಸಾಬಾಯಿಗೂ ಆಕೆಯ ಗಂಡನಿಗೂ ಸ್ವಲ್ಪ ಚರ್ಚೆ ನಡೆಯಿತು. ಹಗಲು ಹೊತ್ತಿನ ಪ್ರಯಾಣ ಬೇಡ, ರಾತ್ರಿಯ ಗಾಡಿಯಲ್ಲೇ ಪ್ರಯಾಣ ಮಾಡೋಣ ಎಂದು ನಿಷ್ಕರ್ಷೆಯಾಗಿ ರಾತ್ರಿಯ ಗಾಡಿಯಲ್ಲಿ ಸೆಕೆಂಡ್ ಕ್ಲಾಸ್ ಎರಡು ಸೀಟುಗಳನ್ನು ರಿಸರ್ವ್ ಮಾಡಿಸಿದ್ದಾಯಿತು. ಕೃಷ್ಣರಾಯರು ತಾವು ತುಮಕೂರಿನಲ್ಲಿ ಎಲ್ಲಿ ಇಳಿಯಬೇಕು? ಸೀತಾರಾಮುವನ್ನು ಪ್ರತ್ಯೇಕವಾಗಿ ಎಲ್ಲಿ ನೋಡಬೇಕು? ಏನು ಮಾತನಾಡಬೇಕು? ಆಮೇಲೆ ಕಾವೇರಮ್ಮನನ್ನು ಹೇಗೆ ಕಾಣಬೇಕು? ಆಕೆಯೊಡನೆ ಹೇಗೆ ಏನು ಮಾತನಾಡಬೇಕು? ಎಂಬುದನ್ನೆಲ್ಲ ಬಹಳ ಗಂಭೀರವಾಗಿ ಆಲೋಚಿಸುತ್ತ ಕೊಟಡಿಯಲ್ಲಿ ಕುಳಿತಿದ್ದರು. ಆಗಾಗ ತುಳಸಾಬಾಯಿ ಏನೋ ಅಡ್ಡಮಾತನ್ನಾಡುವುದಕ್ಕೆ ಕೊಟಡಿಗೆ ಬರುತ್ತಿದ್ದಳು. 'ಈಗ ಯಾವ ಮಾತನ್ನೂ ಆಡಬೇಡ. ನಾನು ಹೇಳಿದಂತೆ

ನೀನು ನಡಸು. ಅಷ್ಟೇ. ಏಳು ಎಂದರೆ ಏಳು, ಕುಳಿತುಕೋ ಎಂದರೆ ಕುಳಿತುಕೋ. ನನ್ನ ಬುದ್ಧಿಗೆ ತೋಚಿದಂತೆ ನಾನು ಏರ್ಪಾಡು ಮಾಡುತ್ತೇನೆ' ಎಂದು ಅವರು ಆಕೆಗೆ ಖಂಡಿತವಾಗಿ ಹೇಳಿಬಿಟ್ಟರು. ಆಕೆ, 'ಕೈಹಿಡಿದ ಹೆಂಡತಿ ಎಂದ ಮೇಲೆ ಯಾವುದೊಂದು ಆಲೋಚನೆಗೂ ನಾನು ಬರಬಾರದೇ? ಕೆಲವು ವಿಚಾರಗಳಲ್ಲಿ ಗಂಡಸಿನ ಬುದ್ಧಿಗಿಂತ ಹೆಂಗಸಿನ ಬುದ್ಧಿಯೇ ಮೇಲು. ಆ ಕಾವೇರಿಯನ್ನು ದಾರಿಗೆ ತರಬೇಕಾದರೆ ನಿಮ್ಮ ಕೈಯಲ್ಲಾಗುತ್ತದೆಯೆ? ಅವಳು ನಿಮ್ಮನ್ನೂ ನಿಮ್ಮ ಅಸಿಸ್ಟೆಂಟ್‌ಗಿರಿಯನ್ನೂ ಎಲ್ಲಿ ನೋಡಿಯಾಳು? ಅವಳ ಒಂದು ಮಾತಿಗೂ ನೀವು ಜವಾಬು ಕೊಡಲಾರಿರಿ' ಎಂದಳು.

'ತುಮಕೂರಿಗೆ ಹೋದಮೇಲೆ ತಾನೆ ಆಕೆಯೊಡನೆ ಮಾತು. ಈಗ ನೀನು ಸುಮ್ಮನಿರು.'

'ನೇರಾಗಿ ಅವರ ಮನೆಗೇನೆ ನಾವು ಹೋಗಿ ಇಳಿಯುವುದೇ ಹೇಗೆ? ಸ್ವಲ್ಪ ವಿವರಗಳನ್ನಾದರೂ ಈ ಹೆಂಡತಿಯಾದವಳಿಗೆ ಹೇಳಿ. ಗಾಡಿಯನ್ನು ಅವರ ಮನೆಯ ಬಾಗಿಲು ಮುಂದೆ ನಿಲ್ಲಿಸಿ, ಗಾಡಿಯಿಂದಿಳಿ! ಎಂದು ನೀವು ಹೇಳಿದರೆ ನಾನೇನು ಮಾಡಬೇಕು?'

'ಗಾಡಿಯಿಂದಿಳಿ! ಎಂದು ಹೇಳಿದರೆ ಇಳಿಯಬೇಕು. ಆಗಲೇ ಹೇಳಿದೆನಲ್ಲ: ಏಳು ಎಂದರೆ ಏಳಬೇಕು, ಕುಳಿತುಕೋ ಎಂದರೆ ಕುಳಿತುಕೊಳ್ಳಬೇಕು ಎಂದು.'

'ಸರಿ! ನಿಮ್ಮನ್ನು ಕಟ್ಟಿಕೊಂಡ ಪಾಪಕ್ಕೆ ನಾನು ಪಡಬಾರದ ಭಂಗಗಳನ್ನು ಪಡಬೇಕು.'

'ಬ್ರಹ್ಮದೇವನು ಹೆಂಗಸರನ್ನು ವಿಚಿತ್ರ ರೀತಿಯಲ್ಲಿ ಸೃಷ್ಟಿಮಾಡಿದಂತೆ ಕಾಣುತ್ತದೆ! ಇರಲಿ ಹೋಗು. ನಾವು ತುಮಕೂರಿನಲ್ಲಿ ನಿಲ್ಲುವುದು ಒಂದು ಹಗಲು ಮಾತ್ರ. ಬಹುಶಃ ನಾಳೆ ರಾತ್ರಿಯೇ ಅಲ್ಲಿಂದ ಹೊರಟು ನಾಳಿದ್ದು ಬೆಳಗ್ಗೆ ಶಿವಮೊಗ್ಗಕ್ಕೆ ಬಂದುಬಿಡುತ್ತೇವೆ. ಹೆಚ್ಚು ಗಂಟುಮೂಟೆ ಬೇಕಾಗಿಲ್ಲ.'

'ನಾನೂ ಅದೇ ಯೋಚನೆಯನ್ನೇ ಮಾಡಿದ್ದೇನೆ. ಬಾಣಂತಿಯನ್ನು ಬಿಟ್ಟು ಹೆಚ್ಚು ದಿನ ಇರುವುದಕ್ಕಾಗುವುದಿಲ್ಲ. ಇಲ್ಲಿ ದೊಡ್ಡವರು

ಹೆಂಗಸರು, ನೋಡಿಕೊಳ್ಳುವವರು ಯಾರೂ ಇಲ್ಲ. ನಿಮ್ಮ ತಂಗಿ ತನ್ನ ಊರಿನಲ್ಲೇನೋ ಕೊಳ್ಳೆಹೋಗುವಂತೆ ನೀರಾದ ದಿನವೇ ಹೊರಟು ಹೋದಳು. ಎರಡು ದಿನ ಇದ್ದು ಬಾಣಂತಿಯನ್ನು ನೋಡಿಕೊಂಡಿದ್ದರೆ ಏನು ಗಂಟು ಹೋಗುತ್ತಿತ್ತು? ಎರಡು ಹೊತ್ತೂ ತಿಂಡಿ, ಕಾಫಿ, ಬೇಕಾದ ಊಟ, ಬೇಕಾದ ಉಪಚಾರ ನಡೀತಿತ್ತಲ್ಲ!'

ಕೃಷ್ಣರಾಯರು ಇದೇನೋ ಮಾತು ವಿರಸಕ್ಕೆ ತಿರುಗಿತೆಂದು, 'ಅಡಿಗೆ ಆಗಿದೆಯೇ? ನೋಡು, ಎಲೆ ಹಾಕಿಸು' ಎಂದು ಹೇಳಿ ತುಳಸಾಬಾಯಿಯನ್ನು ಕಳಿಸಿಬಿಟ್ಟರು.

ರಾತ್ರಿಯ ಗಾಡಿಯಲ್ಲಿ ಕೃಷ್ಣರಾಯರೂ ಅವರ ಹೆಂಡತಿಯೂ ತುಮಕೂರಿಗೆ ಹೊರಟರು. ರೈಲ್ವೆ ಸ್ಟೇಷನ್ನಿಗೆ ನಾಗರಾಜ ಹೋಗಿದ್ದು ಅವರನ್ನು ಬೀಳ್ಕೊಟ್ಟನು. ರೈಲು ತುಮಕೂರನ್ನು ಮಾರನೆಯ ದಿನ ಬೆಳಗ್ಗೆ ಸುಮಾರು ನಾಲ್ಕೂವರೆ ಗಂಟೆಯ ಹೊತ್ತಿಗೆ ಮುಟ್ಟಿತು. ರೈಲ್ವೆ ಸ್ಟೇಷನ್ನಿಗೆ ಕೃಷ್ಣರಾಯರ ಸ್ನೇಹಿತರು ಗುಬ್ಬಿಯ ಸಬ್ ಡಿವಿಜನ್ ಆಫೀಸರ್ ತಮ್ಮ ಮೋಟಾರಿನೊಂದಿಗೆ ಬಂದು ಕಾದಿದ್ದರು. ಆ ಸ್ನೇಹಿತರ ಮನೆಯಲ್ಲಿ ಬಿಡಾರವಾಯಿತು. ಇನ್ನೂ ಬೆಳಗಾಗದೆ ನಾಲ್ಕು ನಾಲ್ಕೂವರೆ ಗಂಟೆಗೆ ಯಾವ ಊರನ್ನಾದರೂ ಸೇರಿದರೆ ಬಲು ಪೇಚಾಟ. ರಾತ್ರಿ ಸೆಕಂಡ್ ಕ್ಲಾಸಿನಲ್ಲಿ ಪ್ರಯಾಣ ಮಾಡಿದರೂ ಸರಿಯಾಗಿ ನಿದ್ರೆ ಬರುವುದಿಲ್ಲ; ಊರು ಸೇರಿ ಮನೆಗೆ ಹೋದಮೇಲೆ ಎದ್ದಿರುವುದಕ್ಕೂ ಅವೇಳೆ, ಮಲಗಿಕೊಳ್ಳುವುದಕ್ಕೂ ಅವೇಳೆ. ಈ ಪೇಚಾಟವನ್ನು ಅತಿಥಿಗಳು ಅನುಭವಿಸಬೇಕಾಯಿತು. ಕಡೆಗೆ ಕೃಷ್ಣರಾಯರು ತಮ್ಮ ಹೆಂಡತಿಗೆ, 'ನೀನು ಸ್ವಲ್ಪಹೊತ್ತು ಮಲಗಿಕೋ, ವಿಶ್ರಾಂತಿ ತೆಗೆದುಕೋ. ನಿನ್ನ ದೇಹಸ್ಥಿತಿಯೂ ಸೂಕ್ಷ್ಮ, ನೀನು ಕಷ್ಟಕ್ಕೆ ತಾಳಲಾರೆ' ಎಂದು ಉಪಚಾರೋಕ್ತಿಯನ್ನಾಡಿದರು. ಆಕೆ ಹೋಗಿ ಮಲಗಿಕೊಂಡಳು.

ಕೊಟಡಿಯಲ್ಲಿ ದೀಪಹಾಕಿಕೊಂಡು ಕೃಷ್ಣರಾಯರೂ ಅವರ ಸ್ನೇಹಿತರೂ ಮಾತನಾಡುತ್ತ ಕುಳಿತರು.

'ನಾನು ಸೀತಾರಾಮರಾವ್‌ಗೆ ಬೆಳಗ್ಗೆ ಎಂಟು ಗಂಟೆಗೆ ಬರಬೇಕೆಂದು ಹೇಳಿ ಕಳಿಸುತ್ತೇನೆ. ನೀವು ಬಂದಿರುವ ಸಮಾಚಾರವನ್ನು

ತಿಳಿಸುವುದಿಲ್ಲ. ಕಚೇರಿಯ ಒಂದು ಕಡತವನ್ನು ಫೈಸಲಾತಿ ಬಗ್ಗೆ ತರಬೇಕೆಂದು ಹೇಳಿ ಕಳಿಸುತ್ತೇನೆ. ಆತ ಇಲ್ಲಿಗೆ ಬರುತ್ತಾನೆ' ಎಂದು ಆಫೀಸರ್ ಹೇಳಿದರು. ಸೀತಾರಾಮರಾಯನು ಅವರ ಕಚೇರಿಯ ಲ್ಲಿಯೇ ಹೆಡ್ ಗುಮಾಸ್ತೆ ಕೆಲಸದಲ್ಲಿದ್ದುದು. ಆದರೆ ಆ ಆಫೀಸರಿಗೆ ಸೀತಾರಾಮರಾಯನ ಗೃಹಕೃತ್ಯದ ವಿಚಾರಗಳೇನೂ ತಿಳಿದಿರಲಿಲ್ಲ. ತಮ್ಮ ಸ್ನೇಹಿತರಾದ ಕೃಷ್ಣರಾಯರ ಅಳಿಯ ಎಂದು ಮಾತ್ರ ತಿಳಿದಿತ್ತು. ಸೀತಾರಾಮರಾಯ ಬುದ್ಧಿವಂತನೂ, ಕೆಲಸದಲ್ಲಿ ದಕ್ಷನೂ, ಪ್ರಾಮಾಣಿ ಕನೂ ಆಗಿದ್ದುದರಿಂದ ಸಹಜವಾಗಿ ಅವನಮೇಲೆ ಆಫೀಸರಿಗೆ ವಿಶ್ವಾಸ ವಿತ್ತು ; ಸ್ನೇಹಿತರ ಅಳಿಯನೆಂದು ಜತೆಗೆ ಗೌರವವೂ ಮಿಳಿತವಾಗಿತ್ತು. ಈಗ ಅತಿಥಿಗಳಾಗಿ ಬಂದು ತನ್ನ ಮನೆಯಲ್ಲಿ ದಂಪತಿಗಳು ಇಳಿದು ಕೊಂಡದ್ದರಿಂದಲೂ ತಮ್ಮ ಅಳಿಯನನ್ನು ಉಪಾಯದಿಂದ ಕರಸ ಬೇಕೆಂದು ಕೃಷ್ಣರಾಯರು ಹೇಳಿದ್ದರಿಂದಲೂ ಗೃಹಕೃತ್ಯದಲ್ಲಿ ಅಳಿಯ ನಿಗೂ ಅತ್ತೆಮಾವಂದರಿಗೂ ಮನಸ್ತಾಪವಿರಬಹುದೆಂದೂ, ಅಳಿಯ ನನ್ನು ಸಮಾಧಾನಪಡಿಸುವುದಕ್ಕಾಗಿ ಇಬ್ಬರೂ ಬಂದಿರುವರೆಂದೂ, ಆವಶ್ಯಕವಾದರೆ ತನ್ನ ಸಹಾಯವನ್ನು ಕೋರಬಹುದೆಂದೂ ಊಹಿಸಿ ಕೊಂಡರು. ಸೀತಾರಾಮುವಿನ ಗುಣ, ದಕ್ಷತೆ, ನಡತೆ—ಮೊದಲಾದು ವುಗಳ ವಿಚಾರದಲ್ಲೆಲ್ಲ ಆಫೀಸರು ಒಳ್ಳೆಯ ಅಭಿಪ್ರಾಯವನ್ನು ವ್ಯಕ್ತ ಗೊಳಿಸಿದರು.

'ಈಚೆಗೆ, ಎರಡು ತಿಂಗಳಿಂದ ಆತ ಬಹಳ ಇಳಿದು ಹೋಗಿ ದ್ದಾನೆ. ಏನೋ ದುಃಖದಲ್ಲಿರುವಂತೆಯೂ ಕಂಡುಬಂತು. ನಾನು ಒಂದೆರಡು ಬಾರಿ ಮುಖ ಏತಕ್ಕೆ ಸಪ್ಪಗಿದೆ? ಎಂದು ಕೇಳಿದೆ. ಅದಕ್ಕೆ ಆತ – ಮೈಗೂ ಸ್ವಸ್ಥವಿಲ್ಲ ಮನಸ್ಸಿಗೂ ಸ್ವಸ್ಥವಿಲ್ಲ – ಎಂದು ಹೇಳಿ ತನ್ನ ಕೆಲಸವನ್ನು ಮುಗಿಸಿಕೊಂಡು ಹೊರಟುಹೋದನು. ನಾನು ಮುಂದಕ್ಕೆ ಮಾತು ಬೆಳಸಲಿಲ್ಲ' ಎಂದು ಆಫೀಸರು ಹೇಳಿದರು. ಕೃಷ್ಣರಾಯರು, 'ನಾವು ಆ ಉದ್ದೇಶದಿಂದಲೇ ಬಂದಿದ್ದೇವೆ' ಎಂದು ಉತ್ತರಕೊಟ್ಟರು. ಹೀಗೆ ಮಾತನಾಡುತ್ತಿದ್ದಾಗ ಬೆಳಗಾಗಿ ಆರು ಗಂಟೆ ಹೊಡೆಯಿತು. ಮುಖಪ್ರಕ್ಷಾಳನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಕಾಫಿಸೇವನೆ

ಯಾದಮೇಲೆ ಅತಿಥಿಗಳಿಗೆ ಮಹಡಿಯಮೇಲಿನ ಕೊಟಡಿಯನ್ನೂ ಹಾಲನ್ನೂ ತೋರಿಸಿ, 'ನೀವು ಇಲ್ಲಿರಬಹುದು. ಸ್ಥಳ ಏಕಾಂತವಾಗಿದೆ. ಇಲ್ಲಿಗೆ ಯಾರೂ ಬರುವುದಿಲ್ಲ. ನಾನು ಉಳಿದ ಏರ್ಪಾಟುಗಳನ್ನು ಮಾಡುತ್ತೇನೆ' ಎಂದು ಆಫೀಸರ್ ಹೇಳಿದರು. ಬಳಿಕ ಸ್ನಾನಗಳನ್ನು ಮುಗಿಸಿಕೊಂಡು ಕೃಷ್ಣರಾಯರೂ ತುಳಸಾಬಾಯಿಯೂ ಮಹಡಿಯಮೇಲಕ್ಕೆ ಬಂದು ಕುಳಿತರು. ತನ್ನ ಗಂಡ ಮಾಡಿದ್ದ ಏರ್ಪಾಟನ್ನು ಆಕೆ ಮೆಚ್ಚಿಕೊಂಡು, 'ಹೀಗೆ ಏರ್ಪಾಟನ್ನು ಮಾಡಿದ್ದೇನೆ ಎಂದು ಮೊದಲೇ ಹೇಳಿದ್ದರೆ ನಿಮ್ಮ ಬಾಯಿಂದ ಮುತ್ತು ಸುರಿಯುತ್ತಿತ್ತೇ?' ಎಂದು ಕೇಳುತ್ತ ಮಂದಹಾಸಪೂರ್ವಕವಾಗಿ ಗಂಡನ ಕಡೆ ನೋಡಿದಳು. ಆ ಬಳಿಕ ಸೀತಾರಾಮು, ಕಾವೇರಮ್ಮ–ಅವರ ಸಂಬಂಧವಾದ ಕೆಲವು ಮಾತುಗಳಾದುವು.

ಈ ಮಧ್ಯದಲ್ಲಿ ಸಬ್ ಡಿವಿಜನ್ ಆಫೀಸರವರು ಒಂದು ಚೀಟಿ ಬರೆದು ತಮ್ಮ ಆಳಿನ ಕೈಯಲ್ಲಿ ಸೀತಾರಾಮರಾಯನಿಗೆ ಕಳಿಸಿಕೊಟ್ಟರು. ಸೀತಾರಾಮರಾಯನಿದ್ದುದು ಗರುಡಿ ಚಿಕ್ಕಣ್ಣನ ಪಾಳ್ಯದಲ್ಲಿ. ಅದಕ್ಕೆ ಹೈಸ್ಕೂಲ್ ಎಕ್ಸ್‌ಟೆನ್‌ಷನ್ ಎಂದೂ ಹೆಸರು. ಅವನಿಗೆ ಸ್ವಂತ ಮನೆ ಇತ್ತು. ಅವನ ತಂದೆ ಶ್ರೀನಿವಾಸರಾಯರು ತುಮಕೂರಿಗೆ ವರ್ಗವಾಗಿ ಬಂದಮೇಲೆ ಮುಂದೆ ಅಲ್ಲಿಯೇ ನೆಲಸಬೇಕೆಂದು ತೀರ್ಮಾನಿಸಿ ಒಂದು ಮನೆಯನ್ನು ಕೊಂಡುಕೊಂಡಿದ್ದರು. ಆಗ ಆ ಬಡಾವಣೆ ಈಗಿನಷ್ಟು ಬೆಳೆದಿರಲಿಲ್ಲ. ಸೀತಾರಾಮರಾಯನಿಗೆ ಚೀಟಿ ತಲುಪುತ್ತಲೂ ಅವನು ಮನಸ್ಸಿನಲ್ಲಿ, 'ಸಾಮಾನ್ಯವಾಗಿ ಆಫೀಸರ್ ನನ್ನನ್ನು ತಮ್ಮ ಮನೆಗೆ ಕರೆಸುವ ಪದ್ಧತಿ ಇಟ್ಟಿರಲಿಲ್ಲ. ಇದೇನೋ ತುರ್ತಿನ ವಿಚಾರ ಇರಬೇಕು' ಎಂದುಕೊಂಡು ಆಳನ್ನು ವಾಪಸು ಕಳಿಸಿದನು. ಅಂಗಿ ರುಮಾಲುಗಳನ್ನು ಧರಿಸಿಕೊಂಡು, ತಾಯಿಗೆ, 'ಅಮ್ಮ! ಸಾಹೇಬರು ಹೇಳಿ ಕಳಿಸಿದ್ದಾರೆ. ಯಾವುದೋ ಒಂದು ಕಡತದ ವಿಚಾರದಲ್ಲಿ ಮಾತನಾಡಬೇಕೆಂದು ಬರಹೇಳಿದ್ದಾರೆ. ಹೋಗಿಬಿಟ್ಟುಬರುತ್ತೇನೆ' ಎಂದು ಹೇಳಿದನು. 'ಹೋಗಿ ಬಾರಪ್ಪ! ಅವರೇನಾದರೂ ಕೋಪಿಸಿಕೊಂಡರೆ ಬದಲು ಜವಾಬು ಕೊಡಬೇಡ. ಸುಮ್ಮನೆ ಇದ್ದುಬಿಡಪ್ಪ!

ಸ್ವಲ್ಪ ಕಾಫಿ ಕುಡಿದುಬಿಟ್ಟು ಹೋಗು, ಡಿಕಾಕ್‌ಷನ್ ಇದೆ, ಹಾಲೂ ಸಕ್ಕರೆ ಬೆರಸಿ ಒಂದು ನಿಮಿಷದಲ್ಲಿ ಮಾಡಿಕೊಡುತ್ತೇನೆ' ಎಂದು ತಾಯಿ ಹೇಳಿ ಒಂದು ಸಣ್ಣ ಲೋಟದಲ್ಲಿ ಕಾಫಿಯನ್ನು ಮಾಡಿಕೊಟ್ಟಳು. ಸೀತಾ ರಾಮರಾಯನು ಕೃಷ್ಣರಾಜ ಬಡಾವಣೆಯಲ್ಲಿದ್ದ ಸಾಹೇಬರ ಮನೆಯನ್ನು ಮುಟ್ಟಿದಾಗ ಎಂಟು ಗಂಟೆಗೆ ಐದು ನಿಮಿಷವಿತ್ತು. ಅವನಿಗೆ ತನ್ನ ಅತ್ತೆ ಮಾವಂದಿರು ಬಂದಿರುವ ಯಾವ ಸಮಾಚಾರವೂ ತಿಳಿಯದು. ಕೆಳಗಡೆ ಸಾಹೇಬರನ್ನು ಅವರ ಕೊಟಡಿಯಲ್ಲಿ ಭೇಟಿ ಮಾಡಿ ಕಡತದ ವಿಚಾರವನ್ನು ಚರ್ಚಿಸುತ್ತಿದ್ದಾಗ ಅಡಿಗೆಯವನು ಇಬ್ಬರಿಗೂ ಕಾಫಿಯನ್ನು ತಂದುಕೊಟ್ಟನು. ಸಾಹೇಬರು, 'ಕಾಫಿ ತೆಗೆದುಕೊಳ್ಳಿ ಸೀತಾರಾಮರಾವ್' ಎಂದು ಉಪಚಾರೋಕ್ತಿಯನ್ನಾಡಿದರು.

'ಈಗ ತಾನೆ ನನ್ನ ತಾಯಿ ಕಾಫಿ ಕೊಟ್ಟಳು ಸಾರ್! ಅದು ಎರಡನೆಯ ಬಾರಿ ಆಯಿತು. ಈಗ ಇದು ಮೂರನೆಯ ಬಾರಿ ಆಯಿತಲ್ಲ!' ಎಂದು ಅವನು ಉತ್ತರ ಹೇಳಿದನು.

'ಪರವಾ ಇಲ್ಲ; ಸಣ್ಣ ಲೋಟ, ತೆಗೆದುಕೊಳ್ಳಿ. ನಿಮ್ಮನ್ನು ಅಪೂರ್ವವಾಗಿ ಈ ದಿನ ಮನೆಗೆ ಕರಸಿದ್ದೇನೆ.'

'ತುರ್ತು ಕೆಲಸ ಬಿದ್ದರೆ ತಾವೂ ಕರಸಬೇಕಾಗುತ್ತೆ, ನಾವೂ ಬರಬೇಕಾಗುತ್ತೆ. ಸರ್ಕಾರದ ಕೆಲಸ!'

'ಒಳ್ಳೆಯದು ಸೀತಾರಾಮರಾವ್! ಈ ಕಡತದ ವಿಚಾರದಲ್ಲಿ ನಾನು ಹೇಳಿದಂತೆ ಒಂದು ನೋಟ್ ಬರೆಯಿರಿ, ನೋಡಿ ಆರ್ಡರ್ ಮಾಡುತ್ತೇನೆ' ಎಂದು ಹೇಳಿ ಸಾಹೇಬರು ಕುರ್ಚಿಯಿಂದೆದ್ದರು.

'ಇಲ್ಲಿಯೇ ಬರೆಯಲೆ ಸಾರ್? ಅಥವಾ ಕಚೇರಿಯಲ್ಲಿ ಬರೆಯಲೆ?'

'ಇಲ್ಲಿಯೇ ಬರೆಯಿರಿ. ಈಗಲೇ ಆರ್ಡರ್ ಮಾಡುತ್ತೇನೆ' ಎಂದು ಹೇಳಿ ಸೀತಾರಾಮರಾಯನಿಗೆ ಕೆಲಸ ಹಚ್ಚಿ ತಾವು ಮೆಲ್ಲಗೆ ಹೊರಟು ಮಹಡಿಯ ಮೇಲಕ್ಕೆ ಬಂದರು. ಕೃಷ್ಣರಾಯರಿಗೆ ಅವರ ಅಳಿಯ ಬಂದಿರುವ ಸಮಾಚಾರವನ್ನು ತಿಳಿಸಿದರು. ತುಳಸಾಬಾಯಿಗೆ ಆಗಲೇ ಕಣ್ಣಲ್ಲಿ ನೀರು ಉಕ್ಕುತ್ತಿತ್ತು. ಐದು ನಿಮಿಷ ಬಿಟ್ಟುಕೊಂಡು

ಸಾಹೇಬರು ಮಹಡಿಯ ಮೆಟ್ಟಲು ಸಾಲಿನಮೇಲೆ ನಿಂತು, 'ಸೀತಾರಾಮು ರಾವ್! ಆ ಕಡತ ಅಲ್ಲಿರಲಿ. ಇಲ್ಲಿ ಸ್ವಲ್ಪ ಬಂದುಹೋಗಿ' ಎಂದು ಕರೆದರು. ಆತ ಮೆಟ್ಟಲುಗಳನ್ನು ಹತ್ತಿ ಬಂದನು. ಸಾಹೇಬರು ಮುಂದೆ, ಸೀತಾರಾಮು ಹಿಂದೆ ಹೊರಟರು. ಹಾಲಿನ ಬಳಿ ಬಂದಾಗ ಸಾಹೇಬರು ಹಿಂದೆ ನಿಂತು, 'ಒಳಕ್ಕೆ ಹೋಗಿ. ನಮ್ಮ ಸ್ನೇಹಿತರು ಒಬ್ಬರು ಬಂದಿದ್ದಾರೆ. ನಿಮ್ಮನ್ನು ನೋಡಬೇಕು ಎನ್ನುತ್ತಾರೆ' ಎಂದು ಹೇಳಿದರು. ಸೀತಾರಾಮು ಒಳಕ್ಕೆ ಹೋದನು. ಅಲ್ಲಿ ಯಾರೂ ಇರಲಿಲ್ಲ. 'ಬರುತ್ತಾರೆ, ಆ ಕುರ್ಚಿಯಮೇಲೆ ಕುಳಿತುಕೊಳ್ಳಿ' ಎಂದು ಹೇಳಿ ತಾವು ಮೆಟ್ಟಲಿಳಿದು ಕೆಳಕ್ಕೆ ಬಂದುಬಿಟ್ಟರು. ಸೀತಾರಾಮು, ಯಾರು ಅವರ ಸ್ನೇಹಿತರೋ ತನ್ನನ್ನು ನೋಡಬೇಕೆಂದು ಏಕೆ ಬಯಸಿದರೋ ಎಂದು ಊಹೆ ಮಾಡಿಕೊಳ್ಳುತ್ತ ಕುರ್ಚಿಯಮೇಲೆ ಕುಳಿತನೋ ಇಲ್ಲವೋ ಕೊಟಡಿಯ ಬಾಗಿಲು ತೆರೆಯಿತು, ಕೃಷ್ಣರಾಯರೂ ತುಳಸಾಬಾಯಿಯೂ ಮುಂದೆ ಬಂದರು! ಸೀತಾರಾಮು ಅವಾಕ್ಕಾಗಿ ಎದ್ದು ನಿಂತುಕೊಂಡನು. ತುಳಸಾಬಾಯಿ ಹಿಡಿಸಲಾರದ ದುಃಖದಿಂದ ಅಳುತಳುತ ಮುಂದೆ ಬಂದು, 'ಅಪ್ಪ! ಸೀತಾರಾಮು! ನಾವುಗಳಪ್ಪ ಬಂದಿರೋದು' ಎಂದು ಹೇಳುತ್ತ ಅಳಿಯನನ್ನು ತಬ್ಬಿಕೊಂಡು ಕೆಳಕ್ಕೆ ಕುಸಿದುಬಿದ್ದಳು. ಕೃಷ್ಣರಾಯರ ಕಣ್ಣುಗಳಿಂದ ಎರಡು ಬಿಂದುಗಳು ಕೆಳಕ್ಕುರುಳಿದುವು. 'ಕುಳಿತುಕೊಳ್ಳಪ್ಪ ಸೀತಾರಾಮು!' ಎಂದು ಹೇಳಿ ಕೃಷ್ಣರಾಯರು ಅಳಿಯನನ್ನು ಕುರ್ಚಿಯಲ್ಲಿ ಕೂಡಿಸಿದರು. ತಮ್ಮ ಹೆಂಡತಿಯನ್ನು ಸಮಾಧಾನಪಡಿಸಿ ಬೇರೊಂದು ಕುರ್ಚಿಯಲ್ಲಿ ಕೂಡಿಸಿದರು. ತಾವೊಂದು ಕುರ್ಚಿಯನ್ನೆಳೆದುಕೊಂಡು ಸೀತಾರಾಮುವಿನ ಪಕ್ಕದಲ್ಲಿ ಕುಳಿತರು. ಸೀತಾರಾಮುವಿಗೆ ತಾನು ಏನು ಮಾಡಬೇಕೆಂಬುದು ಮೊದಲು ಹೊಳೆಯಲಿಲ್ಲ. ಹೇಗೋ ಯಂತ್ರದಂತೆ ಬ್ಯಬಗ್ಗಿ ಅತ್ತೆಮಾವಂದಿರಿಗೆ ಅವನು ನಮಸ್ಕಾರ ಮಾಡಿದನು. ತುಳಸಾಬಾಯಿಯ ಅಳು ನಿಂತಿರಲಿಲ್ಲ. 'ನೂರು ವರ್ಷ ಆಯುಸ್ಸು ಹೊಯ್ದುಕೊಂಡು ಸುಖವಾಗಿರಪ್ಪ! ನಿನ್ನ ಹೆಂಡತಿ ಮಕ್ಕಳೊಡನೆ ಕೂಡಿಕೊಂಡು ಸುಖವಾಗಿರಪ್ಪ!' ಎಂದು ಅಳುತ್ತಲೇ ಹರಸಿದಳು.

'ನಿನ್ನ ತಾಯಿ ಆರೋಗ್ಯವಾಗಿದ್ದಾಳೆಯೇ?' ಎಂದು ಕೃಷ್ಣರಾಯರು ಕೇಳಿದರು.

'ಇದ್ದಾಳೆ.'

'ನೀನು ಬಹಳ ಇಳಿದು ಹೋಗಿರುವ ಹಾಗೆ ಕಾಣುತ್ತದೆಯಲ್ಲ. ನಿನ್ನ ಆರೋಗ್ಯ ಚೆನ್ನಾಗಿಲ್ಲವೆ?'

'ಸುಮಾರಾಗಿದೆ.'

'ನಿನ್ನ ಕಾರ್ಡು ಬಂದು ಸೇರಿ ನಮಗೆಲ್ಲ ಬಹಳ ಸಂತೋಷವಾಯಿತು. ನಾಮಕರಣಕ್ಕೆ ಬರುವ ವಿಚಾರವನ್ನು ನೀನು ಬರೆದಿರಲಿಲ್ಲ. ಬಹುಶಃ ನೀನೂ ನಿನ್ನ ತಾಯಿಯೂ ನಮ್ಮನ್ನು ನಿರೀಕ್ಷಿಸುತ್ತಿರಬಹುದು ಎಂದು ನಾನು ಊಹಿಸಿದೆ. ನನ್ನ ಊಹೆ ಸರಿಯೇ?'

ಸೀತಾರಾಮು ಮಾತನಾಡಲಿಲ್ಲ. ನೆಲವನ್ನು ಮಾತ್ರ ನೋಡುತ್ತಿದ್ದನು. ಅಕಸ್ಮಾತ್ತಾಗಿ ತಾನು ಅತ್ತೆ ಮಾವಂದಿರ ಮಧ್ಯದಲ್ಲಿ ಸಿಕ್ಕಿಕೊಂಡೆನಲ್ಲ. ಸಾಹೇಬರು ಹೇಳಿಕಳಿಸಿದ್ದಾರೆ, ಹೋಗಿಬರುತ್ತೇನೆ ಎಂದು ತಾಯಿಗೆ ತಿಳಿಸಿಬಂದೆನಲ್ಲ. ಈಗ ನನ್ನ ಮಾತು ಸುಳ್ಳಾಗುವ ಸ್ಥಿತಿಗೆ ಬಂದಿತು. ಗುಟ್ಟಾಗಿ ಅತ್ತೆಮಾವಂದಿರನ್ನು ನೋಡುವುದಕ್ಕಾಗಿ ಈ ಹಂಚಿಕೆ ತೆಗೆದೆನೆಂದು ತಾಯಿ ತೀರ್ಮಾನಿಸಿಕೊಳ್ಳುತ್ತಾಳೆ. ಈಗ ಇವರ ಕೈಯಿಂದ ನಾನು ಹೇಗೆ ಬೇಗ ಪಾರಾದೇನು? ಅದಕ್ಕೆ ಉಪಾಯವೇನು? ಸಾಹೇಬರೇ ಈ ಭೇಟಿಗೆ ಏರ್ಪಾಟು ಮಾಡಿರುವುದರಿಂದ ನಾನು ಒರಟೊರಟಾಗಿ ಎದ್ದುಹೋದರೆ ಅತ್ತೆ ಮಾವಂದಿರಿಗೂ ಅಸಮಾಧಾನ, ಅಪಮಾನ; ಅತ್ತ ಸಾಹೇಬರಿಗೂ ಅಸಮಾಧಾನ ಮತ್ತು ಕೋಪ. ಒಳ್ಳೆಯ ಬಿಕ್ಕಟ್ಟಿನಲ್ಲಿ ಸಿಕ್ಕಿಕೊಂಡೆನಲ್ಲ!– ಎಂದು ಸೀತಾರಾಮು ಪೇಚಾಡುತ್ತಿದ್ದನು.

ಅವನ ಮೌನವನ್ನು ನೋಡಿ ತುಳಸಾಬಾಯಿ, 'ಅಪ್ಪ ಸೀತಾರಾಮು! ನೀನು ಅಳಿಯ ನಾವು ಅತ್ತೆ ಮಾವಂದಿರು ಎಂದು ಸ್ವಲ್ಪವೂ ಸಂಕೋಚಪಟ್ಟುಕೊಳ್ಳಬೇಡ. ನಮಗೆ ಯಾವ ಮರ್ಯಾದೆಯೂ ಬೇಡಪ್ಪ! ನೀನೂ ನಾಗರಾಜ–ಎಲ್ಲ ನಮಗೆ ಒಂದೇ. ನೀನು ಸಣ್ಣ ಹುಡುಗನಾಗಿದ್ದಲಾಗಾಯಿತು ನಿನ್ನನ್ನು ನಾವು ನೋಡಿಲ್ಲವೆ? ನೀನು

ನಮ್ಮ ಮನೆಯಲ್ಲಿ ನಾಗರಾಜನೊಡನೆ ಆಟವಾಡುತ್ತಿರಲಿಲ್ಲವೆ? ಎಷ್ಟೋ ದಿನ ನಮ್ಮ ನಾಗರಾಜನ ಜತೆಯಲ್ಲಿ ನಿನಗೂ ಕೈತುತ್ತು ನಾನು ಹಾಕಿಲ್ಲವೆ? ನೀನೂ ನನಗೆ ಮಗನೇ ಅಪ್ಪ! ಸೀತಾರಾಮು! ಕಾವೇರಿ ಹೇಗೆ ನಿನ್ನ ತಾಯಿಯೋ ನಾನೂ ಹಾಗೆಯೇ ತಾಯಿ ಎಂದು ತಿಳಿದು ಕೊಳ್ಳಪ್ಪ! ನೀನು ಆ ದಿನ ಕೋಪಮಾಡಿಕೊಂಡು ಹೊರಟು ಬಂದಮೇಲೆ ನಾನು ಒಂದು ಸಂಕಟಪಟ್ಟೆನೋ ಹಾಗೆ ಪಟ್ಟೆ! ಹೆತ್ತ ತಾಯಿಯೂ ಹಾಗೆ ಸಂಕಟಪಟ್ಟಿರಲಾರಳು. ಏನೋ ಹೀಗೆಯೇ ಹುಡುಗರು! ಕೋಪ ಬರುವುದುಂಟು, ಮತ್ತೆ ಶಾಂತಿ ಬರುವುದೂ ಉಂಟು. ನೀನೂ ಶಾಂತಿಯಿಂದ ಸಮಾಧಾನದಿಂದ ಇದ್ದೀಯೆ. ನೀನು ಒಳ್ಳೆಯ ಸಾಧು! ಚಿಕ್ಕಂದಿನಿಂದ ನಿನ್ನ ಗುಣ ನಾನು ನೋಡಿಲ್ಲವೆ? ನಿನ್ನ ಹೆಂಡತಿ ಸದ್ಯ ದೇವರ ದಯದಿಂದ ಹೆತ್ತು ಕ್ಷೇಮವಾಗಿ ಎದ್ದಳು. ಕೈಗೆ ಗಂಡುಮಗು ಬಂತು! ನಿನ್ನ ಮುಖವೇ! ಆ ಮೂಗು, ಆ ಕಣ್ಣುಗಳು, ಎಲ್ಲ ತದ್ರೂಪ! ಮಗನ್ನ ನೋಡಬೇಕು ಎಂದು ಆಸೆ ನಿನಗಿಲ್ಲವೇ ಸೀತಾ ರಾಮು? ನಿನ್ನ ಹೆಂಡತಿಯೂ ಕೊರಗಿ ಕೊರಗಿ ಸತ್ತು ಮತ್ತೆ ಒಂದು ಹುಟ್ಟು ಹುಟ್ಟಿ ಬಂದಳಪ್ಪ! ನಮ್ಮನ್ನು ನೋಡು, ನಮ್ಮ ದುಃಖ ಸಂಕಟ ನೋಡು! ನಾನು ಹೆಂಗಸು, ಹೇಳಿಕೊಂಡು ಅಳುತ್ತೇನೆ. ನಿನ್ನ ಮಾವನವರು ಒಳಗುದಿಯಲ್ಲಿಯೇ ಬೆಂದುಹೋಗುತ್ತಿದಾರೆ.' ಎಂದು ಹೇಳಿದಳು.

ಸೀತಾರಾಮು ಜೇಬಿನಿಂದ ಕರವಸ್ತ್ರವನ್ನು ತೆಗೆದು ಕಣ್ಣೀರನ್ನೊರಸಿ ಕೊಳ್ಳುತ್ತಿದ್ದನು. ಕೃಷ್ಣರಾಯರು ಅವನ ಬೆನ್ನುತಟ್ಟಿ, 'ನೀನೂ ಬಹಳ ನೊಂದಿದ್ದೀಯೆ. ಸಮಾಧಾನ ಮಾಡಿಕೋ, ಧೈರ್ಯ ತಂದುಕೋ. ಇಲ್ಲಿಯವರೆಗೆ ದೇವರು ಎಲ್ಲವನ್ನೂ ಸುಮುಖವಾಗಿ ನಡಸಿಕೊಂಡು ಬಂದಿದ್ದಾನೆ. ಈಗ ನೀನೂ ನಿನ್ನ ತಾಯಿ ಶಿವಮೊಗ್ಗಕ್ಕೆ ಬಂದರೆ ಎಲ್ಲವೂ ಸರಿಹೋಗುತ್ತದೆ. ನಾವಿನ್ನೂ ನಾಮಕರಣವನ್ನು ನಡಸಿಲ್ಲ. ನೀವುಗಳಿಲ್ಲದೆ ನಾವು ಅದನ್ನು ಮಾಡುವುದು ನ್ಯಾಯವಲ್ಲ ಎಂದು ಮುಂದಕ್ಕೆ ಹಾಕಿದ್ದೇವೆ. ನಿನ್ನ ತಾಯಿಯನ್ನು ಸಮಾಧಾನಪಡಿಸ ಬೇಕೆಂದು ನಾವು ಬಂದಿದ್ದೇವಪ್ಪ! ನೀನೂ ಆಕೆಗೆ ಹೇಳಬೇಕು. ನಿನ್ನ

ತಾಯಿ ನನಗೇನೂ ಹೊಸಬಳಲ್ಲ. ನೀನು ಹುಟ್ಟುವುದಕ್ಕೆ ಮೊದಲಿಂದ ಆಕೆಯನ್ನು ನಾನು ನೋಡಿದ್ದೇನೆ. ನೀನು ನನಗೇನೂ ಹೊಸಬನಲ್ಲ; ನೀನು ಮಗುವಾಗಿದ್ದ ಲಾಗಾಯಿತು ನಿನ್ನನ್ನು ನಾನು ನೋಡಿದ್ದೇನೆ; ನಿನ್ನನ್ನು ಎತ್ತಿಕೊಂಡು ಆಡಿಸಿದ್ದೇನೆ. ನಿನ್ನ ತಂದೆ ಶ್ರೀನಿವಾಸರಾವ್ ಮತ್ತು ನಾನು ಬಹಳ ಆಪ್ತಸ್ನೇಹಿತರಾಗಿದ್ದೆವು. ಅದನ್ನು ನೀನೂ ತಿಳಿದಿದ್ದೀಯೆ. ನೀನು ಅಳಿಯ ಎಂಬ ನೆಂಟು ಒಂದೇ ! ಅಲ್ಲ ಸೀತಾ ರಾಮು! ನನ್ನ ಸ್ನೇಹಿತನ ಮಗ ಎಂಬುದೇ ದೊಡ್ಡ ನೆಂಟು!' ಎಂದು ಹೇಳಿದರು.

'ಅಪ್ಪ ಸೀತಾರಾಮು! ನಿನಗೆ ನಾನೊಂದು ವಿಷಯ ಜ್ಞಾಪಕಕ್ಕೆ ತರಲೇ? ನಿನಗೆ ಮರೆತುಹೋಗಿರಬಹುದಪ್ಪ. ಆದರೆ ನನಗೆ ಮರೆತಿಲ್ಲ! ಸರೋಜ ಮರೆತಿಲ್ಲ ನೋಡು! ನೀನು ಲೋವರ್ ಸೆಕಂಡರಿ ಪರೀಕ್ಷೆಗೆ ಕಟ್ಟಿದ್ದಾಗ . . . . ಆಗ ನಿನಗೆಷ್ಟು ವರ್ಷ?' ಎಂದು ತುಳಸಾಬಾಯಿ ಕೇಳಿದಳು.

'ಹದಿಮೂರು ವರ್ಷ. ನೀವು ಹೇಳಬೇಕೆಂದಿರುವುದು ನನಗೂ ಜ್ಞಾಪಕವಿದೆ.'

'ನಿನಗೂ ಜ್ಞಾಪಕವಿದೆಯೆ? ಆಗ ಸರೋಜಳಿಗೆ ಎಂಟು ವರ್ಷ. ಪರಕಾರ ಉಟ್ಟುಕೊಂಡು ಓಡಾಡುತ್ತಿದ್ದಳು. ಅಮ್ಮ! ನನಗೆ ಸೀರೆ ಉಡಿಸು ಎಂದು ಹಟಮಾಡಿದಳು. ನೀನು ಎಳೆಯ ಹುಡುಗಿ, ನಿನಗೇಕೆ ಸೀರೆ? ಮದುವೆಯಾಗಲಿ – ಎಂದು ನಾನು ಹೇಳಿದೆ. ನಿನ್ನ ತಂದೆ ಆಗ ಬಂದವರು ಹುಡುಗಿ ಹಟ ಮಾಡುತ್ತಾಳೆ, ಉಡಿಸಿ; ನಮ್ಮ ಸೀತಾ ರಾಮು ಪಕ್ಕದಲ್ಲಿ ಕುಳಿತುಕೊಳ್ಳಲಿ. ಸಾಮ್ಯ ಹೇಗಿದೆಯೋ ನೋಡೋಣ ಎಂದು ಹೇಳಿದರು. ನಾವೂ ಹಾಗೆಯೇ ಮಾಡಿದೆವು. ಜ್ಞಾಪಕವಿ ದೆಯೇ ಸೀತಾರಾಮು?'

'ಇದೆ – ಚೆನ್ನಾಗಿ ಜ್ಞಾಪಕವಿದೆ!'

ಕೃಷ್ಣರಾಯರು, 'ಆ ದಿನವೇ ನಾನೂ ಶ್ರೀನಿವಾಸರಾವೂ ನಿಮ್ಮಿಬ್ಬರ ಮದುವೆಯನ್ನು ನಿಷ್ಕರ್ಷಿಸಿಬಿಟ್ಟೆವು. ಅದರಂತೆಯೇ

ನೀವು ಬೆಳಿದಮೇಲೆ ಮದುವೆಯನ್ನು ನಾವು ಮಾಡಿದೆವು' ಎಂದು ಹೇಳಿದರು.

ಸೀತಾರಾಮುವಿಗೆ ಆ ಹಳೆಯ ಕಥೆಯೆಲ್ಲ ಜ್ಞಾಪಕಕ್ಕೆ ಬಂತು. ಜತೆಯಲ್ಲಿಯೇ ತನ್ನ ತಾಯಿಗೂ ತಂದೆಗೂ ನಡೆದ ವ್ಯಾಜ್ಯವೂ ಜ್ಞಾಪಕಕ್ಕೆ ಬಂತು.

'ಈಗ ಹೇಳಪ್ಪ! ಎರಡು ದಿನ ರಜ ತೆಗೆದುಕೊಂಡು ನೀನೂ ನಿನ್ನ ತಾಯಿಯೂ ಬರುವ ವಿಚಾರ ಹೇಳಪ್ಪ. ಇನ್ನೂ ನಿನಗೆ ಸರೋಜಳ ಮೇಲೆ ಕೋಪ ಇದೆಯೆ?' ಎಂದು ತುಳಸಾಬಾಯಿ ಕೇಳಿದಳು.

'ಅವಳಮೇಲೆ ಕೋಪ ಇಲ್ಲ. ಪಾಪ! ಅವಳೇನು ಮಾಡಿದಳು? ಅವಿವೇಕ ಮಾಡಿದವನು ನಾನು!'

'ನೀನೇನೂ ಅವಿವೇಕ ಮಾಡಲಿಲ್ಲಪ್ಪ ಸೀತಾರಾಮು! ನೀನು ಜಾಣನೇ! ಒಳ್ಳೆಯ ಶಾಂತಿ, ನಿಧಾನ, ಅಪರಂಜಿಯಂಥ ಅಳಿಯ! ಎಂದು ನಾನೇ ಎಷ್ಟೋ ಸಲ ಇವರ ಸಂಗಡ ಹೇಳಿದ್ದೇನೆ. ಕೇಳಿ ನೋಡು. ನನ್ನ ಮೇಲೆ ನಿನಗೆ ಕೋಪ ಇದೆಯೇ ಸೀತಾರಾಮು?'

'ನಿಮ್ಮಮೇಲೆ ಏಕೆ ಕೋಪಮಾಡಿಕೊಳ್ಳಲಿ? ಆ ದಿನ ನಾನು ಗಂಭೀರವಾಗಿ ನಡೆದುಕೊಂಡಿದ್ದಿದ್ದರೆ ಯಾವ ದುರಂತವೂ ನಡೆಯುತ್ತಿರಲಿಲ್ಲವಲ್ಲ.'

'ಈಗ ಆ ಘಟನೆಗಳನ್ನೆಲ್ಲ ನೆನಸಿಕೊಳ್ಳಬೇಡ ಸೀತಾರಾಮು!' ಎಂದು ಕೃಷ್ಣರಾಯರು ಹೇಳಿದರು.

'ಅಪ್ಪ ಸೀತಾರಾಮು! ಈಗ ನಾಗರಾಜ ಮೊದಲಿನ ನಾಗರಾಜ ಅಲ್ಲ.'

'ಹೌದು ನನಗೆ ತಿಳಿದಿದೆ. ಈಗ ಅವನು ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ್! ಗೆಜೆಟ್ಟಿನಲ್ಲಿಯೂ ಪತ್ರಿಕೆಗಳಲ್ಲಿಯೂ ಬಂದಿತ್ತು.'

'ಆ ಮಾತಲ್ಲಪ್ಪ! ಈಗ ಅವನು ಮೊದಲಿನಂತೆ ಇಲ್ಲ. ಅವನಿಗೆ ಪ್ರೊಬೇಷನರ್ ಕೆಲಸ ಆದರೂ ಸಂತೋಷವೇ ಇಲ್ಲ. ಮೊದಲಿನ ಜಂಬ ಎಳ್ಳಷ್ಟೂ ಇಲ್ಲ. ನೀವು ತುಮಕೂರಿಗೆ ಹೋಗಬೇಡಿ, ನಾನು ತುಮಕೂರಿಗೆ ಹೋಗಿ ಭಾವನ ಕಾಲಿಗೆ ಬಿದ್ದು ಕ್ಷಮಾಪಣೆ ಕೇಳಿ ಕರೆದು

ಕೊಂಡು ಬರುತ್ತೇನೆ—ಎಂದು ಹಟ ಮಾಡಿದನಪ್ಪ! ನಾವೇ—ಬೇಡಪ್ಪ ನಾಗರಾಜ! ನಿನ್ನ ಭಾವ ನಿನ್ನನ್ನು ಕ್ಷಮಿಸಿದ್ದಾನೆ. ಈಗ ನಾವು ದೊಡ್ಡವರು ಹೋಗಿ ಬೀಗಿತ್ತಿಯನ್ನು ಸಮಾಧಾನಪಡಿಸಿ ಕರೆದುಕೊಂಡು ಬರಬೇಕು. ಅದು ನಿನ್ನ ಕೈಯಲ್ಲಾಗದ ಕೆಲಸ—ಎಂದು ಹೇಳಿ ತಡೆದೆವು. ಏನಪ್ಪ! ಈಗ ನೀನು ಏನು ಹೇಳುತ್ತೀಯೆ? ಎರಡು ಸಂಸಾರಗಳ ಸುಖ ಸಂತೋಷ ಎಲ್ಲ ನಿನ್ನ ಕೈಯಲ್ಲಿದೆ' ಎಂದು ಅತ್ತೆ ಅಳಿಯನ ಕೈಹಿಡಿದುಕೊಂಡು ಕೇಳಿದಳು.

'ನನ್ನ ತಾಯಿಯನ್ನು ಕೇಳಿ ನೋಡಿ. ಆಕೆ ಶಿವಮೊಗ್ಗಕ್ಕೆ ಹೊರಡುವ ಮನಸ್ಸು ಮಾಡಿದರೆ ನೀವು ಬಂದ ಕೆಲಸ ನೆರವೇರುತ್ತದೆ.'

'ಆಕೆ ಬರುವುದಕ್ಕಾಗುವುದಿಲ್ಲ ಎಂದರೆ ನೀನಾದರೂ ಹೊರಟು ಬರುತ್ತೀಯೇನಪ್ಪ?' ಎಂದು ಅತ್ತೆ ಕೇಳಿದಳು.

'ಈಗಲೇ ನಾನು ಹೇಳಲಾರೆ.'

'ನೀನೇನೋ ಒಳ್ಳೆಯ ಹುಡುಗನೇ! ನೀನೇನು ಮಾಡುವ ಹಾಗಿದ್ದೀಯೆ ಪಾಪ? ನಿನ್ನ ತಾಯಿ—ಅವಳನ್ನ ನಾನು ಎಷ್ಟೋ ವರ್ಷಗಳಿಂದ ಬಲ್ಲೆ—ನಿನ್ನನ್ನು ಬಿಗಿಹಿಡಿದು ಕೂಡಿಸಿದ್ದಾಳೆ. ಇಲ್ಲದಿದ್ದರೆ ನೀನು ಎಂದೋ ನಿನ್ನ ಹೆಂಡತಿಯನ್ನ ಮಗನ್ನ ನೋಡುವುದಕ್ಕೆ ಬರುತ್ತಿದ್ದೆ.'

ಕೃಷ್ಣರಾಯರು ಅಸಮಾಧಾನ ದೃಷ್ಟಿಯಿಂದ ತುಳಸಾಬಾಯಿಯನ್ನು ನೋಡಿದರು. ಆದರೆ ಆಕೆಗೆ ತನ್ನ ಅಭಿಪ್ರಾಯವನ್ನು ಹೇಳಲೇಬೇಕೆಂದು ಸ್ಫೂರ್ತಿಯುಂಟಾಯಿತು. 'ಅಪ್ಪ ಸೀತಾರಾಮು! ನೀನು ಸಾವಿರ ಹೇಳು—ನಿನ್ನ ತಾಯಿ ಹಟಮಾರಿಯೇ! ಏನು ಮಾಡುವುದು? ನಿನ್ನಂಥ ಸಾಧುವಿಗೆ ಅಂಥ ಹಟಮಾರಿ ತಾಯಿ ದೊರೆತಿದ್ದಾಳೆ!' ಎಂದು ಹೇಳಿಯೇಬಿಟ್ಟಳು.

'ಏನು ಮಾಡುವುದು ಹೇಳಿ? ಹಟಮಾರಿ ತಾಯಿ ಎಂದು ಮಗ ತೊರೆದುಬಿಡುವುದಕ್ಕಾಗುತ್ತದೆಯೇ? ಆಕೆಯೂ ಬಹಳ ಕಷ್ಟವನ್ನು ಅನುಭವಿಸಿದ್ದಾಳೆ.'

'ಸೀತಾರಾಮು! ನಿನ್ನತ್ತೆಯ ಮಾತನ್ನು ಗಣನೆಗೆ ತೆಗೆದುಕೊಳ್ಳ

ಬೇಡ. ಮಗ ತಾಯಿಯನ್ನು ಆದರಿಸಬೇಕಾದ್ದೇ ಧರ್ಮ. ನಾವು ನಿನ್ನ ತಾಯಿಯ ಇಷ್ಟಕ್ಕೆ ವಿರೋಧವಾಗಿ ಏನನ್ನೂ ಮಾಡಬಾರದು. ನೀನೂ ಆಲೋಚನೆ ಮಾಡಿ ನಿನ್ನ ತಾಯಿಯನ್ನು ಹೇಗೆ ಸಮಾಧಾನ ಪಡಿಸಬಹುದೋ ಹೇಗೆ ಸಂತೋಷಪಡಿಸಬಹುದೋ ಅದನ್ನು ನಮಗೆ ತಿಳಿಸಿದರೆ ನಾವು ಹಾಗೆ ಮಾಡುತ್ತೇವೆ' ಎಂದು ಕೃಷ್ಣರಾಯರು ಹೇಳಿದರು.

'ನನ್ನ ವಿಚಾರ ತಿಳಿಸುತ್ತೇನೆ, ನನ್ನ ತಾಯಿಯ ವಿಚಾರವನ್ನೂ ತಿಳಿಸುತ್ತೇನೆ. ನಾನೂ ಬಹಳವಾಗಿ ಆಲೋಚನೆ ಮಾಡಿದ್ದೇನೆ. ಹಗಲಿರುಳೂ ನನ್ನ ತಾಯಿಯೊಡನೆ ವ್ಯವಹರಿಸುತ್ತಿರುವ ನನಗೆ ಆಕೆಯ ಸ್ವಭಾವ ತಿಳಿದಿರುವಂತೆ ನನ್ನ ಅತ್ತೆಯವರಿಗಾಗಲಿ ನಿಮಗಾಗಲಿ ತಿಳಿದಿರ ಲಾರದು. ತಿಳಿಯುವುದಕ್ಕೆ ಕಾರಣವೂ ಇಲ್ಲ. ನೀವು ಆಕೆಗೆ ಮರ್ಯಾದೆಯ ಮನುಷ್ಯರು. ನಾನು ಹೊಟ್ಟೆಯಲ್ಲಿ ಹುಟ್ಟಿದ ಮಗ. ಆಕೆಯ ಕೋಪ, ಹಟ, ಪ್ರೇಮ, ಯೋಚನೆಗಳು—ಎಲ್ಲವನ್ನೂ ನಾನು ನೋಡಿದ್ದೇನೆ, ಪರೀಕ್ಷಿಸಿದ್ದೇನೆ. ಮುಖ್ಯವಾಗಿ ಏನು? ಆಕೆ ನನ್ನ ತಾಯಿ! ನನ್ನ ಏಳಿಗೆಯಲ್ಲಿ ನನ್ನ ಸುಖ ಸಂತೋಷಗಳಲ್ಲಿ ಆಕೆಯೂ ಸಹಜವಾಗಿ ಸಂತೋಷಪಡತಕ್ಕವಳು.'

'ಅದಕ್ಕಿಂತ ಮುಖ್ಯವಾದ ಮಾತು ಇನ್ನೊಂದಿದೆ. ನನ್ನ ತಂದೆ ತೀರಿಕೊಂಡರು. ಅದು ನಮ್ಮ ಸಂಸಾರಕ್ಕೆ ದೊಡ್ಡ ನಷ್ಟ, ದೊಡ್ಡ ಸಂಕಟ. ಅವರ ಸಾವಿಗೆ ಮೊದಲು ಇತರರು ಸಾಯುವುದನ್ನು ನಾನು ನೋಡಿದ್ದೆ, ಇತರ ಸಂಸಾರಗಳ ಕಷ್ಟವನ್ನೂ ಏನೋ ಊಹಿಸಿಕೊಳ್ಳು ತ್ತಿದ್ದೆ. ಆದರೆ ಈಗ ಅವುಗಳ ಪ್ರತ್ಯಕ್ಷಾನುಭವ ಆಯಿತು. ನನಗೆ ಈ ಲೋಕವೇ ಬೇರೆಯಾಗಿ ಕಾಣುತ್ತಾ ಇದೆ. ಒಬ್ಬ ಯಜಮಾನ ಕಣ್ಮುಚ್ಚಿ ಕೊಂಡರೆ, ಒಂದು ದೊಡ್ಡ ಜೀವ ಹೋಗಿಬಿಟ್ಟರೆ ಆಗುವ ಅಲ್ಲಕಲ್ಲೋಲ ಹೇಳುವಹಾಗಿಲ್ಲ. ನನ್ನ ತಾಯಿಯ ಆ ದಿನಗಳ ಸಂಕಟವನ್ನೂ ಅವಸ್ಥೆ ಯನ್ನೂ ನೆನಸಿಕೊಂಡುಬಿಟ್ಟರೆ ನನಗೆ ಬುದ್ಧಿ ವಿಕಲ್ಪವಾಗಿ ಹೋಗು ತ್ತದೆ. ಆ ದೊಡ್ಡ ಮುತ್ತೈದೆಗೆ ಈಗ ಈ ಅಮಂಗಳ ವೇಷ ಬಂತು. ನಾವು ಮಕ್ಕಳು ಏನು ಪಾಪ ಮಾಡಿದ್ದೆವೋ? ಆಕೆ ಹಟಮಾರಿಯೇ!

ಇರಲಿ, ಆದರೆ ನನ್ನ ತಾಯಿ! ಆಕೆಗೆ ಹಾಗೆಯೇ ಆಗಬೇಕಾಗಿತ್ತು ಎಂದು ಈ ಮನಸ್ಸು ಹೇಳುತ್ತದೆಯೆ? ಆ ನೊಂದ ಮನಸ್ಸನ್ನು ಮತ್ತಷ್ಟು ನೋಯಿಸುವುದಕ್ಕೆ ನಾನು ಪ್ರಯತ್ನಿಸಬಹುದೇ?'

'ಈಗ ಮನೆಯ ಜವಾಬ್ದಾರಿಯೆಲ್ಲ ನನ್ನ ತಲೆಯಮೇಲೆ ಬಿದ್ದಿದೆ. ಓದುವ ಹುಡುಗರು, ಮದುವೆಯಾಗಬೇಕಾದ ಹುಡುಗಿಯರು—ಎಲ್ಲರೂ ಇದ್ದಾರೆ. ನನ್ನ ತಂದೆ ಸಾಯುವುದಕ್ಕೆ ಎರಡು ದಿನಗಳ ಮೊದಲು:— ಅವರಿಗೆ ಹೇಗೋ ತಾವು ಬದುಕುವುದಿಲ್ಲ ಎಂದು ತಿಳಿದ ಮೇಲೆ—ಪಕ್ಕದಲ್ಲಿ ಉಪಚಾರ ಮಾಡುತ್ತ ಕುಳಿತಿದ್ದ ನನ್ನ ಕೈ ಎಳೆದುಕೊಂಡರು. ನನ್ನ ಈ ಬಲಹಸ್ತವನ್ನು ತಮ್ಮ ಬಲಹಸ್ತದಲ್ಲಿಟ್ಟುಕೊಂಡರು. ಸೀತಾರಾಮು! ನಾನು ಇನ್ನು ನಾಲ್ಕು ವರ್ಷ ಬದುಕಿದರೆ ನಿಮಗೆ ಕಷ್ಟ ಇರುವುದಿಲ್ಲ. ಆದರೆ ನಾನು ಈ ರೋಗದಿಂದ ಮುಕ್ತನಾಗುವ ಹಾಗೆ ಕಾಣಿಸುವುದಿಲ್ಲ. ನೀನು ಹಿರಿಯ ಮಗ. ಎಲ್ಲ ಜವಾಬ್ದಾರಿಯನ್ನೂ ನಿನ್ನ ತಲೆಯಮೇಲೆ ಹಾಕಿ ನಾನು ಕಣ್ಮುಚ್ಚಿಕೊಳ್ಳುತ್ತಿದೇನೆ. ನೀನು ಈಗೀಗ ಎರಡು ಕಾಸು ಸಂಪಾದಿಸುತ್ತಿದ್ದೀಯೆ; ಇನ್ನೂ ವಯಸ್ಸು ಸಣ್ಣದು, ಅನುಭವ ಬರಬೇಕಾಗಿದೆ. ನೋಡಪ್ಪ! ಹುಡುಗರ ಕೈಬಿಡಬೇಡ; ತಂಗಿಯರ ಮದುವೆ ಬೇರೆ ಆಗಬೇಕಾಗಿದೆ. ಎಲ್ಲಕ್ಕೂ ನಿನ್ನನ್ನು ಸಿಕ್ಕಿಸಿ ನಾನು ಹೋಗುತ್ತಿದ್ದೇನಲ್ಲ—ಎಂದು ಕಣ್ಣೀರು ಸುರಿಸಿದರು. ನಾನು,—ನೀನು ಹೇಳಿದಂತೆ ಮಾಡುತ್ತೇನೆ. ನೀನು ಕೊರಗು ಹತ್ತಿಸಿಕೊಳ್ಳಬೇಡ; ಇಷ್ಟಾಗಿ ನೀನು ಬದುಕಿಕೊಳ್ಳುವಂತೆ ದೇವರು ಕರುಣಿಸಲಿ; ನಾವು ತಬ್ಬಲಿಗಳಾಗದಂತೆ ಕಾಪಾಡಲಿ ಎಂದು ಹೇಳಿದೆ. ನಿನಗೆ ಇನ್ನೊಂದು ಮಾತು ಹೇಳುತ್ತೇನೆ ಸೀತಾರಾಮು! ಎಂದು ನನ್ನ ತಂದೆ ಅತ್ತ ಇತ್ತ ನೋಡಿದರು. ಅಲ್ಲಿ ನನ್ನ ತಾಯಿ ಇರಲಿಲ್ಲ. ಕಾಫಿ ಕಾಯಿಸಿ ತರಬೇಕು ಎಂದೋ ಏನೋ ಅಡಿಗೆಯ ಮನೆಗೆ ಹೋಗಿದ್ದಳು. ಆಗ ನನ್ನ ತಂದೆ,—ನಿನ್ನ ತಾಯಿ ಒಂದು ತರಹ ಸ್ವಭಾವದವಳು. ಅವಳ ಇಷ್ಟಗಳನ್ನು ನಾನು ನೆರವೇರಿಸಲಿಲ್ಲ ಎಂದು ಆಕೆಗೆ ನನ್ನಮೇಲೆ ಅಸಮಾಧಾನ. ಸ್ವಲ್ಪ ಕಠಿನವಾಗಿ ಆಡುತ್ತಾಳೆ, ಹಟವನ್ನು ಮಾಡುತ್ತಾಳೆ. ಹಾಗೆ ಎಂದುಬಿಟ್ಟು ನೀನು ಅವಳನ್ನು ಕೈಬಿಡಬೇಡ. ಗಂಡ ಎಂಬುವ

ವಸ್ತು ಇರುವಾಗ ಹೆಂಗಸಾದವಳು ಹುಚ್ಚು ಹುಚ್ಚಾಗಿ ಹಾರಾಡುತ್ತಾಳೆ. ಆಮೇಲೆ ರೆಕ್ಕೆ ಮುರಿದಹೋದ ಪಕ್ಷಿ! ನಿನ್ನ ತಾಯಿಯನ್ನು ಆದರಿಸುವ ದೊಡ್ಡ ಜವಾಬ್ದಾರಿ ನಿನ್ನ ತಲೆಯಮೇಲೆ ಬಿದ್ದಿದೆಯಪ್ಪ!—ಎಂದು ಹೇಳಿದರು. ಆಮೇಲೆ ಅವರು ಕಣ್ಣುಮುಚ್ಚಿದರು. ಪ್ರಜ್ಞೆ ಹೋಗಿಬಿಟ್ಟಿತು. ಕಡೆಯವರೆಗೂ ಪ್ರಜ್ಞೆಯೇ ಬರಲಿಲ್ಲ.'

'ಹೌದಪ್ಪ ಸೀತಾರಾಮು! ನಿನ್ನ ತಾಯಿ ಒಪ್ಪುವುದಿಲ್ಲ ಎಂದು ನಿನ್ನ ಹೆಂಡತಿಯನ್ನೇ ತೊರೆದುಬಿಡುತ್ತೀಯಾ?' ಎಂದು ತುಳಸಾಬಾಯಿ ಕೇಳಿಬಿಟ್ಟಳು.

'ನೀನು ಹಾಗೆಲ್ಲ ಕೇಳಬಾರದು. ಸುಮ್ಮನಿರು! ಸೀತಾರಾಮು ನಡೆದ ವಿಷಯ ತಿಳಿಸಿದ್ದಾನೆ. ತನ್ನ ಜವಾಬ್ದಾರಿಯನ್ನೂ ತಿಳಿಸಿದ್ದಾನೆ. ಅವನಿಗೇನು ಸುಖವೇ? ಸಂತೋಷವೇ? ತಾಯಿಯನ್ನು ಒಪ್ಪಿಸಿ ಎಂದು ಹೇಳುತ್ತಿದ್ದಾನೆ' ಎಂದು ಕೃಷ್ಣರಾಯರು ಹೆಂಡತಿಗೆ ಬುದ್ಧಿ ಹೇಳಿದರು.

'ತಾಯಿಗೆ ಮಾಡುವುದನ್ನು ಅವಳಿಗೆ ಬೇಕಾದ ಹಾಗೆ ಮಾಡಲಿ. ನಾನೇನೂ ಬೇಡ ಎನ್ನುವುದಿಲ್ಲ. ನಾನೇಕೆ ಬೇಡ ಎನ್ನಲಿ? ತಾಯಿಯ ಮಾತೇ ಪ್ರಧಾನವಾದರೆ ಕೈಹಿಡಿದ ಹೆಂಡತಿ ಏನಾಗಬೇಕು? ಇದೂ ಜವಾಬ್ದಾರಿ ಅಲ್ಲವೇ? ಆ ತಾಯಿಗೆ ಬೇಕಾಗಿರುವುದು ಏನು? ಮಗನ ಸಂಪಾದನೆ! ಆ ಉಳಿದ ಮಕ್ಕಳಿಗೆ, ತನ್ನ ಪೋಷಣೆಗೆ ಜೀವನಾಂಶ. ಇವನ ಆ ಸಂಬಳವನ್ನೆಲ್ಲ ತಾಯಿಗೆ ಕೊಟ್ಟುಬಿಡಲಿ. ನಾನೇನೂ ಬೇಡವೆನ್ನುವುದಿಲ್ಲ. ಜತೆಗೆ ಇನ್ನೂ ಐವತ್ತು ರೂಪಾಯಿ ಕೊಡು ಎಂದರೂ ಕೊಟ್ಟುಬಿಡೋಣ. ಸದ್ಯ ಸರೋಜ ಸೀತಾರಾಮು ಒಂದು ಸಂಸಾರ ಎಂದು ನಡಸಲಿ. ಏನಪ್ಪ ಸೀತಾರಾಮು! ನಿನ್ನ ಮಾತೆಲ್ಲ ಏನು? ತಾಯಿ, ತಮ್ಮಂದಿರು, ತಂಗಿಯರು ಅವರ ರಕ್ಷಣೆಮಾಡಬೇಕು—ಎಂದು ತಾನೆ? ಮಾಡಪ್ಪಾ ಮಾಡು! ಸರೋಜಳನ್ನು ಇಟ್ಟುಕೊಂಡು ಬಾಳು! ನಾನು ಹೇಳುವುದು ಅಷ್ಟೇನಪ್ಪ!' ಎಂದು ತುಳಸಾಬಾಯಿ ಹೇಳಿದಳು.

'ಈಗಿರುವ ತೊಡಕು ಏನು ಎಂಬುದನ್ನು ತಿಳಿಸಲೇ?' ಎಂದು ಸೀತಾರಾಮು ಕೇಳಿದನು.

'ತಿಳಿಸಪ್ಪ' ಎಂದು ಕೃಷ್ಣರಾಯರು ಹೇಳಿದರು.

'ಬೀಗಿತ್ತಿಯರು ಒಂದಾದರೆ ನಾನೂ ಸರೋಜ ಒಂದಾದ ಹಾಗೆಯೆ. ಅದರ ಯೋಚನೆ ಯಾರಿಗೂ ಬೇಡ' ಎಂದು ಹೇಳಿ ಸೀತಾರಾಮು ಎದ್ದನು

'ಒಳ್ಳೆಯದಪ್ಪ, ಅರ್ಥವಾಯಿತು. ನಿನ್ನ ತಾಯಿಯನ್ನು ಕಾಣು ವುದಕ್ಕೆ ಯಾವಾಗ ಬರೋಣ? ಮಧ್ಯಾಹ್ನ ಮೂರು ಗಂಟೆಗೆ ಬರೋ ಣವೇ? ನೀನು ರಜ ತೆಗೆದುಕೊಂಡು ಮನೆಯಲ್ಲಿರಬೇಕು' ಎಂದು ಕೃಷ್ಣರಾಯರು ಹೇಳಿ ತಾವೂ ಎದ್ದರು.

'ಹಾಗೆಯೇ ಆಗಲಿ. ನೀವು ಬಂದಿರುವ ಸಮಾಚಾರವನ್ನು ನನ್ನ ತಾಯಿಗೆ ತಿಳಿಸಲೇ ಬೇಡವೇ?'

ಇದೊಂದು ಪೀಕಲಾಟದ ಪ್ರಶ್ನೆ ಎದುರಿಗೆ ಬಂತು. ತಿಳಿಸಿದರೂ ಕಷ್ಟ, ತಿಳಿಸದೇ ಇದ್ದರೂ ಕಷ್ಟ. ತಿಳಿಸಿದರೆ, 'ಬಂದವರು ನಮ್ಮ ಮನೆಗೆ ಬಾರದೆ ಬೇರೆಯವರ ಮನೆಗೆ ಹೋಗಿ ಇಳಿದುಕೊಂಡರು. ಅಳಿಯ ನನ್ನು ಅಲ್ಲಿಗೇ ಕರಸಿಕೊಂಡು ಸರಿಮಾಡಿಕೊಂಡರು. ನಾವೇನು ಲಕ್ಷ್ಯವೇ? ನಾವು ಬಡವರು. ನಮ್ಮ ಮನೆಗೆ ಅವರೇಕೆ ಬರುತ್ತಾರೆ?' ಎಂದು ಮುಂತಾಗಿ ಟೀಕೆಗಳು ಹೊರಡುತ್ತವೆ. ತಿಳಿಸದೆ ಹಾಗೆಯೇ ಹೋದರೆ, 'ಯಾವಾಗ ಬಂದಿರಿ? ಈಗ ರೈಲು ಯಾವುದೂ ಇಲ್ಲ ವಲ್ಲ. ಬಂದು ಎಲ್ಲಿ ಇಳಿದುಕೊಂಡಿದ್ದಿರಿ?' ಎಂದು ಮುಂತಾಗಿ ಕೇಳಿಯೇ ಕೇಳುತ್ತಾಳೆ. ಜವಾಬು ಹೇಳುವುದು ಕಷ್ಟ. ಏನೋ ಬುದ್ಧಿ ವಂತಿಕೆ ಮಾಡುವುದಕ್ಕೆ ಹೋಗಿ ಪೇಚಾಟಕ್ಕೆ ಸಿಕ್ಕಿಕೊಂಡೆವಲ್ಲ ಎಂದು ಕೃಷ್ಣರಾಯರು ಆಲೋಚಿಸುತ್ತ ನಿಂತರು.

'ನಿನಗೆ ಹೇಗೆ ತೋರುತ್ತದೆ ಸೀತಾರಾಮು? ತಿಳಿಸಬೇಕೇ ಬೇಡವೇ? ನೀನೇ ಹೇಳು' ಎಂದು ಅವರು ಕೇಳಿದರು.

'ತಿಳಿಸಿಬಿಡುವುದು ಒಳ್ಳೆಯದು.'

'ಹಾಗಾದರೆ ತಿಳಿಸಿಬಿಡು. ಮಧ್ಯಾಹ್ನ ಮೂರು ಗಂಟೆಗೆ ಬರು ತ್ತೇವೆ. ನೀನು ಮನೆಯಲ್ಲಿರು. ಈ ಮಧ್ಯದಲ್ಲಿ ನಿನ್ನ ತಾಯಿಗೆ ಏನು ಹೇಳಬೇಕೋ ಹೇಗೆ ಹೇಳಬೇಕೋ ಹೇಳಿ ಆಕೆಯನ್ನು ಸುಮುಖವಾಗಿ

ಇಟ್ಟಿರು. ನಮ್ಮ ಜತೆಯಲ್ಲಿ ನೀನೂ ಸಹಕರಿಸಬೇಕಪ್ಪ!' ಎಂದು ಕೃಷ್ಣರಾಯರು ಅಳಿಯನ ಬೆನ್ನುಮೇಲೆ ಕೈ ಹಾಕಿಕೊಂಡು ಸ್ವಲ್ಪ ದೂರ ಜತೆಯಲ್ಲಿ ಹೊರಟರು.

'ಸರಿ. ಹೊರಡುತ್ತೇನೆ.'

ಎಂದು ಹೇಳಿ ಸೀತಾರಾಮುರಾಯನು ಕೆಳಕ್ಕಿಳಿದುಹೋದನು. ಸಾಹೇಬರನ್ನು ಕಂಡು ಆ ದಿನದ ಮಟ್ಟಿಗೆ ರಜವನ್ನು ತೆಗೆದುಕೊಂಡು ಮನೆಗೆ ಹೊರಟು ಹೋದನು.

ಸೀತಾರಾಮು ಹೊರಟು ಹೋದಮೇಲೆ ಕೃಷ್ಣರಾಯರು ತಮ್ಮ ಹೆಂಡತಿಯನ್ನು ಆಕ್ಷೇಪಿಸತೊಡಗಿದರು.

'ನೀನು ಮೊದಲೆಲ್ಲ ಸರಿಯಾಗಿಯೇ ಮಾತನಾಡಿದೆ, ಕಡೆಯಲ್ಲಿ ಹದವನ್ನು ಕೆಡಿಸಿದೆ. ಅವನೆದುರಿಗೆ ಅವನ ತಾಯಿಯನ್ನು ನಿಂದಿಸಿದರೆ ಅವನು ತಾಯಿಯನ್ನು ಬಿಟ್ಟುಕೊಡುತ್ತಾನೆಯೆ? ಅವನ ಮನಸ್ಸಿಗೂ ಕಿರುಕುಳ. ನೀನು ಆ ಮಾತುಗಳನ್ನೆಲ್ಲ ಆಡದೆ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ಹುಡುಗ ಯೋಗ್ಯ, ನಿಧಾನಿ. ಅವನು ನಿನಗೆ ಸರಿಯಾಗಿಯೇ ಉತ್ತರಕೊಟ್ಟ' ಎಂದರು.

'ನಿಮಗೆ ಗೊತ್ತಿಲ್ಲ, ಸುಮ್ಮನಿರಿ! ನೀವು ಗಂಡಸರು. ನಿಮಗೆ ಯಾವಾಗ ಹೇಗೆ ಮಾತು ತಿರುಗಿಸಬೇಕೆಂಬುದೇ ಗೊತ್ತಿಲ್ಲ. ಅವನಪ್ಪ ಸತ್ತದ್ದು, ಜವಾಬ್ದಾರಿ ಹೊರಿಸಿದ್ದು – ಈ ಪುರಟ ಪುರಾಣ ಎಲ್ಲ ಯಾರಿಗೆ ಬೇಕು? ಅವನ ತಾಯಿ ದೊಡ್ಡ ಲಂಕಿಣಿ! ನಿಮಗೇನು ಗೊತ್ತು? ಮಗನ್ನ ಹಿಡಿದು ನಿಲ್ಲಿಸಿದ್ದಾಳೆ. ನಾವು ಸಮಯ ನೋಡಿಕೊಂಡು ಆ ಹಿಡಿತದಿಂದ ಅವನನ್ನ ಬಿಡಿಸಬೇಕು. ಅವನು ನಮ್ಮ ಕಡೆಗೆ ತಿರುಗಿ ಬಿಟ್ಟರೆ ಅವಳದೇನು ಪಾರುಪತ್ಯ ನಡೆಯುತ್ತದೆ? ಆ ಬಂಧನ ಮುರಿದು ಬಿಡಬೇಕು! ನಾನು ಆಡಿದ್ದೇ ಸರಿ. ಅವನಿಗೂ ತನ್ನ ತಾಯಿ ಹಟಮಾರಿ, ಕೆಟ್ಟವಳು ಎಂದು ತಿಳಿದಿದೆಯಲ್ಲ. ಅವನೂ ಅದರ ಫಲ ಅನುಭವಿಸುತ್ತಿದ್ದಾನಲ್ಲ. ಹೆಂಡತಿಯನ್ನು ತೊರೆಯಬಾರದಪ್ಪ, ನಿನ್ನ ತಾಯಿಗೆ ಬೇಕಾದ ದುಡ್ಡುಕೊಡು, ಬೇಕಾದ ಬಟ್ಟೆತೆಗೆದುಕೊಡು, ಬೇಕಾದ ಸೇವೆ ಮಾಡು. ಆದರೆ ಅವಳ ಮಾತು ಕೇಳಿಕೊಂಡು ಹೆಂಡತಿ

ಯನ್ನು ಅಟ್ಟಬಿಡಬಾರದು-ಎಂದು ನಾನು ಹೇಳಿದ್ದರಲ್ಲಿ ತಪ್ಪೇನು? ಅವನನ್ನು ನಾನೇ ನಯವಾಗಿ ದಾರಿಗೆ ತಂದುಕೊಂಡು, ಸಮಯ ನೋಡಿ ಆ ಮಾತನ್ನಾಡಿದೆ. ಆವನಿಗೂ ಆದು ಹಿಡಿಸಿತು. ಅವನು ನಮ್ಮ ಕಡೆಗೆ ತಿರುಗಿ ಬಿಟ್ಟರೆ-ತಾಯಿಗೆ ತಿಳಿಸೋ ತಿಳಿಸದೆಯೋ ಶಿವಮೊಗ್ಗಕ್ಕೆ ಬರುತ್ತಾನೆ, ಹೆಂಡತಿಯನ್ನು ಆದರಿಸುತ್ತಾನೆ, ಮುಂದೆಯೂ ನಮ್ಮ ಮಾತಿನಂತೆ ಇರುತ್ತಾನೆ. ಅವನ ತಮ್ಮಂದಿರಿಗೇನು? ಎಲ್ಲ ದಾಯಾದಿಗಳು! ರೆಕ್ಕೆ ಬಲಿಯೋವರೆಗೆ ಅವನ ಆಶ್ರಯ. ಅವನನ್ನ ಸಾಲಕ್ಕೆ ಗುರಿಮಾಡಿ ಆ ಮೇಲೆ ತಂತಮ್ಮ ಹೆಂಡತಿಯರ ಸೆರಗು ಹಿಡಿದುಕೊಂಡು ಹಿಂದೆ ನಡೆಯುತ್ತಾರೆ; ತಂಗಿಯರು ಗಂಡಂದಿರ ಮನೆಗಳಿಗೆ ಹೊರಟು ಹೋಗುತ್ತಾರೆ. ಕೆಡುವವರು ಯಾರು? ಸೀತಾರಾಮು ಸರೋಜ! ಅವನಿಗೆ ಸಮಯ ನೋಡಿ ವಿವೇಕ ಹೇಳಬೇಕು. ಆ ತಾಯೀನೇ ಅವನಿಗೆ ಶತ್ರು, ಆ ತಾಯೀನೇ ಅವನಿಗೆ ಮೃತ್ಯು ಎಂದು ಅವನಿಗೆ ತಿಳಿಸಬೇಕು. ಅವನು ಎರಡು ದಿನ ಶಿವಮೊಗ್ಗಕ್ಕೆ ಬಂದರೆ ನಾನು ಎಲ್ಲ ಸರಿ ಮಾಡಿಯೇನು!'

ಕೃಷ್ಣರಾಯರಿಗೆ ತಮ್ಮ ಅನುಭವ ಜ್ಞಾಪಕಕ್ಕೆ ಬಂದು ಅವರು ಸುಮ್ಮನಾದರು.

## ೧೧. ಬೀಗಿತ್ತಿಯರು

ಸೀತಾರಾಮರಾಯನು ತನ್ನ ಮನೆಗೆ ಬಂದಮೇಲೆ ಊಟವಾಗುವ ವರೆಗೂ ತಾಯಿಗೆ ಯಾವ ಸಮಾಚಾರವನ್ನೂ ತಿಳಿಸಲಿಲ್ಲ. ಆಕೆ 'ಸಾಹೇಬರ ಹತ್ತಿರ ಏನು ನಡೆಯಿತಪ್ಪ?' ಎಂದು ಕೇಳಿದಳು. 'ಏನೂ ಇಲ್ಲಮ್ಮ. ಏನೋ ಕಚೇರಿಯ ಕೆಲಸ. ಅದನ್ನು ಫೈಸಲ್ ಮಾಡಿದ್ದಾಯಿತು' ಎಂದು ಉಪಾಯವಾಗಿ ಉತ್ತರ ಕೊಟ್ಟನು. ತಾನು ಆದಿನ ಕಚೇರಿಗೆ ರಜ ತೆಗೆದುಕೊಂಡಿರುವುದಾಗಿಯೂ ಹೇಳಿದನು. ತಾಯಿಯ ಊಟವಾದಮೇಲೆ, ಆಕೆ ಕೆಲಸಗಳನ್ನು ಮುಗಿಸಿಕೊಂಡು ಹಾಲಿಗೆ ಬಂದಾಗ, 'ನಿನಗೊಂದು ಸಮಾಚಾರ ತಿಳಿಸಬೇಕಮ್ಮ. ನಾನು ಊಟಕ್ಕೆ ಮೊದಲು ನಿನಗೆ ತಿಳಿಸಲಿಲ್ಲ. ಮೊದಲೇ ತಿಳಿಸಿದರೆ, ನೀನು ಎಲ್ಲಿ ಊಟ ಮಾಡುವುದಿಲ್ಲವೋ, ಮನಸ್ಸಿಗೆ ನೋವು ಮಾಡಿಕೊಳ್ಳುತ್ತೀಯೋ ಎಂದು ಯೋಚಿಸಿ ತಿಳಿಸಲಿಲ್ಲ. ಆ ಬಗ್ಗೆ ತಪ್ಪಾಯಿತು' ಎಂದು ಹೇಳಿದನು.

'ಏನಪ್ಪ ದೊಡ್ಡ ಪೀಠಿಕೆ ಹಾಕುತ್ತಿದ್ದೀಯಲ್ಲ! ನಿನ್ನ ಅತ್ತೆ ಮಾವ ತುಮಕೂರಿಗೆ ಬರುವುದಾಗಿ ಕಾಗದ ಬರೆದಿದ್ದಾರೆಯೆ?'

'ಕಾಗದ ಬರೆದಿಲ್ಲಮ್ಮ. ಅವರೇ ಬಂದುಬಿಟ್ಟಿದ್ದಾರೆ. ಬೆಳಗ್ಗೆ ರೈಲಿನಲ್ಲಿ ಬಂದರು.'

'ನೀನೆಲ್ಲಿ ನೋಡಿದೆಯಪ್ಪ ಅವರನ್ನ? ನಿನಗೆ ಹೇಗೆ ತಿಳಿಯಿತು?'

'ಸಾಹೇಬರ ಮನೆಯಲ್ಲಿ ಇಳಿದುಕೊಂಡಿದ್ದಾರಮ್ಮ. ಅವರವರು ಸ್ನೇಹಿತರೆಂದು ತಿಳಿದುಬಂತು. ಸಾಹೇಬರ ಹತ್ತಿರ ನನ್ನ ಕೆಲಸ ಆದ ಮೇಲೆ, ಸಾಹೇಬರು ನನಗೆ ಆ ಸಮಾಚಾರ ತಿಳಿಸಿದರು. ಮಧ್ಯಾಹ್ನ ಮೂರು ಗಂಟೆಗೆ ನಮ್ಮ ಮನೆಗೆ ಬರುತ್ತಾರೆ.'

'ನೀನೇನಾದರೂ ಕಂಡು ಮಾತನಾಡಿದೆಯೇನಪ್ಪ?'

'ಅವರು ಬಂದದ್ದು ನನಗೆ ಮೊದಲು ಗೊತ್ತಿರಲಿಲ್ಲ. ಸಾಹೇಬರ ಮೂಲಕ ಕರಸಿದರು. ಹೋಗಿ ಕಂಡೆ. ನಾನು ಮಾತನಾಡುವುದು ಏನಿದೆ? ಏನಿದ್ದರೂ ಮಾತನಾಡುವವಳು ನೀನು.'

'ಒಳ್ಳೆಯದಪ್ಪ! ರಾಮಣ್ಣನ ಮಧ್ಯಸ್ಥಿಕೆ, ಕಾಗದಪತ್ರಗಳ ಓಡಾಟ ನೋಡಿ ನಾನೂ ಊಹಿಸಿಕೊಂಡಿದ್ದೆ. ನಿನ್ನ ಹೆಂಡತಿ ಹೆತ್ತು ಆಯಿತು. ನಾಮಕರಣ ಅವರು ಮಾಡುವಹಾಗಿಲ್ಲ. ಅದಕ್ಕೆ ನಾವು ಹೋಗಬೇಕು. ಕೃಷ್ಣರಾಯರು ಬಂದಾರು ಎಂದು ನಾನು ನಿರೀಕ್ಷಿಸಿದ್ದೆ. ಜತೆಗೆ ಅವಳೂ ಬಂದಿದಾಳೆ! ಬಹುಶಃ ತನ್ನ ಮಗನಿಗೆ ಅಸಿಸ್ಟೆಂಟ್ ಕಮಿಷನರ್ ಕೆಲಸ ಆಯಿತು ಎಂದು ನನ್ನ ಮುಂದೆ ಜಂಬ ಹೇಳಿ ಕೊಳ್ಳುವುದಕ್ಕೆ ಹೊರಟು ಬಂದಿದ್ದಾಳೆಂದು ಕಾಣುತ್ತದೆ. ಬರಲಪ್ಪ! ನಾನೀಗ ಮೂಲೆ ಸೇರಿದವಳು!'

ಸೀತಾರಾಮುವಿಗೆ ತಾನು ಹೊತ್ತಿದ್ದ ಬೆಟ್ಟ ಇಳಿಸಿದಂತಾಯಿತು. ಕಾವೇರಮ್ಮ, 'ಸೀತಾರಾಮು! ಅವರು ನಮ್ಮ ಮನೆ ಮೆಟ್ಟಿಕೊಂಡು ಬರುತ್ತಾರೆ. ಕಾಫಿ ಉಪ್ಪಿಟ್ಟು—ಇಷ್ಟನ್ನಾದರೂ ಮಾಡಬೇಕು; ಮನೆ ಯಲ್ಲಿ ರವೆಯಿಲ್ಲ. ಹುಡುಗರು ಸ್ಕೂಲಿಗೆ ಹೊರಟು ಹೋಗಿದ್ದಾರೆ. ನೀನೇ ಅಂಗಡಿಗೆ ಹೋಗಬೇಕಲ್ಲಪ್ಪ—ಹೋಗುತ್ತೀಯಾ?' ಎಂದು ಕೇಳಿದಳು. ಸೀತಾರಾಮು ಸಂತೋಷದಿಂದ ಎದ್ದುಹೋಗಿ ರವೆಯನ್ನು ತಂದುಕೊಟ್ಟನು. ಮಧ್ಯಾಹ್ನ ಎರಡು ಗಂಟೆಯ ಮೇಲೆ ಕಾವೇರಮ್ಮ ಉಪ್ಪಿಟ್ಟು ಕಾಫಿ ಮಾಡಿದಳು.

ಮಧ್ಯಾಹ್ನ ಸುಮಾರು ಮೂರು ಗಂಟೆಗೆ ಮೋಟಾರಿನಲ್ಲಿ ಕೃಷ್ಣ ರಾಯರೂ ತುಳಸಾಬಾಯಿಯೂ ಬಂದರು. ಸೀತಾರಾಮು ಬೀದಿಯ ಬಾಗಿಲಲ್ಲಿ ನಿಂತು ಅವರನ್ನು ಎದುರುಗೊಂಡು, 'ಒಳಕ್ಕೆ ಬನ್ನಿ' ಎಂದು ಹೇಳಿ ಹಾಲಿಗೆ ಕರತಂದನು. ಅಲ್ಲಿ ಒಂದು ಜಮಖಾನ ಮತ್ತು ಒಂದು ಚಾಪೆ ಹಾಸಿತ್ತು. ಕಾವೇರಮ್ಮ ಹಾಲಿನಲ್ಲಿದ್ದು, 'ಬನ್ನಿ, ಕುಳಿತು ಕೊಳ್ಳಿ' ಎಂದು ಹೇಳಿದಳು. ಕೃಷ್ಣರಾಯರು ಜಮಖಾನದಮೇಲೆ ಕುಳಿತರು. ತುಳಸಾಬಾಯಿ ಒಳಗೆ ಅಡಿಗೆ ಮನೆಯವರೆಗೂ ಹೋಗಿ, ಬಗ್ಗಿ ನೋಡಿ, 'ಏನು ಕಾವೇರಮ್ಮ! ಏನೋ ಮಾಡಿ ಮುಚ್ಚಿಟ್ಟಿರುವ ಹಾಗೆ ಕಾಣುತ್ತದೆ. ಬೀಗರು ಬರುತ್ತಾರೆಂದು ಕಾಫಿ ತಿಂಡಿ ಮಾಡಿ ದ್ದೀರಾ?' ಎಂದು ಕೇಳಿದಳು.

'ಏನೋ ದೇವರು ಕೊಟ್ಟದ್ದು ಮಾಡಿಟ್ಟಿದ್ದೇನೆ.'

ತುಳಸಾಬಾಯಿ ಹಿತ್ತಲ ಕಡೆಗೂ ತಲೆಹಾಕಿ, 'ಏನು ತರಕಾರಿ ಸೊಪ್ಪು, ಏನೇನೋ ಬೆಳೆದಿದ್ದೀರಲ್ಲ? ಮಾರ್ಕೆಟ್ಟಿಗೆ ಹೋಗೋ ಕಷ್ಟ ತಪ್ಪಿತು, ಕೈಯ ಕಾಸೂ ಉಳಿಯಿತು. ನೀವು ಜಾಣರು ಕಾವೇರಮ್ಮ! ಸಂಸಾರ ನಡಸುವುದರಲ್ಲಿ ನೀವು ಯಾವಾಗಲೂ ಹಿಡಿತ. ಒಂದು ಅಕ್ಕಿಕಾಳು ಪೋಲುಮಾಡುವುದಿಲ್ಲ' ಎಂದಳು.

'ಹುಡುಗರು ಕೈತೋಟ ಮಾಡಿದ್ದಾರಮ್ಮ. ಅಡಿಗೆಗೆ ದಿನಾಗಲೂ ಏನಾದರೊಂದು ಹವಣಿಸಬೇಕಲ್ಲ. ಸೀತಾರಾಮುವಿಗೆ ಬರುವ ಸಂಬಳ ಹೆಚ್ಚೇನೂ ಅಲ್ಲ. ಹಿಡಿತದಿಂದ ಸಂಸಾರ ನಡಸದಿದ್ದರೆ ನಾಳೆ ಅವನು ಸಾಲಗಾರನಾಗುತ್ತಾನಲ್ಲ.'

ಹೀಗೆ ಮಾತುಗಳನ್ನಾಡುತ್ತ ಬೀಗಿತ್ತಿಯರಿಬ್ಬರೂ ಹಾಲಿಗೆ ಬಂದರು. ಕೃಷ್ಣರಾಯರು, 'ಏನಮ್ಮ ಆರೋಗ್ಯವಾಗಿದ್ದೀರಾ? ಮಕ್ಕಳು ಆರೋಗ್ಯವಾಗಿದ್ದಾರೆಯೆ?' ಎಂದು ಕೇಳಿದರು.

'ಏನೋ ಇದ್ದೇನಪ್ಪ. ಆರೋಗ್ಯ ಒಂದು ದಿನ ಇದ್ದಹಾಗೆ ಮತ್ತೊಂದು ದಿನ ಇರುವುದಿಲ್ಲ ಮಗು, ಬಾಣಂತಿ ಆರೋಗ್ಯವಾಗಿದ್ದಾರೆಯೆ? ನಿಮ್ಮ ಮಕ್ಕಳೆಲ್ಲ ಆರೋಗ್ಯವಾಗಿದ್ದಾರೆಯೆ? ನಾಗರಾಜನಿಗೆ ಪ್ರೊಬೇಷನರಿ ಕೆಲಸ ಆಯಿತು ಎಂದು ಸೀತಾರಾಮು ಹೇಳಿದ. ಸಂತೋಷ ಆಯಿತು.'

'ಮಗು ಬಾಣಂತಿ ಆರೋಗ್ಯವಾಗಿದ್ದಾರೆ. ನಿಮ್ಮ ಮೊಮ್ಮಗ ಎಲ್ಲ ನಿಮ್ಮ ಸೀತಾರಾಮುವಿನ ಅಚ್ಚು. ಸೀತಾರಾಮು ಮಗುವಾಗಿದ್ದಾಗ ನಾನು ನೋಡಿದ್ದೆನಲ್ಲ. ಆಗ ನೀವು ಹಳ್ಳಿಯಲ್ಲಿದ್ದಿರಿ. ಮಗುವನ್ನು ತೋರಿಸಿದಿರಿ. ನಿಮಗೆ ಜ್ಞಾಪಕ ಇದೆಯೆ?'

'ಇಲ್ಲದೆ ಏನಪ್ಪ? ನೀವು ನಿಮ್ಮ ಸ್ನೇಹಿತರ ಜತೆಯಲ್ಲಿ ಬಂದಿದ್ದಿರಿ. ನನಗೆ ಜ್ಞಾಪಕವಿದೆ.'

ಕಾವೇರಮ್ಮ ತುಳಸಾಬಾಯಿಯ ಕಡೆಗೆ ತಿರುಗಿ, 'ಉಪ್ಪಿಟ್ಟು ಕಾಫಿ ಮಾಡಿದ್ದೇನೆ. ಸಂಡಿಗೆ ಕರದಿದ್ದೇನೆ. ನೀವು ಮಡಿಯುಟ್ಟು ಕೊಳ್ಳುವಹಾಗಿದ್ದರೆ ಸೀತಾರಾಮುವಿನ ಮಗುಟವಿದೆ. ಮಡಿಯುಟ್ಟು ಕೊಂಡು ಫಲಾಹಾರಕ್ಕೆ ಏಳಿ' ಎಂದಳು.

ತಂತಮ್ಮ ಮನೆಗಳಲ್ಲಿ ಮಡಿ ಮಾಡುತ್ತಾರೋ ಬಿಡುತ್ತಾರೋ ಗೊತ್ತಿಲ್ಲ; ಇಂಥ ಸಂದರ್ಭಗಳಲ್ಲಿ, ಅಥವಾ ಜತೆಗೊಬ್ಬರು ಸೇರಿದ ಸಂದರ್ಭದಲ್ಲಿ ಹೆಂಗಸರು ಮಡಿಯ ನಟನೆಯನ್ನು ಬಹಳವಾಗಿ ಮಾಡುತ್ತಾರೆ. ಹಿಂದೆ ಇದೇ ಬೀಗಿತ್ತಿಯರು ಏಕಾದಶಿಯ ದಿನ ಉಪವಾಸ ಮಾಡಿ ಪುಣ್ಯ ಸಂಪಾದನೆ ಮಾಡಿದ್ದರು. ಕಾವೇರಮ್ಮ ಆಗ ಮುತ್ತೈದೆಯಾಗಿದ್ದಳು. ತಾನು ತನ್ನ ಮನೆಯಲ್ಲಿ ಏಕಾದಶಿ ದಿನ ಉಪ್ಪಿಟ್ಟನ್ನೋ, ದೋಸೆಯನ್ನೋ ಮಾಡಿಕೊಂಡು ತಿನ್ನುವುದು ಆಕೆಯ ಪದ್ಧತಿಯಾಗಿತ್ತು. ಸೀತಾರಾಮುವಿಗೆ ಮದುವೆಯಾದ ಕೆಲವು ದಿನಗಳಮೇಲೆ ಶ್ರೀನಿವಾಸರಾಯರೂ, ಕಾವೇರಮ್ಮನೂ ಬೀಗರ ಮನೆಗೆ ಹೋದರು. ಅದು ದಶಮಿಯ ಸಾಯಂಕಾಲ. ಮಾರನೆಯ ದಿನ ಏಕಾದಶಿ. ಶ್ರೀನಿವಾಸರಾಯರು ತಮ್ಮ ಹೆಂಡತಿಗೆ, 'ಈದಿನ ಏಕಾದಶಿ. ನಮ್ಮ ಮನೆಯಲ್ಲಿ ಫಲಾಹಾರ ಮಾಡುತ್ತಿದ್ದಂತೆಯೇ ಇಲ್ಲಿಯೂ ಮಾಡು. ಉಪವಾಸ ಮಾಡಬೇಡ' ಎಂದು ಬುದ್ಧಿ ಹೇಳಿದರು ಆಕೆ, 'ನಮ್ಮ ಮನೆಯಲ್ಲಿ ನಾವು ಸಾವಿರ ಮಾಡಬಹುದು. ನಮ್ಮನ್ನು ಆಕ್ಷೇಪಿಸುವವರಾರು? ಈ ಮನೆಯಲ್ಲಿ ಬಂದು, ಅವಳ ಕೈಯಲ್ಲಿ ನಾನು ಶುದ್ಧ ಅನಾಚಾರ, ಮಡಿಯಿಲ್ಲ ಮೈಲಿಗೆಯಿಲ್ಲ. ಏಕಾದಶೀ ದಿನವೂ ಹೊಟ್ಟೆಗೆ ಚೆನ್ನಾಗಿ ಗಿಟ್ಟಿಸುತ್ತಾಳೆ— ಎಂದು ಅನ್ನಿಸಿಕೊಳ್ಳಲೇ? ನೀವು ನನ್ನ ಮಾತಿಗೆ ಬರಬೇಡಿ— ಎಂದು ಗಂಡನ ಮಾತನ್ನು ತಿರಸ್ಕರಿಸಿದಳು. ಅತ್ತ ಕೃಷ್ಣರಾಯರು ತಮ್ಮ ಹೆಂಡತಿಗೆ, 'ಈ ದಿನ ಏಕಾದಶಿ. ನೀನೂ ನಿನ್ನ ಬೀಗಿತ್ತಿ ಏನಾದರೂ ಹೊಟ್ಟೆಗೆ ತೆಗೆದುಕೊಳ್ಳಿ; ಉಪವಾಸ ಇರಬೇಡಿ. ಆಕೆ ಏಕಾದಶೀ ದಿನ ಸ್ವಲ್ಪ ಫಲಾಹಾರ ಮಾಡುವುದನ್ನು ನಾನು ನೋಡಿದ್ದೇನೆ. ನೀನು ಹೇಳಿದರೆ ಆಕೆ ಒಪ್ಪುತ್ತಾಳೆ' ಎಂದು ಹೇಳಿದರು. ತುಳಸಾಬಾಯಿ, 'ಅವಳೆದುರಿನಲ್ಲಿ ನಾನೇನನ್ನೂ ತೆಗೆದುಕೊಳ್ಳುವುದಿಲ್ಲ. ನಾಳೆ ನನ್ನನ್ನು ಹಂಗಿಸುತ್ತಾಳೆ. ಊರಿಗೆ ಹೊದಮೇಲೆ ಎಲ್ಲರ ಮುಂದೆಯೂ ನನ್ನ ಮಾನ ಕಳೆಯುತ್ತಾಳೆ. ಈ ಒಂದು ದಿನ ಕಷ್ಟಪಡುತ್ತೇನೆ. ನನ್ನ ಮಾತಿಗೆ ಬರಬೇಡಿ' ಎಂದಳು. ಆ ಹೊತ್ತಿಗೆ ನಾರಣಾಚಾರಿ ಬಂದು, 'ಏನು ತಾಯಿ! ಈ ದಿನ ಏಕಾದಶಿ. ಎಂದಿನಂತೆ ದೋಸೆ

ಹೊಯ್ಯಲಿ? ಅಥವಾ ಉಪ್ಪಿಟ್ಟು ಮಾಡಲೇ? ಏನು ತೆಗೆದುಕೊಳ್ಳು ತ್ತೀರಿ?' ಎಂದು ಕೇಳಿಬಿಟ್ಟನು. ತುಳಸಾಬಾಯಿಗೆ ಕೋಪಬಂತು. 'ಹೋಗಾಚೆ! ಏಕಾದಶೀ ದಿನ ನಾನೇನನ್ನು ತೆಗೆದುಕೊಳ್ಳುತ್ತೇನೆ? ನಿಮ್ಮ ಸಾಹೇಬರಿಗೆ ಬೇಕಾದ್ದು ಮಾಡಿಹಾಕು' ಎಂದು ಗದರಿಸಿಬಿಟ್ಟಳು. ಬಳಿಕ ಬೀಗಿತ್ತಿಯರು ಸೇರಿದರು. 'ಏನಮ್ಮ ಕಾವೇರಮ್ಮನವರೇ! ಏಕಾದಶಿ ದಿನ ನಿಮ್ಮ ಕಟ್ಟಳೆಯೇನು? ಏನಾದರೂ ಮಾಡಿಸಲೇ?' ಎಂದು ಕೇಳಿದಳು. 'ಗಂಗೋದಕ ಸಹ ನಾನು ಬಾಯಿಗೆ ಹಾಕುವು ದಿಲ್ಲ. ನಿಟ್ಟುಪವಾಸ! ಈಗ ಹತ್ತು ವರ್ಷಗಳಿಂದ ನಡಸಿಕೊಂಡು ಬರುತ್ತಿ ದೇನೆ. ಈ ದಿನ ನಿಮ್ಮ ಮನೆಯಲ್ಲಿ ನನ್ನ ವ್ರತ ಏಕೆ ಮುರಿಯಲಿ? ನೀವು ಬೇಕಾದರೆ, ದೊಡ್ಡ ಮನುಷ್ಯರು— ನಿಮಗೆ ಉಪವಾಸ ಗಿಪವಾಸ ತಾಳುವುದಿಲ್ಲ. ಏನಾದರೂ ಮಾಡಿಸಿಕೊಂಡು ತಿನ್ನಿ. ಅಡಿಗೆಯವನು ಏನೋ ಹೇಳುತ್ತಿದ್ದನಲ್ಲ' ಎಂದಳು. ತುಳಸಾಬಾಯಿ ತಟ್ಟನೆ, 'ಅಡಿಗೆ ಯವನು ನನ್ನ ಯಜಮಾನರ ವಿಚಾರ ಕೇಳಿದನಮ್ಮ. ನಾನು ನೀರು ಸಹ ಮುಟ್ಟುವುದಿಲ್ಲ. ಹೀಗೆಯೇ ಆರು ವರ್ಷದಿಂದ ನಡಸಿ ಕೊಂಡು ಬಂದಿದೇನೆ' ಎಂದು ಹೇಳಿದಳು. ಒಟ್ಟಿನಲ್ಲಿ ಈ ಬೀಗಿತ್ತಿ ಯರು ಏನನ್ನೂ ತೆಗೆದುಕೊಳ್ಳಲಿಲ್ಲ. ಕಾವೇರಮ್ಮನೇನೋ ಮಾರನೆಯ ದಿನ ರೈಲಿನಲ್ಲಿ ಹಿಂದಿರುವಾಗ, 'ಅಯ್ಯೋ! ಆ ತುಳಸಾಬಾಯಿ ಅಡಿಗೆಯ ಮನೆಯಲ್ಲಿ ಬಾಗಿಲ ಹಿಂದೆ ಕುಳಿತು ನಾಲ್ಕು ದೋಸೆ ತಿಂದೇ ಬಿಟ್ಟಳು. ನನ್ನೆದುರಿಗೆ ಮಾತ್ರ ಏಕಾದಶಿ ದಿನ ನೀರು ಸಹ ಮುಟ್ಟು ವುದಿಲ್ಲ ಎಂದು ಒಣಜಂಬ ಮಾಡಿದಳು' ಎಂದು ತನ್ನ ಗಂಡನ ಜತೆ ಯಲ್ಲಿ ಹೇಳಿದಳು.

ಕೃಷ್ಣರಾಯರಿಗೆ ಅವರ ಹೆಂಡತಿ ಏನು ಹೇಳಿದಳೋ ನಮಗೆ ಗೊತ್ತಿಲ್ಲ. ಪ್ರಕೃತದಲ್ಲಿ ತುಳಸಾಬಾಯಿ ಮುಗುಟವನ್ನುಟ್ಟುಕೊಂಡು ಫಲಾಹಾರಕ್ಕೆ ಅಡಿಗೆಯ ಮನೆಯಲ್ಲಿ ಕುಳಿತಳು. ಕೃಷ್ಣರಾಯರೂ ಸೀತಾರಾಮರಾಯನೂ ಹಾಲಿನಲ್ಲಿ ಕುಳಿತು ಫಲಾಹಾರ ಮಾಡಿದರು. ಅಡಿಗೆಯ ಮನೆಯಲ್ಲಿ ಬೀಗಿತ್ತಿಯರಿಬ್ಬರೂ ಉಪಾಹಾರ ಮಾಡುತ್ತ ಲೋಕಾಭಿರಾಮವಾದ ಮಾತುಗಳನ್ನಾಡುತ್ತಿದ್ದರು.

'ನಿಮ್ಮ ಮನೆಯ ಸಂಡಿಗೆ ಹಗುರವಾಗಿ ಚೆನ್ನಾಗಿದೆ ಕಾವೇರಮ್ಮ! ನಮ್ಮ ಮನೆಯ ಸಂಡಿಗೆಯನ್ನ ನಾರಣಾಚಾರಿ ಕೆಡಿಸಿಬಿಟ್ಟ. ಅದು ಮಳೆಯಲ್ಲಿ ನೆನೆದೋ ಏನೋ ಗಟ್ಟಿಗಟ್ಟಿ ಆಗಿಹೋಯಿತು. ಬಂದವರಿಗೆ ಬಡಿಸುವುದಕ್ಕೆ ನಾಚಿಕೆ.'

'ಈ ಬಾರಿ ಸಂಡಿಗೆ ಅಷ್ಟೇನೂ ಚೆನ್ನಾಗಿ ಬರಲಿಲ್ಲ. ಹೋದ ವರ್ಷ ನಾನಿಟ್ಟದ್ದು ಇನ್ನೂ ಚೆನ್ನಾಗಿತ್ತು. ಹಗುರ ಅಂದರೆ ಅಷ್ಟು ಹಗುರ! ಬಾಯಿಗೆ ಹಾಕುತ್ತಲೂ ಕರಗಿಹೋಗುತ್ತಿತ್ತು.'

'ನೀವು ಬಾಳಕ ಹಾಕಿ ಉಪ್ಪಿಟ್ಟು ಮಾಡಿದ್ದೀರಿ. ಉಪ್ಪುಪ್ಪಾಗಿ ಕಾರಕಾರವಾಗಿ ಚೆನ್ನಾಗಿದೆಯಮ್ಮ. ಕಾಫೀನೂ ಚೆನ್ನಾಗಿದೆ. ರೂಪಾಯಿಗೆ ಎಷ್ಟು ಸೇರು ಹಾಲು ಇಲ್ಲಿ ಕೊಡುತ್ತಾರೆ?'

'ರೂಪಾಯಿಗೆ ನಾಲ್ಕು ಸೇರು ಗಟ್ಟಿಹಾಲು. ನೀರು ಹಾಲಾದರೆ ಐದು, ಆರು ಸೇರು ಹಾಕುತ್ತಾರೆ. ಬರಿ ನೀರಿಗೇನೆ ದುಡ್ಡು ಕೊಡಬೇಕು.'

'ನಮ್ಮ ಮನೆಯಲ್ಲಿ ಹಾಲು ಕೊಳ್ಳುವ ಕಷ್ಟವಿಲ್ಲ ಕಾವೇರಮ್ಮ! ಎಮ್ಮೆ ಕಟ್ಟಿಕೊಂಡಿದ್ದೇವೆ. ಅವರು ಕುಡಿಯುವುದಕ್ಕೆ ಮಾತ್ರ ಹಸುವಿನ ಹಾಲನ್ನು ಕೊಳ್ಳುತ್ತೇವೆ'

ಇತ್ಯಾದಿ ಮಾತುಕಥೆಗಳಾಗಿ, ಉಪ್ಪಿಟ್ಟು ಕಾಫಿಗಳನ್ನು ಮುಗಿಸಿಕೊಂಡು ಬೀಗಿತ್ತಿಯರು ಹಾಲಿಗೆ ಬಂದು ಕುಳಿತರು. ಕೃಷ್ಣರಾಯರ ಮತ್ತು ಸೀತಾರಾಮುವಿನ ಫಲಾಹಾರಗಳೂ ಮುಗಿದಿದ್ದುವು. ಇನ್ನು ಮಾತುಗಳು ಬೇರೆ ದಾರಿ ಹಿಡಿಯಬಹುದೆಂದು ಸೀತಾರಾಮು ಊಹಿಸಿ ಮೆಲ್ಲಗೆ ತನ್ನ ಕೊಟಡಿಗೆ ಎದ್ದು ಹೋದನು. ಇದುವರೆಗೂ ಬಾಹ್ಯ ವಾತಾವರಣ ಚೆನ್ನಾಗಿತ್ತು. ಇಷ್ಟೊಂದು ಸ್ನೇಹಪೂರ್ವಕವಾದ ಸ್ವಾಗತ ಸತ್ಕಾರ ಸಂಭಾಷಣೆಗಳು ನಡೆಯುತ್ತವೆಯೆಂದು ಕೃಷ್ಣರಾಯರು ನಿರೀಕ್ಷಿಸಿರಲಿಲ್ಲ. ಆದ್ದರಿಂದ ಸ್ವಲ್ಪ ಆಶಾವಾದಿಗಳಾಗಿ ತಮ್ಮ ಉದ್ದೇಶ ಕೈಗೂಡಬಹುದೆಂದು ಮೆಲ್ಲಗೆ ಮಾತಿಗಾರಂಭಿಸಿದರು:

'ದೇವರ ದಯದಿಂದ ಸರೋಜ ಗಂಡು ಮಗುವನ್ನು ಹೆತ್ತು ಕ್ಷೇಮವಾಗಿ ಎದ್ದಳು. ನಿಮಗೂ ಕಾಗದ ಬರೆದಿದ್ದೆ. ಈಗ ನಾವು

ಕರಣ ಮಾಡಬೇಕಾಗಿದೆ. ನೀವೂ, ಸೀತಾರಾಮೂ, ಮಕ್ಕಳೂ—ಶಿವಮೊಗ್ಗಕ್ಕೆ ನಾಲ್ಕು ದಿನದ ಮಟ್ಟಿಗೆ ಬಂದರೆ ಎಲ್ಲರಿಗೂ ಸಂತೋಷ ವಾಗುತ್ತದೆ. ನಿಮ್ಮನ್ನು ಕರೆದುಕೊಂಡು ಹೋಗಬೇಕೆಂದು ನಾವಿಬ್ಬರೂ ಬಂದಿದ್ದೇವೆ. ದೊಡ್ಡ ಮನಸ್ಸುಮಾಡಿ ಬರಬೇಕು.'

'ನಾನು ಈ ಮನೆ ಬಿಟ್ಟು ಎಲ್ಲಿಗೂ ಹೊರಡುವುದಿಲ್ಲ ಎಂದು ನಿರ್ಧರಮಾಡಿಕೊಂಡಿದ್ದೇನೆ. ನಿಮ್ಮ ಸ್ನೇಹಿತರು ಬದುಕಿದ್ದಾಗ ಎಂದರೆ, ನಾನೂ ಹಚ್ಚಗೆ ಹತ್ತುಕಡೆ ಓಡಾಡುತ್ತಿದ್ದೆ. ಈಗ ನಾನು ಎಲ್ಲಿಗೂ ಹೋಗುವುದಿಲ್ಲ. ನಾಮಕರಣದ ವಿಚಾರ ಹೇಳಿದಿರಿ. ನೀವುಂಟು ನಿಮ್ಮ ಅಳಿಯ ಉಂಟು! ನಿಮ್ಮ ಅವನ ಸಂತೋಷ.'

'ಹೀಗೆ ನೀವು ಹಟಮಾಡಿದರೆ ಹೇಗೆ ಕಾವೇರಮ್ಮ? ಕೊಟ್ಟೂ ತಂದ ಕಡೆ ಹೋಗುತ್ತಿರಬೇಕು, ಬರುತ್ತಿರಬೇಕು. ನಾವೇನು ನಿಮಗೆ ಹೊಸಬರೇ? ಹಾಗೆಲ್ಲ ಹಟಮಾಡದೆ ಬರಬೇಕಮ್ಮ. ಇಬ್ಬರಿಗೂ ಮೊಮ್ಮಗ ಹುಟ್ಟಿರುವಾಗ ಇಬ್ಬರೂ ಸಂತೋಷದಿಂದ ನಗುತಾ ನಲೀತಾ ಇರೋಣ' ಎಂದು ತುಳಸಾಬಾಯಿ ಆಡಿದಳು.

'ನನ್ನ ಸ್ವಭಾವ ಮೊದಲಿಂದಲೂ ನಿಮಗೆ ತಿಳಿದಿದೆಯಮ್ಮ! ಅದಕ್ಕೇನೆ ಎತ್ತಿ ಆಡುತ್ತೀರಿ. ನಾನೇನು ಮಾಡಲಿ? ನಗುತಾ ನಲೀತಾ ಇರೋ ಪುಣ್ಯ ನಾನು ಕೇಳಿಕೊಂಡು ಬರಲಿಲ್ಲವಲ್ಲ!'

'ಹಿಂದೆ ನೀವು ಹೇಗಿದ್ದಿರೋ ಈಗಲೂ ಹಾಗೆಯೇ ಇರಬೇಕಮ್ಮ. ನಡೆದುಹೋದುದಕ್ಕೆ ಏನು ಮಾಡುವುದು? ನನ್ನ ಸ್ನೇಹಿತ ಶ್ರೀನಿವಾಸ ರಾವ್ ಬದುಕಿದ್ದಿದ್ದರೆ ಈಗ ಮೊಮ್ಮಗ ಹುಟ್ಟಿದ್ದಕ್ಕೆ ಎಷ್ಟು ಸಂತೋಷ ಪಡುತ್ತಿದ್ದನೋ! ಆತ ಹೋದ ಎಂದು ನಾನೇನೂ ಬದಲಾಯಿಸಿಲ್ಲ ನೋಡಿ. ಒಂದೇ ಸಮನಾಗಿ ವಿಶ್ವಾಸವಾಗಿದ್ದೇನೆ. ಹಾಗೆಯೇ ನೀವೂ ಇರಬೇಕು.'

'ಹೌದಪ್ಪ! ನೀವು ಹೇಳುವುದು ನಿಜ. ನೀವೇನೂ ಬದಲಾಯಿಸಿಲ್ಲ! ಸ್ನೇಹಿತರು ಎಂದರೆ ನಿಮಗೆ ಯಾವಾಗಲೂ ಪ್ರಾಣ. ಆಗ ಬರುತ್ತಿದ್ದವರು ಈ ಸ್ನೇಹಿತರ ಮನೆಗೇನೇ ಬಂದು ಇಳಿಯುತ್ತಿದ್ದಿರಿ.

ಈಗ ಬಂದವರು ಆ ಸ್ನೇಹಿತರ ಮನೆಗೇನೆ ಹೋಗಿ ಇಳಿದು ಕೊಂಡಿರಿ! ಬಂದರೂ ವಿಶ್ವಾಸವೇ! ಬಾರದೇ ಇದ್ದರೂ ವಿಶ್ವಾಸವೇ!'

ಒಳ್ಳೆಯ ಬಾಣ ಬಿಟ್ಟಳಲ್ಲ ಆಕೆ ಎಂದು ಕೃಷ್ಣರಾಯರ ಮುಖ ಪೆಚ್ಚಾಯಿತು. ಉತ್ತರ ಹೇಳುವುದಕ್ಕೆ ತೋರಲಿಲ್ಲ. ತುಳಸಾಬಾಯಿ ಮಧ್ಯೆ ಬಾಯಿಹಾಕಿ,

'ಸ್ನೇಹಿತರು, ನೆಂಟರು, ಎಂದು ಹತ್ತುಜನ ಇದ್ದರೆ ಹತ್ತುಕಡೆಗೆ ಹೋಗಬೇಕಾಗುತ್ತದೆ. ಅಲ್ಲಿರೋ ಕೆಲಸ ಅಲ್ಲಿ, ಇಲ್ಲಿರೋ ಕೆಲಸ ಇಲ್ಲಿ. ಎರಡನ್ನೂ ಮಾಡಬೇಕಲ್ಲ?' ಎಂದಳು.

'ಹೌದು ತುಳಸಾಬಾಯಿ! ದೊಡ್ಡ ಮನುಷ್ಯರಿಗೆ ಹತ್ತು ಜನ ಸ್ನೇಹಿತರೂ ನೆಂಟರೂ ಇರುತ್ತಾರೆ. ಸ್ವಲ್ಪ ನಮ್ಮ ಅಳಿಯನನ್ನ ಕರಸಿ, ಮಾತನಾಡಬೇಕಾಗಿದೆ ಎಂದರೆ, ಕರಸುತ್ತಾರೆ. ಒಳಗೊಳಗೇ ಮಾತ ನಾಡಿ ಸರಿಪಡಿಸಿಕೊಳ್ಳಬಹುದು. ಆಮೇಲೆ ಬೀಗಿತ್ತಿಯ ಮನೆಗೆ ಬಂದು ನಾಮಕರಣಕ್ಕೆ ಬನ್ನಿ, ಹಟಮಾಡಬೇಡಿ—ಎಂದು ಕರೆಯಬಹುದು. ಇಷ್ಟಾಗಿ ನನಗೇನು ಬೇಕಾಗಿದೆ? ನನ್ನ ವಸ್ತು ಹೋಯಿತು. ನಾನು ಮೂಲೆ ಸೇರಿದೆ. ಆ ಮಗ ಎನ್ನುವವನು ಏನಾದರೂ ಧರ್ಮ ಎಣಿಸಿ ನಾನು ತಿನ್ನೋ ಒಪ್ಪೊತ್ತು ಕೂಳನ್ನ ಅಷ್ಟು ಹಾಕಿದರೆ, ಸರಿ, ಈ ದಿನ ಕಳೆಯಿತು, ನಾಳೆ ಕಳೆಯಿತು—ಎಂದು ದಿನ ಎಣಿಸಿಕೊಂಡು ಬಿದ್ದಿರೋ ವಳು ನಾನು. ಅವನೇನಾದರೂ ತನ್ನ ಅತ್ತೆ ಮನೆ ಸೇರಿಕೊಂಡು— ನಿನ್ನ ಪಾಡು ನಿನಗೆ ನನ್ನ ಪಾಡು ನನಗೆ ಎಂದು ಹೇಳಿ ಕೈಬಿಟ್ಟನೋ, ಸರಿ, ಆ ತಬ್ಬಲಿ ಮಕ್ಕಳನ್ನು ಕಟ್ಟಿಕೊಂಡು, ಆಯಿತಪ್ಪ ನಿಮ್ಮ ಹಣೆ ಬರಹ, ಭಿಕ್ಷಾನ್ನ ಎತ್ತಿಕೊಂಡು ಜೀವನ ಮಾಡಿ- ಎಂದು ಹೇಳಿ ನನ್ನ ಜೀವನಕ್ಕೆ ಕೂಲಿ ಮಾಡಿಕೊಂಡಿರೋವಳು ನಾನು. ಅವರು ನಡುಗಾಲದಲ್ಲಿ ನನ್ನ ಕೈಬಿಟ್ಟು ಹೋದರೂ ನಿಲ್ಲೋದಕ್ಕೆ ಸದ್ಯ ಒಂದು ನೆರಳು- ಈ ಮನೆ ಮಾಡಿಟ್ಟು ಹೋದರು. ಏನೋ ಮಾನವಾಗಿ ಮರೆಯಲ್ಲಿ ನಾನಿದ್ದೇನೆ. ನನಗೇತಕ್ಕೆ ಹೆಚ್ಚಿನ ಪಾರುಪತ್ಯ? ನೀವುಂಟು, ನಿಮ್ಮ ಅಳಿಯನುಂಟು. ಅವನನ್ನೇ ಕೇಳಿ ಕರೆದುಕೊಂಡು ಹೋಗಿರಮ್ಮ! ನಾನೇಕೆ ಬೇಡವೆ ನ್ನಲಿ? ನಿನ್ನ ಮಗನ್ನ ನೋಡುವುದಕ್ಕೆ ಹೋಗಬೇಡ, ನಿನ್ನ ಹೆಂಡತಿ

ಯನ್ನು ನೋಡುವುದಕ್ಕೆ ಹೋಗಬೇಡ– ಎಂದು ತಡೆದು ಆ ಪಾಪ ನಾನೇಕೆ ಕಟ್ಟಿಕೊಳ್ಳಲಿ ? ಹಿಂದೆ ನಾನು ಮಾಡಿದ್ದೇ ಸಾಲದೆ? ಬೆನ್ನಿನ ಮೇಲಿನ ಸೆರಗು ತಲೆಯ ಮೇಲಕ್ಕೆ ಬಂತು.'

'ನಾವು ಒಂದು ಮಾತು ಆಡಿದರೆ ನೀವು ನೂರು ಮಾತು ಪೋಣಿಸಿ ಆಡುತ್ತೀರಲ್ಲ ಕಾವೇರಮ್ಮ. ಇದು ನ್ಯಾಯವೇ? ಒಂದಕ್ಕೊಂದು ಸಂಬಂಧವಿಲ್ಲದ ಮಾತುಗಳನ್ನೆಲ್ಲ ಆಡುತ್ತೀರಿ. ನಿಮ್ಮ ಮಗ ಬಂದು ನಮ್ಮ ಮನೆಯನ್ನೇಕೆ ಸೇರಿಕೊಳ್ಳುತ್ತಾನೆ? ನಾವಾದರೂ ನಿನ್ನ ಅಮ್ಮ ನನ್ನು ಮನೆಯಲ್ಲಿಟ್ಟುಕೊಳ್ಳಬೇಡ, ಆದರಿಸಬೇಡ, ಅನ್ನಹಾಕಬೇಡ ಎಂದು ಎಂದಾದರೂ ಹೇಳಿಯೇವೆ? ನಮಗೆ ಅಷ್ಟು ಅವಿವೇಕ ಮುಚ್ಚಿ ಹೋಗಿದೆಯೆ? ಆದೇಕೆ ನೀವು ಅವಿವೇಕ ಮಾತನಾಡುತ್ತೀರಿ? ನಾವು ಕರಣಕ್ಕೆ ಬಂದು ಹೋಗುವುದಕ್ಕೂ ಇದಕ್ಕೂ ಏನು ಸಂಬಂಧ? ಹೆಂಡತಿ ಯನ್ನಿಟ್ಟುಕೊಂಡು ಬಾಳಿದರೆ ತಾಯಿಯ ಹೊಟ್ಟೆಗೆ ಅನ್ನ ಹಾಕುವುದಿ ಲ್ಲವೇ? ನಮ್ಮ ವಿಚಾರದಲ್ಲಿ ನಿಮಗೆ ಏನೋ ಕೋಪ ಇರಬಹುದು. ನಾವೇ ಬಂದಿದ್ದೇವೆ. ಹೆಣ್ಣು ಹೆತ್ತವರು ನಾವು. ತಪ್ಪಿರಲಿ ಇಲ್ಲದಿರಲಿ ನಾವು ತಗ್ಗಿ ನಡೆಯಬೇಕು. ನಿಮ್ಮ ಕ್ಷಮಾಪಣೆ ಕೇಳಿಕೊಳ್ಳಬೇಕು. ಅವರನ್ನ ನೋಡಿ! ಅಷ್ಟು ದೊಡ್ಡ ಮನುಷ್ಯರು ನಿಮ್ಮ ಯಜಮಾನರ ಸ್ನೇಹಿತರು—ಅದೇ ಕೆಲಸವಾಗಿ ಬಂದಿದಾರೆ. ನಾನೂ ಅದೇ ಕೆಲಸ ವಾಗಿ ಬಂದಿದೇನೆ. ಈಗ ಹಿಂದಿನ ಮಾತುಗಳನ್ನು ಆಡುವುದು ಬೇಡ. ಮುಂದೆ ನಡೆಯಬೇಕಾದ ಕೆಲಸ ಆಲೋಚಿಸೋಣ.'

'ಆಗಲಮ್ಮ! ಇಬ್ಬರೂ ಆಲೋಚಿಸೋಣ. ನೀವೂ ನಿಮ್ಮ ಕೆಲಸವನ್ನು ಆಲೋಚಿಸಿ. ನಾನೂ ನನ್ನ ಕೆಲಸವನ್ನು ಆಲೋಚಿಸು ತ್ತೀನೆ.'

'ಅದೇನು ಕಾವೇರಮ್ಮ ನಿಮ್ಮ ಮಾತು ಅರ್ಥವಾಗುವುದಿಲ್ಲವೇ?'

'ಏಕಮ್ಮ ಅರ್ಥವಾಗುವುದಿಲ್ಲ' ನಿಮಗೆ? ಅವರವರು ಬದುಕೋ ಮಾರ್ಗ ಅವರವರು ಆಲೋಚಿಸುತ್ತಾರೆ. ಈಗ ಸೀತಾರಾಮುವನ್ನು ಕರೆದುಕೊಂಡು ಹೋಗಬೇಕು ಎಂದು ಬಂದಿದ್ದೀರಿ. ಅವನನ್ನು ಕಂಡು ಮಾತನಾಡಿದ್ದೀರಿ. ಅವನೂ ನಿಮಗೊಳ್ಳೆಯವನಾಗಿಯೇ—ನಾನು ಬರು

ವುದಕ್ಕೆ ಸಿದ್ಧ, ಆದರೆ ನನ್ನ ತಾಯಿ ಹಟವಾರಿ. ಅವಳೊಪ್ಪದೆ ನಾನು ಬರುವುದು ಕಷ್ಟ. ಆಕೆಯನ್ನು ಕೇಳಿದಂತೆ ಮಾಡಿ ಎಂದು ಹೇಳಿದ್ದಾನೆಂದು ತೋರುತ್ತದೆ. ನೀವೂ ಮನೆ ಮೆಟ್ಟಿಕೊಂಡು ಬಂದಿದ್ದೀರಿ. ಇಲ್ಲದಿದ್ದರೆ ಏನು ತುಳಸಾಬಾಯಿ ? ನೀವು ಈ ಹೊಸಲಿನೊಳಕ್ಕೆ ಕಾಲಿಡುತ್ತಿದ್ದಿರಾ ? ಹೇಳಿ. ಅವನು ನನ್ನನ್ನೇಕೆ ನಿಷ್ಠುರಕ್ಕೆ ಗುರಿಮಾಡಬೇಕು ? ನನ್ನ ಹೊಟ್ಟೆಯಲ್ಲಿ ಹುಟ್ಟಿ ನನಗೇಕೆ ಈ ಕಷ್ಟ ಕೊಡಬೇಕು ? ಹೋಗುವವನು—ಅಮ್ಮ ! ಶಿವಮೊಗ್ಗದಿಂದ ಕಾಗದ ಬಂದಿದೆ. ನಾನು ನಾಮಕರಣಕ್ಕೆ ಹೋಗಿಬರುತ್ತೇನೆ. ನೀನು ಬರುತ್ತೀಯೋ ಇಲ್ಲವೋ ಗೊತ್ತಿಲ್ಲ. ಬಂದರೆ ಕರೆದುಕೊಂಡು ಹೋಗುತ್ತೇನೆ. ಇಲ್ಲದಿದ್ದರೆ ಮನೆಯಲ್ಲೇ ಇರು. ನಾಲ್ಕು ದಿವಸ ಅಲ್ಲಿದ್ದು ಬರುತ್ತೇನೆ ಎಂದು ಹೇಳಿದ್ದರೆ, ಹೋಗಬೇಡಪ್ಪ ಎಂದು ನಾನು ಬಾವಿ ಹಗ್ಗದಿಂದ ಕಟ್ಟಿಹಾಕುತ್ತಿದ್ದೆನೆ ? ಸುಮ್ಮನೆ ನನ್ನನ್ನ ನಿಷ್ಠುರಕ್ಕೆ ಗುರಿಮಾಡಿ ತಾನು ಮಾತ್ರ ಒಳ್ಳೆಯವನು ಎಂದು ಎನ್ನಿಸಿಕೊಳ್ಳುವಂತೆ ಮಗ ಮಾಡಿದರೆ ನಾನೂ ಮುಂದಿನ ಆಲೋಚನೆ ಮಾಡಬೇಡವೇ ? ಏನಪ್ಪಾ ಸೀತಾರಾಮು ! ಇಲ್ಲಿ ಬಾ ! ಕೊಟಡಿಯೊಳಕ್ಕೆ ಹೋಗಿ ಏಕೆ ಸೇರಿಕೊಂಡೆ ? ಅವರು ಕೇಳುವ ಮಾತಿಗೆ ಜವಾಬು ಕೊಡು' ಎಂದು ಮಗನನ್ನು ಕಾವೇರಮ್ಮ ಕರೆದಳು ಸೀತಾರಾಮು ಎಲ್ಲ ಮಾತುಗಳನ್ನೂ ಕೇಳುತ್ತಿದ್ದವನು ಪೆಚ್ಚುಮೋರೆ ಹಾಕಿಕೊಂಡು ಬಂದು ನಿಂತನು.

'ಹೇಳಪ್ಪಾ ಸೀತಾರಾಮು ! ನಾನೇನಾದರೂ ನಿನ್ನನ್ನು ತಡೆದು ಹಿಡಿದಿದ್ದೇನೆಯೆ ? ಹೇಳು. ಹಿಂದೆ ನೀನು ನಿನ್ನ ಹೆಂಡತಿಯನ್ನ ನೋಡುವುದಕ್ಕೆ ಶಿವಮೊಗ್ಗಕ್ಕೆ ಹೋದದ್ದುಂಟೋ ಇಲ್ಲವೊ ? ನಿನಗೆ ಆಗ ಆಸೆಯಾಯಿತು, ನೀನು ಹೋದೆ. ಹೌದೋ ? ಸತ್ಯ ಹೇಳಿಬಿಡು. ನಿನ್ನ ಅತ್ತೆ ಮಾವ ಕೇಳಲಿ.'

'ಹೌದಮ್ಮ. ನೀನು ಹೇಳಿದಂತೆಯೇ ! ಆಗ ನನ್ನ ಹೆಂಡತಿಯನ್ನು ನೋಡಬೇಕೆಂದು ಮನಸ್ಸಾಯಿತು. ನಾನು ಹೋದೆನಮ್ಮ. ಈಗ ಆ ಹಳೆಯ ಮಾತನ್ನೆಲ್ಲ ಏಕೆ ಎತ್ತಿ ಆಡುತ್ತೀಯೆ ?'

'ಏಕೆ ಆಡುತ್ತೇನೆ ಎಂದರೆ - ಕೇಳಪ್ಪ ! ನಿನ್ನ ಅತ್ತೆ ಮಾವ

ನೀನು ನನ್ನ ಅಂಕೆಯಲ್ಲಿಯೇ ಇದ್ದೀಯೆ ; ಏಳು ಎಂದರೆ ಏಳುತ್ತೀಯೆ, ಕುಳಿತುಕೋ ಎಂದರೆ ಕುಳಿತುಕೊಳ್ಳುತ್ತೀಯೆ ಎಂದು ತಿಳಿದುಕೊಂಡಿದ್ದಾರೆ. ನೀನು ಸಹ ಆ ದಿವಸ ಶಿವಮೊಗ್ಗದಿಂದ ಅಳುತ್ತಾ ಹಿಂದಿರುಗಿದವನು ಈ ದಿವಸ ನಗುತ್ತಾ ಅವರ ಹಿಂದೆ ಹೋಗುವುದಕ್ಕೆ, ನಾನು ನಾಮಕರಣಕ್ಕೆ ಬರುತ್ತೇನೆ; ಆದರೆ ತಾಯಿ ಅಡ್ಡ ಬರುತ್ತಾಳೆ–ಎನ್ನುವ ಹಾಗೆ ನಟನೆ ಮಾಡುತ್ತೀಯಲ್ಲ, ನನ್ನನ್ನು ನಿಷ್ಠುರಕ್ಕೆ ಸಿಕ್ಕಿಸಿದ್ದೀಯಲ್ಲ!'

ಕೃಷ್ಣರಾಯರಿಗೂ ತುಳಸಾಬಾಯಿಗೂ ಜಂಘಾಬಲ ಬಿದ್ದುಹೋಯಿತು. 'ಅಯ್ಯೋ! ಏನು ಗತಿಯಪ್ಪ! ಮಾತನ್ನು ಹಿಂದಕ್ಕೆ ತಿರುಗಿಸಿ ಬಿಟ್ಟಳಲ್ಲ! ಹದ ಕೆಟ್ಟುಹೋಯಿತು' ಎಂದು ಪೇಚಾಡುತ್ತಿದ್ದರು. ತುಳಸಾಬಾಯಿ ಧೈರ್ಯತಂದುಕೊಂಡು,

'ಅದೇಕೆ ಕಾವೇರಮ್ಮ? ನಮ್ಮೆದುರಿಗೆ ಅವನನ್ನು ಹಾಗೆ ಝಂಕಿಸಿ ಕೇಳುತ್ತೀರಿ? ಬಸಿರಿ ಹೆಂಡತಿಯನ್ನು ನೋಡಬೇಕೆಂದು ಆಸೆಯಾದದ್ದು ತಪ್ಪೇ? ಅವನು ಶಿವಮೊಗ್ಗಕ್ಕೆ ಬಂದದ್ದು ತಪ್ಪೇ? ಅದೇಕೆ ಎಲ್ಲ ಮುರಿಯುವುದಕ್ಕೇ ಹೋಗುತ್ತೀರಿ? ಈಗ ಆ ಹಳೆಯ ಮಾತು ಬೇಡಮ್ಮ. ಸರೋಜಾನೂ ಬದುಕಿದ್ದೇ ಹೆಚ್ಚು. ಈ ಹೆರಿಗೆಯಲ್ಲೇ-ಅದೂನೂ ಚೊಚ್ಚಲ ಹೆರಿಗೆ– ಎಲ್ಲಿ ಕಣ್ಮುಚ್ಚಿಕೊಂಡು ಬಿಡುತ್ತಾಳೋ ಎಂದು ಹೆದರಿ ಪಾತಾಳಕ್ಕಿಳಿದು ಹೋಗಿದ್ದೆವು. ದೇವರ ದಯೆ! ಹೆತ್ತು ಕ್ಷೇಮವಾಗಿ ಎದ್ದಳು. ಗಂಡುಮಗುವನ್ನೇ ಹೆತ್ತಳು. ಅವಳೂ ಸಂಕಟಪಟ್ಟಿದ್ದಾಳೆ, ಸೀತಾರಾಮೂನೂ ಸಂಕಟಪಟ್ಟಿದ್ದಾನೆ ; ನೀವೂ ನಾವೂ ಎಲ್ಲ ಸಂಕಟ ಪಟ್ಟಿದ್ದೇವೆ. ಇಲ್ಲಾ ಎಂದು ನಾನು ಹೇಳುವುದಿಲ್ಲ. ತಪ್ಪು ನಮ್ಮಲ್ಲಿಟ್ಟುಕೊಂಡು ಯಾವ ಬಾಯಲ್ಲಿ ಇಲ್ಲಾ ಎಂದು ಹೇಳಿಯೇನು? ಈಗ ಗಂಡ ಹೆಂಡತಿ ಅನ್ಯೋನ್ಯವಾಗಿ ಸೇರಲಿ. ಇಬ್ಬರೂ ತಮ್ಮ ಮಗನನ್ನು ಎತ್ತಿಕೊಂಡು ಸಂತೋಷಪಡಲಿ. ನಾವೂ ಅವರನ್ನು ಹರಸಿ ಸಂತೋಷಪಡೋಣ. ದೊಡ್ಡ ಮನಸ್ಸುಮಾಡಿ. ನನ್ನ ನಿಮ್ಮ ಪರಿಚಯ, ಸ್ನೇಹ ಎಷ್ಟು ವರ್ಷಗಳದ್ದು? ನಿನ್ನೆ ಮೊನ್ನೆಯವೇ? ಸರೋಜ ಹುಟ್ಟಿದ ಲಾಗಾಯಿತು ಇವೆಯಲ್ಲ. ಈಗೇನೋ ಅವರ ಅದೃಷ್ಟ ಚೆನ್ನಾಗಿತ್ತು. ಅಸಿಸ್ಟೆಂಟ್ ಕಮಿಷನರ್ ಆದರು. ನಾಲ್ಕು

ವರ್ಷಗಳಿಂದ ನಾನೂ ಸುಖಪಡುತ್ತಿದೇನೆ. ಹಿಂದೆಯೆಲ್ಲ ನಿಮಗೆ ತಿಳಿದ ಹಾಗೆ ನಾನೂ ಬಡತನದಲ್ಲಿ ನವೆದವಳೇ! ನಮ್ಮ ಕಣ್ಣು ಮುಂದೆ ನಮ್ಮ ನಮ್ಮ ಮಕ್ಕಳು ಓಡಾಡಿಕೊಂಡು ಮಕ್ಕಳೂ ಮರಿ ಹೆತ್ತುಕೊಂಡು ಹಚ್ಚಗೆ ಇದ್ದುಬಿಟ್ಟರೆ ಹಿಂದಿನ ಕಷ್ಟವೆಲ್ಲ ಮರೆತುಹೋಗುತ್ತೆ. ಈಗಲೂ ನಾನು ಕಾಫಿ ಕಲರ್ ಸೀರೆಯ ತುಳಸಾಬಾಯಿ ಎಂದೇ ತಿಳಿದುಕೊಳ್ಳಿ. ಈ ರಿಬ್ಬನ್ ಬಾರ್ಡರ್ ಸರಿಗೆ ಸೀರೆಯ ತುಳಸಾಬಾಯಿ ಎಂದು ತಿಳಿದು ಕೊಳ್ಳಬೇಡಿ. ಹಿಂದೆ ನಮ್ಮ ಮನೆಗೆ ಧಾರಾಳವಾಗಿ ಬಂದು ಮಾತುಕಥೆ ಆಡುತ್ತಿದ್ದಂತೆ ಈಗಲೂ ಬಂದು ಆಡಿಯಮ್ಮ! ಈಗಲೋ ಮೊದಲಿ ಗಿಂತ ಹೆಚ್ಚು. ಹುಟ್ಟಿದ ಮಗು ನಿಮಗೂ ಮೊಮ್ಮಗನೇ ನನಗೂ ಮೊಮ್ಮಗನೇ! ಅಜ್ಜೀ! ಎಂದು ಹತ್ತಿರ ಬಂದರೆ ನೀವು ಆದರಿಸುವು ದಿಲ್ಲವೇ? ನನ್ನ ಹತ್ತಿರ ಬಂದರೆ ನಾನು ಆದರಿಸುವುದಿಲ್ಲವೇ? ಬೆಳೆಯೋ ಮೊಳಕೆ. ಬನ್ನಿ, ಬಂದು ಸಂತೋಷಪಡಿ ಎಲ್ಲರೂ ನಾಲ್ಕು ದಿನ ಸಂತೋಷದಲ್ಲಿರೋಣ.'

'ನನ್ನ ಮಾತನ್ನ ನಾನು ಆಗಲೇ ಹೇಳಿದ್ದೇನೆ. ಈ ಮನೆ ಬಿಟ್ಟು ನಾನು ಹೊರಕ್ಕೆ ಕದಲುವುದಿಲ್ಲ. ಹುಟ್ಟಿದ ಮಗು ಎಲ್ಲಿಯಾದರೂ ಆಯುಸ್ಸು ಹೊಯ್ದುಕೊಂಡು ಸುಖವಾಗಿರಲಿ. ಅವರು ಬದುಕಿರೋ ವಾಗ ನಾನು ಅವರ ಕಣ್ಣಿಗೆ ಲಕ್ಷ್ಯವಿರಲಿಲ್ಲ. ನನ್ನ ಮಾತು ಒಂದನ್ನೂ ನಡಸಲಿಲ್ಲ. ಅವರಿಷ್ಟದಂತೆ ಅವರು ನಡೆದರು. ವೃಥಾ ನನ್ನನ್ನ-ಕಾವೇರಮ್ಮ ಬಹಳ ಹಟಮಾರಿ, ಕೆಟ್ಟವಳು, ಅಂಥವಳು, ಇಂಥವಳು— ಎಂದು ಜನ ನಿಂದಿಸಿದರು. ನಾನು ಅಂಥ ಹಟಮಾರಿ ಆಗಿದ್ದಿದ್ದರೆ ಸರೋಜ ಸೀತಾರಾಮುಗಳ ಮದುವೆ ನಡೀತಿತ್ತೇ? ನಾನು ಈ ಭಂಗ ಗಳನ್ನೆಲ್ಲ ಅನುಭವಿಸೋದಕ್ಕೆ ಭೂಮಿಯಮೇಲೆ ಬದುಕಿರುತ್ತಿದ್ದೆನೇ? ಎಂದೋ ಕೆರೆಯನ್ನೋ ಬಾವಿಯನ್ನೋ ನೋಡಿಕೊಳ್ಳುತ್ತಿದ್ದೆ. ಈಗಲೂ ಅಷ್ಟೇ. ಅವರಪ್ಪ ನನ್ನ ಮಾತು ಕೇಳುತ್ತಿರಲಿಲ್ಲ ತಮ್ಮಿಷ್ಟದಂತೆ ನಡಸುತ್ತಿದ್ದರು. ಅಪ್ಪನಂತೆ ಮಗ! ಹೂವು ಮುಡಿಸುವ ಶಾಸ್ತ್ರಮಾಡಿ ಕಳಿಸೋಣಪ್ಪ, ನನ್ನ ಮಾತು ಕೇಳು ಎಂದು ಬುದ್ಧಿ ಹೇಳಿದೆ. ಇವರೂ— ನಿಮ್ಮ ಯಜಮಾನರು—ಬಂದಿದ್ದರು; ಅವರಿಗೂ ಹೇಳಿದೆ.

ಎದುರಿಗೇ ಇದ್ದಾರಲ್ಲ. ಕೇಳಿ ನೋಡಿ. ನಾನು ಹಿಂದೊಂದು ಮುಂದೊಂದು ಆಡುವವಳಲ್ಲ. ನನ್ನ ಮಾತು ಏನು ನಡೆಯಿತು ? ಎಲ್ಲರೂ ಅವರವರ ಮನಸ್ಸಿನಂತೆ ಅವರವರ ಇಷ್ಟದಂತೆ ನಡೆಯುತ್ತಾರೆ. ಇವನು ಆಗ ಶಿವಮೊಗ್ಗಕ್ಕೆ ಹೋಗಿಬಂದಹಾಗೆ ಈಗಲೂ ಹೋಗಿದ್ದರೆ ಈ ಪ್ರಕರಣ ನಡೆಯುತ್ತಲೇ ಇರಲಿಲ್ಲ.'

'ನೀವೂ ನಿಮ್ಮ ಮಗನಿಗೆ ಒಂದು ಮಾತು ಹೇಳಿದ್ದರೆ ಅವನಿಗೆ ಧೈರ್ಯ ಬರುತ್ತಿತ್ತು. ಹೋಗಿ ಬಾರಪ್ಪ ಎಂದು ಒಂದು ಮಾತು ಹೇಳಿದ್ದರೆ ಅವನು ಶಿವಮೊಗ್ಗಕ್ಕೆ ಬರುತ್ತಿದ್ದ. ಹೌದೋ ಅಲ್ಲವೋ ಕಾವೇರಮ್ಮ ? '

'ಏನು ತುಳಸಾಬಾಯಿ ? ನಿಮ್ಮಿಂದ ವಿವೇಕ ಹೇಳಿಸಿಕೊಳ್ಳಬೇಕೇ ನಾನು ? ಅಪ್ಪಾ ಸೀತಾರಾಮು ! ನೀನು ಕಾಗದ ಓದಿ ಹೇಳಿದ ದಿನವೇ ನಿನಗೆ ನಾನು ಏನು ಹೇಳಿದೆ ? ನಿನ್ನ ಅತ್ತೆ ಮಾವ ಕೇಳಲಿ. ಹೇಳಪ್ಪ ! ಎಲ್ಲರಿಂದಲೂ ವಿವೇಕ ಹೇಳಿಸಿಕೊಳ್ಳುವ ಸ್ಥಿತಿಗೆ ನನ್ನನ್ನ ತಂದಿಟ್ಟೆಯಲ್ಲ. ಕೆಟ್ಟು ಕುಳಿತವಳಿಗೆ ಎಲ್ಲರೂ ವಿವೇಕ ಹೇಳುತ್ತಾರೆ ! ಹೇಳಪ್ಪ ! ಮುಚ್ಚು ಮರೆ ಮಾಡಬೇಡ. ನನ್ನೆದುರಿಗೆ ಹೇಳುವುದಕ್ಕೆ ನಿನಗೆ ಭಯವಾದರೆ ನಾನು ಎದ್ದುಹೋಗುತ್ತೇನೆ. ನೀವು ನೀವೇ ಮಾತನಾಡಿಕೊಳ್ಳಿ. ಸತ್ಯ ಹೇಳು' ಎಂದು ಕಾವೇರಮ್ಮ ಏಳುವುದಕ್ಕೆ ತೊಡಗಿದಳು.

ಕೃಷ್ಣರಾಯರು, 'ನೀವು ಇರಿಯಮ್ಮ. ಎದ್ದು ಹೋಗಬೇಡಿ. ಪಂಚಾಯತಿಗೆ, ನಿಮ್ಮಲ್ಲಿ ತಪ್ಪು ಹುಡುಕುವುದಕ್ಕೆ ನಾವು ಬರಲಿಲ್ಲವಮ್ಮ ! ನಿಮಗೇನು ತಿಳಿಯದೇ ? ನೀವು ಹೇಳಿರಬಹುದು' ಎಂದರು.

'ನಿಮ್ಮ ಅಳಿಯನನ್ನೇ ಕೇಳಿಯಪ್ಪ ! ನಿಮ್ಮ ಹೆಂಡತಿ ತುಳಸಾಬಾಯಿ, ಎಲ್ಲ ಮುರಿಯೋದಕ್ಕೇ ಹೋಗುತ್ತೀರಲ್ಲ ಎಂದು ನನ್ನನ್ನು ಆಕ್ಷೇಪಿಸುತ್ತಾಳೆ. ದೊಡ್ಡ ಮನುಷ್ಯರ ಹೆಂಡತಿ, ಆಕ್ಷೇಪಿಸಲಿ ! ನಾನು ಏನು ಹೇಳಿದೆ ? ಮುರಿಯೋದಕ್ಕೆ ಹೋಗೋವಳು ಹಾಗೆ ಹೇಳುತ್ತಾಳೆಯೆ ? ಕೇಳಿ ನೋಡಿ. ಹೇಳು ಸೀತಾರಾಮು ! ಏತಕ್ಕೆ ಕಂಬದಂತೆ ನಿಂತುಬಿಟ್ಟೆ ? '

'ಹೌದಮ್ಮ! ನೀನು ಹೇಳಿದೆ. ನಿನಗೆ ಆಸೆಯಾಗಿದ್ದರೆ ಶಿವಮೊಗ್ಗಕ್ಕೆ ಹೋಗಿ ಬಾರಪ್ಪ ಎಂದು ನೀನು ಹೇಳಿದೆಯಮ್ಮ.'

'ನಿನ್ನ ಮಾವನವರಿಗೆ ಮೂರು ಪಂಕ್ತಿ ಒಕ್ಕಣೆ ಬರೆದವನು, ಮಗು ಹುಟ್ಟಿದ್ದು ಕೇಳಿ ನನಗೂ ನನ್ನ ತಾಯಿಗೂ ಬಹಳ ಸಂತೋಷವಾಗಿದೆ ಎಂದು ಒಕ್ಕಣೆ ಬರೆದವನು, ಇನ್ನೊಂದು ಪಂಕ್ತಿ– ನಾನು ನಾಮಕರಣಕ್ಕೆ ಹೊರಟು ಬರುತ್ತೇನೆ, ನನ್ನ ತಾಯಿ ಬರುವುದು ನಿಷ್ಕರ್ಷೆಯಿಲ್ಲ ಎಂದು ಸೇರಿಸಿ ಬರೆದಿದ್ದರೆ ಅವರು ಎಷ್ಟೋ ಸಂತೋಷಪಡುತ್ತಿದ್ದರು. ಅವರಿಗೆ ಶಿವಮೊಗ್ಗದಿಂದ ತುಮಕೂರಿಗೆ ಬರುವ ಕಷ್ಟ ತಪ್ಪುತ್ತಿತ್ತು. ನನಗೂ ಈ ನಿಷ್ಠೂರ ಕೆಟ್ಟ ಹೆಸರು ತಪ್ಪುತ್ತಿತ್ತು. ಏನಪ್ಪ ಸೀತಾರಾಮು! ನಿನಗೆ ನನ್ನನ್ನ ಕಂಡರೆ ಭಯವೇ?'

'ಭಯ ಏನಿಲ್ಲಮ್ಮ. ನಾಮಕರಣಕ್ಕೆ ಹೋಗುವ ಬಿಡುವ ವಿಚಾರವನ್ನು ನಾನೇ ನಿಷ್ಕರ್ಷೆ ಮಾಡಿಕೊಂಡಿರಲಿಲ್ಲ. ಆದ್ದರಿಂದ ಆಗ ನಾನು ಬರೆಯಲಿಲ್ಲ. ಅಷ್ಟೇ.'

'ಸಂತೋಷವಪ್ಪ! ನಾನು ಮನಸ್ಸಿಲ್ಲದೆ ಏನೋ ಹೇಳಿದೆ ಎಂದೇ ಇಟ್ಟುಕೊಳ್ಳೋಣ. ನಿನಗೆ ಆಸೆಯಿದ್ದರೆ ತಾಯಿಯ ಮಾತನ್ನು ತಾಯಿಗೇನೇ ತಿರುಗಿಸೋಣ ಎಂದು ಅದೇ ನೆಪಮಾಡಿಕೊಂಡು ಹೊರಟು ಹೋಗಬಹುದಾಗಿತ್ತು. ನಿನಗೆ ಆಸೆಯಿರಲಿಲ್ಲ, ಮನಸ್ಸಿರಲಿಲ್ಲ ಎಂದಿಟ್ಟುಕೋ. ಆಗಲೂ ತಾಯಿ ಹೇಳಿದ್ದಾಳಲ್ಲ. ಆಕೆಯ ಮಾತು ನಡಸೋಣ— ಅಮ್ಮ ನನಗೆ ಇಷ್ಟವಿಲ್ಲ, ಆದರೆ ನೀನು ಹೇಳುತ್ತೀಯೆ, ಹೋಗಿಬರುತ್ತೇನೆ—ಎಂದು ಹೇಳಿ ಹೋಗಬಹುದಾಗಿತ್ತು. ನೀನು ನನ್ನನ್ನ ಕರೆದೆ. ನಾನು ಏನು ಹೇಳಿದೆನಪ್ಪ? ಈ ವೇಷದಲ್ಲಿ ನಾನು ಮರ್ಯಾದೆ ಸ್ಥಳಕ್ಕೆ ಬರೋದಿಲ್ಲ ಎಂದು ಹೇಳಿದೆ. ಈಗಲೂ ಅದೇ ಮಾತು ಹೇಳುತ್ತಿದೇನೆ. ನನ್ನನ್ನ ಏಕೆ ನಿಷ್ಠುರ ಮಾಡಿಸುತ್ತೀಯೆ? ನನ್ನ ಬೀಗಿತ್ತಿಯ ಬಾಯಿಂದ ನನಗೇಕೆ ವಿವೇಕ ಹೇಳಿಸುತ್ತೀಯೆ? ಮಾರಾಯನಾಗಿ ಹೋಗಿ ಬಾರಪ್ಪ. ನೀನು ಒರಟು; ನಿನಗೆ ಕೈ ಸ್ವಲ್ಪ ದುಡುಕು. ಆಗ ಬಸಿರಿಯಾಗಿದ್ದಳು, ಈಗ ಬಾಣಂತಿಯಾಗಿದ್ದಾಳೆ! ಈ ಬಾರಿ ಬುದ್ಧಿಯಿಂದ ಇರು ನಮ್ಮಪ್ಪ!'

ಎರಡು ನಿಮಿಷ ಯಾರೂ ಮಾತನಾಡಲಿಲ್ಲ. ಕೃಷ್ಣರಾಯರು ಬದುಕಿದ್ದರೂ ಸತ್ತಂತೆಯೇ ಆಗಿತ್ತು. ಯಾವ ಮಾತನ್ನು ಆಡುವುದಕ್ಕೆ ಹೋದರೂ ಅದನ್ನು ಕಾವೇರಮ್ಮ ವಕ್ರವಾಗಿಯೇ ತಿರುಗಿಸುತ್ತಾಳಲ್ಲ, ಸಮಾಧಾನಕ್ಕೇನೆ ಬರುವುದಿಲ್ಲವಲ್ಲ—ಎಂದು ಅವರಿಗೆ ಒಳಗೆ ಕೋಪ. ಕಾವೇರಮ್ಮ ಅಂಥ ಹಾಲಾಹಲ ಕಾಳಕೂಟಗಳ ನಾಲಗೆಯಿಂದ ಆಡುತ್ತಿದ್ದರೂ ಕೋಪವನ್ನೇ ತೋರಿಸಿಕೊಳ್ಳದೆ ಶಾಂತಳಾಗಿಯೇ ಎಲ್ಲಕ್ಕೂ ವಾದವೋ ವಿತಂಡವಾದವೋ ಮಾಡಿ ತಾವು ಮುಂದೆ ಮಾತು ಬೆಳಸುವುದಕ್ಕೇನೆ ಅವಕಾಶವಿಲ್ಲದಂತೆ ಮಾಡುತ್ತಿದಾಳಲ್ಲ ಎಂದು ಸಂಕಟ. ತುಳಸಾಬಾಯಿಗೆ, 'ಸರೋಜಳ ಸಂಸಾರ ಕೂಡಿಸಬೇಕು ಎಂದು ನಾನು ತಗ್ಗಿಹೋದಷ್ಟೂ ಈ ಕಾವೇರಮ್ಮ ಅಷ್ಟೂ ಅಷ್ಟು ಏರಿಹೋಗುತ್ತಿದಾಳಲ್ಲ. ತಮ್ಮ ಅಳಿಯ ಹೇಗಾದರೂ ಮನಸ್ಸುಮಾಡಿ ಈ ಬಾರಿ ಶಿವಮೊಗ್ಗಕ್ಕೆ ಬಂದುಬಿಟ್ಟರೆ ಅವನಿಗೆ ಚೆನ್ನಾಗಿ ಬೋಧೆಮಾಡಿ ಕಾವೇರಮ್ಮನಿಗೆ ಏಳು ಕೆರೆ ನೀರು ಕುಡಿಸೇನಲ್ಲ' ಎಂದು ಅಹಂಕಾರವನ್ನು ನುಂಗಿಕೊಳ್ಳಬೇಕಾದ ಸಂಕಟ. ಸೀತಾರಾಮುರಾಯನಿಗೆ ಅತ್ತ ಅತ್ತೆ ಮಾವಂದಿರ ಮುಖವನ್ನೂ ನೋಡುವುದಕ್ಕಿಲ್ಲ, ಇತ್ತ ತಾಯಿಯ ಮುಖವನ್ನೂ ನೋಡುವುದಕ್ಕಿಲ್ಲ. ಭೂಮಾತೆಯೊಂದೇ ಅವನ ಕಾಲಿಗೂ ಕಣ್ಣಿಗೂ ಏಕಾಶ್ರವಾಗಿ ಕಂಡುಬಂತು. ಈ ಗಭೀರಮೌನವನ್ನು ಯಾರು ಮುರಿಯಬೇಕು? ಹೇಗೆ ಮುರಿಯಬೇಕು? ಸೀತಾರಾಮು ಮೆಲ್ಲಗೆ ಕೊಟಡಿಯನ್ನು ಸೇರಿದನು. ಕೃಷ್ಣರಾಯರು ಎದ್ದು ಹಿಂದೆಯೇ ಅವನ ಕೊಟಡಿಗೆ ಹೋದರು.

ಹಾಲಿನಲ್ಲಿ ಬೀಗಿತ್ತಿಯರಿಬ್ಬರೇ ಉಳಿದರು. ತುಳಸಾಬಾಯಿಯ ಕಣ್ಣುಗಳಿಂದ ನೀರು ಹೊರಸೂಸುತ್ತಿತ್ತು. ಕಾವೇರಮ್ಮನ ಮುಖ ಗಂಭೀರವಾಗಿತ್ತು. ತುಳಸಾಬಾಯಿ, 'ಕಾವೇರಮ್ಮ! ನೀವೂ ಹೆಣ್ಣುಮಕ್ಕಳನ್ನು ಹೆತ್ತಿದ್ದೀರಿ ಈಗಿನ್ನೂ ಅವರಿಗೆ ಮದುವೆಯಿಲ್ಲ. ನಾಳೆ ಮದುವೆಯಾಗದೇ ಇರುತ್ತದೆಯೇ? ನನ್ನ ಕಷ್ಟ ಸಂಕಟ ಕಣ್ಣೀರು ನಿಮ್ಮನ್ನು ತಟ್ಟದೆ ಬಿಡುತ್ತದೆಯೇ? ನಾನೇನು ನಿಮಗೆ ಅಪರಾಧ ಮಾಡಿದ್ದೇನೆ? ಹೇಳಿಯಮ್ಮ! ನಿಮ್ಮ ಒಂದೊಂದು ಮಾತೂ ಒಂದೊಂದು ಬಾಣದಂತೆ

ನನ್ನೆದೆಯನ್ನು ಇರಿಯುತ್ತದೆಯಲ್ಲ! ನೀವು ಶಿವಮೊಗ್ಗಕ್ಕೆ ಬಂದರೆ ನನ್ನ ಮಕ್ಕಳನ್ನೆಲ್ಲ ನಿಮ್ಮ ಕಾಲಮೇಲೆ ಕೆಡವಿಯೇನು. ನನಗೆ ಏನುಮಾಡಬೇಕೋ ದಿಕ್ಕೇ ತೋಚುವುದಿಲ್ಲವಲ್ಲ!' ಎಂದು ಅಳುತ್ತಾ ಹೇಳಿದಳು.

'ತುಳಸಾಬಾಯಿ! ನಾನೇನು ಆಡಬಾರದ ಮಾತನ್ನು ಆಡಿದೆ? ನಾನು ಶಿವಮೊಗ್ಗಕ್ಕೆ ಬರುವುದಿಲ್ಲ, ನೀನು ಹೋಗಿ ಬಾರಪ್ಪ ಎಂದು ನನ್ನ ಮಗನಿಗೆ ಹೇಳಿದೆ. ನಿಮಗೆ ಸಂತೋಷ ಆಗಬೇಡವೇ? ಬಂದಿದ್ದೀರಿ, ಕರೆದುಕೊಂಡು ಹೋಗಿ. ಅವನಿಗೆ ಕೈದುಡುಕು. ನಾನು ನನ್ನ ಮಗನಿಗೆ ಬುದ್ಧಿ ಹೇಳಬೇಡವೆ? ಆ ದಿನ ಶಿವಮೊಗ್ಗದಿಂದ ಅಳುತ್ತಾ ಹಿಂದಿರುಗಿ ಬಂದ. ಅಲ್ಲೇನು ನಡೆಯಿತೋ ಆ ಭಗವಂತನಿಗೇ ಪ್ರೀತಿ. ಒಂದು ವಾರ ಅನ್ನವಿಲ್ಲ, ನಿದ್ದೆಯಿಲ್ಲ; ಒಂದು ನೊಂದನೋ ಹಾಗೆ ನೊಂದ. ನನ್ನದೂ ಹೆತ್ತ ಹೊಟ್ಟೆ ಅಲ್ಲವೇ ತುಳಸಾಬಾಯಿ? ನಾನೂ ಸಂಕಟಪಟ್ಟೆ. ಅವನು ಕೈಗೆ ಸಿಕ್ಕುವುದಿಲ್ಲ, ಆ ಅಪಮಾನದಲ್ಲಿ ಅವನು ಬದುಕುವುದಿಲ್ಲ, ಅವನ ಅಪ್ಪನ ದಾರಿ ಹಿಡಿದುಕೊಂಡು ಹೊರಟುಹೋಗುತ್ತಾನೆ ಎಂದು ಹೆದರಿ ಕಂಗಾಲಾಗಿದ್ದೆ. ನಾನೂ ಅವನನ್ನು ಹಿಡಿಯೋದಕ್ಕೆ ಅಂಥ ಕಷ್ಟಪಟ್ಟೆನೋ ಪಟ್ಟೆ. ಈಗ ಪುನಃ ಶಿವಮೊಗ್ಗಕ್ಕೆ ಹೋದರೆ– ಬುದ್ಧಿಯಾಗಿರಪ್ಪ. ನಿನ್ನ ಕೈ ದುಡುಕು ಎಂದು ನಾನು ನನ್ನ ಮಗನಿಗೆ ಬುದ್ಧಿ ಹೇಳಬೇಡವೇ? ಹೇಳಿದೆನಮ್ಮ. ನೀವೇಕೆ ಕಣ್ಣೀರು ಹಾಕಬೇಕು? ನಿಮ್ಮ ಕಣ್ಣೀರು ನನಗೇಕೆ ತಟ್ಟಬೇಕು? ಈಗ ಕೊಟಡಿಯಲ್ಲಿ ಮಾವ ಅಳಿಯ ಸೇರಿದ್ದಾರೆ. ನೀವೂ ಹೋಗಿ ತುಳಸಾಬಾಯಿ! ಅವನಿಗೆ ಹೇಳಿ: ನಿನ್ನ ತಾಯಿ ಬರುವುದಿಲ್ಲಪ್ಪ, ನೀನು ಬಾ. ನಿನ್ನ ತಾಯಿ ನಿನಗೆ ಅಪ್ಪಣೆ ಕೊಟ್ಟಿದ್ದಾಳೆ ಎಂದು ಹೇಳಿ ಕರೆದುಕೊಂಡು ಹೋಗಿ.'

ತುಳಸಾಬಾಯಿ ಎದ್ದು ಸೀತಾರಾಮುವಿನ ಕೊಟಡಿಗೆ ಹೋದಳು. ಕಾವೇರಮ್ಮ ಎದ್ದು ಹಿತ್ತಿಲ ಕಡೆಗೆ ಹೋದಳು. ಆಕೆ ಅಲ್ಲಿ ಬಿದ್ದಿದ್ದ ಕಟ್ಟಿಗೆಚೂರು ಮೊದಲಾದುವನ್ನು ಆಯ್ದುಹಾಕುತ್ತಿದ್ದಳು. ಇತ್ತ ಕೊಟಡಿಯಲ್ಲಿ ಅತ್ತೆ ಮಾವ ಇಬ್ಬರೂ ಸೀತಾರಾಮುವಿಗೆ 'ಶಿವಮೊಗ್ಗಕ್ಕೆ

ಬಾರಪ್ಪ! ನಾಮಕರಣ ನಿಲ್ಲಿಸುವುದು ಬೇಡ. ನೀನು ಬರದಿದ್ದರೆ ಜನ ನಮ್ಮನ್ನು ಆಡುತ್ತಾರೆ. ಸರೋಜ ಬಹಳ ದುಃಖಪಡುತ್ತಾಳೆ. ನಿನ್ನ ತಾಯಿ ಬಾಯಿಬಿಟ್ಟು ಹೇಳಿದಾಳಲ್ಲ. ಈಗ ನಾವೇ ಖುದ್ದಾಗಿ ಬಂದಿದ್ದೇವೆ. ಬರುವ ಆಕ್ಷೇಪಣೆಗಳೆಲ್ಲ ನಮ್ಮ ತಲೆಯಮೇಲೆ ಬರಲಿ' ಎಂದು ಬೋಧಿಸಿದರು.

ಸೀತಾರಾಮು ಕೃಷ್ಣರಾಯರ ಮುಖವನ್ನು ನೋಡುತ್ತ 'ನಾನು ಈಗ ಶಿವಮೊಗ್ಗಕ್ಕೆ ಬರುವುದಿಲ್ಲ. ದಯವಿಟ್ಟು ಕ್ಷಮಿಸಿ' ಎಂದು ಹೇಳಿದನು. ಅವರು ಖಿನ್ನರಾಗಿ ಮುಖವನ್ನು ತಗ್ಗಿಸಿಕೊಂಡರು.

ತುಳಸಾಬಾಯಿ ಎರಡು ನಿಮಿಷ ಮೌನವಾಗಿದ್ದು, 'ಸೀತಾರಾಮು! ನಿನಗೊಂದು ಮಾತು ಹೇಳುತ್ತೇನೆ ಕೇಳು. ನೀನು ಬದುಕೋ ಮಾರ್ಗ ಹೇಳುತ್ತೇನಪ್ಪ! ಅಷ್ಟೇ. ಈಗ ನನ್ನ ಮಾತು ತಳ್ಳಿಹಾಕದೆ ಶಿವಮೊಗ್ಗಕ್ಕೆ ನೀನು ಬಂದರೆ ನನ್ನ ಪೆಟ್ಟಿಗೆಯಲ್ಲಿರುವ ನನ್ನ ದುಡ್ಡು—ನಿನ್ನ ಮಾವನವರದೇನೂ ಅಲ್ಲ, ಅವರ ಹಂಗಿನ ದುಡ್ಡೇನೂ ಅಲ್ಲ—ನನ್ನ ದುಡ್ಡು, ಸಂಸಾರದಲ್ಲಿ ಉಳಿಸಿ ಕೂಡಿಸಿ ನಾನಿಟ್ಟುಕೊಂಡಿರುವ ದುಡ್ಡು ಒಂದು ಸಾವಿರ ರೂಪಾಯಿ ಕೊಡುತ್ತೇನೆ ಸೀತಾರಾಮು! ನಿನ್ನ ಅತ್ತೆಯ ಮಾತು, ನಿನ್ನತ್ತೆಯ ಪ್ರೀತಿ ಏನು ಎಂಬುದನ್ನು ಸ್ವಲ್ಪ ಪರೀಕ್ಷೆಮಾಡಿ ನೋಡು. ಒಳ್ಳೆಯ ಬಟ್ಟೆ ಬರೆ ಹೊಲಿಸಿಕೊಂಡು, ನಿನ್ನ ಸಾಲ ತೀರಿಸಿಕೊಂಡು, ಸರೋಜಳನ್ನು ಚೆನ್ನಾಗಿಟ್ಟುಕೊಂಡು ನೀನು ಬಾಳಬಹುದಪ್ಪ! ನಿನ್ನ ತಾಯಿಗೆ ಹಣ ತೋರಿಸು. ಶಿವಮೊಗ್ಗದಲ್ಲಿ ನನ್ನತ್ತೆಯವರು ಕೊಟ್ಟರಮ್ಮ ಎಂದು ಹೇಳು. ಆಕೆಯೂ ಸಂತೋಷಪಡುತ್ತಾಳೆ. ನಿನ್ನ ತಾಯಿಯನ್ನು ಬಿಟ್ಟುಬಿಡು ಎಂದು ಯಾವ ಪಾಪಿಷ್ಠೆ ಹೇಳಿಯಾಳು. ನಿನ್ನ ತಾಯಿಯೇನೊ ಒಂದು ತರಹ ಹಟಮಾರಿಯೇ! ಏನು ಮಾಡೋದು? ನನ್ನ ಮಾತು ಕೇಳು ಸೀತಾರಾಮು! ನಿನ್ನ ಮಾವನವರು ದೊಡ್ಡ ಮನುಷ್ಯರು, ನಿನ್ನ ಮೈದುನ ನಾಗರಾಜ ಪ್ರೊಫೆಸರು. ಅವರಿಗೆ ಎಂಥೆಂಥ ಅಧಿಕಾರಿಗಳೆಲ್ಲ ಪರಿಚಯ, ಸ್ನೇಹ. ನಿನಗೆ ಬೇಗ ಬೇಗ ಬಡ್ತಿಬಂದು ನೀನೂ ಅಮಲ್ದಾರಿಗೆ ಬರುವಹಾಗೆ ಮಾಡಿಸುತ್ತೇನೆ. ನೋಡು ಬೇಕಾದರೆ ನಿನ್ನತ್ತೆಯ ಗುಣ,

ನಿನ್ನತ್ತೆಯ ಸಾಮರ್ಥ್ಯ, ಪ್ರೀತಿ – ಎಲ್ಲ ನೋಡಪ್ಪ! ನಿನಗೆ ಶಿವಮೊಗ್ಗಕ್ಕೇನೆ ವರ್ಗ ಮಾಡಿಸಿ, ನಮ್ಮ ಸೀತಾರಾಮು ನಮ್ಮ ಕಣ್ಣೆದುರಿಗೇನೆ ಓಡಾಡುತ್ತ ಇರಲಿ. ಅಷ್ಟುದೂರ ಕಣ್ಣಿಗೆ ಮರೆಯಾಗಿದ್ದರೆ ನಾನು ಸೈರಿಸಲಾರೆ. ಮನೆಗೆ ಬಂದು ಹೋಗ್ತಾ ಇರುವ ಹಾಗೆ ಶಿವಮೊಗ್ಗಕ್ಕೇನೆ ಹಾಕಿಸಿರಿ ಎಂದು ನಿನ್ನ ಮಾವನವರ ಪ್ರಾಣ ಹಿಂಡುತ್ತಾ ಇದ್ದೇನೆ. ಅವರನ್ನ ಕೇಳಿ ನೋಡು. ನೀನು ಬದುಕೋ ಮಾರ್ಗ ನಾನು ಹೇಳುತ್ತೇನಪ್ಪ! ಸರೋಜಳನ್ನ ಆದರಿಸಿಕೊಂಡು— ಒಳ್ಳೆಯ ಅಪರಂಜಿಯಂಥ ಹುಡುಗಿ, ನೀನು ಅಪರಂಜಿಯಂಥ ಹುಡುಗ, ಇಬ್ಬರೂ ಅಪರಂಜಿಯಂಥ ಸಂಸಾರ ನಡಸುತ್ತ ಸುಖವಾಗಿರೋದನ್ನ ನಾನು ಕಂಡೇನೇ ಎಂದು ಹಗಲಿರುಳೂ ಹಾರೈಸುತ್ತಾ ಇದ್ದೇನೆ. ಬಾರಪ್ಪ! ಬೇರೆ ಆಲೋಚನೆಯೇ ಮಾಡಬೇಡ. ಬರುತ್ತೀಯಾ ಸೀತಾರಾಮು?' ಎಂದು ಕೇಳುತ್ತಾ ಅವನ ಬೆನ್ನುಮೇಲೆ ಕೈ ಹಾಕಿ, 'ನನ್ನ ಹಿರಿಯ ಅಳಿಯ ನೀನು! ಪ್ರಾಣವೆಲ್ಲ ನಿನ್ನ ಮೇಲೆ ಇದೆಯಪ್ಪ!' ಎಂದು ಬಹಳ ಪ್ರೇಮದಿಂದ, ಕಣ್ಣೀರು ಹರಿಸುತ್ತ ಹೇಳಿದಳು.

ಸೀತಾರಾಮುವಿನ ಹಿಂದಿನ ಸಂಕಲ್ಪ ಸಡಿಲವಾಗಿ ಹೋಯಿತು. ಅತ್ತೆಯವರನ್ನು ಅವನೂ ಕಣ್ಣೀರು ತುಂಬಿದ ಕಣ್ಣುಗಳಿಂದ ನೋಡಿದನು.

'ಆಲೋಚನೆ ಮಾಡುತ್ತೇನೆ. ಈಗ ನೀವು ಶಿವಮೊಗ್ಗಕ್ಕೆ ಹಿಂದಿರುಗಿ. ಎರಡು ದಿವಸ ಮಧ್ಯದಲ್ಲಿದೆಯಲ್ಲ' ಎಂದನು.

'ಸರೋಜ ನಮ್ಮನ್ನೇ ಎದುರುನೋಡುತ್ತಿರುತ್ತಾಳೆ ಅವಳಿಗೆ ಏನು ಹೇಳಲಪ್ಪ ಸೀತಾರಾಮು?'

'ಬಂದರೆ ಬರಬಹುದು ಎಂದು ತಿಳಿಸಿ. ಅತ್ತೆ ಮಾತ್ರ ಬರುವುದಿಲ್ಲ ಎಂದು ಹೇಳಿ. ನಾಗರಾಜನನ್ನ ಕೇಳಿದೆ, ನನ್ನ ಅಭಿನಂದನೆಗಳು— ಎಂದು ಅವನಿಗೆ ತಿಳಿಸಿ.'

'ಒಳ್ಳೆಯದಪ್ಪ! ನಾನು ಹೇಳಿದ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊ. ನಿನ್ನ ಶ್ರೇಯಸ್ಸನ್ನು ನಿನ್ನ ಅತ್ತೆಮಾವಂದಿರೂ ಕೋರುತ್ತಾರೆ ಎಂಬುದನ್ನು ಜ್ಞಾಪಕದಲ್ಲಿಟ್ಟುಕೊ. ದೊಡ್ಡ ಮನಸ್ಸು ಮಾಡಿ ಬಂದುಬಿಡು. ಹೆಂಡತಿಯನ್ನು ನೋಡುವುದಕ್ಕೆ ಬರಬೇಕಾದರೆ

ಸ್ವಬುದ್ಧಿ, ಸ್ವಂತ ಇಷ್ಟ ಅನುಸರಿಸಬೇಕಪ್ಪ! ಅವರನ್ನ ಇವರನ್ನ ಆಲೋಚನೆ ಕೇಳುವುದಕ್ಕೆ ಹೋಗಬಾರದು. ನಿನ್ನನ್ನು ಶನಿವಾರ ಸಾಯಂಕಾಲ ಎದುರು ನೋಡುತ್ತೇವೆ, ಖಂಡಿತ; ಖಾಲಿಮಾಡಬೇಡ.' ಎಂದು ತುಳಸಾಬಾಯಿ ಹೇಳಿದಳು.

ಸೀತಾರಾಮು ಅತ್ತೆಗೂ ಮಾವನಿಗೂ ನಮಸ್ಕಾರ ಮಾಡಿದನು. ಎಲ್ಲರೂ ಕೊಟಡಿಯಿಂದ ಹೊರಕ್ಕೆ ಬಂದರು. ಸ್ಕೂಲಿನಿಂದ ಹುಡುಗರೆಲ್ಲರೂ ಮನೆಗೆ ಹಿಂದಿರಗಿ ಬಂದರು. ತುಳಸಾಬಾಯಿ ಹಿತ್ತಿಲಕಡೆಯಿದ್ದ ಕಾವೇರಮ್ಮನನ್ನು ನೋಡ ಹೋಗಿ, 'ಕಾವೇರಮ್ಮ! ನಾವು ಹೊರಡೋಣವೆ? ಸೀತಾರಾಮು ಬರುವ ವಿಚಾರ ಖಂಡಿತವಾಗಿಲ್ಲ. ಆಲೋಚನೆ ಮಾಡಬೇಕು, ಕಾಗದ ಬರೆಯುತ್ತೇನೆ, ಆಲೋಚನೆ ಮಾಡಬೇಕು — ಎಂದು ಮಾತ್ರ ಹೇಳುತ್ತಾನೆ ನೀವು ದೊಡ್ಡ ಮನಸ್ಸು ಮಾಡಿ ಅವನನ್ನು ಕಳಿಸಿಕೊಡಿರಮ್ಮ. ಬಾಣಂತಿಯನ್ನು ನೋಡಿಕೊಳ್ಳುವುದಕ್ಕೆ ಮನೆಯಲ್ಲಿ ಯಾರೂ ಇಲ್ಲ. ಈ ರಾತ್ರಿಯೇ ನಾವು ವಾಪಸಾಗಬೇಕು' ಎಂದು ಹೇಳಿದಳು.

ಕಾವೇರಮ್ಮ ಹಾಲಿಗೆ ಬಂದಳು. ಕೃಷ್ಣರಾಯರು, 'ನೋಡಿಯಮ್ಮ! ಶ್ರೀನಿವಾಸರಾವ್‌ಗೆ ಬದಲು ನೀವಿದ್ದೀರಿ. ಅವನೇ ನೀವು ಎಂದು ನಾನು ಭಾವಿಸಿಕೊಂಡಿದ್ದೇನೆ. ನಮ್ಮದು ಏನು ಅಪರಾಧಗಳಿದ್ದರೂ ದಯವಿಟ್ಟು ಕ್ಷಮಿಸಿಬಿಡಿ. ನಾನು ನಿಮಗೊಬ್ಬ ಅಣ್ಣ ಎಂದು ತಿಳಿದುಕೊಳ್ಳಿ. ಸೀತಾರಾಮು ಶಿವಮೊಗ್ಗಕ್ಕೆ ಬರುವಂತೆ ದಯವಿಟ್ಟು ಮಾಡಿ. ನಾನು ಹೆಚ್ಚಿಗೆ ಹೇಳಲಾರೆ. ಹೋಗಿಬರೋಣವೇ? ಎಂದರು. 'ಒಳ್ಳೆಯದಪ್ಪ!' ಎಂದು ಕಾವೇರಮ್ಮ ಉತ್ತರಕೊಟ್ಟಳು. ಬಳಿಕ ತಮ್ಮ ಹಿರಿಯ ಮಗಳಿಗೆ, 'ತುಳಸಾಬಾಯಿಗೆ ಎಲೆ ಅಡಿಕೆ ತೆಂಗಿನ ಕಾಯಿ ತಂದುಕೊಡು, ಕುಂಕುಮ ತಂದು ಕೊಡು' ಎಂದು ಹೇಳಿದಳು. ಅವಳು ಅದರಂತೆ ಮಾಡಿದಳು. ಬಂದಿದ್ದ ಬೀಗರು ಮೋಟಾರನ್ನು ಹತ್ತಿಕೊಂಡು ತಮ್ಮ ಬೀಡಾರಕ್ಕೆ ಹೊರಟು ಹೋದರು.

# ೧೨. ಎರಡು ನೀತಿಗಳು

ಮನುಷ್ಯರ ಪ್ರೇರೇಪಣೆಗಳಿಗೆ, ಅವರು ಕೈಕೊಳ್ಳುವ ಕಾರ್ಯಗಳಿಗೆ ಕಾರಣ ಯಾವುದು? ನವ್ಮ ನಮ್ಮ ಚಿತ್ತವೃತಿಗಳು ಒಂದೊಂದು ಬಗೆಯಾಗಿ ರೂಪಗೊಳ್ಳುವುದಕ್ಕೆ ಕಾರಣಗಳೇನು? ನಾವು ಮಾಡಿದ ಕರ್ಮಗಳೇ? ನಾವು ಹುಟ್ಟಿದ ಮುಹೂರ್ತದಲ್ಲಿದ್ದ ಗ್ರಹಸಂಯೋಜನೆಗಳ ಪರಿಣಾಮವೇ? ನವ್ಮ ನಿರೀಕ್ಷಣೆಗಳಿಗೆ ನವ್ಮ ಪ್ರಯತ್ನಗಳಿಗೆ ಭಂಗವನ್ನು ತರುವ ಕ್ರೂರ ವಿಧಿ ದೇವತೆಗಳುಂಟೇ? ಅಥವಾ ತಮ್ಮ ಸುಖಕ್ಕಿಂತಲೂ ಹೆಚ್ಚಿನ ಸುಖವನ್ನು ಈ ಮನುಷ್ಯರು ಅನುಭವಿಸ ಹೋಗುತ್ತಾರಲ್ಲ ಎಂದು ದೇವತೆಗಳ ಹೊಟ್ಟೆಯುರಿಯೆ? ತಪಸ್ಸಿಗೆ ವಿಘ್ನ ತರುವುದು, ಸಿದ್ಧಿಯನ್ನು ಹಾಳುಮಾಡುವುದು, ಪತಿವ್ರತೆಯನ್ನು ಕೆಡಿಸುವುದು– ಇಂಥವುಗಳನ್ನು ದೇವೇಂದ್ರನು ಮಾಡಿ ನಿಮ್ಮ ಕಾರ್ಯಾರ್ಥವಾಗಿ ನಾನು ಮಾಡಿದೆ ಎಂದು ದೇವತೆಗಳಿಗೆ ಹೇಳುವುದರಲ್ಲಿ ನ್ಯಾಯವಿದೆಯೆ? ದುಷ್ಕರ್ಮಗಳನ್ನು ಮಾಡಿದವರು ಎಷ್ಟೋ ಮಂದಿ ಸುಖವಾಗಿಯೇ ಇರುತ್ತಾರೆ. ಇಹದಲ್ಲಿ ಯಾವ ಪೊಲೀಸ್‌ನವನ ಕೈಗೂ ಸಿಕ್ಕದೆ, ಯಾವ ಮ್ಯಾಜಿಸ್ಟ್ರೇಟ್ ಮುಂದೆಯೂ ನಿಂತು ದಂಡನೆಗೊಳಪಡದೆ ಇರುವ ಕೇಡಿಗರಿಲ್ಲವೇ? ದುರದೃಷ್ಟಶಾಲಿಗಳು ಯಾರೋ ಕೆಲವರು ಸಿಕ್ಕಿ ಬೀಳುತ್ತಾರೆ, ದಂಡನೆಯನ್ನನುಭವಿಸುತ್ತಾರೆ. ಇಲ್ಲಿ ತಪ್ಪಿಸಿಕೊಂಡರೇನು? ಮುಂದೆ ಯಮಲೋಕದಲ್ಲಿ ಶಿಕ್ಷೆಇದ್ದೇ ಇದೆ. ಮುಂದೆ ಎತ್ತುವ ಜನ್ಮದಲ್ಲಿ ಅನುಭವಿಸುತ್ತಾನೆ– ಎಂದು ಭವಿಷದ್ಭಯವನ್ನು ಶಾಸ್ತ್ರಕಾರರು ಜನರಲ್ಲುಂಟು ಮಾಡಿದ್ದಾರೆ. ಯಮಲೋಕವನ್ನು ಕಂಡವರು ಯಾರೋ? ಅಲ್ಲಿಂದ ಹಿಂದಿರುಗಿ ಬಂದು ಹೇಳಿದವರಾರೋ? ಮುಂದಿನ ಜನ್ಮದಲ್ಲಿ ಏನಾಗುತ್ತದೆಯೋ? ಜೈನ ಪುರಾಣಗಳಲ್ಲಿ ಹೇಳುವಂತೆ ಜಾತಿಸ್ಮರತ್ವದಿಂದ ಎಷ್ಟು ಜನ ತಿಳಿವಳಿಕೆ ಪಡೆದು ತಮ್ಮ ನಡತೆಯನ್ನು ತಿದ್ದಿಕೊಳ್ಳುತ್ತಾರೆ? ಗ್ರಹಚಾರ ಫಲವೋ ಕರ್ಮಫಲವೋ ಏನನ್ನೋ ಅನುಭವಿಸಬೇಕಾದರೆ ಮನುಷ್ಯ ಪ್ರಯತ್ನಗಳೇಕೆ? ದೇವತೆಗಳ ಮಸಲತ್ತು ಮನುಷ್ಯರ ಮೇಲೆ ಏಕಾಗಬೇಕು?

ಜ್ಯೋತಿಷ್ಯ ಸುಳ್ಳು ಎಂದು ನಾವೇಕೆ ಹೇಳೋಣ. ಜ್ಯೋತಿಷ್ಕರು ಸರಿಯಾಗಿ ಗುಣಿಸಿ ಫಲಗಳನ್ನು ತಿಳಿಸುತ್ತಾರೆಯೆ? ಅವರು ತಿಳಿಸಿ ದಂತೆಯೆ ನಡೆಯುತ್ತವೆಯೆ? ಜ್ಯೋತಿಷ್ಕರನ್ನು ನಂಬಿ ಕೆಟ್ಟವರಿಲ್ಲವೆ? ನಂಬದೆ ಬಾಳಿದವರಿಲ್ಲವೆ?

ನಮ್ಮ ಸೀತಾರಾಮು ತನ್ನ ಅತ್ತೆಯ ಮನೆಗೆ ಮಗನ ನಾಮಕರಣಕ್ಕೆ ಹೋಗಿದ್ದಿದ್ದರೆ ದೇವೇಂದ್ರನಿಗೆ ಏನಾಗುತ್ತಿತ್ತು? ಸೀತಾರಾಮು ಏನಾದರೂ ತೊಂಬತ್ತೊಂಬತ್ತು ಅಶ್ವಮೇಧಗಳನ್ನು ಮಾಡಿ ದೇವೇಂದ್ರನ ಸಿಂಹಾಸನಕ್ಕೆ ಸ್ಪರ್ಧಿಯಾಗಿ ನಿಂತಿದ್ದನೇ? ಸೀತಾರಾಮುವಿನ ಅತ್ತೆ ಅವನನ್ನು 'ಅಪರಂಜಿಯಂತಹ ಹುಡುಗ' ಎಂದು ಹೊಗಳುತ್ತಿದ್ದಾಗ, ಆಕೆ ಏನೋ ದೂರಾಲೋಚನೆಯಿಂದ ಸ್ವಾರ್ಥಸಾಧನೆಗಾಗಿ ಹೊಗಳು ತ್ತಿದ್ದರೂ, ಸತ್ಯವನ್ನೇ ಹೇಳಿದ್ದಾಳೆ ಎಂದು ನಮಗೆ ಅನ್ನಿಸಿತು. ಸೀತಾರಾಮು ಶಿವಮೊಗ್ಗಕ್ಕೆ ಏಕೆ ಹೋಗಲಿಲ್ಲ? ಪಾಪ! ಅವನು ಮಾರನೆಯ ದಿನವೇ ಕಚೇರಿಗೆ ಹೋಗದೆ ಒಂದು ತಿಂಗಳು ರಜ ತೆಗೆದು ಕೊಂಡು ಮನೆಯಲ್ಲಿ ಕುಳಿತುಬಿಟ್ಟನು!

ತಾನು ಶಿವಮೊಗ್ಗಕ್ಕೆ ಹೋಗುವುದು ತನ್ನ ತಾಯಿಗೆ ಸುತರಾಂ ಇಷ್ಟವಿಲ್ಲ ಎನ್ನುವುದು ಹಿಂದೆ ನಡೆದ ಪ್ರಕರಣಗಳಿಂದಲೂ, ಆಕೆ ಹಿಂದಿನ ದಿನ ಪ್ರಯೋಗಿಸಿದ ವಾಗ್ಬಾಣಗಳಿಂದಲೂ ಸೀತಾರಾಮುವಿಗೆ ಸ್ಪಷ್ಟವಾಗಿಯೇ ಇತ್ತು. ಆಕೆ ತನ್ನ ವಿಚಾರದಲ್ಲಿ ವಿಪರೀತ ಕೋಪವನ್ನು ಕೂಡ ಮಾಡಿಕೊಂಡಿದ್ದಾಳೆ; ಆದರೆ ನಿನ್ನೆಯ ದಿನ ಪ್ರಕಟಿಸಲಿಲ್ಲ; ಆ ಕೋಪ ಯಾವ ಕ್ಷಣದಲ್ಲಿ ಯಾವ ರೂಪದಲ್ಲಿ ಸ್ಫೋಟವಾಗುತ್ತದೆಯೋ ತಿಳಿಯದು ಎಂದು ಭಯಗ್ರಸ್ತನಾಗಿದ್ದನು. ಆಕೆ ಬೀಗರೆದುರಿನಲ್ಲಿ ಗಂಭೀರವಾಗಿಯೇ ನಡೆದುಕೊಂಡು ಶಾಂತ ಳಾಗಿಯೇ ಉತ್ತರಗಳನ್ನು ಕೊಡುತ್ತಿದ್ದರೂ ಆ ಬೀಗರು ತತ್ತರಿಸು ತ್ತಿದ್ದುದು ಅವನಿಗೆ ತಿಳಿಯದೇ ಹೋಗಲಿಲ್ಲ. ತಾನು ಅತ್ತೆಮಾವಂದಿರ ಸಂಚಿಗೆ ಒಳಗಾದವನು ಎಂಬ ಅಭಿಪ್ರಾಯ ತಾಯಿಗೆ ಬಂದಿದೆ. ಏನು ಮಾಡಬೇಕು? ಆಕೆಯ ಇಷ್ಟಕ್ಕೆ ವಿರುದ್ಧವಾದರೂ ಚಿಂತೆಯಿಲ್ಲ. ರಾಮಣ್ಣ ಹೇಳಿದ ಹಾಗೆ ಎರಡು ದಿನ ಹಾರಾಡಿಯಾಳು; ಆಮೇಲೆ

ತಣ್ಣಗಾಗುತ್ತಾಳೆ. ಸರೋಜ ಮನೆಗೆ ಬರಬೇಕಾದರೆ ಇನ್ನೂ ಐದು ತಿಂಗಳಿವೆ. ಈಗ ಶಿವಮೊಗ್ಗಕ್ಕೆ ನಾನು ಹೋಗುವುದರಿಂದ ತಾಯಿ ಕೋಪಮಾಡಿಕೊಂಡರೂ ಐದು ತಿಂಗಳ ದೀರ್ಘಾವಧಿಯಲ್ಲಿ ಸಮಾಧಾನಕ್ಕೆ ಬರುತ್ತಾಳೆ; ಮುಂದೆ ನನಗೆ ದುರ್ಬೋಧನೆಗಳನ್ನು ಮಾಡುವುದಕ್ಕೆ ಹಿಂಜರಿಯುತ್ತಾಳೆ. ಆದ್ದರಿಂದ ಆಕೆಗೆ ಕೋಪಬಂದರೂ ಚಿಂತೆಯಿಲ್ಲ; ಆಕೆಯ ಇಷ್ಟಕ್ಕೆ ವಿರುದ್ಧವಾದರೂ ಚಿಂತೆಯಿಲ್ಲ. ಏಕೆ ಧೈರ್ಯಮಾಡಿ ಹೋಗಬಾರದು? ಎಂದು ಮನಸ್ಸು ಹೇಳುತ್ತಿತ್ತು.

ಅತ್ತೆ ತನಗೆ ಮಾಡಿದ ಹಿತೋಪದೇಶವನ್ನು ಸೀತಾರಾಮು ವಿಮರ್ಶಿಸುತ್ತಿದ್ದನು. ಹೆತ್ತ ಮಗಳನ್ನು ನನಗೆ ಕೊಟ್ಟಮೇಲೆ ನನ್ನ ಮೇಲೆ ಅಭಿಮಾನ ಇರುವುದು ಸಹಜವಲ್ಲವೇ? ನಾನು ಏಳಿಗೆಗೆ ಬರಬೇಕೆಂದು ಆಕೆ ಬಯಸುವುದಿಲ್ಲವೇ? ಅತ್ತೆ ಎಂದರೆ ತಾಯಿಗೆ ಸಮಾನವಲ್ಲವೇ? ನಾನು ಆಕೆಯ ಮನಸ್ಸನ್ನು ಈಗಾಗಲೇ ಬಹಳ ನೋಯಿಸಿದ್ದೇನೆ. ಆಕೆಯೂ ಪಾಪ! ಎಷ್ಟು ಕಣ್ಣೀರು ಹಾಕಿದಳು. ಸಾಹೇಬರ ಮನೆಯಲ್ಲಿ ನನ್ನನ್ನು ನೋಡಿದಾಗ ಅಳುತಳುತ ಬಂದು ತಬ್ಬಿಕೊಂಡು ಕುಸಿದು ಬಿದ್ದಳಲ್ಲ. ಆಕೆಗೇನು ಸಂಕಟವಿಲ್ಲವೇ? ಕೃಷ್ಣರಾಯರು ದೊಡ್ಡ ಮನುಷ್ಯರು, ದೊಡ್ಡ ಗುಣ. ನಾನು ಅವರ ಮನಸ್ಸು ನೋಯಿಸುವುದು ನ್ಯಾಯವೇ? ಅವರು ನನ್ನ ತಂದೆಯ ಸ್ನೇಹಿತರು ಬೇರೆ. ಅವರಿಗೂ ನನ್ನನ್ನು ನೋಡಿದಾಗ ಕಣ್ಣೀರು ಬಂತು. ಅವರಿಗಿಂತ ಹೆಚ್ಚಾಗಿ ಅತ್ತೆಯವರಿಗೆ ನನ್ನ ಮೇಲೆ ಪ್ರಾಣ! ಯಾವ ಹೆಂಗಸು ತನ್ನಲ್ಲಿರುವ ಹಣವನ್ನು ಧಾರಾಳವಾಗಿ ಕೊಡುತ್ತಾಳೆ? ಹೆಂಡತಿಯಾದವಳು ಗಂಡನಿಗೇ ಕೊಡುವುದಿಲ್ಲ, ತಾಯಿ ಮಗನಿಗೇ ಕೊಡುವುದಿಲ್ಲ. ಈ ಹಣದ ವಿಚಾರದಲ್ಲಿ ಗಂಡ ಹೆಂಡರಿಗೆ, ತಾಯಿ ಮಕ್ಕಳಿಗೆ, ತಂದೆ ಮಕ್ಕಳಿಗೆ ಎಷ್ಟು ಮನಸ್ತಾಪಗಳು ಜಗಳಗಳು ಆಗುತ್ತವೆ! ಒಂದು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ ಎಂದು ಉದಾರ ಬುದ್ಧಿಯಿಂದ ಆಕೆ ಹೇಳಿದಳು. ನನ್ನಲ್ಲಿ ಪ್ರೇಮವಿಲ್ಲದಿದ್ದರೆ ಹೇಳಿಯಾಳೇ? ಶಿವಮೊಗ್ಗಕ್ಕೆ ಹೋಗುವುದರಿಂದ ಎಲ್ಲ ವಿಚಾರಗಳಲ್ಲಿಯೂ ಲಾಭವುಂಟು. ಅತ್ತೆ ಮಾವಂದಿರಿಗೆ ಸಂತೋಷ, ನನಗೂ ನನ್ನ ಸರೋಜಳಿಗೂ ಸಂತೋಷ!

ಜತೆಗೆ ಕೈಗೆ ನಗದು ಹಣವೂ ಬರುತ್ತದೆ. ಸುತ್ತಮುತ್ತಲ ನನ್ನ ಸಾಲ ತೀರಿಸಿಕೊಂಡು, ಬ್ಯಾಂಕಿನಲ್ಲೂ ನಾಲ್ಕು ಕಾಸಿಟ್ಟುಕೊಂಡು ನೆಮ್ಮದಿಯಾಗಿ ನಾನು ಬಾಳಬಹುದಲ್ಲ. ಈ ಹಾಳು ತಾಪತ್ರಯ ಕೊನೆಗೊಳ್ಳಬಹುದಲ್ಲ. ನಾನಾಗಿ ಯಾಚಿಸಿದ್ದಲ್ಲ, ಕಾಡಿ ಪಡೆದದ್ದೂ ಅಲ್ಲ. ಅವರಾಗಿ ಸಂತೋಷದಿಂದ ಅಳಿಯನಿಗೆ ಕೊಡುವ ಬಹುಮಾನ. ಅದರಲ್ಲಿ ದೋಷವೇನಿದೆ? ತಾಯಿಯೂ ಸಂತೋಷಪಟ್ಟಾಳು. ಒಂದು ವೇಳೆ ಅಸಮಾಧಾನ ಮಾಡಿಕೊಂಡರೆ ಸಮಾಧಾನ ಮಾಡಿದರಾಯಿತು. ಇಷ್ಟಾಗಿ ನಾನು ಹೋಗುವುದು ಎಲ್ಲಿಗೆ? ನನ್ನ ಹೆಂಡತಿ ಹೆತ್ತಿರುವಾಗ ಅತ್ತೆಯ ಮನೆಗೆ, ನನ್ನ ಮಗನ ನಾಮಕರಣಕ್ಕಾಗಿ! ನಾನು ಹೋಗದಿದ್ದರೆ ಆಕ್ಷೇಪಣೆಯೇ ಹೊರತು, ನಾನು ಹೋದರೆ ಯಾರೂ ಆಕ್ಷೇಪಿಸರು. ತಾಯಿ ಒಂದು ತರಹ ವಕ್ರ. ಬೀಗಿತ್ತಿಯ ಮೇಲಿನ ಕೋಪವನ್ನು ನನ್ನ ಮೇಲೆ ತೀರಿಸುತ್ತಾಳೆ. ಇದು ಯಾವ ನ್ಯಾಯ? ಈ ಅನ್ಯಾಯಕ್ಕೆ ನಾನು ಏತಕ್ಕೆ ಬೆಂಬಲ ಕೊಡಬೇಕು? ಮುಂದೆ ನಾನು ಏಳಿಗೆಗೆ ಬರುವುದಕ್ಕೂ ನನ್ನ ಅತ್ತೆಮಾವಂದಿರ ಸಹಾಯ ಆವಶ್ಯಕವಲ್ಲವೇ? ಎಲ್ಲಕ್ಕಿಂತ ಹೆಚ್ಚಾಗಿ ನನ್ನ ಅತ್ತೆಯವರು ಕಣ್ಣೀರು ಹಾಕುತ್ತ ಪ್ರೇಮದಿಂದ ನನ್ನ ಬೆನ್ನುಮೇಲೆ ಕೈ ಹಾಕಿ, 'ನನ್ನ ಹಿರಿಯ ಅಳಿಯ ನೀನು, ಪ್ರಾಣವೆಲ್ಲ ನಿನ್ನ ಮೇಲೆ ಇದೆಯಪ್ಪ!' ಎಂದು ಹೇಳಿದ್ದನ್ನೂ ಒಂದು ಸಾವಿರ ರೂಪಾಯಿಗಳನ್ನು ತಮ್ಮ ಪೆಟ್ಟಿಗೆಯಿಂದ ತೆಗೆದುಕೊಡುತ್ತೇನೆ ಎಂದು ಹೇಳಿದ್ದನ್ನೂ ನಾನು ಮರೆಯುವುದು ಹೇಗೆ? ಶಿವಮೊಗ್ಗಕ್ಕೆ ಹೋಗಿಬರುವುದೇ ಸರಿ. ಕಾಗದವನ್ನು ಬರೆದು ಹಾಕುತ್ತೇನೆ. ನಾಳೆ ಶನಿವಾರ ಬೆಳಗ್ಗೆ ಅವರಿಗೆ ಸೇರುತ್ತದೆ. ನಾಳೆ ಶನಿವಾರ ಬೆಳಗ್ಗೆಯೇ ನಾನೂ ಇಲ್ಲಿಂದ ಹೊರಟು ಸಾಯಂಕಾಲ ಶಿವಮೊಗ್ಗವನ್ನು ಸೇರುತ್ತೇನೆ. ಈ ದುರಂತ ಕಥೆ ಇಲ್ಲಿಗೆ ಸಂತೋಷವಾಗಿ ಮುಕ್ತಾಯವಾಗಲಿ. ಇನ್ನು ಬೆಳಸುವುದು ಬೇಡ—ಎಂದು ಸೀತಾರಾಮು ನಿರ್ಧರಕ್ಕೆ ಬಂದನು.

ಮೇಲಿನ ನಿರ್ಧರ ಲಿಖಿತರೂಪಕ್ಕೆ ಬರುವ ಹೊತ್ತಿನಲ್ಲೇ ಅವನ ಕಿವಿಗೆ ಏನೋ ಧಡ್ ಧಡ್ ಎಂದು ಸದ್ದು ಕೇಳಿಬಂತು. ಹಾಲಿನಿಂದ ಹುಡುಗರೆಲ್ಲರ ಗಟ್ಟಿಯಾದ ಅಳು ಕೇಳಿಬಂತು. ಏನಾಯಿತೋ ಎಂದು

ಹೆದರಿ ತಟ್ಟನೆ ಎದ್ದು ಹೋದನು. ಹಾಲಿಗೆ ಹೋದವನೇ ಕ್ಷಣದಲ್ಲಿ ಹಿಂದಿರುಗಿ ಬೀದಿಯ ಬಾಗಿಲನ್ನು ಹಾಕಿ ಅಗುಳಿಯನ್ನು ನೂಕಿ ಹಾಲಿಗೆ ಬಂದನು. ತನ್ನ ತಾಯಿ ಮೈಮೇಲೆ ಪ್ರಜ್ಞೆಯೇ ಇಲ್ಲದಂತೆ ಗೋಡೆಗೆ ತಲೆಯನ್ನು ಚಚ್ಚಿಕೊಳ್ಳುತ್ತ ಅಸ್ತವ್ಯಸ್ತವಾದ ಬಟ್ಟೆಗಳಿಂದ ಕೂಡಿ, 'ಅಯ್ಯೋ! ಹಾಳು ಪ್ರಾಣ ಹೋಗಲಿಲ್ಲವೇ! ಹಾಳು ಪ್ರಾಣ ಹೋಗಲಿಲ್ಲವೇ!' ಎಂದು ಕೂಗುತ್ತಿದ್ದುದು ಕಂಡುಬಂತು. ತಮ್ಮಂದಿರೂ ತಂಗಿಯರೂ ಏನೂ ತೋರದೆ ಅಳುತ್ತಾ ನಿಂತಿದ್ದರು. ಸೀತಾರಾಮು ತಟ್ಟನೆ ನೀರಮನೆಗೆ ಹೋಗಿ ಚೆಂಬಿನಲ್ಲಿ ನೀರನ್ನು ತಂದು, ತಲೆಗೆ ತಟ್ಟಿ, ಗೋಡೆಯಿಂದ ಸ್ವಲ್ಪ ದೂರಕ್ಕೆ ತಾಯಿಯನ್ನೆಳೆದು ಕೂರಿಸಿದನು. 'ಏನಾಯಿತಮ್ಮ? ಇದೇಕೆ ಹೀಗೆ ಮಾಡಿದೆ? ಹುಡುಗರೆಲ್ಲ ಗಾಬರಿಯಾಗಿ ಅಳುತ್ತಿದಾರೆ. ಸ್ಥೈರಿಸಿಕೋ! ಏನಾಯಿತು ಹೇಳು' ಎಂದು ಕೇಳಿದನು.

'ಅಯ್ಯೋ! ಸಂಕಟ! ಸಂಕಟ! ಹಾಳು ಪ್ರಾಣ ಹೋಗದಲ್ಲ!'

'ಏಕಮ್ಮ ಹೀಗೆ ಹೇಳುತ್ತೀಯೆ? ನಿನ್ನ ಪ್ರಾಣ ಏಕೆ ಹೋಗಬೇಕು? ಅಪ್ಪ ಸತ್ತದ್ದು ಒಂದು ಸಾಲದೇ? ಆ ದುಃಖವೇ ಇನ್ನೂ ಮರೆತಿಲ್ಲ. ಇನ್ನು ನೀನೂ ಸಾಯಬೇಕೇ? ಈಗ ಏನಾಯಿತು? ಯಾರೇನು ಮಾಡಿದರು? ಹೇಳು.'

ಎಂದು ಕೇಳುತ್ತ ತನ್ನ ತಾಯಿಯ ತಲೆಯನ್ನು ನೋಡಿದಾಗ ಅಲ್ಲಲ್ಲಿ ಬೊಬ್ಬೆಗಳಾಗಿದ್ದುದು ಕಂಡುಬಂತು. ಸೀತಾರಾಮು ತಮ್ಮಂದಿರನ್ನು ನೋಡಿ, 'ನೀವೇನು ಮಾಡಿದಿರಪ್ಪ? ಅಮ್ಮನನ್ನು ಏಕೆ ರೇಗಿಸಿದಿರಿ? ಅವಳು ಹೇಳಿದ ಕೆಲಸ ಮಾಡಿದಿರೋ ಇಲ್ಲವೋ? ಅವಳ ಇಷ್ಟದಂತೆ ನೀವು ನಡೆಯಬಾರದೇ?' ಎಂದು ಕೇಳಿದನು. ತಮ್ಮಂದಿರಲ್ಲಿ ಹಿರಿಯನು,

'ನಾವೇನೂ ಮಾಡಲಿಲ್ಲಣ್ಣ! ಅಮ್ಮ ನಮಗೇನೂ ಹೇಳಲಿಲ್ಲ. ಇದ್ದಕ್ಕಿದ್ದ ಹಾಗೆ ಅಡಿಗೆಯ ಮನೆಯಿಂದ ಬಂದಳು. ಬೀದಿಗೆ ಹೋಗುತ್ತಾಳೋ ಏನೋ ಎಂದು ನಾವು ನೋಡುತ್ತಿದ್ದೆವು. ತಟ್ಟನೆ ಆ ಗೋಡೆಗೆ ಹೋಗಿ ಢಿಕ್ಕಿ ಹೊಡೆದಳು. ಏಕೆ ಎನ್ನುವುದೇ ಗೊತ್ತಾಗಲಿಲ್ಲ.

ಅಮ್ಮ ಕೆಳಕ್ಕೆ ಬಿದ್ದವಳು ಎದ್ದು ಕುಳಿತು ನಿಮಿಷದಲ್ಲಿ ಹತ್ತಾರು ಬಾರಿ ತಲೆಯನ್ನು ಗೋಡೆಗೆ ಧಡ್ ಧಡ್ ಎಂದು ಬಡಿದುಕೊಂಡಳು. ನಾನು ಕೂಗಿಕೊಂಡೆ—ನೀನೂ ಬಂದೆ. ನಮಗೇನೂ ತಿಳಿಯದಣ್ಣಾ' ಎಂದು ಅಳುತ್ತಾ ಹೇಳಿದನು. ಹುಡುಗರೆಲ್ಲ ಆ ತಾಯಿಯ ಸುತ್ತಲೂ ನಿಂತು, 'ಏನಾಯಿತಮ್ಮ ನಿನಗೆ?' ಎಂದು ಕೇಳಿದರು. ಸೀತಾರಾಮು ದಿಗ್ಭ್ರಮೆಹಿಡಿದು ನಿಂತಿದ್ದನು.

'ನನ್ನ ಕಣ್ಣುಮುಂದೆ ನಿಲ್ಲಬೇಡ ಹೋಗಪ್ಪಾ! ಈ ಸಾಯಂ ಕಾಲದೊಳಗೆ ಈ ಮನೆಯಿಂದ ಈ ಹೆಣ ಹೊರಕ್ಕೆ ಸಾಗುತ್ತದೆಯಪ್ಪ! ಹೋಗು, ಹೋಗಿ ನಾಲ್ಕು ಜನ ಬ್ರಾಹ್ಮಣರನ್ನು ಗೊತ್ತುಮಾಡಿಕೋ. ಆ ಕೃಷ್ಣಾಚಾರಿಗೆ ಹೇಳಿ ಬಾ. ಎಲ್ಲಿಯಾದರೂ ತೊಲಗಿ ಹೋದಾನು! ಸಾಯಂಕಾಲ ಶವಸಂಸ್ಕಾರ ಆಗಬೇಕಲ್ಲ. ತಂಗಳ ಹೆಣ ಮಾಡ ಬೇಡ' ಎಂದು ರೋದಿಸುತ್ತ ಕಾವೇರಮ್ಮ ಬಳಬಳನೆ ವಾಂತಿ ಮಾಡಿ ದಳು. ಹಾಲಿನಲ್ಲೆಲ್ಲ ಹೊಲಸಾಯಿತು. ಆಕೆ ಹಾಗೆಯೇ ಸುಸ್ತಾಗಿ ನೆಲಕ್ಕುರುಳಿಬಿದ್ದಳು. ಸೀತಾರಾಮು ತಂಗಿಯರ ಸಹಾಯದಿಂದ ತಾಯಿಯನ್ನು ಚೊಕ್ಕಟವಾದ ಕಡೆಗೆ ಸಾಗಿಸಿ, ಆಕೆಯ ಮುಖ ಬಾಯಿ ತೊಳಸಿ, ಸರಿಯಾಗಿ ಬಟ್ಟೆ ಉಡಿಸಿ ಹಾಸಿಗೆಯನ್ನು ತಂದುಹಾಕಿ, 'ನೀನು ಸ್ವಸ್ಥವಾಗಿ ಮಲಗಿಕೊಳ್ಳಮ್ಮ. ನಾನು ಶಿವಮೊಗ್ಗಕ್ಕೂ ಹೋಗುವು ದಿಲ್ಲ, ಎಲ್ಲಿಗೂ ಹೋಗುವುದಿಲ್ಲ' ಎಂದು ಹೇಳಿ ಮಲಗಿಸಿ ಮೇಲೆ ಹೊದ್ದಿ ಸಿದನು. ತಂಗಿಯರಿಗೆ ಹೇಳಿ ವಾಂತಿಯನ್ನು ತೆಗೆಯಿಸಿ ಹಾಲನ್ನೆಲ್ಲ ಚೊಕ್ಕಟ ಮಾಡಿ ಸ್ವಲ್ಪ ಗಂಧದಪುಡಿ ಧೂಪವನ್ನು ಹಾಕಿದನು. ಹಿರಿಯ ತಮ್ಮನಿಗೆ, 'ಅಪ್ಪಾ! ನೀನೇ ಸ್ನಾನಮಾಡಿ ಮಡಿಯುಟ್ಟುಕೊಂಡು ಅಡಿಗೆ ಪೂರ್ತಿ ಮಾಡು' ಎಂದು ಹೇಳಿದನು.

ಸೀತಾರಾಮು ತಾನು ಶಿವಮೊಗ್ಗಕ್ಕೆ ಬರೆದಿದ್ದ ಕಾಗದವನ್ನು ಹರಿದು ಹಾಕಿ ಆ ಚೂರುಗಳನ್ನು ನೀರೊಲೆಗೆ ಎಸೆದು ಬಂದನು. ಒಂದು ಕಾರ್ಡಿನಲ್ಲಿ, 'ತಾಯಿಗೆ ಮೈ ಹುಷಾರಿಲ್ಲ. ವಾಂತಿ, ತಲೆನೋವು; ಜ್ವರವೂ ಬಂದಿದೆ. ನಾನು ಈಗ ಶಿವಮೊಗ್ಗಕ್ಕೆ ಬರುವುದು ಸಾಧ್ಯ ವಿಲ್ಲ. ಮನೆಯಲ್ಲಿ ನೋಡಿಕೊಳ್ಳುವವರು ಯಾರೂ ಇಲ್ಲ' ಎಂದು

ಜ್ವರದ ಮಾತನ್ನೂ ಸೇರಿಸಿ ಶಿವಮೊಗ್ಗಕ್ಕೆ ಬರೆದು ಹಾಕಿದನು. ಒಂದು ನಿಮಿಷದಲ್ಲಿ ಸೀತಾರಾಮುವಿನ ಗಾಳಿಗೋಪುರಗಳು ಹೀಗೆ ಉರುಳಿ ಬಿದ್ದುವು.

ನಾವು ಹಿಂದೆ ಹೇಳಿದಂತೆ ಸೀತಾರಾಮು ಒಂದು ತಿಂಗಳ ರಜವನ್ನು ತೆಗೆದುಕೊಂಡನು. ಅದಕ್ಕೆ ಮುಖ್ಯವಾದ ಒಂದು ಕಾರಣ: ತಾನು ಶಿವಮೊಗ್ಗಕ್ಕೆ ಹೋಗದೆ ಕಚೇರಿಗೆ ಹೋಗುತ್ತಿದ್ದರೆ ಕೃಷ್ಣರಾಯರು ಬಂದಿದ್ದ ಕೆಲಸ ನೆರವೇರಲಿಲ್ಲ, ಅಳಿಯ ಹಟ ಮಾಡಿ ಹಿಂದೆ ನಿಂತು ಬಿಟ್ಟ ಎಂಬ ಅಭಿಪ್ರಾಯ ಸಾಹೇಬರಿಗೆ ಬರುತ್ತದೆ. ಅವರೇನಾದರೂ ಮಾತುಗಳನ್ನಾಡುತ್ತಾರೆ, ಈ ಗೃಹಕೃತ್ಯ ವಿಚಾರಗಳೆಲ್ಲ ಸಾಹೇಬರೊಂದಿಗೆ ಚರ್ಚೆಗೆ ಬರುತ್ತದೆ; ಇಂಥ ಸಂದರ್ಭಗಳು ಒದಗುತ್ತವೆಯಲ್ಲ, ಆದ್ದರಿಂದ ರಜ ತೆಗೆದುಕೊಳ್ಳೋಣ, ಮುಂದೆ ನೋಡೋಣ ಎಂಬ ಆಲೋಚನೆ. ಉಳಿದ ಕಾರಣಗಳು: ಆ ದಿನ ಬೆಳಗ್ಗೆ ಮನೆಯಲ್ಲಿ ನಡೆದ ಘಟನೆಗಳು. ಅವುಗಳಿಂದ ಮನಸ್ಸಿನಲ್ಲಾದ ಬೇಸರಿಕೆ, ಸಂಕಟ. ಅಮ್ಮ ಏಕೆ ಸಾಯಬೇಕು? ತಾನೇ ಏಕೆ ಸತ್ತುಹೋಗಬಾರದು? ಎನ್ನುವಷ್ಟು ನೈರಾಶ್ಯ, ದುಃಖ. ಎರಡು ಪ್ರಿಯವ್ಯಕ್ತಿಗಳನ್ನೂ ಇಟ್ಟುಕೊಂಡು ಅದದಕ್ಕೆ ಮಾಡಬೇಕಾದ ಕರ್ತವ್ಯವನ್ನು ಮಾಡುತ್ತ ಯಾವ ವಿಚಾರಕ್ಕೂ ಭಂಗ ಬರದಂತೆ ತ್ರಾಸಿನ ದಂಡದಂತೆ ಸಮತೋಲವಾಗಿ ಇರೋಣವೆಂದರೆ ಅವಕಾಶವೇ ಇಲ್ಲವಲ್ಲ ಎರಡರಲ್ಲಿ ಒಂದನ್ನು ಬಿಡು, ಮತ್ತೊಂದನ್ನು ಇಟ್ಟುಕೊಂಡು ಬಾಳು ಎಂದು ಸಮಸ್ಯೆ ಎದುರಿಗೆ ಬಂದು ನಿಂತರೆ, ನಾವಿಟ್ಟಿರುವ ಪ್ರೇಮವನ್ನೂ ಭಕ್ತಿಯನ್ನೂ ಸ್ವಾರ್ಥಕ್ಕೆ ತಮ್ಮ ಹಟಸಾಧನೆಗೆ ಬಳಸಿಕೊಂಡು ಹಿಂಸೆ ಮೊಂಡಾಟ ಮತ್ತು ಆರ್ಭಟಗಳಿಂದ ನಮ್ಮನ್ನು ಸಂಕಟಕ್ಕೆ ಸಿಕ್ಕಿಸಿದರೆ ಏನು ಮಾಡಬೇಕು? ಎಂದು ಅವನು ದುಃಖಿಸುತ್ತಿದ್ದನು.

ಸೀತಾರಾಮರಾಯನು ಸಾಯಂಕಾಲ ನಾಲ್ಕು ಗಂಟೆಯವರೆಗೂ ತನ್ನ ಕೊಟಡಿಯಲ್ಲಿ ಮಲಗಿದ್ದನು. ಆಮೇಲೆ ಎದ್ದು ಮುಖವನ್ನು ತೊಳೆದುಕೊಂಡು ಹಾಲಿಗೆ ಬಂದು ತಾಯಿಯನ್ನು ನೋಡಿದನು. ಆಕೆ ಮಧ್ಯಾಹ್ನ ಹೊಟ್ಟೆಗೆ ಏನನ್ನೂ ತೆಗೆದುಕೊಂಡಿರಲಿಲ್ಲ. ಕೈಮುಟ್ಟಿ

ನೋಡಿದನು. ಮೈ ಬಿಸಿಯಾಗಿತ್ತು, ಜ್ವರ ಬಂದಿತ್ತು. ತಾನೇನೋ ಬೆಳಗ್ಗೆ ಮಾವನವರಿಗೆ ಕಾರ್ಡು ಬರೆಯುವಾಗ, ಸ್ಥಿತಿ ಉಲ್ಬಣವಾಗಿದೆ ಯೆಂದು ಸೂಚಿಸುವುದಕ್ಕೋಸ್ಕರ ಜ್ವರವೂ ಇದೆ ಎಂದು ಸೇರಿಸಿ ಬರೆದರೆ ಅದು ನಿಜವೇ ಆಗಬೇಕೇ? ಎಂದು ಚಿಂತೆಗೊಂಡನು.

'ಹೊಟ್ಟೆಗೇನಾದರೂ ಗಂಜಿ ಮಾಡಿಕೊಡಲೇ !' ಎಂದು ತಾಯಿ ಯನ್ನು ಕೇಳಿದನು.

'ಏನೂ ಬೇಡಪ್ಪ! ನಾನು ಹೀಗೆಯೇ ಸಾಯುತ್ತೇನೆ ಮುಂದಿನ ಕೆಲಸಕ್ಕೆ ಸಿದ್ಧಮಾಡಿಕೊಳ್ಳಪ್ಪ!' ಎಂದು ತಾಯಿ ಉತ್ತರ ಕೊಟ್ಟಳು.

ಸೀತಾರಾಮು ಮಾತನ್ನೇನೂ ಆಡಲಿಲ್ಲ. ಮಾತು ಬೆಳಸು ವುದರಿಂದ ಆಕೆಗೂ ಆಯಾಸ, ತನ್ನ ಮನಸ್ಸಿಗೂ ಅಶಾಂತಿ; ಸುಮ್ಮನಿರು ವುದು ಮೇಲು ಎಂದು ಎರಡು ನಿಮಿಷ ಕುಳಿತಿದ್ದು ತನ್ನ ಕೊಟಡಿಗೆ ಬಂದುಬಿಟ್ಟನು. ಜ್ವರಕ್ಕೆ ಔಷಧವನ್ನು ತಂದುಕೊಡೋಣವೆಂದರೆ–ಆಸ್ಪ ತ್ರೆಯ ಔಷಧ, ಶೂದ್ರರು ಮುಟ್ಟಿದ ನೀರು ನಾನು ಕುಡಿಯುವುದಿಲ್ಲ ಎಂದು ತಾಯಿ ತಿರಸ್ಕರಿಸುತ್ತಾಳೆ. ಔಷಧವನ್ನು ಕೊಡದಿದ್ದರೆ ತಂದು ಕೊಂಡ ರೋಗ ಮುರಿದುಕೊಂಡು ಹೋದರೆ ಏನು ಮಾಡಬೇಕು? ಯಾವುದಕ್ಕೂ ರಾಮಣ್ಣನೊಡನೆ ಆಲೋಚನೆ ಮಾಡೋಣವೆಂದು ಸೀತಾರಾಮು ಅವನ ಮನೆಗೆ ಸಾಯಂಕಾಲ ಐದೂವರೆ ಗಂಟೆಗೆ ಹೋದನು.

ರಾಮಣ್ಣ ಆಗತಾನೆ ಕಚೇರಿಯಿಂದ ಮನೆಗೆ ಬಂದಿದ್ದ. ಸೀತಾ ರಾಮುವನ್ನು ನೋಡಿ,

'ನಾನೇ ನಿನ್ನ ಮನೆಗೆ ಬರಬೇಕೆಂದಿದ್ದೆ. ಬಾ ಒಳಕ್ಕೆ ಬಾ' ಎಂದು ಆದರಿಸಿ ಕರೆದು ಕುಳ್ಳಿರಿಸಿದನು. ಕಾಫಿಯನ್ನು ತಂದುಕೊಟ್ಟನು.

'ಸಾಯಂಕಾಲ ಆರುಗಂಟೆಯಲ್ಲಿ ಕೊಟಡಿಯಲ್ಲಿ ಸೇರಿಕೊಂಡು ಸೊಳ್ಳೆಗಳಂತೆ ಗೊಂಯ್‌ಗುಟ್ಟುವುದೇಕೆ? ಹೊರಗೆ ಹೋಗೋಣ; ಹಾಗೆಯೇ ಕಾಲಾಡಿಸಿಕೊಂಡು ಬರೋಣ' ಎಂದು ಸೀತಾರಾಮು ಹೇಳಿ ದನು. ಸ್ನೇಹಿತರು ಮನೆಯಿಂದ ಹೊರಬಿದ್ದರು. ದಾರಿಯಲ್ಲಿ ಸೀತಾ ರಾಮು ರಾಮಣ್ಣನಿಗೆ ಎಲ್ಲ ಸಂಗತಿಗಳನ್ನೂ ತಿಳಿಸಿದನು. ತನ್ನ ಶಿವ

ಮೊಗ್ಗದ ಪ್ರಯಾಣ ನಿಂತದ್ದು ಮಾತ್ರವಲ್ಲ, ಮುಂದೆ ಶಿವಮೊಗ್ಗದ ಸಂಬಂಧವೂ ಕಡಿದುಹೋದ ಹಾಗೆಯೇ ಎಂದೂ ತಿಳಿಸಿದನು.

'ಅಂಥ ಅನ್ಯಾಯಗಳಿಗೂ ಅವಿವೇಕಗಳಿಗೂ ನೀನು ಅವಕಾಶ ಕೊಡಬಾರದು ಸೀತಾರಾಮು? ನೀನು ಗಂಡಸಲ್ಲವೇ? ಪ್ರೀತಿ ಭಕ್ತಿ ಮನಸ್ಸಿನಲ್ಲಿರಲಿ. ಹೊರಗೆ ಕಾಠಿನ್ಯ ತೋರಿಸಬೇಕು. ನಿನ್ನ ಯಾಜಮಾನ್ಯ ಸ್ಥಾಪಿಸಿಕೊಳ್ಳಬೇಕು. ನಿಷ್ಠುರ ಬಂದರೆ ಬರಲಿ. ಸಂಸಾರದಲ್ಲಿ ನಿಷ್ಠುರಗಳು ಬರುತ್ತಲೇ ಇರುತ್ತವೆ. ಈಗ ಇವಕ್ಕೆಲ್ಲ ಕಾರಣ: ನಿನ್ನ ತಪ್ಪು ಸ್ವಲ್ಪ ಇದೆ' ಎಂದು ರಾಮಣ್ಣ ಹೇಳಿದನು.

'ಏನು ನನ್ನ ತಪ್ಪು? ಶಿವಮೊಗ್ಗದಲ್ಲಿ ಹಿಂದೆ ನಡೆದ ಪ್ರಕರಣ ವನ್ನು ಬಿಟ್ಟು ಬೇರೆ ಏನಾದರೂ ಇದ್ದರೆ ಹೇಳು. ನನ್ನದು ತಪ್ಪಿದ್ದರೆ ಒಪ್ಪಿಕೊಳ್ಳುತ್ತೇನೆ, ತಿದ್ದಿಕೊಳ್ಳುತ್ತೇನೆ.'

'ನೀನು ನಿನ್ನ ತಾಯಿಯಲ್ಲಿ ಅಧಿಕವಾದ ಭಕ್ತಿ ಪ್ರೀತಿ ಇಟ್ಟಿರು ವುದೇ ತಪ್ಪು. ಆಕೆಗೆ ಅವು ತಿಳಿಯುವಂತೆಯೇ ವರ್ತಿಸುತ್ತೀಯೆ. ನಮ್ಮ ಸೀತಾರಾಮು ಮಾತೃಭಕ್ತಿಯುಳ್ಳ ಹುಡುಗ ಎಂದು ಪ್ರಶಸ್ತಿ ಕೋರುವ ರೀತಿಯಲ್ಲಿ ನಡೆಯುತ್ತೀಯೆ. ನೀನು ಹಾಗೆ ಮಿತಿಮೀರಿ ಇಡುವುದೇ ತಪ್ಪು. ಅದನ್ನು ಪ್ರಕಟಪಡಿಸುವುದೂ ತಪ್ಪು. ನಿನಗೆ ನನ್ನ ಸ್ನೇಹಿತನೊಬ್ಬನ ದುರಂತ ಕಥೆಯನ್ನು ಹೇಳುತ್ತೇನೆ, ಕೇಳು: ಆತ ಹೈಸ್ಕೂಲ್ ಹೆಡ್ಮಾಸ್ತರಾಗಿ ತಿಂಗಳಿಗೆ ಇನ್ನೂರೈವತ್ತೊ, ಇನ್ನೂ ರೆಂಬತ್ತೋ ಸಂಪಾದಿಸುತ್ತಿದ್ದ. ಆ ಸಂಪಾದನೆಯಲ್ಲಿ ಸುಖವಾಗಿರ ಬಹುದಾಗಿತ್ತು. ಆದರೆ ಅವನ ಪ್ರಾರಬ್ಧವೋ, ಅವನ ಸ್ವಭಾವವೋ ಅವನನ್ನು ತಿಂದುಬಿಟ್ಟಿತು. ಆತ ಒಳ್ಳೆಯ ಸಾಧು. ನಿನಗಂತೂ ಸ್ವಂತ ತಾಯಿ ಇದ್ದಾಳೆ. ಅವನಿಗೆ ಮಲತಾಯಿ. ಅವನ ತಂದೆ ಮೊದಲನೆಯ ಹೆಂಡತಿಯಲ್ಲಿ ನಾಲ್ಕು ಮಕ್ಕಳನ್ನು ಪಡೆದಿದ್ದನು. ಎರಡು ಹೆಣ್ಣು ಎರಡು ಗಂಡು. ನನ್ನ ಸ್ನೇಹಿತನೇ ಹಿರಿಯ ಮಗ. ಮೊದಲ ನೆಯ ಹೆಂಡತಿ ಸತ್ತ ಮೇಲೆ ಆ ತಂದೆ ಕೆಲವು ವರ್ಷ ಎರಡನೆಯ ಮದುವೆಯ ಯೋಚನೆಯನ್ನೇನೂ ಮಾಡಲಿಲ್ಲ. ಆ ಮೇಲೆ ಏನ ಕಾರಣವೋ ಏನೋ! ಆ ಮಹಾರಾಯ ಮದುವೆ ಮಾಡಿಕೊಂಡ

ಅವನಿಗೆ ತಿಂಗಳಿಗೆ ಐವತ್ತು ರೂಪಾಯಿ ಸಂಬಳ, ಎಲ್ಲಿಯೋ ಗುಮಾಸ್ತೆ. ಕೇಳಿದೆಯಾ ಸೀತಾರಾಮು? ಹೇಳುತ್ತೇನೆ ಕೇಳು. ನನ್ನ ಸ್ನೇಹಿತನಿಗೆ ತನ್ನ ತಂದೆಯಲ್ಲೂ ಮಲತಾಯಿಯಲ್ಲೂ ಬಹಳ ಪ್ರೇಮ, ಭಕ್ತಿ. ನನ್ನ ಸ್ನೇಹಿತನಿಗೂ ಮದುವೆಯಾಗಿ ಅವನೂ ಸಂಸಾರ ನಡಸುತ್ತಿದ್ದ. ಆಗ ಅವನಿಗೆ ತಿಂಗಳಿಗೆ ಎಪ್ಪತ್ತೈದು ರೂಪಾಯಿ ಸಂಬಳವಿತ್ತು. ತಂದೆ ಅವನ ಕೊರಲಿಗೆ ಇಬ್ಬರು ಮಕ್ಕಳನ್ನು ಕಟ್ಟಿ—ಅವರನ್ನು ಮುಂದಕ್ಕೆ ತಾರಪ್ಪ, ಎಂತಿದ್ದರೂ ವಿದ್ಯಾ ಇಲಾಖೆಯಲ್ಲಿ ನೀನಿದ್ದೀಯೆ ಎಂದು ಗಂಟು ಹಾಕಿದನು. ಆಮೇಲೆ ತಿಂಗಳು ತಿಂಗಳೂ—ನನ್ನ ಸಂಸಾರಕ್ಕೆ ಹಣ ಸಾಲದು, ಇಪ್ಪತ್ತು ರೂಪಾಯಿ ಕಳಿಸಪ್ಪ ಎಂದು ಕಾಗದ ಬರೆಯುತ್ತಿದ್ದನು. ಬರಬರುತ್ತ ನನ್ನ ಸ್ನೇಹಿತನ ಹೆಂಡತಿಯೊಂದು ಕಡೆ ಬಸಿರಿ, ಅವನ ಮಲತಾಯಿಯೊಂದು ಕಡೆ ಬಸಿರಿ. ಇದೇನೋ ಪ್ರಬಲವಾದ ಸ್ಪರ್ಧೆ ತಂದೆ ಮಕ್ಕಳಿಗೆ ಏರ್ಪಟ್ಟಂತೆ ತೋರಿತು. ಹೆರಿಗೆಗಳಿಗೆ ಪ್ರಾರಂಭವಾಯಿತು. ಆ ತಂದೆ, 'ಇಲ್ಲಿ ಯಾರೂ ಮಾಡುವವರಿಲ್ಲ, ಹೆರಿಗೆ ಬಾಣಂತಿತನ ಎಲ್ಲ ಒಟ್ಟಿಗೇ ನಡೆಯಲಿ' ಎಂದು ತನ್ನ ಹೆಂಡತಿಯನ್ನು ತಂದು ಮಗನ ಮನೆಯಲ್ಲೇ ಬಿಡುತ್ತಿದ್ದನು. ಎರಡನೆಯ ಹೆಂಡತಿಯಲ್ಲಿ ಆ ತಂದೆಗೆ ಗಂಡು ಹೆಣ್ಣು ಏಳೆಂಟು ಮಕ್ಕಳಾದುವು. ಇತ್ತ ನನ್ನ ಸ್ನೇಹಿತನಿಗೂ ಏಳೆಂಟು ಮಕ್ಕಳಾದುವು. ಒಟ್ಟೊಟ್ಟಿಗೆ ಮುಂಜಿಗಳು, ಒಟ್ಟೊಟ್ಟಿಗೆ ಮದುವೆಗಳು – ಎಲ್ಲ ಖರ್ಚುಗಳೂ ನನ್ನ ಸ್ನೇಹಿತನ ತಲೆಯ ಮೇಲೆ ಬಿದ್ದುವು. ಆ ತಂದೆಯ ಕಾಗದಗಳೋ–ಪಶ್ಚಾತ್ತಾಪ, ವೇದಾಂತ, ದುಃಖಗಳಿಂದ ತುಂಬಿರುತ್ತಿದ್ದುವು: ನಾನೇನು ಕರ್ಮ ಮಾಡಿದ್ದೇನೋ! ಇಂಥ ಕಷ್ಟಕ್ಕೆ ಸಿಕ್ಕಿದ್ದೇನೆ. ಮನೆ ತುಂಬ ಮಕ್ಕಳು, ಸಂಸಾರ ನಡಸುವುದೇ ಕಷ್ಟವಾಗಿದೆ. ನಿನ್ನನ್ನು ಕೇಳುವುದಕ್ಕೆ ನಾಚಿಕೆಯಾಗುತ್ತದೆ. ವಿಧಿಯಿಲ್ಲ. ಸಾಲ ಹೆಚ್ಚಾಗಿದೆ. ಒಂದು ನೂರು ರೂಪಾಯಿ ಹೇಗಾದರೂ ಮಾಡಿ ಕಳಿಸಪ್ಪ – ಎಂದು ಬರೆಯುತ್ತಿದ್ದ. ನನ್ನ ಸಾಧು ಸ್ನೇಹಿತನೂ ಕಳಿಸುತ್ತಿದ್ದ. ತನ್ನ ಮಕ್ಕಳಿಗೆ ಹರಕು ಷರ್ಟುಗಳು, ಹರಕು ನಿಕ್ಕರುಗಳು, ತನಗೆ ಸರಿಯಾಗಿ ಉಡುಪುಗಳಿಲ್ಲ. ಮನೆಯಲ್ಲಿ ಒಂದು ಪದಾರ್ಥವಿದ್ದರೆ, ಮತ್ತೊಂದಿಲ್ಲ. ಆ

ಹೆಂಡತಿ ಒಳ್ಳೆಯವಳಾಗಿ ಸುಧಾರಿಸುವ ವರೆಗೂ ಸುಧಾರಿಸಿದಳು. ಕಡೆಗೆ ತಿರುಗಿಬಿದ್ದಳು.'

'ಕೇಳು, ಮುಂದಿನ ಕಥೆ: ನನ್ನ ಸ್ನೇಹಿತ ಆಗಾಗ ತಂದೆಯನ್ನು ನೋಡುವುದಕ್ಕೆ ಹೋದಾಗ ಆ ಮಲತಾಯಿ ಎಲ್ಲಿಯೂ ಇಲ್ಲದ ಉಪಚಾರ ಮಾಡುತ್ತ ಬೆಣ್ಣೆಯಂಥ ಮಾತು ಆಡುತ್ತ, ಕಾಫಿ ಡಿಕಾಕ್ಷನ್ನಿಗೆ ಎರಡು ಚಂಚ ಹೆಚ್ಚು ಹಾಲನ್ನು ಸೇರಿಸಿ ಬಹು ಪ್ರೀತಿಯಿಂದ ಕೊಡುತ್ತ,–ಏನಪ್ಪ ನಿನ್ನನ್ನು ಕೇಳುವುದಕ್ಕೆ ಬಾಯೇ ಇಲ್ಲ. ನೀನೂ ಎಷ್ಟೋ ಮಾಡಿದ್ದೀಯೆ. ಆದರೆ ಉಡುವುದಕ್ಕೆ ಸೀರೆಗಳಿಲ್ಲ. ಎರಡು ಸೀರೆ ತೆಗೆದು ಕೊಡಪ್ಪ ಎಂದು ಕೇಳುವುದು, ಮತ್ತೆ ಏನನ್ನಾದರೂ ಕೇಳುವುದು, ನನ್ನ ಸ್ನೇಹಿತ ಮಾತೃಭಕ್ತಿಯಿಂದ ಎಲ್ಲವನ್ನೂ ತೆಗೆದು ಕೊಡುವುದು.'

'ನನ್ನ ಸ್ನೇಹಿತನಿಗೂ ಬಹಳ ಸಾಲವಾಯಿತು. ಕಡೆಯಲ್ಲಿ ಅವನು ಕಾಯಿಲೆಯೂ ಬಿದ್ದ. ಔಷಧಗಳಿಗೆ ಬೇಕಾದಷ್ಟು ತೆತ್ತ. ನಾನು–ಏನಪ್ಪ! ಈ ಹಾಳು ಔಷಧಗಳಿಗೆ ಹಣ ಸುರಿಯುವುದಕ್ಕೆ ಬದಲು ಹಾಲೂ ಮೊಸರು ತುಪ್ಪ ಹಣ್ಣುಗಳ ಆರೈಕೆ ಮಾಡಿಕೊಳ್ಳಬಾರದೇ? ನಿನಗೆ ಸರಿಯಾಗಿ ಆರೈಕೆ ಇದ್ದಿದ್ದರೆ ನೀನು ಕಾಯಿಲೆ ಬೀಳುತ್ತಿರಲಿಲ್ಲ ಎಂದು ಹೇಳಿದೆ. ಆ ಸ್ನೇಹಿತ ನಿಟ್ಟುಸಿರುಬಿಡುತ್ತ – ರಾಮಣ್ಣ! ಹಾಲೂ ಮೊಸರು ಮೊದಲಾದುವುಗಳ ಭಾಗಕ್ಕೆ ಹಲವರಿದ್ದಾರೆ. ಎಲ್ಲರನ್ನೂ ತಣಿಸುವುದಕ್ಕೆ ನನ್ನ ಸಂಬಳವೇ ಸಾಲದು. ಈ ಔಷಧಗಳಿಗೆ ಯಾರೂ ಭಾಗಸ್ಥರಿಲ್ಲ. ಎಲ್ಲ ನನಗೇನೆ ದಕ್ಕುತ್ತದೆ! ಎಂದು ಹೇಳಿದ. ನನಗೆ ಬಹಳ ಸಂಕಟವಾಯಿತು. ಆ ಕಾಯಿಲೆಯಲ್ಲಿಯೇ ಅವನು ಸತ್ತುಹೋದ. ಒಳ್ಳೆಯ ಸ್ನೇಹಿತ. ಈಗ ಅವನ ಮನೆ, ಇನ್ಷ್ಯೂರೆನ್ಸ್ ಹಣ – ಇವುಗಳ ವಿಚಾರದಲ್ಲಿ ಮೊಮ್ಮಕ್ಕಳಿಗೂ ತಾತನಿಗೂ ಜಗಳಗಳಿವೆ. ನಾನು ಹೇಳಿದ್ದು ಕಟ್ಟುಕಥೆಯಲ್ಲ. ನಡೆದ ಸಂಗತಿ.'

'ಆ ನಿನ್ನ ಸ್ನೇಹಿತನೂ ಒಂದು ಧ್ಯೇಯಕ್ಕಾಗಿ ಬಲಿಯಾದ.' ಎಂದು ಸೀತಾರಾಮು ಹೇಳಿದನು.

'ಧ್ಯೇಯವೂ ಸರಿಯೆ, ಧ್ಯೇಯ ಸಾಧನೆಯೂ ಸರಿಯೆ. ಈಗ ನೋಡು, ಆ ಹೆಂಡತಿ ಮಕ್ಕಳ ಗತಿ! ಈಗ ನನ್ನ ಸ್ನೇಹಿತನ ತಮ್ಮಂ

ದಿರು, ತಂದೆ– ಯಾರಾದರೂ ನೆರವಾಗುತ್ತಾರೆಯೇ ? ಎಲ್ಲರೂ ತಂತಮ್ಮ ಪಾಡು ನೋಡಿಕೊಳ್ಳುವುದಲ್ಲದೆ ಸತ್ತವನ ಆಸ್ತಿಯಲ್ಲಿ ಪಾಲಿಗೂ ಕೈ ಹಾಕುತ್ತಾರೆ. ಮುಖ್ಯ ನೋಡು : ಹಿರಿಯ ಮಗ ಆಗಬೇಡ, ಹಿತ್ತಲ ಬಾಗಲು ಆಗಬೇಡ ಎನ್ನುವಂತೆ ನಿನ್ನ ಗತಿ. ಈ ಪ್ರಪಂಚದಲ್ಲಿ ತಾಯಿಯಾಗಲಿ ತಂದೆಯಾಗಲಿ ನಾವು ಮಕ್ಕಳಾಗಿದ್ದಾಗ ಎಲ್ಲ ಪ್ರೀತಿ, ತಾಯಿ ತಂದೆ! ನಮಗೆ ಮದುವೆಯಾಗಿ ಅವರ ಸೊಸೆಯರು ಮನೆಗೆ ಬಂದ ಮೇಲೆ, – ಮಗ ಅತ್ತೆಯ ಮನೆ ಕಡೆ ತಿರುಗಿದ, ಹೆಂಡತಿಯ ವಶವಾದ ಎಂದು ದಿನ ಬೆಳಗಾದರೆ ಪಂಚಾಯತಿ ಜಗಳ. ಅವರೂ ಮುದುಕರಾಗಿ ಅವರಿಗೆ ಕೊನೆಕೊನೆಯ ಮಕ್ಕಳಿದ್ದರೋ ನಮ್ಮ ರಕ್ತ ಹೀರಿಬಿಡುತ್ತಾರೆ. ಆ ಮಕ್ಕಳಿಗೆ ಎಲ್ಲ ತೆರಿಸುತ್ತಾರೆ. ಎಲಾ ಇವನ ಗತಿ ಏನು ? ಎಲ್ಲಿಂದ ತಂದಾನು ? ಅವನ ಹೆಂಡತಿ ಮಕ್ಕಳ ಗತಿ ಏನು ? ಎಂದು ಏನಾದರೂ ಕಿಂಚಿತ್ ಯೋಚನೆ ಅವರಿಗೆ ಬರುತ್ತದೆಯೇ ? ನೋಡು. ಆ ತಾಯಿ ತಂದೆಗಳೇ ಅವನಿಗೆ ಶತ್ರು, ಮೃತ್ಯು. ಈಗ ನಿನ್ನ ತಾಯಿ ಅಷ್ಟೊಂದು ಆರ್ಭಟ ಮಾಡುವುದಕ್ಕೆ ಕಾರಣವೇ ಇಲ್ಲ. ತಾನೂ ಗಾಯ ಮಾಡಿಕೊಂಡು ನೋಯುತ್ತ ಬಿದ್ದಿದ್ದಾಳೆ. ನಿನಗೂ ಸಂಕಟ ದುಃಖ ತುಂಬಿದ್ದಾಳೆ. ಈಗೇನೋ ಆಕೆಯನ್ನು ಉಪಚರಿಸಬೇಕಾದ್ದೇ. ನಾಳೆ ಆಕೆಗೆ ಗುಣವಾಗುತ್ತಲೂ ನೀನು ಬೇರೆ ಕಡೆ ಸಂಸಾರ ಮಾಡಬೇಕಾದ್ದೇ! ಅದನ್ನು ಆಕೆಗೆ ಖಂಡಿತವಾಗಿ ತಿಳಿಸಿಬಿಡು. ನಿನ್ನ ಹೆಂಡತಿ ಬಾಣಂತಿತನ ಮುಗಿಸಿಕೊಂಡು ತುಮಕೂರಿಗೆ ಬರುವ ಹೊತ್ತಿಗೆ ಅದಕ್ಕೆ ತಕ್ಕ ಏರ್ಪಾಟು ಮಾಡಿಬಿಡು.'

'ಏನು ನೀನಾಡುವ ಮಾತು ರಾಮಣ್ಣ ? ಅವಿವೇಕದ ಮಾತು ಆಡುತ್ತೀಯೆ! ಆಕೆಯನ್ನು ಕೈಬಿಟ್ಟು ಬೇರೆ ಸಂಸಾರ ಹೂಡಬೇಕೆಂದು ನನಗೆ ಹೇಳುತ್ತೀಯಲ್ಲ. ನನ್ನ ತಂದೆಯ ಪ್ರೇತ ನಾಳೆ ನನ್ನ ಕೊಟಡಿಯಲ್ಲಿ ಬಂದು ಕಾಣಿಸಿಕೊಂಡೀತು! ಏನಪ್ಪ ಸೀತಾರಾಮು! ನನ್ನ ಮಾತನ್ನು ಏನು ಮಾಡಿದೆ ? ಎಂದು ನಾಳೆ ಕೇಳೀತು!'

'ಈಗ ನಿನ್ನ ತಾಯಿಗೆ ನೀನೊಬ್ಬನೇ ಮಗನಲ್ಲ. ನಿನ್ನ ತಮ್ಮಂದಿರು ಮೂವರಿದ್ದಾರೆ. ಅವರಲ್ಲಿ ಹಿರಿಯ ಈಗ ಎಸ್.ಎಸ್.ಎಲ್.ಸಿ.ಗೆ

ಕಟ್ಟಿದ್ದಾನೆ. ನಾಳೆ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಾನೆ. ಸಾಕು ಅವನು ಓದಿದ್ದು. ಒಂದು ಕಡೆ ಕೆಲಸಕ್ಕೆ ಸೇರಿಸು. ಇಪ್ಪತ್ತೈದೋ ಮೂವತ್ತೋ ಸಂಪಾದನೆ ಮಾಡುತ್ತಾನೆ. ಮನೆಯ ಒಂದು ಭಾಗವನ್ನು ಬಾಡಿಗೆಗೆ ಕೊಡಲಿ. ಹತ್ತು ರೂಪಾಯಿಯಾದರೂ ಬರುತ್ತದೆ. ನಿನ್ನ ಸಂಪಾದನೆಯಿಂದ ಅವರಿಗೆ ತಿಂಗಳಿಗೆ ಹತ್ತು ರೂಪಾಯಿ – ಈಗ ನಿನ್ನ ತಾಯಿಗೆ ಕೊಡುತ್ತಿರುವ ಹಣದ ಜತೆಗೆ ಇನ್ನೂ ಐದು ರೂಪಾಯಿ ಸೇರಿಸಿ– ಆ ಸಂಸಾರಕ್ಕೇನೆ ಕೊಟ್ಟುಬಿಡು. ಅಲ್ಲಿಗೇನಾಯಿತು ? ತಿಂಗಳಿಗೆ ನಲವತ್ತೈದು–ಐವತ್ತು ರೂಪಾಯಿಗಳಾದುವು. ನೀನು ಬೇರೆ ಹೋದರೆ ನಿನ್ನ ಹೆಂಡತಿ, ನೀನು ಆ ಸಂಸಾರಕ್ಕೆ ಕಡಮೆ ಬಿದ್ದಹಾಗಾಯಿತು. ತಿಂಗಳಿಗೆ ಈಗಿನಂತೆಯೇ ಹಣ ಒದಗಿ ಬಂತು. ಸಂಸಾರ ನಡಸಿಕೊಂಡು ಸುಖವಾಗಿರಲಿ. ಅವರಿಗೇನು ಗುಲುಗು? ನಿನ್ನ ತಾಯಿಗೆ ಹೇಳು: ಅಮ್ಮ! ನಿನಗೆ ನನ್ನ ಹೆಂಡತಿಯನ್ನು ಕಂಡರೆ ಆಗುವುದಿಲ್ಲ ದಿನಬೆಳಗಾದರೆ ಎಲ್ಲರಿಗೂ ಹಿಂಸೆ. ನಿತ್ಯನರಕ ನಾನು ಅನುಭವಿಸಲಾರೆ ನಾನು ಬೇರೆ ಹೋಗುತ್ತೇನೆ. ನಿನ್ನ ಸಂಸಾರಕ್ಕೆ ಸರಿಯಾಗಿ ಏರ್ಪಾಟು ಮಾಡುತ್ತೇನೆ. ದೂರ ಇದ್ದರೆ ಚೆಂದ, ನೆಂಟೂ ವಿಶ್ವಾಸ ಉಳಿಯುತ್ತದೆ. ಹಬ್ಬ ಹೆಚ್ಚು ಕಟ್ಟಳೆ ಆದರೆ ಬರೋಣ ಹೋಗೋಣ. ಎಲ್ಲರ ಮನಸ್ಸೂ ನೆಮ್ಮದಿಯಾಗಿರುತ್ತದೆ – ಎಂದು ಹೇಳು. ನಿನ್ನ ತಾಯಿಯ ರಕ್ಷಣೆ, ನಿನ್ನ ತಂಗಿಯರ ರಕ್ಷಣೆ ನಿನ್ನ ತಮ್ಮನಿಗೂ ಸೇರಿಲ್ಲವೇ? ಬೇಕಾಗಿದ್ದರೆ ನಿನ್ನ ತಮ್ಮಂದಿರಲ್ಲಿ ಒಬ್ಬನನ್ನೋ ನಿನ್ನ ತಂಗಿಯರಲ್ಲಿ ಒಬ್ಬಳನ್ನೋ ನಿನ್ನ ಮನೆಯಲ್ಲಿಟ್ಟುಕೋ. ನಿನ್ನ ತಮ್ಮನಿಗೆ ಖರ್ಚು ಜವಾಬ್ದಾರಿ ಉಳಿಯುತ್ತದೆ. ನಿನ್ನ ಮನೆಯಲ್ಲಿ ಏನಾದರೂ ಚಿಲ್ಲರೆ ಕೆಲಸಕ್ಕೂ ಒದಗಿದಹಾಗಾಗುತ್ತದೆ. ಮಾಡಲೇ ಬೇಡವೇ, ಮಾಡಲೇ ಬೇಡವೇ ಎಂದು ಯೋಚಿಸುತ್ತ ನಿಂತು ಹಿಂದಕ್ಕೂ ಹೋಗದೆ ಮುಂದಕ್ಕೂ ಹೋಗದೆ ಸಾಯಬೇಡ. ನಾನು ಹೇಳುವುದು ಲೌಕಿಕ ನೀತಿ, ಧರ್ಮಸಮ್ಮತವಾದದ್ದು, ಹಿತಕರವಾದದ್ದು. ನಿನ್ನ ತಾಯಿಯ ಗೊಡ್ಡುಬೆದರಿಕೆಗೆ ನೀನು ತಗ್ಗಿದೆಯೋ ನಾಳೆ ನಿನ್ನ ಸಂಸಾರವೇ ಧ್ವಂಸವಾಗುತ್ತದೆ. ನಿನ್ನ ಸಂಸಾರವನ್ನು ಮುರಿಯಬೇಕೆಂದಿರುವವಳು ಅವಳು ಎಂಥ ತಾಯಿ? ನೀನು ನಾಮಕರಣಕ್ಕೆ

ಹೋಗದಂತೆ, ನಿನ್ನ ಹೆಂಡತಿಯನ್ನು ನೋಡುವುದಕ್ಕೆ ಹೋಗದಂತೆ ಈ ಹಿಂಸಾತ್ಮಕ ಬಲಾತ್ಕಾರ ಏನು? ಆಕೆಯೂ ಧರ್ಮಮಾರ್ಗದಲ್ಲಿ ನಡೆದರೆ ಪಾದತೀರ್ಥ ಪ್ರೋಕ್ಷಿಸಿಕೋ, ಬೇಡವೆನ್ನುವುದಿಲ್ಲ. ಪಾಪ! ಆ ನಿನ್ನ ಹೆಂಡತಿ, ನಿರಪರಾಧಿನಿಯ ಮೇಲೆ ಏನು ಹಟ! ಆ ಮರ್ಯಾದಸ್ಥರು, ಆ ದೊಡ್ಡಮನುಷ್ಯರು ನಿನ್ನ ಅತ್ತೆಮಾವಂದಿರ ಮೇಲೆ ಏನು ದ್ವೇಷ! ಎಲ್ಲ ಯಾವುದರ ಬಲದಿಂದ? ಹೇಳು ಸೀತಾರಾಮು. ನೀನೊಬ್ಬ ಸಾಧು, ಮಾತೃವಾಕ್ಯ ಪರಿಪಾಲಕ, ಕುಣಿಸಿದಂತೆ ಕುಣಿಯುವ ಮಗ! ತನ್ನ ಕೈಗೊಂಬೆ ಎಂಬುವ ಬಲ ತಾನೇ. ಆ ಬಲ ಹೋಗಿಬಿಟ್ಟರೆ ಹತ್ತು ಜನರಂತೆ ಆಕೆಯೂ ಸಾಮಾನ್ಯವಾಗಿ ನಡೆದುಕೊಳ್ಳುತ್ತಾಳೆ. ನನ್ನ ಮಾತು ಕೇಳು: ಬೇಕಾದರೆ ಬೇರೆ ಊರಿಗೆ ವರ್ಗಮಾಡಿಸಿಕೊಂಡು ಹೊರಟು ಹೋಗು. ಬೇರೆ ಸಂಸಾರ ತಾನಾಗಿ ಏರ್ಪಾಟಾಗುತ್ತೆ. ತಾಯಿಯನ್ನು ಮಾತ್ರ ಖಂಡಿತ ಕರೆದೊಯ್ಯಬೇಡ. ಆಕೆ ತುಮಕೂರಿನಲ್ಲಿಯೇ ಸ್ವಂತ ಮನೆಯಲ್ಲಿರಲಿ.'

'ಒಳ್ಳೆಯ ಕಳಿಂಗಸೀತಿಯನ್ನು ಬೋಧಿಸುತ್ತಿದ್ದೀಯೆ ರಾಮಣ್ಣ! ನೀನು ಹೇಳಿದಹಾಗೆ ಮಾಡಿದವರೂ ಮಾಡುವವರೂ ಇದ್ದಾರೆ. ಇಲ್ಲ ವೆನ್ನುವುದಿಲ್ಲ. ಇಂಥ ಸಮಸ್ಯೆಗಳಿಗೆ ನೀನು ಹೇಳುವುದು ಒಂದು ವಿಧ ದಲ್ಲಿ ಪರಿಹಾರವೇ. ಆದರೆ ನನ್ನ ಮನಸ್ಸು ಒಪ್ಪುತ್ತಿಲ್ಲ. ನೋಡು ರಾಮಣ್ಣ! ಈಗ ನನ್ನ ದೊಡ್ಡ ತಮ್ಮನಿಗೆ ಹದಿನೇಳು–ಹದಿನೆಂಟು ವರ್ಷಮಾತ್ರ. ನನಗೂ ಅವನಿಗೂ ಏಳೆಂಟು ವರ್ಷ ಬಿಟ್ಟಿದೆ. ಮಧ್ಯದಲ್ಲಿ ಒಂದು ಮಗು ಹೋಯಿತಂತೆ, ಮತ್ತೇನೋ ಆಯಿತಂತೆ. ಮುಂದೆ ಮಕ್ಕಳೇ ಆಗುವುದಿಲ್ಲ ಎಂದು ನನ್ನ ತಾಯಿ ತಂದೆ ಆಡಿಕೊಳ್ಳು ತ್ತಿದ್ದರಂತೆ. ಆಮೇಲೆ ಹೇಗೋ ಆ ತಮ್ಮ ಹುಟ್ಟಿದ. ಆಮೇಲೆ ಕ್ರಮವಾಗಿ ಇತರ ತಂಗಿಯರೂ ತಮ್ಮಂದಿರೂ ಆದರು. ಇನ್ನೆರಡು ವರ್ಷವಾದರೂ ಕಳೆದರೆ ನೀನು ಹೇಳಿದಂತೆ ಆ ಮೊದಲ ತಮ್ಮನನ್ನ ಎಲ್ಲಿಯಾದರೂ ಕೆಲಸಕ್ಕೆ ಸೇರಿಸಬಹುದು. ಅಲ್ಲಿಯವರೆಗೂ ಸುಧಾರಿಸ ಬೇಕು.'

'ಎರಡನೆಯದಾಗಿ, **ತಾಯಿ** ಯೆಂಬುವ ವಸ್ತು ದೊಡ್ಡದು! ನಾವು ಯಾವಾಗಲೂ ಆದರಿಸಬೇಕಾದ್ದೇ. ಅದರಲ್ಲಿಯೂ ಈಗಿನ ಸ್ಥಿತಿಯಲ್ಲಿ ಕೈಬಿಡಲೇಬಾರದು. ಆಕೆ ಸಾವಿರ ಮಾಡಲಿ, ಸಾವಿರ ಹೇಳಲಿ; ಏನೋ ಕಷ್ಟಕ್ಕೆ ಸಂಕಟಕ್ಕೆ ಹಟಮಾಡಬಹುದು, ಸ್ವಲ್ಪ ಆರ್ಭಟ ಮಾಡಬಹುದು. ನಾವು ಗಂಡಸರು ಸೈರಿಸಿಕೊಳ್ಳಬೇಕು. ಬೆಂಗಳೂರಿನಲ್ಲಿ ನಡೆಯಿತು ಎಂದು ನಾನು ಕೇಳಿದ್ದೆ. ನಿನಗೆ ಹೇಳುತ್ತೇನೆ, ಕೇಳು: ಒಂದು ಸಂಸಾರದಲ್ಲಿ ಸಂಪಾದನೆ ಮಾಡುವ ಮೂರು ಜನ ಗಂಡು ಮಕ್ಕಳೂ, ಗಂಡನೊಡನೆ ಸಂಸಾರ ಮಾಡುತ್ತಿದ್ದ ಹೆಣ್ಣು ಮಗಳೂ ಇದ್ದರು. ಅವರ ತಾಯಿ ನನ್ನ ತಾಯಿಯಂತೆ ವಿಧವೆ. ನೀನು ಹೇಳಿದಂತೆಯೇ ಗಂಡು ಮಕ್ಕಳು ಬೇರೆ ಬೇರೆಯೇ ಇದ್ದರು. ಮನೆಗಳಲ್ಲಿ ಅವರವರ ಹೆಂಡತಿಯರದೇ ಪಾರುಪತ್ಯ. ಆ ತಾಯಿ ಹಿರಿಯ ಮಗನ ಮನೆಯಲ್ಲಿರೋಣ ಎಂದು ಹೋದರೆ ಆ ಹಿರಿಯ ಸೊಸೆಯ ಹಾರಾಟ, ಬೈದಾಟ ನೋಡತೀರದು, ಕೇಳತೀರದು. ಕಡೆಗೆ ಆ ಹಿರಿಯ ಮಗ,– ಅಮ್ಮ! ನಿನಗೂ ಇನ್ನಿಬ್ಬರು ಮಕ್ಕಳಿದ್ದಾರಲ್ಲ, ಅಲ್ಲಿಗೆ ಹೋಗಿರು ಎಂದು ಬಾಯಿಬಿಟ್ಟೇ ಹೇಳಿದನು. ಆ ತಾಯಿ– ಆಗಲಪ್ಪ! ನಿಮ್ಮಂಥ ಮಕ್ಕಳನ್ನು ಹೆರುವುದಕ್ಕಿಂತ ಗೊಡ್ಡಾಗಿದ್ದಿದ್ದರೆ ಮೇಲಾಗಿತ್ತು ಎಂದು ನೊಂದುಕೊಂಡು, ಎರಡನೆಯ ಮಗನ ಮನೆಗೆ ಹೋದಳು. ಆಕೆ ಹೋದ ಎರಡು ದಿನಕ್ಕೆ ಎರಡನೆಯ ಸೊಸೆ ಗಂಟು ಮೂಟೆ ಕಟ್ಟಿಕೊಂಡು ತವರು ಮನೆಗೆ ಹೊರಟು ಹೋದಳು. ಗಂಡನಿಗೆ– ನೀವು ಹೋಟಲಿಗೆ ಹೋಗಿ ಎಂದು ಹೇಳಿದಳು. ಆ ತಾಯಿ – ಅಪ್ಪ! ನಿನ್ನ ಹೆಂಡತಿ ತವರುಮನೆಗೆ ಹೋಗಿ ಬರಲಿ. ನಾನೇ ಎರಡು ದಿನ ಅಡಿಗೆ ಮಾಡಿ ಹಾಕುತ್ತೇನೆ ಎಂದು ಒಂದು ವಾರ ಬೇಯಿಸಿ ಹಾಕಿದಳು. ಒಂದು ವಾರ ಆಯಿತು. ಮನೆಯಲ್ಲಿದ್ದ ಪದಾರ್ಥ ಮುಗಿದುಹೋಯಿತು. ಆ ಮಗ ತಂದು ಹಾಕಲಿಲ್ಲ. ಅಮ್ಮ! ನಾನು ಊಟಕ್ಕೆ ಹೋಟಲಿಗೆ ಹೋಗುತ್ತೇನೆ. ನೀನು ನಿನ್ನ ಕೊನೆಯ ಮಗನ ಹತ್ತಿರ ಇರು. ಎಂತಿದ್ದರೂ ಅವನನ್ನು ಬಹಳ ಮುದ್ದುಮಾಡಿ ಸಾಕಿದೆ. ನಮಗೆಲ್ಲ ಸೊನ್ನೆಸುತ್ತಿ ಅವನಿಗೆ ಎ

ಮಾಡಿದೆ. ನಿನ್ನನ್ನು ಆದರಿಸುತ್ತಾನೆ ಎಂದು ಕಟಕಿಯನ್ನಾಡಿದನು. ಒಳ್ಳೆಯದಪ್ಪ! ಅವನಿಗೆ ಒಂದು ಕಾಗದ ಬರೆದುಹಾಕು. ನಾನು ಬರುತ್ತೇನೆ ಎಂದು ತಿಳಿಸಪ್ಪ ಎಂದು ಆಕೆ ಹೇಳಿದಳು. ಇವನಿಂದ ಕಾಗದ ಹೋದ ತಕ್ಷಣ ಅವನು,–ಹೆಂಡತಿ ತವರು ಮನೆಗೆ ಹೋಗಿ ವಾರವಾಯಿತು. ನಾನು ಎಲ್ಲಿಯೋ ಹೋಟೆಲಿನಲ್ಲಿ ಊಟ ಮಾಡು ತ್ತಿದೇನೆ. ಇಲ್ಲಿಗೆ ತಾಯಿಯನ್ನು ಕಳಿಸಬೇಡ ಎಂದು ಬರಿ ಸುಳ್ಳೇ ಒಂದು ತಂತಿ ಕಳಿಸಿಬಿಟ್ಟನು. ಕಡೆಗೆ ಆ ತಾಯಿ ತನ್ನ ಮಗಳ ಮನೆಗೆ ಹೋದಳು. ಆ ಮಗಳು ಆಕೆಯನ್ನು ಆದರಿಸುತ್ತಿದಾಳೆ. ಆ ಮಗಳ ಗಂಡ ದೊಡ್ಡ ಅಧಿಕಾರಿಯೇನೂ ಅಲ್ಲ. ಮಿಡಲ್ ಸ್ಕೂಲಿನಲ್ಲಿ ಅಸಿಸ್ಟೆಂಟ್ ಮಾಸ್ಟರು. ಅವನು ಹೆಂಡತಿಗೆ,–ನಿನ್ನ ತಾಯಿಯನ್ನು ಎಲ್ಲಿಗೂ ಕಳಿಸಬೇಡ, ನಮಗೂ ಒಂದು ದಿಕ್ಕಾಯಿತು; ಆಕೆ ಬಹಳ ಕಷ್ಟಪಟ್ಟಿದ್ದಾಳೆ ಎಂದು ಹೇಳಿದ. ಈಗ ಆ ತಾಯಿ ಅಲ್ಲಿಯೇ ಇದ್ದಾಳೆ. ನೋಡು ರಾಮಣ್ಣ! ತಾಯಿಯ ಕಷ್ಟಕ್ಕೆ ಆಗೋವರು ಹೆಣ್ಣು ಮಕ್ಕಳು. ಈ ಗಂಡು ಮಕ್ಕಳೇನು, ತಂತಮ್ಮ ಹೆಂಡತಿಯರು ಪಕ್ಕಕ್ಕೆ ಬರೋ ವರೆಗೆ ಮಕ್ಕಳು, ಆಮೇಲೆ ಶುದ್ಧ ಕಸಾಪರು, ತಾಯಿ ಸಾಯಲಿ ಎಂದು ಬಯಸುವವರು. ಹೀಗೂ ಪ್ರಪಂಚ ಇದೆ. ನಿನಗೆ ತಿಳಿಯದೆ?'

'ಇನ್ನೊಂದು ಕತೆ ಹೇಳುತ್ತೇನೆ, ಕೇಳು: ಒಬ್ಬಳು ಶ್ರೀಮಂತ ಹುಡುಗಿಯನ್ನು ಮದುವೆ ಮಾಡಿಕೊಂಡಿದ್ದವನಿಗೆ ಅವನ ಹೆಂಡತಿ,–ಮೊದಲು ನಿಮ್ಮ ತಾಯಿಯನ್ನು ಬೇರೆ ಇಡಿ. ಇಲ್ಲದಿದ್ದರೆ ನಾನು ಬರು ವುದಿಲ್ಲ. ನಿಮಗೆ ಹೆಂಡತಿ ಇಲ್ಲವೇ ಇಲ್ಲ ಎಂದು ತಿಳಿದಕೊಳ್ಳಿ ಎಂದು ಬೆದರಿಸಿದಳು. ಒಬ್ಬನೇ ಮಗ ಅವನು. ತಾಯಿಯನ್ನು ಎಲ್ಲಿಗೆ ಕಳಿಸ ಬೇಕು? ಆ ಹುಡುಗಿ ಗಂಡನ ಮನೆಗೆ ವರ್ಷವಾದರೂ ಬರಲೇ ಇಲ್ಲ. ಹೆಂಡತಿ ಬೇಕಾಗಿದ್ದರೆ ಇಲ್ಲಿಗೇನೆ ಬನ್ನಿ–ಎಂದು ಹಂಗಿಸುತ್ತಿದ್ದಳು. ಮಗನ ಕಷ್ಟ ನೋಡಿ ಆ ತಾಯಿ,–ನನ್ನ ಗತಿ ಏನಾದರೂ ಆಗಲಪ್ಪ, ನೀನು ಸುಖವಾಗಿರು, ನಾನೆಲ್ಲಿಯಾದರೂ ಮಠದಲ್ಲಿ ಸೇವೆ ಮಾಡಿ ಕೊಂಡು ಬಿದ್ದಿರುತ್ತೇನೆ ಎಂದು ಹೇಳಿ ಹೊರಟುಹೋದಳು. ಆಕೆ ಯಾವುದೋ ಮಠದಲ್ಲಿದ್ದಾಳೆ.'

'ನಾಳೆ ನನಗೂ ನಾಲ್ಕು ಮಕ್ಕಳಾದರೆ, ಪೆನ್‌ಷನ್ ಆಗುವ ಕಾಲಕ್ಕೆ ಹುಡುಗರು ಸಣ್ಣವರಾಗಿದ್ದರೆ, ಅಯ್ಯೋ! ದೊಡ್ಡವರಿಗೆ ರೆಕ್ಕೆ ಬಲಿಯಿತು, ಅವರು ತಂತಮ್ಮ ಸಂಸಾರ ಹೂಡಿಕೊಂಡು ಹೊರಟು ಹೋಗುತ್ತಾರೆ. ಈ ಕೊನೆಯವಕ್ಕೆ ಇನ್ನೂ ರೆಕ್ಕೆ ಬಲಿತಿಲ್ಲ. ಇವರ ಗತಿ ಏನಪ್ಪ? ಏಕಾದರೂ ಇವರು ಹುಟ್ಟಿದರೋ? ನಾಳೆ ಏನಾದರೂ ನಾನು ಕಣ್ಮುಚ್ಚಿಕೊಂಡುಬಿಟ್ಟರೆ, ಇವರನ್ನು ಆದರಿಸುವವರು ಯಾರು? ಬೆಳಸುವವರು ಯಾರು? ಓದಿಸುವವರು ಯಾರು? ಆ ಹಿರಿಯ ಮಕ್ಕಳು ತಮ್ಮಂದಿರನ್ನು ನೋಡಿಕೊಂಡರೆ ನೆಮ್ಮದಿಯಾಗಿ ಪ್ರಾಣ ಬಿಡಬಹುದಲ್ಲ ಎಂಬ ಯೋಚನೆಗಳು ಬರುವುದಿಲ್ಲವೇ? ಆ ರೆಕ್ಕೆ ಬಲಿತ ಹಿರಿಯ ಮಕ್ಕಳು ಸಹಾಯಮಾಡಲಿ ಎಂದು ಬಯಸುವುದಿಲ್ಲವೆ? ಅವರಿಗೆ ನಾವು ಹೇಳಿ ಮಾಡಿಸುವುದಿಲ್ಲವೆ? ದೇವರೇ! ಆ ಕೊನೆಯ ಮಕ್ಕಳನ್ನು ಒಂದು ನೆಲೆಗೆ ತಂದೇನು, ಇನ್ನೂ ನಾಲ್ಕು ವರ್ಷ ಆಯುಸ್ಸು ಕೊಟ್ಟಿರಪ್ಪ! ಎಂದು ಬೇಡಿಕೊಳ್ಳುವುದಿಲ್ಲವೆ? ನಮ್ಮ ಸಂಪಾದನೆ ಕಡಮೆಯಾಗಿದ್ದರೆ ಆ ಹಿರಿಯ ಮಕ್ಕಳ ಸಂಪಾದನೆಯಲ್ಲಿ ಒಂದು ಭಾಗ ಅವರು ಕೊಡಲಿ ಎಂದು ಆಶಿಸುವುದಿಲ್ಲವೆ? ಆದ್ದರಿಂದ ತಾಯಿಯ ಮನಸ್ಸೇನು? ಆಕೆಯ ಸಂಕಟ ಏನು? ಏತಕ್ಕಾಗಿ ಶಂಕೆಪಡುತ್ತಿದಾಳೆ ಎಂದು ನಾನು ಆಲೋಚಿಸಿ, ಆಕೆಗೆ ಧೈರ್ಯ ಹೇಳಿ, ಆಕೆಯನ್ನೂ ಕೈಬಿಡದೆ, ತಮ್ಮಂದಿರನ್ನೂ ಕೈಬಿಡದೆ ಅವರನ್ನು ನೋಡಿಕೊಳ್ಳುವುದು ಧರ್ಮವಲ್ಲವೇ? ನನ್ನ ಸುಖವೊಂದನ್ನೇ ನಾನು ನೋಡಬಹುದೇ? ಮುಖ್ಯವಾಗಿ ನಮ್ಮ ಬಡತನದಿಂದ ನಮಗೆ ದುರ್ಬುದ್ಧಿ ಹುಟ್ಟುತ್ತದೆ. ದೇವರು ಕೃಪೆ ಮಾಡಿ ನನ್ನ ಸಂಬಳ ಹೆಚ್ಚಿಸಲಿ, ನನಗೂ ದೊಡ್ಡ ಉದ್ಯೋಗ ಕೊಡಿಸಲಿ' ಎಂದು ಸೀತಾರಾಮು ಹೇಳಿದನು.

ಆಗ ರಾಮಣ್ಣ, 'ಇಷ್ಟೆಲ್ಲ ಮಾತನಾಡಿದೆ ನೀನು. ಶಿವಮೊಗ್ಗಕ್ಕೆ ಹೋಗುವ ಉಪಾಯ ಏನು? ಎಂಬುದನ್ನು ಮಾತ್ರ ತಿಳಿಸಲಿಲ್ಲ' ಎಂದನು.

'ಆಗಲಿ, ಆದನ್ನೂ ಆಲೋಚಿಸುತ್ತೇನೆ. ನಾಮಕರಣ ಈಗಿಲ್ಲದಿದ್ದರೆ ಮುಂದೆ ಯಾವಾಗಲೋ ಆಗುತ್ತೆ. ಈಗ ಏನೋ ಒಂದು

ಹೆಸರಿನಿಂದ ಮಗುವನ್ನು ಕರೆಯುತ್ತಾರೆ. ಅಷ್ಟೇ ತಾನೆ. ನಡೆ, ಅಲ್ಲಿ ಆ ಡಾಕ್ಟರ ಅಂಗಡಿಗೆ ಹೋಗಿ ನಾಲ್ಕು ಕ್ವೈನೈನ್ ಮಾತ್ರೆಗಳನ್ನು ತರೋಣ.'

ಸ್ನೇಹಿತರಿಬ್ಬರೂ ಡಾಕ್ಟರ ಅಂಗಡಿ ಕಡೆಗೆ ಹೋದರು.

## ೧೩. ನಿರಾಶೆಗಳು

ಶಿವಮೊಗ್ಗದಲ್ಲಿ ಮಾರನೆಯ ದಿನ ಎಂಥ ನಿರಾಶೆಗಳಾಗಿರಬೇಕೆಂಬುದನ್ನು ವಾಚಕರೇ ಊಹಿಸಿಕೊಳ್ಳಬೇಕು. ತುಳಸಾಬಾಯಿ ತನ್ನ ಅಳಿಯನಿಗೆ ತೋರಿಸಿದ ಪ್ರಲೋಭನಗಳಿಂದ ಆ ಅಳಿಯ ಯಾವ ನಿರ್ಧಾರಕ್ಕೆ ಬಂದಿದ್ದನೆಂಬುದನ್ನು ನೋಡಿದ್ದೇವೆ. ಕೃಷ್ಣರಾಯರು ಕೂಡ ತಮ್ಮ ಹೆಂಡತಿಯ ಸಮಯೋಪಾಯಕ್ಕೂ ಚಾತುರ್ಯಕ್ಕೂ ಬೆರಗಾಗಿ ಹೋಗಿದ್ದರು. ಕಾವೇರಮ್ಮನ ಹಿಡಿತದಿಂದ ಸೀತ-ರಾಮು ಬಿಡಿಸಿಕೊಂಡು ಶಿವಮೊಗ್ಗಕ್ಕೆ ಬರುವುದು ಖಂಡಿತವೆಂದು ಆ ದಂಪತಿಗಳು ರೈಲಿನಲ್ಲಿ ಮಾತನಾಡಿಕೊಂಡಿದ್ದರು. ಶಿವಮೊಗ್ಗವನ್ನು ಸೇರಿದ ಮೇಲೆ ತಮ್ಮ ಮಗಳಿಗೂ ಒಂದು ಆಸೆಯನ್ನು ಹುಟ್ಟಿಸಿದ್ದರು. ಇನ್ನು ನಾಗರಾಜನ ಮದುವೆಯ ನಿಷ್ಕರ್ಷೆ ಮಾಡಬಹುದೆಂದು ಭವಿಷ್ಯದ ಗುಣಾಕಾರ ಮಾಡಿಕೊಂಡಿದ್ದರು. ಆದರೆ ಯಾವಾಗ ಸೀತಾರಾಮುವಿನ ಕಾಗದ ಶನಿವಾರ ಬೆಳಗ್ಗೆ ತಮ್ಮ ಕೈಗೆ ತಲುಪಿತೋ ಆಗ ಕೃಷ್ಣರಾಯರಿಗೆ ತಾತ್ಕಾಲಿಕವಾಗಿ ವ್ಯಸನವಾಯಿತು. ನಾಮಕರಣದ ಏರ್ಪಾಟನ್ನು ಮುಂದಕ್ಕೆ ಹಾಕಬೇಕಾಯಿತಲ್ಲ ಎಂಬುವ ವ್ಯಸನ, ದಿನಗಳು ಕಳೆದಂತೆಲ್ಲ ಮಧ್ಯದಲ್ಲಿ ಯಾವ ಬದಲಾವಣೆಗಳಾಗುತ್ತವೆಯೋ ಎಂಬ ಶಂಕೆ ಅವರನ್ನು ಕಾಡತೊಡಗಿದುವು. ತುಳಸಾಬಾಯಿಗೆ ಆ ಕಾರ್ಡನ್ನು ಓದಿ ಹೇಳಿದಾಗ ಆಕೆ, 'ಓಹೋ! ಕೆಲಸ ಕೆಟ್ಟುಹೋಯಿತು! ಆ ಕಾವೇರಿ ದೊಡ್ಡ ಲಂಕಿಣಿ ವಿದ್ಯೆ ಮಾಡಿ ಮಗನನ್ನು ತಡೆಹಾಕಿಬಿಟ್ಟಳು. ನಾನು ಆಗಲೇ ಮನಸ್ಸಿನಲ್ಲಿ ಅಂದುಕೊಂಡೆ: ಅಳಿಯ ಮಾವ ಕೊಟಡಿಯಲ್ಲಿ ಸೇರಿದಾರೆ; ತುಳಸಾಬಾಯಿ! ನೀವೂ ಹೋಗಿ; ಹೋಗಿ ನಿಮ್ಮ ಅಳಿಯನಿಗೆ ತಿಳಿಸಿ; ನಿನ್ನ ತಾಯಿ ಅಪ್ಪಣೆ ಕೊಟ್ಟಿದ್ದಾಳೆ ಎಂದು ಹೇಳಿ ಕರೆದುಕೊಂಡು ಹೋಗಿಯಮ್ಮ !– ಎಂದು ಬಿನ್ನಾಣದ ಮಾತುಗಳನ್ನು ಅವಳು ಆಡಿದಾಗಲೇ ಒಳಗೆ ಬ್ರಹ್ಮಾಸ್ತ್ರವನ್ನು ಸರಿಪಡಿಸಿಕೊಳ್ಳುತ್ತಿದ್ದಾಳೆ ಎಂದು ಅಂದುಕೊಡೆ. ಅಯ್ಯೋ, ನಿಮಗೇಕೆ ಭ್ರಾಂತಿ! ಇನ್ನು ಸೀತಾರಾಮು ಶಿವಮೊಗ್ಗದ ಮುಖ ನೋಡುವುದಿಲ್ಲ. ನನಗೆ ಬುದ್ಧಿ

ಮೋಸ ಹೋಯಿತು ಆಗಲೇ ಅವನನ್ನು – ನಿನ್ನ ಸಾಹೇಬರ ಮನೆಯ ವರೆಗೆ ಬಾರಪ್ಪ. ಆಮೇಲೆ ಹಿಂದಿರುಗಿ ಬರುವಿಯಂತೆ ಎಂದು ಅವನ ನಾಲ್ಕು ಬಟ್ಟೆ ಜೋಡಿಸಿ ಕೈಯಲ್ಲಿ ಹಿಡಿದುಕೊಂಡು ಜತೆಯಲ್ಲಿ ಕರೆದು ಕೊಂಡು ಹೊರಟು ಬಿಡಬೇಕಾಗಿತ್ತು. ಮೋಸಹೋದೆ! ಈಗ ಆ ಲಂಕಿಣಿಯ ಕೈ ಮೇಲಾಗಿ ಹೋಯಿತಲ್ಲ! ಅವಳು ಇನ್ನು ಸರೋಜಳ ಸಂಸಾರ ಮುರಿಯುವ ವರೆಗೂ ಸುಮ್ಮನೆ ಕುಳಿತಿರುವುದಿಲ್ಲ. ಏನು ಮಾಡಲಿ?' ಎಂದು ಹೇಳುತ್ತ ಕೈ ಕೈ ಹಿಸುಕಿಕೊಳ್ಳುತ್ತ, ಕಣ್ಣೀರು ಹಾಕುತ್ತ ಬಾಣಂತಿಯ ಕೊಟಡಿಗೆ ಹೊರಟುಹೋದಳು. ಸರೋಜಳಿಗೆ, 'ಅಮ್ಮ! ತುಮಕೂರಿನಿಂದ ನಿನ್ನ ಗಂಡ ಕಾರ್ಡು ಬರೆದಿದ್ದಾನೆ. ಈಗ ಹೊರಟು ಬರುವುದಕ್ಕೆ ಆಗುವುದಿಲ್ಲ. ತನ್ನ ತಾಯಿಗೆ ವಾಂತಿ, ತಲೆನೋವು, ಜ್ವರ ಎಂದು ಬರೆದಿದ್ದಾನೆ' ಎಂದು ಹೇಳಿದಳು.

'ನೀವು ಅಲ್ಲಿದ್ದಾಗ ನನ್ನತ್ತೆ ನೆಮ್ಮದಿಯಾಗಿದ್ದಳಲ್ಲ! ನೀನೇ ಬಂದು ಹೇಳಿದೆಯಲ್ಲ. ಏನಾಯಿತೋ ಪಾಪ! ಸದ್ಯ ಬೇಗ ಗುಣವಾಗಲಮ್ಮ!'

'ನಾಳೆಯೇ ಯಮಧರ್ಮರಾಯ ಅವಳನ್ನು ಕೊಂಡುಹೋಗಲಿ! ಗುಣವಾಗಲಮ್ಮ ಎಂದು ಏಕೆ ಹಾರೈಸುತ್ತೀಯೆ? ಅವಳಿಗೇನು ಬಂದಿದೆ ರೋಗ! ಲಂಕಿಣಿ ವಿದ್ಯೆ ಮಾಡಿದ್ದಾಳೆ! ಅಯ್ಯೋ! ನನ್ನ ಬುದ್ಧಿ ಮೋಸ ಹೋಯಿತು.' ಎಂದು ಹೇಳುತ್ತಾ ತುಳಸಾಬಾಯಿ ಹಿಂದಿರುಗಿದಳು. ಸರೋಜ ಖಿನ್ನಳಾಗಿ ಅಳುತ್ತಿದ್ದ ಮಗುವನ್ನು ಎತ್ತಿಕೊಂಡು ಸಮಾಧಾನ ಮಾಡತೊಡಗಿದಳು. ಕೃಷ್ಣರಾಯರು ತಮ್ಮ ಅಳಿಯನಿಗೆ, 'ನಾಮಕರಣವನ್ನು ಮುಂದಕ್ಕೆ ಹಾಕಿದೆ, ನಿನ್ನ ತಾಯಿಗೆ ಗುಣವಾದಮೇಲೆ ಶಿವಮೊಗ್ಗಕ್ಕೆ ಖಂಡಿತ ಬಾರಪ್ಪ. ಖಾಲಿಮಾಡಬೇಡ. ನಿನ್ನ ತಾಯಿಗೆ ಬೇಗ ಗುಣವಾಗುವಂತೆ ಡಾಕ್ಟರಿಗೆ ತೋರಿಸಿ ಔಷಧ ಪಥ್ಯ ನಡೆಸಪ್ಪ' ಎಂದು ಬರೆದುಹಾಕಿದರು.

ಸೋಮವಾರ ರಾಮಣ್ಣನ ಕಾಗದ ಬಂತು. ಅದನ್ನು ಓದುತ್ತ ಹೋದಹಾಗೆಲ್ಲ ಕೃಷ್ಣರಾಯರ ಮುಖ ಗಂಭೀರವಾಗುತ್ತ ಹೋಯಿತು, ಕಣ್ಣುಗಳು ಹನಿಗೂಡಿ ಮಂಜಾದುವು, ನಾಲ್ಕಾರು ಹನಿಗಳು ಅವರ

ಷರ್ಟಿನ ಮೇಲೆ ಬಿತ್ತು. ತಮ್ಮ ಹೆಂಡತಿ ಸಹಜ ಜ್ಞಾನದಿಂದ ಹೇಳಿದ ತೀರ್ಮಾನವೇ ಸತ್ಯವಾಗುವ ಹಾಗಿದೆಯಲ್ಲ. ಮುಂದೆ ಏನುಮಾಡ ಬೇಕು? ಎಂಬ ಚಿಂತೆ ಅವರನ್ನು ಹಿಡಿಯಿತು. ಕಾಗದದ ವಿಚಾರ ಗಳನ್ನೆಲ್ಲ ಹೆಂಡತಿಗೆ ತಿಳಿಸಿದರು. ಆ ಕಾಗದದಲ್ಲಿ ಕಾವೇರಮ್ಮ ಶುಕ್ರವಾರ ನಡಸಿದ ಆರ್ಭಟ ಪ್ರಕರಣದ ವಿವರಗಳಿದ್ದುವು. ಜತೆಗೆ ಸೀತಾರಾಮುವಿನ ಅಂತರ್ಭಾವಗಳು ಹೇಗೆ ಓಡುತ್ತಿವೆ ಎಂಬುದರ ವಿವರಗಳೂ ಇದ್ದುವು. ಇನ್ನು ಕಾವೇರಮ್ಮ ತನ್ನ ಆಲೋಚನೆಗಳನ್ನು ಹಂಚಿಕೆಗಳನ್ನೂ ತಡಮಾಡದೆ ಕಾರ್ಯರೂಪಕ್ಕೆ ತರಬಹುದೆಂಬ ಸೂಚನೆಯೂ ಇತ್ತು. 'ನಾನು ಆಗಲೇ ಹೇಳಲಿಲ್ಲವೇ? ಗಂಡಸರಿಗೆ ಈ ವಿಚಾರಗಳಲ್ಲಿ ಬುದ್ಧಿ ಓಡುವುದಿಲ್ಲ. ಈಗ ಒಂದು ಸಾವಿರ ರೂಪಾಯಿಗಳಲ್ಲ, ಹತ್ತುಸಾವಿರ ರೂಪಾಯಿ ಕೊಡುತ್ತೇನೆಂದರೂ ಸೀತಾ ರಾಮು ಇಲ್ಲಿಗೆ ಬರುವುದಿಲ್ಲ. ಏನು ಮಾಡಬೇಕೋ ನನಗೆ ಬಗೆಹರಿ ಯುವುದಿಲ್ಲ. ನನ್ನ ಬುದ್ಧಿ ಆಗ ಮೋಸಹೋಯಿತು' ಎಂದು ತುಳಸಾ ಬಾಯಿ ಹೇಳಿದಳು. ಕಾಗದದ ವಿವರಗಳನ್ನು ಸರೋಜಳಿಗೆ ತಿಳಿಸಲಿಲ್ಲ.

ಮದ್ರಾಸಿನವರಿಗೆ ಏನು ಉತ್ತರವನ್ನು ಬರೆಯಬೇಕು? ಅವರು ಟೆಲಿಗ್ರಾಮನ್ನೇ ನಿರೀಕ್ಷಿಸುವಷ್ಟು ಆತುರವನ್ನು ತೋರಿಸಿ ಹೊರಟು ಹೋದರು. ಈಗ ನಾಗರಾಜನಿಗೆ ವಿವರಗಳನ್ನು ತಿಳಿಸದೆ ಅವನ ತೀರ್ಮಾನವೇನೆಂಬುದನ್ನು ತಿಳಿದುಕೊಳ್ಳದೆ ತಾವೇನೂ ಬರೆಯುವ ಹಾಗಿಲ್ಲ. ಸೀತಾರಾಮುವಿನ ವಿಚಾರದಿಂದ ನಾಗರಾಜನ ಮದುವೆಯ ಪ್ರಕರಣಕ್ಕೆ ಹೇಗೆ ಬಾಧೆತಟ್ಟುವುದೋ ಏನೋ! ಈಗ ಬಂದಿರುವ ಹೆಣ್ಣು ಒಳ್ಳೆಯ ಕಡೆಯಿಂದ ಬಂದಿದೆ. ಮುಂದೆ ನಾಗರಾಜ ಐ. ಸಿ. ಎಸ್. ಪ್ಯಾಸ್‌ಮಾಡಿ ದೊಡ್ಡಹುದ್ದೆಗೆ ಬರುವುದನ್ನೂ ತಾವು ನೋಡ ಬಹುದು. ಅವನು ದೊಡ್ಡ ಶ್ರೀಮಂತನಂತೆ ದೊಡ್ಡ ಬಂಗಲೆಯಲ್ಲಿ ಎರಡು ಮೋಟಾರುಗಳನ್ನಿಟ್ಟುಕೊಂಡು, ಸುಖವಾಗಿ ಬಾಳುವುದನ್ನು ನೋಡಬಹುದು. ಮಗ ಐ. ಸಿ. ಎಸ್. ಎಂದು ಸಮಾಜದಲ್ಲಿಯೂ ತಾವು ಹೆಚ್ಚು ಗೌರವವನ್ನು ಪಡೆಯಬಹುದು. ನಾಗರಾಜ ಏನು ಹೇಳು ತ್ತಾನೋ ತಿಳಿಯದಲ್ಲ. ಅವರವರ ಅದೃಷ್ಟಗಳು ಅವರವರಿಗೆ. ಒಬ್ಬರಿ

ಗಾಗಿ ಮತ್ತೊಬ್ಬರು ಏಕೆ ಕಷ್ಟಪಡಬೇಕು? ಆ ಒಂದು ಮರ ದೊಡ್ಡದಾಗಿ ಬೆಳೆದುಕೊಂಡರೆ ಹತ್ತು ಜನಕ್ಕೆ ನೆರಳು ಕೊಡಬಹುದು, ಈ ಸಂಸಾರ ಉದ್ಧಾರವಾಗಬಹುದು– ಎಂದು ಲೆಕ್ಕಾಚಾರ ಮಾಡಿಕೊಂಡು ಕೃಷ್ಣ ರಾಯರೂ ತುಳಸಾಬಾಯಿಯೂ ನಾಗರಾಜನನ್ನು ಬರಮಾಡಿಕೊಂಡು ಅವನ ಮದುವೆಯ ಪ್ರಸ್ತಾಪ ಎತ್ತಿದರು. ಅವನಿಗೆ ನಾಮಕರಣ ಮುಂದಕ್ಕೆ ಹೋಯಿತು, ಭಾವ ಈಗ ಬರುವುದಕ್ಕಾಗುವುದಿಲ್ಲ, ಮುಂದೆ ಬರಬಹುದು– ಎಂಬಿಷ್ಟು ವಿವರಗಳು ಮಾತ್ರ ತಿಳಿದಿದ್ದುವು. ಈಗ ಮದುವೆಯ ಮಾತು ಬಂದದ್ದರಿಂದ ಇದನ್ನು ಮೊದಲು ನಿಷ್ಕರ್ಷೆ ಮಾಡುವ ಆತುರದಲ್ಲಿ ತಾಯಿ ತಂದೆಗಳಿದ್ದಾರೆಂದು ಅವನಿಗೆ ಹೊಳೆಯಿತು.

'ನನಗೆ ತುಮಕೂರಿನ ವಿಚಾರಗಳನ್ನೆಲ್ಲ ಮುಚ್ಚುಮರೆಯಿಲ್ಲದೆ ತಿಳಿಸಿಬಿಡು. ನನ್ನ ಮದುವೆಯ ವಿಚಾರದಲ್ಲಿ ನನ್ನ ತೀರ್ಮಾನವನ್ನು ಹೇಳುತ್ತೇನೆ' ಎಂದು ನಾಗರಾಜ ಕೃಷ್ಣರಾಯರಿಗೆ ಉತ್ತರಕೊಟ್ಟನು.

'ಆ ಮಾತಿಗೂ ಇದಕ್ಕೂ ಸಂಬಂಧವಿಲ್ಲ. ಅವರವರು ಬದುಕೋ ಮಾರ್ಗ ಅವರವರಿಗೆ. ನಾವು ಹೆತ್ತವರು, ಎಲ್ಲ ಜವಾಬ್ದಾರಿಗಳನ್ನೂ ನಿರ್ವಾಹ ಮಾಡಬೇಕು. ನಾವು ಮಾಡುತ್ತೇವೆ. ನಿನ್ನ ಮಾತನ್ನು ನೀನು ಆಡಪ್ಪ' ಎಂದು ತಾಯಿ ಹೇಳಿದಳು.

'ತುಮಕೂರಿನಿಂದ ಕಾಗದಗಳೇನಾದರೂ ಬಂದಿದ್ದರೆ ಇತ್ತ ಕೊಡಿ. ನಾನು ಓದಿಕೊಂಡು ಆಮೇಲೆ ಹೇಳುತ್ತೇನೆ'

'ಕೃಷ್ಣರಾಯರು ರಾಮಣ್ಣನ ಕಾಗದವನ್ನು ಅವನ ಕೈಗೆ ಕೊಟ್ಟು ಬಿಟ್ಟರು. ಅದನ್ನು ನಾಗರಾಜ ಓದಿಕೊಂಡು ಖಿನ್ನತೆಯಿಂದ, 'ಪ್ರಪಂಚ ಏನು ಎನ್ನುವುದು ಈ ಕಾಗದದಿಂದ ಕಾಣುತ್ತಾ ಇದೆ. ಎಂಥ ನಿಸ್ಸಹಾಯ ಪ್ರಾಣಿಗಳು ನಾವು? ಅಪ್ಪನ ಅಸಿಸ್ಟೆಂಟ್ ಕಮಿಷನರ್ ಹುದ್ದೆ ಏನು ಮಾಡೀತು? ನನ್ನ ಪ್ರೊಬೇಷನರಿ ಹುದ್ದೆ ಏನು ನೆರವಾದೀತು? ಇದನ್ನು ನೋಡುತ್ತಿದ್ದ ಹಾಗೆಯೇ ನನ್ನ ಎದೆ ಬಿರಿಯುತ್ತಿದೆ. ಇನ್ನು ನಿಮ್ಮ ಸ್ಥಿತಿ!'

'ನಮ್ಮ ಸ್ಥಿತಿ ಇರಲಪ್ಪ! ನಾವು ಸುಧಾರಿಸಿಕೊಳ್ಳುತ್ತೇವೆ. ಸರೋಜಳ ಒಂದು ದುಃಖವನ್ನು ನಿನ್ನ ಮದುವೆಯ ಸಂತೋಷದಲ್ಲಿ ಮರೆಯುತ್ತೇವೆ. ಈಗ ತಾನೇ ಏನು ಮೀರಿಹೋಗಿದೆ? ಮುಂದೆ ಪ್ರಯತ್ನಪಡೋಣ. ನಿನ್ನ ಭಾವ ಇಲ್ಲಿಗೆ ಬರುವ ಹಾಗೆ ಮಾಡೋಣ. ಸರೋಜ ಅವನನ್ನು ಸೇರಿ ಸಂಸಾರ ನಡಸುವ ಹಾಗೆ ಮಾಡೋಣ. ನಿನ್ನ ಮದುವೆ ಆದರೆ ನಮಗೂ ಒಂದು ಭಾರ ಇಳಿಯಿತು. ಈಗ ಬಂದಿರುವ ಹೆಣ್ಣನ್ನು ಬಿಡಬಾರದು. ಮದುವೆಯ ಸಂಭ್ರಮದಲ್ಲಿ ನಾವೂ ಸಂತೋಷಪಡುತ್ತೇವೆ' ಎಂದು ತಾಯಿ ಹೇಳಿದಳು.

ನಾಗರಾಜ ಎದ್ದು ನಿಂತು, ಕೃಷ್ಣರಾಯರಿಗೆ, 'ನೀನು ಟೆಲಿಗ್ರಾಂ ಕೊಡುವ ಹಾಗಿದ್ದರೆ ಕೊಡಪ್ಪ. ಇಲ್ಲದಿದ್ದರೆ ನಾನೇ ನಿನ್ನ ಹೆಸರಿನಲ್ಲಿ ಕಳಿಸಿಬಿಡುತ್ತೇನೆ. ನಾನು ಮದುವೆಯನ್ನೇ ಮಾಡಿಕೊಳ್ಳುವುದಿಲ್ಲ, ಆಜೀವಬ್ರಹ್ಮಚಾರಿಯಾಗಿ ಇದ್ದುಬಿಡುತ್ತೇನೆ. ಇನ್ನು ಚರ್ಚೆ ಬೇಡ' ಎಂದು ಹೇಳಿ ತನ್ನ ಕೊಟಡಿಗೆ ಹೊರಟುಹೋದನು.

'ಈ ಸಂಸಾರಕ್ಕೆ ಅವನತಿ ಪ್ರಾರಂಭವಾಯಿತು. ಮುಂದೆ ದುಃಖದ ಮೇಲೆ ದುಃಖ, ಕಷ್ಟದ ಮೇಲೆ ಕಷ್ಟ. ಎದೆ ಗಟ್ಟಿಮಾಡಿಕೋ' ಎಂದು ಕೃಷ್ಣರಾಯರು ತಮ್ಮ ಹೆಂಡತಿಗೆ ಹೇಳಿ ಬೆಂಗಳೂರಿಗೆ ತಂತಿ ಕಳಿಸುವ ಏರ್ಪಾಟು ಮಾಡಿದರು. 'ನಿಮ್ಮನ್ನು ನಿರಾಶೆಪಡಿಸುವುದಕ್ಕೆ ವಿಷಾದವಾಗುತ್ತದೆ. ನನ್ನ ಮಗ ಈಗ ಮದುವೆಗೆ ಒಪ್ಪುವುದಿಲ್ಲ. ಕ್ಷಮಿಸಿ' ಎಂಬುದು ಇಂಗ್ಲಿಷ್ ಒಕ್ಕಣೆಯ ಅಭಿಪ್ರಾಯವಾಗಿತ್ತು.

ಆ ದಿನ ರಾತ್ರಿ ಸುಮಾರು ಎಂಟು ಗಂಟೆಗೆ ಗೇಟಿನೊಳಗೆ ನುಗ್ಗಿ ಮೋಟಾರೊಂದು ಮನೆಯ ಮುಂದೆ ನಿಂತಿತು. ಆಗ ತಾನೆ ಕೃಷ್ಣರಾಯರು ಆದಿಯಾಗಿ ಎಲ್ಲರೂ ಊಟಮಾಡಿ ಕೈ ತೊಳೆದುಕೊಂಡು ಹಾಲಿಗೆ ಬರುತ್ತಿದ್ದರು. ಇದ್ದಕ್ಕಿದ್ದ ಹಾಗೆ ಮೋಟಾರು ಬಂದು ನಿಂತಿರುವುದನ್ನು ನೋಡಿ ಸ್ವಲ್ಪ ಚಕಿತರಾದರು. ಬಂದವರು ಯಾರೆಂದು ತಿಳಿಯಿತು. ಮದ್ರಾಸಿನ ಯಜಮಾನ ಮತ್ತು ಅವನ ಹೆಂಡತಿ. ಹಿಂದೆ ಸಂಭ್ರಮದ ಸ್ವಾಗತವಾಯಿತು. ಇಂದು ನಿರುತ್ಸಾಹದ ಸ್ವಾಗತವಾಯಿತು. ಯಜಮಾನನು ಒಳಕ್ಕೆ ಬರುತ್ತಿದ್ದ ಹಾಗೆಯೇ,

'ಏನು ಕೃಷ್ಣರಾವ್! ನಮ್ಮನ್ನು ಮುಳುಗಿಸಿಬಿಟ್ಟಿರಲ್ಲ. ನಿಮ್ಮ ತಂತಿ ಮಧ್ಯಾಹ್ನ ಎರಡು ಗಂಟೆಗೆ ಬಂತು. ಉಟ್ಟಬಟ್ಟೆಯಲ್ಲಿ ನಾವು ಹೊರಟು ಬಂದಿದ್ದೇವೆ. ನಮ್ಮ ಮಗಳು ಕಾಂತಾಮಣಿ ತಾನೂ ಬರುತ್ತೇನೆ ಎಂದು ಹಟಮಾಡಿದಳು. ಸಮಾಧಾನಪಡಿಸಿ ನಾವು ಬಂದೆವು. ದಯವಿಟ್ಟು ಪುನರಾಲೋಚನೆ ಮಾಡಿ. ಮದುವೆಗೆ ಮೊದಲು ಏನೋ ಆಸೆ ತೋರಿಸಿ ಈ ಮದ್ರಾಸಿನವರು ಅನಂತರ ತಪ್ಪಿಬಿಡುತ್ತಾರೆ ಎಂದು ಶಂಕಿಸುತ್ತೀರಾ? ಹಾಗೆ ಎಣಿಸಬೇಡಿ. ನಾನು ಸಭ್ಯ, ದೊಡ್ಡ ಮನುಷ್ಯ, ಸಮಾಜದಲ್ಲಿ ಗಣ್ಯ. ನನ್ನನ್ನು ನಂಬಿ. ನಂಬದಿದ್ದರೆ ನಿಮಗೆಷ್ಟು ಬೇಕು? ದಯವಿಟ್ಟು ತಿಳಿಸಿ' ಎಂದು ಹೇಳುತ್ತ ಕೈಪೆಟ್ಟಿಗೆಯಿಂದ ನೂರು ರೂಪಾಯಿ ನೋಟುಗಳ ಕಟ್ಟನ್ನು ಹೊರಕ್ಕೆ ತೆಗೆದನು.

'ಹಣಕಾಸುಗಳ ವಿಚಾರವಲ್ಲ. ದಯವಿಟ್ಟು ಕ್ಷಮಿಸಿ. ತಮ್ಮ ಹಣವನ್ನು ಪೆಟ್ಟಿಗೆಯಲ್ಲೇ ಇಟ್ಟುಕೊಳ್ಳಿ.'

'ಮತ್ತೆ ಯಾವ ವಿಚಾರ? ನಮ್ಮ ಒಬ್ಬಳೇ ಮಗಳು ನಮ್ಮ ಕೈಗೆ ಸಿಕ್ಕುವುದಿಲ್ಲವಲ್ಲ! ಏನು ಮಾಡಿಕೊಂಡುಬಿಡುತ್ತಾಳೊ? ನಮ್ಮ ಎದೆ ಡವಡವನೆ ಹೊಡೆದುಕೊಳ್ಳುತ್ತಾ ಇದೆ. ದಯಮಾಡಿ ತಿಳಿಸಿ. ಅಂತರಂಗದಲ್ಲಿ ತಿಳಿಸುವ ವಿಚಾರವಾದರೆ ತಿಳಿಸಿ. ನಾನು ಯಾರಿಗೂ ಬಾಯಿಬಿಡುವುದಿಲ್ಲ. ದೇವರಾಣೆಗೂ ಹೇಳುತ್ತೇನೆ. ಪ್ರಮಾಣ ಮಾಡುತ್ತೇನೆ. ನನ್ನ ಮಗಳು ಮನಸ್ಸನ್ನು ಬದಲಾಯಿಸುವುದಿಲ್ಲ. ದೇವೇಂದ್ರನೇ ಬಂದರೂ ಬದಲಾಯಿಸುವುದಿಲ್ಲ, ಈಗ ನಾಲ್ಕು ದಿನದಿಂದ ಅವಳನ್ನು ಹಿಡಿಯುವುದೇ ಕಷ್ಟವಾಗಿದೆ. ಹೇಳಿ ಕೃಷ್ಣರಾವ್! ಕೊಟಡಿಗೆ ಹೋಗೋಣವೇ?'

'ಬೇಡ ಯಜಮಾನರೇ! ಅವು ನಮ್ಮ ಗೃಹಕೃತ್ಯದ ವಿಚಾರಗಳು, ಮತ್ತೊಬ್ಬರಿಗೆ ತಿಳಿಸತಕ್ಕುವಲ್ಲ. ತಮಗೂ ಸಂಕಟ. ನಾನದನ್ನು ಗ್ರಹಿಸಬಲ್ಲೆ.'

'ನಾನು ಸಹಾಯಕ್ಕೆ ಬರಬಹುದಾದ ವಿಷಯವೇ? ಯಾರಾದರೂ ತೊಂದರೆಯಲ್ಲಿದ್ದಾರೆಯೇ? ಹಣಕಾಸುಗಳ ತಾಪತ್ರಯವೇ? ಹೇಳಿ.'

'ದೇವರೇ ನಮ್ಮ ಸಹಾಯಕ್ಕೆ ಬರಬೇಕು. ಮನುಷ್ಯ ಮಾತ್ರದವರಿಂದ ಸಾಧ್ಯವಿಲ್ಲ. ತಾವು ಸ್ವಲ್ಪ ಕಾದು ನೋಡಿ. ಮದ್ರಾಸಿನ ತಮ್ಮ ಜೋಯಿಸರು ಈ ಮದುವೆ ಖಂಡಿತ ಆಗುತ್ತದೆಂದು ಭರವಸೆ ಕೊಟ್ಟಿದ್ದಾರಲ್ಲ! ದೇವರ ದಯೆಯಿಂದ ಆ ಭರವಸೆ ಕೈಗೂಡಲಿ. ನಮ್ಮ ಕಷ್ಟಗಳೂ ಪರಿಹಾರವಾಗಲಿ. ನಾವು ಸಹ ಒಳ್ಳೆಯದಾಗಲೆಂದೇ ಪ್ರಾರ್ಥಿಸುತ್ತೇವೆ.'

'ಗೃಹಕೃತ್ಯದ ವಿಷಯ, ರಹಸ್ಯ—ಎಂದು ತಾವು ಹೇಳಿದಮೇಲೆ ನಾನು ಬಲಾತ್ಕಾರ ಮಾಡಬಾರದು. ಹಣಕಾಸುಗಳ ವಿಚಾರ ಅಲ್ಲ, ನನ್ನ ವಾಗ್ದಾನಗಳಲ್ಲಿ ಅಪನಂಬಿಕೆಯಿಲ್ಲ ಎಂದು ತಿಳಿಸಿದ್ದೀರಿ. ಬಹಳ ಸಂತೋಷ. ಈಗ ನಮ್ಮ ಪೇಚಾಟ ಮಾತ್ರ ತಪ್ಪಲಿಲ್ಲವಲ್ಲ.'

'ತಮಗೂ ಪೇಚಾಟ, ನಮಗೂ ಪೇಚಾಟ ; ಯತ್ನವಿಲ್ಲ.'

'ಹೀಗೆ ನನ್ನನ್ನು ಕಳಿಸಿ ಹಾಗೆ ಬೇರೆ ಕಡೆ ಏನಾದರೂ ಹೆಣ್ಣನ್ನು ತಂದುಕೊಳ್ಳುವ ಯೋಚನೆ ಇದೆಯೇ? ಕ್ಷಮಿಸಬೇಕು. ಈ ಸಂದರ್ಭದಲ್ಲಿ ನನ್ನ ಭಯ ನನ್ನ ನಿರಾಶೆ—ಎಲ್ಲವನ್ನೂ ಗಣನೆಗೆ ತೆಗೆದುಕೊಂಡು ಕ್ಷಮಿಸಬೇಕು. ತಾವು ಬಹಳ ದೊಡ್ಡಮನುಷ್ಯರು, ಸಭ್ಯರು ಎಂಬುದನ್ನು ಕೇಳಿ ತಿಳಿದಿದ್ದೇನೆ. ತಮ್ಮ ವರ್ತನೆಯಿಂದಲೂ ತಿಳಿದುಕೊಂಡಿದ್ದೇನೆ. ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ, ಎಂತಹ ಸಭ್ಯ—ಎಂದು ನಾನು ಮಾರುಹೋದೆ. ಇಂಥವರು ಅಡ್ಡದಾರಿ ಹಿಡಿಯುವುದಿಲ್ಲ ಎಂಬ ನಂಬಿಕೆಯೇನೋ ನನಗಿದೆ. ಆದರೂ ನನ್ನ ಸಂಕಟದಿಂದ ಆ ಪ್ರಶ್ನೆಯನ್ನು ಕೇಳಿಬಿಟ್ಟೆ. ಕ್ಷಮಿಸಬೇಕು.'

'ಯಜಮಾನರೇ! ನನ್ನ ಮಗ ಮದುವೆ ಮಾಡಿಕೊಳ್ಳುವುದಾದರೆ ತಮ್ಮ ಮಗಳನ್ನೇ ಮಾಡಿಕೊಳ್ಳುತ್ತಾನೆ. ತಿಳಿಯಿತೇ?'

'ಕೃಷ್ಣರಾವ್! ಇದು ಸತ್ಯವೇ?'

'ಸತ್ಯ. ಯೋಚನೆ ಮಾಡಬೇಡಿ.'

'ಎಷ್ಟು ದಿನ ನಾವು ಕಾಯಬೇಕಾದೀತು? ನಿಮ್ಮ ಭರವಸೆ ಬಂದ ಮೇಲೆ ನಾಲ್ಕು ವರ್ಷವಾದರೂ ಕಾಯುತ್ತೇನೆ.'

'ನಾನು ಹೇಳಲಾರೆ. ಎಲ್ಲವೂ ಭಗವಂತನ ಕೈಯಲ್ಲಿದೆ. ನಮ್ಮ ಕಷ್ಟ ಒಂದು ತಿಂಗಳಲ್ಲಿ ಪರಿಹಾರವಾಗಬಹುದು, ಒಂದೇ ವಾರದಲ್ಲಿ ಆದರೂ ಆಗಬಹುದು. ಆಗದೆಯೇ ಹೋಗಬಹುದು. ತಾವು ಅದಕ್ಕೂ ಸಿದ್ಧರಾಗಿರಬೇಕು.'

'ಎಲ್ಲ ಒಳ್ಳೆಯದೇ ಆಗಲಿ! ಒಂದು ವಾರದಲ್ಲಿ ಪರಿಹಾರವಾಗಲಿ! ತಾವು ನನಗೆ ಕೊಟ್ಟಿರುವ ಭರವಸೆಯೊಂದೇ ಸಾಕು. ನನ್ನ ಮಗಳು ಬದುಕಿಕೊಂಡಳೆಂದು ನನಗೆ ಸಂತೋಷವಾಗುತ್ತಿದೆ. ನಾನು ಮದ್ರಾಸಿಗೆ ಹೋಗಿ ಜೋಯಿಸರನ್ನು ಕಂಡು ಮಾತನಾಡುತ್ತೇನೆ ತಮಗೂ ಕಾಗದ ಬರೆಯುತ್ತೇನೆ. ಈ ಹಣವನ್ನು ಇಲ್ಲಿಯೇ ಬಿಟ್ಟಿರುತ್ತೇನೆ, ತಮ್ಮಲ್ಲಿರಲಿ' ಎಂದು ಹೇಳುತ್ತ ಯಜಮಾನನು ಎದ್ದನು.

'ದಯವಿಟ್ಟು ಕ್ಷಮಿಸಿ. ಹಣ ನಮ್ಮಲ್ಲಿ ಬೇಡ. ತಮ್ಮಲ್ಲೇ ಇರಲಿ. ಇಲ್ಲಿ ಖಂಡಿತ ಬಿಟ್ಟುಹೋಗಬಾರದು' ಎಂದು ಕೃಷ್ಣರಾಯರು ಹೇಳಿ ಆ ನೋಟುಗಳ ಕಟ್ಟನ್ನು ಅವರ ಕೈ ಪೆಟ್ಟಿಗೆಗೆ ತಾವೇ ಹಾಕಿದರು.

ತುಳಸಾಬಾಯಿಯೂ ಯಜಮಾನನ ಹೆಂಡತಿಯೂ ಹೆಚ್ಚು ಮಾತನಾಡಲಿಲ್ಲ. 'ನನ್ನ ಮಗಳನ್ನು ಆ ದಿನವೇ ನಿಮ್ಮ ಮಡಿಲಲ್ಲಿ ಹಾಕಿದ್ದೇನಮ್ಮ! ಅವಳನ್ನು ಸೊಸೆಯಾಗಿ ಮಾಡಿಕೊಂಡು ಅವಳನ್ನು ಉಳಿಸುವ ಭಾರ ನಿಮ್ಮದು!' ಎಂದು ಮಾತ್ರ ಆಕೆ ಗದ್ಗದ ಸ್ವರದಿಂದ ಹೇಳಿ ತನ್ನ ಗಂಡನೊಡನೆ ಹೊರಟಳು. ರಾತ್ರಿ ಒಂಬತ್ತು ಗಂಟೆಗೆ ಮೋಟಾರು ಗೇಟುಬಿಟ್ಟು ಹೊರಟುಹೋಯಿತು.

ಅತ್ತ ತುಮಕೂರಿನಿಂದ ಒಂದು ವಾರವಾದರೂ ಸೀತಾರಾಮುವಿನಿಂದ ಕಾಗದ ಬರಲಿಲ್ಲ. ಹತ್ತು ದಿನವಾಯಿತು, ಇಪ್ಪತ್ತು ದಿನವಾಯಿತು. ಬರೆದ ಕಾಗದಗಳಿಗೆ ಜವಾಬೇ ಇಲ್ಲ. ಅವನ ತಾಯಿಯ ದೇಹಸ್ಥಿತಿಯನ್ನು ವಿಚಾರಿಸಿ ಬರೆದ ಕಾಗದಗಳಿಗೂ ಉತ್ತರವಿಲ್ಲ. ರಾಮಣ್ಣನಿಂದ ಮಾತ್ರ, ಕೆಲವು ಕಾಗದಗಳು ಬಂದುವು. ಸೀತಾರಾಮು ಒಂದು ತಿಂಗಳು ರಜ ತೆಗೆದುಕೊಂಡಿದ್ದಾನೆಂದೂ ಕಚೇರಿಗೆ ಹೋಗುತ್ತಿಲ್ಲವೆಂದೂ, ಮುಂದಕ್ಕೂ ರಜ ತೆಗೆದುಕೊಳ್ಳುವ ಆಲೋಚನೆ

ಯಲ್ಲಿದ್ದಾನೆಂದೂ, ಅವನ ತಾಯಿಗೆ ಎಲ್ಲ ಗುಣವಾಗಿ ಓಡಾಡುತ್ತಿರುವ ಳೆಂದೂ ಸಮಾಚಾರಗಳು ತಿಳಿದುಬರುತ್ತಿದ್ದುವು.

ಸೀತಾರಾಮು ತನ್ನ ತಾಯಿ ಆ ದಿನ ಏಕೆ ಹಾಗೆ ಮಾಡಿದಳು? ಎಂದು ಆಲೋಚಿಸತೊಡಗಿದ್ದನು. ತನ್ನ ವಿಚಾರದಲ್ಲಿ ಕೋಪ ಎಂಬುದೂ ತಾನು ಶಿವಮೊಗ್ಗಕ್ಕೆ ಹೋಗುವುದು ಆಕೆಗೆ ಇಷ್ಟವಿಲ್ಲದೆ ತಡೆಹಾಕಿದಳೆಂಬುದೂ ಸ್ಥೂಲವಾಗಿ ತಿಳಿದಿದ್ದರೂ ತನ್ನೊಡನೆ ಯಾವ ಮಾತನ್ನೂ ಆಡದೆ, ತಾನು ಆಕೆಯ ರೇಗಾಟಕ್ಕೆ ಯಾವ ಹೊಸ ಕಾರಣ ವನ್ನೂ ಒದಗಿಸದೆ ಇದ್ದಕ್ಕಿದ್ದ ಹಾಗೆ ಮಾರನೆಯ ದಿನ ಬೆಳಗ್ಗೆ ಹಾಗೇಕೆ ಮಾಡಿದಳು? ಸದ್ಯಕ್ಕೆ ಶಿವಮೊಗ್ಗದ ಪ್ರಸ್ತಾಪವನ್ನೇ ಕೈಬಿಡೋಣ. ನಾನು ಕಾಗದಗಳನ್ನು ಬರೆಯುವುದೇ ಬೇಡ. ನಾಳೆ ನನ್ನನ್ನು ತಾಯಿ ಕೇಳಿದರೂ ಧೈರ್ಯದಿಂದ ನಾನು ಆ ಮಾತನ್ನು ಹೇಳಬಹುದು. ಸಮಯ ದೊರೆತಾಗ ಆಕೆಯ ಪ್ರಸನ್ನತೆಯನ್ನು ನೋಡಿಕೊಂಡು ನನ್ನ ಮನಸ್ಸಿನಲ್ಲಿರುವುದನ್ನೆಲ್ಲ ಸ್ಪಷ್ಟವಾಗಿ ಖಂಡಿತವಾಗಿ ತಿಳಿಸಬಹುದು. ರಾಮಣ್ಣ ಹೇಳಿದಷ್ಟು ದೂರ ನಾನು ಹೋಗದಿದ್ದರೂ ಸ್ವಲ್ಪ ಬಿಗಿಯಿಂದ ಇರುವುದು ಮೇಲು. ತಾಯಿಯ ಪ್ರತಿಕ್ರಿಯೆ ಹೇಗೆ ಬರಬಹುದೋ? ಹಿಂದೆ ಮಾಡಿದಂತೆ ಆರ್ಭಟವನ್ನು ಮತ್ತೊಮ್ಮೆ ಮಾಡಿದರೆ ನಾನು ಮನೆಬಿಟ್ಟು ಎಲ್ಲಿಯಾದರೂ ದೇಶಾಂತರ ಹೋದರೂ ಹೊರಟು ಹೋದೇನು – ಅಷ್ಟು ಬೇಸರಿಕೆ ಮನಸ್ಸಿಗಾಗಿದೆ; ಕಡೆಗೆ ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಜೀವನದಲ್ಲಿ ಜುಗುಪ್ಸೆ ಹುಟ್ಟಿದೆ ಎಂದು ಆಕೆಗೆ ನಾನು ತಿಳಿಸಿ ಬಿಡಬೇಕು. ಆಗ ಆಕೆಗೆ ಪ್ರಜ್ಞೆ ಬರುತ್ತದೆ, ವಿಹಿತವಾಗಿ ನಡೆದುಕೊಳ್ಳುತ್ತಾಳೆ – ಎಂದು ಮುಂತಾಗಿ ಯೋಚನಾವ್ಯೂಹವನ್ನು ಬಲವಾಗಿ ಕಟ್ಟಿಕೊಂಡು ತಾಯಿಯನ್ನು ಎದುರಿಸಬೇಕೆಂದು ಮನಸ್ಸು ಮಾಡಿದನು.

ಮದ್ರಾಸಿನವರು ತಮ್ಮ ಪಟ್ಟಣಕ್ಕೆ ಹಿಂದಿರುಗಿದರು. ಆ ಯಜಮಾನನು ಕೂಡಲೇ ಜೋಯಿಸರ ಮನೆಗಳಿಗೆ ಧಾವಿಸಿ ಮದುವೆಗೆ ಬಂದಿರುವ ವಿಘ್ನಗಳನ್ನು ತಿಳಿಸಿ ಜೋಯಿಸರನ್ನು ಪ್ರಶ್ನಿಸಿದನು. ಆದಕ್ಕೆ ಜೋಯಿಸರು, 'ಶನಿ ಮುಂದಕ್ಕೆ ಹೋಗಿದ್ದವನು ಏಕೋ ತಟ್ಟನೆ

ಹಿಂದಕ್ಕೆ ಬಂದುಬಿಟ್ಟಿದ್ದಾನೆ. ಅವನು ಪುನಃ ಮುಂದಕ್ಕೆ ಹೋಗುವ ವರೆಗೂ ತಡೆಯಾಗುತ್ತದೆ. ಆಮೇಲೆ ಸರಿಹೋಗುತ್ತದೆ. ನಿಮ್ಮ ಮಗಳ ಜಾತಕವನ್ನು ಪುನಃ ತಂದುಕೊಡಿ. ಹುಟ್ಟಿದ ಕಾಲವನ್ನು ಖಚಿತವಾಗಿ ಹಾಕಿದ್ದೀರಾ? ಅಥವಾ ಏನಾದರೂ ವ್ಯತ್ಯಾಸವಿದೆಯೆ? ಮತ್ತೊಮ್ಮೆ ಗುಣಿಸಿ ನೋಡುತ್ತೇವೆ. ಆವಶ್ಯಕವಾದರೆ ಶಾಂತಿ ಮಾಡಿಸೋಣ; ನವಗ್ರಹಜಪ, ಸೂರ್ಯೋಪಾಸನೆ ಮಾಡಿದರೆ ಅನಿಷ್ಟ ಪರಿಹಾರವಾಗುತ್ತದೆ. ಎಳ್ಳಿನ ದಾನವನ್ನು ಬಂಗಾರದ ನಾಣ್ಯವಿಟ್ಟು ನಿತ್ಯವೂ ಮಾಡಿ' – ಎಂದು ಪರಿಹಾರೋಪಾಯಗಳನ್ನು ತಿಳಿಸಿದರು. ಶಿವಮೊಗ್ಗಕ್ಕೆ ಮದರಾಸಿನಿಂದ ಕಾಗದಗಳು ಹೋಗುತ್ತಿದ್ದುವು. ನಮ್ಮ ಗೃಹಕೃತ್ಯದ ತೊಂದರೆಗಳು ಇನ್ನೂ ಪರಿಹಾರವಾಗಿಲ್ಲ ಎಂಬ ಉತ್ತರ ಶಿವಮೊಗ್ಗದಿಂದ ಬರುತ್ತಿತ್ತು.

ತುಮಕೂರಿನಲ್ಲಿ ಸ್ಥಿತಿ ಯಥಾಪ್ರಕಾರವೇ ಇತ್ತು. ಸೀತಾರಾಮು ಇನ್ನೂ ಎರಡು ತಿಂಗಳ ರಜ ತೆಗೆದುಕೊಂಡು ಕುಳಿತುಬಿಟ್ಟನು. ಕಾವೇರಮ್ಮ, 'ಅಪ್ಪ ಸೀತಾರಾಮು! ಏಕಪ್ಪ ಸುಮ್ಮಸುಮ್ಮನೆ ರಜ ತೆಗೆದುಕೊಂಡು ಮನೆಯಲ್ಲಿ ಕುಳಿತುಬಿಟ್ಟೆ. ಸ್ವಲ್ಪ ಹಳ್ಳಿಕಡೆಯಾದರೂ ಹೋಗಿ ಗುತ್ತಿಗೆ ವಸೂಲು ಮಾಡಿಕೊಂಡು ಬಂದಿದ್ದರೆ ಆಗಿತ್ತಲ್ಲ. ಕೈಗೆ ನಾಲ್ಕು ಕಾಸು ಬರುತ್ತಿತ್ತು. ನಾನೂ ಹಳ್ಳಿಯ ಕಡೆ ಹೋಗಿ ಬಹಳ ದಿನಗಳಾದುವು. ಆ ಹಳ್ಳಿಯ ಮನೆ – ಬಾಡಿಗೆ ಕೊಟ್ಟಿದ್ದನ್ನು – ಅವರೇನು ಹಾಳುಮಾಡಿಟ್ಟಿದ್ದಾರೋ? ಬಾಡಿಗೆ ಸಹ ವರ್ಷದಿಂದ ಬಂದಿಲ್ಲ. ಇಲ್ಲಿ ಮನೆಯ ಕಡೆ ಹುಡುಗರು ನೋಡಿಕೊಳ್ಳುತ್ತಾರೆ. ಎರಡು ದಿನ ಹೋಗಿ ಬರೋಣವೇ?' ಎಂದು ಕೇಳಿದಳು.

'ಆಗಲಮ್ಮ ಹೋಗಿಬರೋಣ. ನನ್ನ ಸಂಪಾದನೆಯಲ್ಲಿ ಈ ಸಂಸಾರ ನಿರ್ವಾಹವಾಗುವುದಿಲ್ಲ. ನನಗೂ ಸಾಲಗಳಾಗಿ ಹೋದುವು. ಆಗಿರುವ ಸಾಲ ತೀರಿಸುವುದಕ್ಕೆ ಬೇರೆ ಹಣವಿಲ್ಲ.'

'ಆಗಲಪ್ಪ. ಹುಡುಗರಿಗೂ ಸರಿಯಾಗಿ ಬಟ್ಟೆಬರೆಯಿಲ್ಲ, ನಿನಗೂ ಸರಿಯಾಗಿ ಬಟ್ಟೆಬರೆಯಿಲ್ಲ. ಎರಡು ಕಾಸು ಸಾಲಕ್ಕೂ ಕೊಡೋಣ. ನಾಳೆ ನಿನ್ನ ತಮ್ಮನಿಗೆ ಪರೀಕ್ಷೆ ಆಗುತ್ತಲೂ ಎಲ್ಲಿ

ಯಾದರೂ ಕೆಲಸಕ್ಕೆ ಸೇರಿಸಿಬಿಡು. ಮುಂದಕ್ಕೆ ಓದಿಸುವುದಕ್ಕೆ ನಮಗೆ ಚೈತನ್ಯ ಎನಿದೆಯಪ್ಪ? ನಿನ್ನ ತಂದೆ ಬದುಕಿದ್ದಿದ್ದರೆ ಅವರೇನು ಮಾಡುತ್ತಿದ್ದರೋ. ನೀನು ಎಷ್ಟೂ ಅಂತ ಮಾಡೀಯೇ. ಅವನು ಇಪ್ಪತ್ತೈದೋ ಮೂವತ್ತೋ ತಂದುಹಾಕಲಿ. ಎಲ್ಲಿಯಾದರೂ ಒಂದು ಹೆಣ್ಣನ್ನು ನೋಡು. ನಾವು ಬಡವರು. ಬಡವರ ಮನೆ ಹುಡುಗಿ, ಕಣ್ಣು ಮೂಗು ನೇರವಾಗಿ, ಇದ್ದುದರಲ್ಲಿ ಲಕ್ಷಣವಾಗಿರೋ ಹುಡುಗಿಯನ್ನ ನೋಡಪ್ಪ. ಅವನ ಕೊರಳಿಗೊಂದು ಬಿಗಿದು ಜವಾಬ್ದಾರಿ ಇಳಿಸಿಕೊಳ್ಳೋಣ. ನಿನ್ನ ತಂಗಿಯರು ಬೇರೆ ಬೆಳೆದು ನಿಂತಿದ್ದಾರೆ, ಇನ್ನು ಅವರಿಗೆ ಗಂಡಂದಿರನ್ನು ಹವಣಿಸಬೇಕಾದರೆ ಯಾರ ಯಾರ ಕಾಲುಕಟ್ಟಬೇಕೋ! ಏನೇನು ಭಂಗಪಡಬೇಕೋ! ಸದ್ಯ ಅವರಿಬ್ಬರ ಮದುವೆಗಳಾಗಿ ಹೋದರೆ ಆಮೇಲೆ ನಿಶ್ಚಿಂತೆಯಾಗಿ ಕಣ್ಮುಚ್ಚಿಕೊಂಡೇನು. ಉಳಿದ ಗಂಡುತುಂಡುಗಳಿಗೇನು? ನನಗೆ ಅವರ ಯೋಚನೆ ಇಲ್ಲಪ್ಪ. ನಿನ್ನ ತಮ್ಮನನ್ನ ಮಾತ್ರ ಖಂಡಿತ ಕೆಲಸಕ್ಕೆ ಸೇರಿಸೋ ಯೋಚನೆ ಮಾಡು'

'ಆಗಲಮ್ಮ. ನೀನು ಹೇಳಿದಂತೆಯೇ ಆಗಲಿ. ಅವನಿಗೆ ಹದಿನೇಳೋ ಹದಿನೆಂಟೋ ವರ್ಷ–ಇನ್ನೂ ಸಣ್ಣ ವಯಸ್ಸು ಎಂದು ನನಗೆ ಅನ್ನಿಸುತ್ತದೆ.'

'ಅವನಿಗೆ ಈಗ ಹದಿನೆಂಟು ತುಂಬಿತಪ್ಪ. ಅವನು ನಿನ್ನಷ್ಟು ಚುಟಿ ಅಲ್ಲ. ನೀನು ಬೇಗಬೇಗ ಪ್ಯಾಸ್ ಮಾಡಿಕೊಂಡು ಮೇಲಕ್ಕೇರಿದೆ; ಒಂದು ಕಡೆಯೂ ಫೇಲಾಗಲಿಲ್ಲ. ಅವನು ಲೋವರ್ ಸೆಕಂಡರಿ ಪರೀಕ್ಷೆಯಲ್ಲಿ ಒಂದಾವರ್ತಿ ಫೇಲಾದ ನೋಡು, ಈ ವರ್ಷ ಅವನು ಫೇಲಾಗದೆ ಪ್ಯಾಸ್ ಆದರೆ ಅಷ್ಟೇಸಾಕು.'

'ಆಗಲಮ್ಮ, ಪ್ರಯತ್ನಪಡುತ್ತೇನೆ. ಹಳ್ಳಿಗೂ ಹೋಗಿ ಬರೋಣ.'

ಇನ್ನು ಹೆಚ್ಚು ಮಾತುಗಳೇನೂ ಆಗಲಿಲ್ಲ. ಸೀತಾರಾಮುವಿಗೂ ಹಳ್ಳಿಯಕಡೆ ಹೋಗಬೇಕೆಂದು ಆಸೆಯಿತ್ತು.

ಅತ್ತ ಶಿವಮೊಗ್ಗದಲ್ಲಿ ತುಳಸಾಬಾಯಿಯೂ ಕೃಷ್ಣರಾಯರೂ

ಪರಸ್ಪರಾಲೋಚನೆ ಮಾಡಿ, ಇನ್ನೊಂದು ಬಾರಿ ತುಮಕೂರಿಗೆ ಗುಟ್ಟಾಗಿ ಹೋಗಿ ಬರಬೇಕೆಂದು ಹಂಚಿಕೆ ಹಾಕಿದರು. ಈ ಬಾರಿ ತಮ್ಮ ಸ್ನೇಹಿತರಾದ ಸಬ್‌ಡಿವಿಜನ್ ಆಫೀಸರವರ ಮನೆಯಲ್ಲಿ ಇಳಿದು ಕೊಳ್ಳುವುದು ಬೇಡ. ಆ ಆಫೀಸರ್ ಹೇಳಿಕಳಿಸಿದರೆ ಸೀತಾರಾಮು ಕೈಗೆ ಸಿಕ್ಕದೆ ತಪ್ಪಿಸಿಕೊಳ್ಳಬಹುದು. ಆದ್ದರಿಂದ ರಾಮಣ್ಣನ ಮನೆಗೆ ಹೋಗೋಣ. ಅಲ್ಲಿಗೆ ಸೀತಾರಾಮು ತಾನಾಗಿ ಬಂದು ಹೋಗು ವುದುಂಟಲ್ಲ. ಆದ್ದರಿಂದ ಅಲ್ಲಿ ಅವನನ್ನು ಸಂಧಿಸಬಹುದು. ಬೇಕಾದರೆ ರಾಮಣ್ಣನಿಗೆ ಹೇಳಿದರೂ ಅವನು ಉಪಾಯವಾಗಿ ತನ್ನ ಮನೆಗೆ ಸೀತಾರಾಮುವನ್ನು ಕರೆದುಕೊಂಡು ಬರುತ್ತಾನೆ. ಸೀತಾ ರಾಮುವಿಗೆ ಅನುಮಾನವುಂಟಾಗುವುದಕ್ಕೂ ಕಾರಣವಿರುವುದಿಲ್ಲ– ಎಂದು ಮುಂತಾಗಿ ಆಲೋಚನೆ ಮಾಡಿಕೊಂಡರು. ತಾಯಿತಂದೆಗಳು ತುಮಕೂರಿಗೆ ಹೋಗಿ ಬರುವರೆಂಬ ವರ್ತಮಾನವನ್ನು ಸರೋಜ ತಿಳಿದು, ತಾಯಿಗೆ,

‘ಅಮ್ಮ! ನನ್ನನ್ನೂ ನನ್ನ ಮಗುವನ್ನೂ ಕರೆದುಕೊಂಡು ಹೋಗಿ ತುಮಕೂರಿನಲ್ಲಿ ಬಿಟ್ಟುಬಿಡು. ನನ್ನ ಮನೆಯನ್ನು ನಾನು ಸೇರಿಕೊಳ್ಳು ತ್ತೇನೆ. ಇಲ್ಲಿ ಖಂಡಿತ ನಾನಿರುವುದಿಲ್ಲ. ಇನ್ನೇನು! ಹೆತ್ತು ತಿಂಗಳೂ ವರೆಯ ಮೇಲಾಯಿತು. ಇನ್ನೇನಾದರೂ ಬಾಣಂತಿತನ ಮಾಡು ವುದಿದ್ದರೆ ತುಮಕೂರಿನಲ್ಲಿಯೇ ಮಾಡುತ್ತಾರೆ.’ ಎಂದು ಹೇಳಿದಳು.

‘ಎಲ್ಲಿಯಾದರೂ ಉಂಟೇ ಸರೋಜ? ಹುಚ್ಚು ಮಾತನಾಡು ತ್ತೀಯೆ. ಚೊಚ್ಚಲ ಹೆರಿಗೆ; ಐದನೆಯ ತಿಂಗಳಿನಲ್ಲೋ ಏಳನೆಯ ತಿಂಗಳಿನಲ್ಲೋ ಕಳಿಸುವುದೇ ರೂಢಿ. ಈಗ ಹೋಗಬಾರದಮ್ಮ. ನಿನ್ನ ಗಂಡ ನಮ್ಮ ಕಾಗದಗಳಿಗೆ ಜವಾಬೇ ಕೊಟ್ಟಿಲ್ಲ. ನಿನ್ನನ್ನು ಕರೆದುಕೊಂಡುಹೋಗಿ ಅಲ್ಲಿ ನೂಕುವುದಕ್ಕೆ ಆಗುವುದಿಲ್ಲ. ಅವನ ಅಳಿಯತನವೆಲ್ಲ ಏನು! ನೀನು ನೆಮ್ಮದಿಯಾಗಿ ಭೂಮಿ ಮೇಲಿದ್ದರೇ ತಾನೆ? ಇಲ್ಲದಿದ್ದರೆ ನಮಗೂ ಅವನಿಗೂ ಏನು ಸಂಬಂಧ? ನಮ್ಮ ಗೇಟಿನೊಳಗೆ ಬರುವುದಕ್ಕೆ ಅವನಿಗೇನು ಹಕ್ಕು? ನಾಳೆ ಏನಾದರೂ ಹೆಚ್ಚುಕಡಮೆ ಆದರೆ ಬಸಿರ ಸಂಕಟ ನಮಗೆ ತಾನೇ. ಅವನಿಗೇನು?

ಹೆಂಡತಿ ಸತ್ತರೆ ಮದುವೆ ಗಂಡು ಎನ್ನುವ ಹಾಗೆ ಪುನಃ ಮದುವೆಮಾಡಿ ಕೊಳ್ಳುತ್ತಾನೆ. ಜತೆಗೆ ನಮ್ಮ ತಲೆಗಳ ಮೇಲೂ ಗೂಬೆ ಕೂರಿಸುತ್ತಾನೆ. ಬಾಣಂತಿಯನ್ನು ತಿಂಗಳಿಗೆಲ್ಲ ತಂದು ಬಿಟ್ಟುಬಿಟ್ಟರು ; ಅವಳಿಗೆ ರೋಗ ಬಂದು ಮುಚ್ಚಿಕೊಂಡಿತು ; ನಾವೇನು ಮಾಡೋಣ ? ಅವಳು ಕಣ್ಮುಚ್ಚಿ ಕೊಂಡುಬಿಟ್ಟಳು — ಎಂದು ಆಕ್ಷೇಪಣೆ ಹೊರಿಸುತ್ತಾನೆ. ಬೇಡಮ್ಮ. ಬೇಡ ಆ ಆಲೋಚನೆ ಬಿಟ್ಟುಬಿಡು ' ಎಂದು ತಾಯಿ ಉತ್ತರಕೊಟ್ಟಳು.

ಮಾರನೆಯ ದಿನ ರಾತ್ರಿ ಗಾಡಿಯಲ್ಲಿ ಕೃಷ್ಣರಾಯರೂ ಅವರ ಹೆಂಡತಿಯೂ ಶಿವಮೊಗ್ಗದಿಂದ ಹೊರಟರು. ಯಥಾಪ್ರಕಾರ ರೈಲು ತುಮಕೂರನ್ನು ಬೆಳಗಿನ ಜಾವ ತಲುಪಿತು. ಆ ದಿನ ರೈಲು ಸ್ವಲ್ಪ ತಡ ವಾದ್ದರಿಂದ ತುಮಕೂರನ್ನು ಮುಟ್ಟಿದಾಗ ಬೆಳಗ್ಗೆ ಐದು ಗಂಟೆಯಾಗಿತ್ತು. ಅವರು ರಾಮಣ್ಣನ ಮನೆಗೆ ಹೋಗಿ ಬಾಗಿಲು ತಟ್ಟಿದಾಗ ಅವನಿಗೆ ಆಶ್ಚರ್ಯವಾಯಿತು. ಬಂದವರಿಗೆ ಸ್ವಾಗತವನ್ನು ನೀಡಿ ತನ್ನ ಕೊಟಡಿ ಯನ್ನು ಅವರಿಗೆ ತೆರಪುಮಾಡಿಕೊಟ್ಟನು. ಕಾಗದವನ್ನು ಬರೆದಿದ್ದರೆ ನಾನೇ ಸ್ಟೇಷನ್ನಿಗೆ ಬರುತ್ತಿದ್ದೆನಲ್ಲ ಎಂದು ಅವನು ಹೇಳಿದನು. ಕೃಷ್ಣರಾಯರು, ತಾವು ಬರುವುದು ಪ್ರಕಟವಾಗಬಾರದೆಂದು ಕಾಗದ ಬರೆಯಲಿಲ್ಲ ಎಂದು ತಿಳಿಸಿದರು. ಅತಿಥಿಗಳಿಗೆ ಮಾಡಬೇಕಾದ ಉಪ ಚಾರಗಳನ್ನು ರಾಮಣ್ಣ ಮಾಡಿದನು. ಲೌಕಿಕವನ್ನು ತಿಳಿದ ಮನುಷ್ಯ ನಾದ್ದರಿಂದ ಮಾಡಬೇಕಾದ ಉಪಚಾರಗಳನ್ನು ಚೆನ್ನಾಗಿಯೇ ಮಾಡಿ ಅವರನ್ನು ಸಂತೋಷಗೊಳಿಸಿದನು.

ಸಹಜವಾಗಿ ಮಾತುಗಳು ಸೀತಾರಾಮುವಿನ ವಿಚಾರವಾಗಿ ತಿರುಗಿ ದುವು. 'ನಿನ್ನೆ ಅವನನ್ನು ನೋಡಲಿಲ್ಲ. ಹೆಚ್ಚು ಕಡಮೆ ದಿನವೂ ನಾವು ಸಂಧಿಸಿ ಮಾತು ಕತೆ ಆಡುವುದುಂಟು. ಒಂದೊಂದು ವೇಳೆ ಬೆಳಗ್ಗೆ ಒಂಬತ್ತು ಗಂಟೆಗೆ ಅವನು ಇಲ್ಲಿಗೆ ಬರುತ್ತಾನೆ. ತಪ್ಪಿದರೆ ಸಾಯಂ ಕಾಲ ಐದೂವರೆ ಆರು ಗಂಟೆಗೆ ಬರುತ್ತಾನೆ. ಅವನ ಮನಸ್ಸಿಗೂ ಏನೂ ಹರ್ಷವಿಲ್ಲ. ಆದರೆ ಆದದ್ದನ್ನು ಅನುಭವಿಸೋಣ, ತಾಯಿಯ ಇಷ್ಟಕ್ಕೆ ಏಕೆ ವಿರುದ್ಧವಾಗಿ ನಡೆಯಬೇಕು ಎಂಬ ಮನೋಭಾವ ಇದೆ. ಕಾವೇ ರಮ್ಮನೂ ಸಹಜವಾಗಿ ಇದ್ದಾಳೆ. ಗಲಾಟೆಗಳೂ ಹಿಂಸೆಗಳೂ ಇಲ್ಲ'

ಎಂದು ಇರುವ ಸ್ಥಿತಿಯನ್ನು ರಾಮಣ್ಣ ತಿಳಿಸಿದನು. ಸೀತಾರಾಮು ಬೆಳಗ್ಗೆ ಬರಲಿಲ್ಲ. ಆದರ ಮೇಲೆ ರಾಮಣ್ಣನೇ ಸೀತಾರಾಮರಾಯನ ಮನೆಗೆ ಹೋದನು. ಅಲ್ಲಿ ವಿಚಾರಿಸಿದ್ದರಲ್ಲಿ ಸೀತಾರಾಮುವೂ, ಕಾವೇರಮ್ಮನೂ ಹಿಂದಿನ ದಿನ ಹಳ್ಳಿಗೆ ಹೊರಟುಹೋದುದಾಗಿ ತಿಳಿಯಿತು. ಹಿಂದಿರುಗುವುದಕ್ಕೆ ಇನ್ನು ಒಂದು ವಾರವಾದರೂ ಆಗಬಹುದು ಎಂದು ತಿಳಿಯಿತು. ರಾಮಣ್ಣನಿಗೆ ಆಶಾಭಂಗವಾಯಿತು. ಪಾಪ! ಅವರು ಶಿವಮೊಗ್ಗದಿಂದ ಖರ್ಚಿಟ್ಟುಕೊಂಡು ಬಂದಿದಾರಲ್ಲ. ಮೊದಲೇ ತಿಳಿಸಿದ್ದರೆ ಸೀತಾರಾಮು ಊರಲ್ಲಿರುವ ಹಾಗೆ ಮಾಡಬಹುದಾಗಿತ್ತು – ಎಂದು ಪೇಚಾಡಿಕೊಂಡು ತನ್ನ ಮನೆಗೆ ಹಿಂದಿರುಗಿದನು.

'ನಾನು ಹಳ್ಳಿಯ ಕಡೆ ಹೋಗಿ ಬರಬೇಕು ರಾಮಣ್ಣ! ಕೈಯಲ್ಲಿ ಕಾಸಿಲ್ಲ, ಗುತ್ತಿಗೆ ಹಣ ಬಂದರೆ ಅನುಕೂಲ ಆದೀತು. ಸಾಲ ತೀರಿಸುವುದಕ್ಕೆ ಗುತ್ತಿಗೆ ಹಣದಿಂದ ಸ್ವಲ್ಪವನ್ನು ಕೊಡುತ್ತೇನೆಂದು ತಾಯಿ ಹೇಳಿದ್ದಾಳೆ– ಎನ್ನುತ್ತಿದ್ದ. ನಿನ್ನೆ ಅವರಿಬ್ಬರೂ ಹಳ್ಳಿಗೆ ಹೊರಟು ಹೋದರು. ಇನ್ನೊಂದು ವಾರ ಬರುವುದಿಲ್ಲ. ನೀವು ವೃಥಾ ತುಮಕೂರಿಗೆ ಬಂದ ಹಾಗಾಯಿತಲ್ಲ' ಎಂದು ರಾಮಣ್ಣ ವ್ಯಸನದಿಂದ ಹೇಳಿದನು.

ಕೃಷ್ಣರಾಯರಿಗೆ ಮನಸ್ಸಿಗೆ ಬಹಳ ಕಿರುಕುಳವಾಯಿತು. ಮುಂದೇನು ಮಾಡಬೇಕು? ರಾತ್ರಿಯ ವರೆಗೂ ರಾಮಣ್ಣನ ಮನೆಯಲ್ಲಿ ದಂಪತಿಗಳು ಸಾದಾ ಸಜವನ್ನು ಅನುಭವಿಸಿದವರಂತೆ ಹೊರಕ್ಕೆ ತಲೆಹಾಕದೆ ಕಾಲ ತಳ್ಳಬೇಕಾಯಿತು. ರಾಮಣ್ಣನ ಹೆಂಡತಿ ರುಚಿಯಾಗಿ ಅಡಿಗೆಮಾಡಿ ಬಡಿಸಿದಳು. ಊಟಮಾಡಿದ ಮೇಲೆ ನಿದ್ರೆ ಆಯಿತು. ಮಧ್ಯಾಹ್ನ ಉಪಾಹಾರವೂ ಆಯಿತು. ರಾತ್ರಿ ಗಾಡಿಯಲ್ಲಿ ಹೊರಟು ಯಥಾಪ್ರಕಾರ ಶಿವಮೊಗ್ಗವನ್ನು ತಲುಪಿದರು.

## ೧೪. ತಾಯಿಯ ಸಂಕಟ

ಶ್ರೀನಿವಾಸರಾಯರಿಗೆ ಬೆಟ್ಟಹಲಸೂರಿನಲ್ಲಿ ಪಿತ್ರಾರ್ಜಿತವಾದ ನಾಲ್ಕು ಎಕರೆ ತರಿ, ನಾಲ್ಕು ಎಕರೆ ಖುಷ್ಕಿ ಜಮೀನಿತ್ತು. ಅದರ ಜತೆಗೆ ಬೆಂಗಳೂರಿನ ಕೆಲವರು ನಾಗರೀಕರು ಬೆಟ್ಟಹಲಸೂರಿನಲ್ಲಿ ರೈಲ್ವೆ ದಾರಿಗೆ ಆಚೆ ಕಡೆ ಸರ್ಕಾರದಿಂದ ಖಾಲಿ ಭೂಮಿಯನ್ನು ಪಡೆದು ಅಲ್ಲಿ ಒಂದು ದೊಡ್ಡ ವ್ಯವಸಾಯ ಕ್ಷೇತ್ರವನ್ನು ಏರ್ಪಡಿಸಬೇಕೆಂದೂ, ಮುಂದೆ ತಮ್ಮ ಮಕ್ಕಳಿಗೆ ಸರ್ಕಾರದ ನೌಕರಿಗಳು ದುರ್ಲಭವಾಗುವುದರಿಂದ, ಕಟ್ಟು ಪಟ್ಟಣ ಸೇರು ಎನ್ನುವುದಕ್ಕೆ ಬದಲು ಮರಳಿ ಮಣ್ಣಿಗೆ ತಿರುಗು ಎನ್ನುವಂತೆ ಹಳ್ಳಿಗಳಲ್ಲಿ ನೆಲಸುವುದು ಜೀವನೋಪಾಯಕ್ಕೆ ಮಾರ್ಗವೆಂದೂ ದೊಡ್ಡ ದೊಡ್ಡ ಹಂಚಿಕೆಗಳನ್ನು ಹಾಕಿದಾಗ ಶ್ರೀನಿವಾಸರಾಯರು ಸಹ ಇಪ್ಪತ್ತು ಏಕರೆ ಜಮೀನನ್ನು ತಮಗೂ ಇರಲಿ ಎಂದು ಪಡೆದಿದ್ದರು. ಅಲ್ಲಿ ನೀರಿಗೆ ಹೆಚ್ಚು ಅನುಕೂಲವಿಲ್ಲದಿದ್ದರೂ ಬಾವಿಗಳನ್ನು ತೋಡಿಸಬಹುದು ಎಂದು ಕೆಲವರೂ, ಕೆರೆಯನ್ನೇ ಕಟ್ಟಿಸಬಹುದೆಂದು ಕೆಲವರೂ ತರ್ಕಿಸುತ್ತ, ಅವು ಸಾಧ್ಯವಾಗದಿದ್ದರೆ ರಾಗಿ ಅವರೆಗಳನ್ನಾದರೂ ಬೆಳೆಯಬಹುದು, ಖುಷ್ಕಿ ನೆಲವಾಗಿಯೇ ಇದ್ದರೂ ಇರಲಿ, ಮುಂದೆ ಗಿರಾಕಿ ಬಂದಾಗ ಮಾರಿಹಾಕಿ ಒಂದಕ್ಕೆ ನಾಲ್ಕರಷ್ಟು ದುಡ್ಡು ಮಾಡಬಹುದು ಎಂಬ ದೂರಾಲೋಚನೆಯನ್ನು ಮಾಡಿದ್ದರು.

ಬೆಟ್ಟಹಲಸೂರು ಬೆಂಗಳೂರಿಗೆ ಸುಮಾರು ಹದಿನೈದು ಮೈಲಿ ದೂರದಲ್ಲಿ, ಬೆಂಗಳೂರು ಮತ್ತು ಚಿಕ್ಕಬಳ್ಳಾಪುರಗಳ ರೈಲುಮಾರ್ಗದಲ್ಲಿ ಒಂದು ಸಣ್ಣಹಳ್ಳಿ. ರೈಲು ಸ್ಟೇಷನ್ನಿಗೆ ಸುಮಾರು ಅರ್ಧಮೈಲಿ ದೂರದಲ್ಲಿದೆ. ಬೆಂಗಳೂರಿಂದ ಚಿಕ್ಕಬಳ್ಳಾಪುರಕ್ಕೆ ಹೋಗುವ ರಸ್ತೆಯಲ್ಲಿ ಹೋದರೆ ಹುಣಸಮಾರನಹಳ್ಳಿಯಿಂದ ಸುಮಾರು ಎರಡು ಮೈಲಿ ಕಾಲ್ಸುದಾರಿಯಲ್ಲಾಗುತ್ತದೆ. ರಸ್ತೆಯ ಪಕ್ಕದಲ್ಲಿರುವ, ಕಲ್ಲುಚಪ್ಪಡಿಗಳನ್ನು ಎಬ್ಬುವ ಸಣ್ಣ ಬೆಟ್ಟವೊಂದು ದಾರಿಗರಿಗೆಲ್ಲ ಕಾಣಿಸುತ್ತದೆಯಷ್ಟೆ. ಆ ಬೆಟ್ಟದ ಆಚೆಯ ಕಡೆಯಲ್ಲಿಯೇ ಆ ಹಳ್ಳಿ ಇರುವುದು.

ಹಳ್ಳಿಯಲ್ಲಿ ಹಿಂದೆ ಬೆಲೆಗೆ ಬಂದ ಒಂದು ಸಣ್ಣ ಮನೆಯನ್ನು

ಶ್ರೀನಿವಾಸರಾಯರು ಕೊಂಡುಕೊಂಡು ರಿಪೇರಿ ಮಾಡಿಸಿದ್ದರು. ಆದರೆ ಹಳ್ಳಿಯ ಆ ಮನೆಯಲ್ಲಿ ಯಾರು ವಾಸಮಾಡಬೇಕು? ವಾಸಮಾಡದೆ, ಸರಿಯಾಗಿ ನೋಡಿಕೊಳ್ಳದೆ ಇದ್ದರೆ ಆ ಮಣ್ಣಿನ ಗೋಡೆಗಳ, ಹಳ್ಳಿ ಹೆಂಚಿನ, ಬೊಂಬು ಬಿದಿರುಗಳ ಮನೆ ಹಾಳಾಗಿಹೋಗುತ್ತದೆಯಲ್ಲ ಎಂಬ ಚಿಂತೆ. ಆ ಕಾಲಕ್ಕೆ ಸರಿಯಾಗಿ ಆ ಹಳ್ಳಿಯ ಪ್ರೈಮರಿ ಸ್ಕೂಲಿನ ಉಪಾಧ್ಯಾಯನೊಬ್ಬನಿಗೆ ವಾಸಕ್ಕೆ ಮನೆಯಿರಲಿಲ್ಲವಾದ್ದರಿಂದ ಗ್ರಾಮಸ್ಥರು ಶ್ರೀನಿವಾಸರಾಯರಿಗೆ ಹೇಳಿ ಆ ಮನೆಯನ್ನು ಆ ಉಪಾಧ್ಯಾಯನಿಗೆ ಕೊಡಿಸಿದರು. ತಿಂಗಳಿಗೆ ಒಂದು ರೂಪಾಯಿ ಬಾಡಿಗೆ ಕೊಡಬೇಕು; ವರ್ಷಕ್ಕೊಂದು ಬಾರಿ ಆ ಮೇಷ್ಟ್ರೇ ಸುಣ್ಣವನ್ನು ತನ್ನ ವೆಚ್ಚದಿಂದ ಹೊಡಿಸಬೇಕು ಎಂಬ ಷರತ್ತುಗಳ ಮೇಲೆ ಮನೆಯನ್ನು ಅವನಿಗೆ ಒಪ್ಪಿಸಿದ್ದಾಯಿತು. ಮೊದಲಿದ್ದ ಮೇಷ್ಟ್ರು ಕರಾರುವಾಕಾಗಿ ಮೂರು ತಿಂಗಳಿಗೊಂದು ಬಾರಿ ಅಥವಾ ಆರು ತಿಂಗಳಿಗೊಂದು ಬಾರಿ ಬಾಡಿಗೆಯ ಹಣವನ್ನು ಮನಿಯಾರ್ಡರ್ ಮಾಡಿ ಕಳುಹಿಸುತ್ತಿದ್ದನು. ಅವನ ತರುವಾಯ ಬಂದ ಮೇಷ್ಟ್ರು, ಮೊದಲನೆಯ ಮೂರು ತಿಂಗಳ ಬಾಡಿಗೆಯನ್ನು ಕಳಿಸಿದನು, ಎರಡನೆಯ ಮೂರುತಿಂಗಳ ಬಾಡಿಗೆಯನ್ನು ಕಳಿಸುವ ಕಾಲಕ್ಕೆ ಅವನಿಗೆ ವರ್ಗವಾಗಿ ಹೋಯಿತು. ಅವನು ಬಾಕಿ ಬಾಡಿಗೆಯನ್ನು ಕೊಡದೆ ಹೊರಟು ಹೋದನು. ಅದರ ಮೇಲೆ ಮನೆಯನ್ನು ಮುಂದೆ ಮೇಷ್ಟರಿಗೆ ಕೊಡುವ ವಿಚಾರದಲ್ಲಿ ತಕರಾರು ಬಂತು. ಆಗ ಆ ಹಳ್ಳಿಯ ಗಣ್ಯರಿಬ್ಬರು ಬಾಡಿಗೆಯ ಹಣಕ್ಕೆ ತಾವು ಜವಾಬ್ದಾರರೆಂದು ಹೇಳಿದ ಮೇಲೆ ಮನೆಯನ್ನು ಪುನಃ ಮೇಷ್ಟರಿಗೆ ಬಾಡಿಗೆಗೆ ಕೊಟ್ಟಿದ್ದರು. ಅಲ್ಲಿಂದೀಚೆಗೆ ಬಾಡಿಗೆ ಸಲೀಸಾಗಿ ಬರುತ್ತಿತ್ತು. ಆದರೆ ಶ್ರೀನಿವಾಸರಾಯರು ತೀರಿ ಹೋದನಂತರ ಒಂದು ವರ್ಷ ಬಾಡಿಗೆ ಬಂದು, ಮುಂದೆ ಬರದೆ ನಿಂತು ಹೋಗಿತ್ತು. ಆದ್ದರಿಂದ ಕಾವೇರಮ್ಮ ಗುತ್ತಿಗೆ ಹಣದ ಜತೆಗೆ ಬಾಡಿಗೆಯ ಹಣವನ್ನೂ ವಸೂಲು ಮಾಡೋಣವೆಂದು ಸೀತಾರಾಮುವನ್ನು ಕರೆದುಕೊಂಡು ಹಳ್ಳಿಗೆ ಬಂದಳು. ಆಕೆಯ ಮತ್ತೊಂದು ಮುಖ್ಯವಾದ ಹಂಚಿಕೆ: ಸೀತಾರಾಮುವನ್ನು ತನ್ನ ದಾರಿಗೆ ಸಂಪೂರ್ಣವಾಗಿ ತಿರುಗಿಸಿಕೊಳ್ಳಬೇಕೆಂಬುದು. ಕುಮಕೂರಿನಲ್ಲಿ ಮಾತನಾಡ

ವುದಕ್ಕಿಂತ ರಾಮಣ್ಣನ ಸಹವಾಸವಿಲ್ಲದ ಬೆಟ್ಟದ ಹಲಸೂರಿನಲ್ಲಿ ಮಾತು ನಾಡುವುದು ಲಾಭಕರವೆಂದು ಆಕೆ ಭಾವಿಸಿದ್ದಳು. ಜತೆಗೆ ಶೀನಪ್ಪನು ಹಿಂದೆ ಹೆಣ್ಣಿನ ವಿಚಾರ ಹೇಳಿದ್ದನಷ್ಟೆ. ಶೀನಪ್ಪ ಅದೇ ಹಳ್ಳಿಯವನು. ಆದ್ದರಿಂದ ಈಗ ಎಲ್ಲವನ್ನೂ ಹದಕ್ಕೆ ತಂದುಕೊಳ್ಳಬಹುದು, ಮದುವೆಯ ವಿಷಯವನ್ನೂ ನಿಷ್ಕರ್ಷೆ ಮಾಡಬಹುದು ಎಂಬುದು ಆಕೆಯ ಹಂಚಿಕೆಯಾಗಿತ್ತು.

ಬೆಟ್ಟದಹಲಸೂರಿಗೆ ಹೋದಾಗ ಶೀನಪ್ಪನ ಮನೆಯಲ್ಲಿಯೇ ಕಾವೇರಮ್ಮ ಇಳಿದುಕೊಂಡಳು. ಅಲ್ಲಿಗೇನೆ ಮೇಸ್ತ್ರರನ್ನ ಕರಸಿಕೊಂಡು ಬಾಕಿ ನಿಂತಿದ್ದ ಬಾಡಿಗೆಯನ್ನು ವಸೂಲು ಮಾಡಿಕೊಂಡಳು. ತನ್ನ ಮನೆಗೆ ಹೋಗಿ ನೋಡಿದಾಗ ಅದು ನಾದುರಸ್ತು ಸ್ಥಿತಿಯಲ್ಲಿದ್ದುದು ಕಂಡುಬಂತು. ಅದಕ್ಕೆ ಸುಣ್ಣ ಹೊಡಿಸಿ ಎರಡು ವರ್ಷಗಳ ಮೇಲಾಗಿತ್ತು. ಹಲವು ಹೆಂಚುಗಳು ಮುರಿದುಹೋಗಿ ಮಳೆ ಬಂದಾಗ ಗೋಡೆಗಳ ಮೇಲೆ ನೀರಿಳಿದು ಕೊರಕುಗಳೂ ಬಿರುಕುಗಳೂ ಬಂದು ಗೋಡೆಗಳು ಹರುಕುಮುರುಕಾಗಿದ್ದುವು. ಮೇಸ್ತ್ರಿ, 'ಒಳಗೆಲ್ಲ ನೀರು ನಿಂತು ಬಿಡುತ್ತದೆ, ಮಕ್ಕಳನ್ನು ಕಟ್ಟಿಕೊಂಡು ಒಳಗೆ ವಾಸಮಾಡುವುದೇ ಕಷ್ಟ' ಎಂದು ಮುಂತಾಗಿ ತನ್ನ ಕಷ್ಟಗಳನ್ನು ಹೇಳಿಕೊಂಡನು.

'ವರ್ಷ ವರ್ಷವೂ ಸರಿಯಾಗಿ ರಿಪೇರಿ ಮಾಡಿಸಿ ಸುಣ್ಣ ಹೊಡಿಸಿ ಇಟ್ಟುಕೊಳ್ಳಬೇಕೋ ಬೇಡವೋ? ನಾವು ತೆಗೆದುಕೊಳ್ಳುವುದು ತಿಂಗಳಿಗೆ ಒಂದೇ ರೂಪಾಯಿ ಬಾಡಿಗೆ. ಅದೂ ಕೂಡ ಕಾಲಕ್ಕೆ ಸರಿಯಾಗಿ ಬರುವುದಿಲ್ಲ. ಎರಡು ಹೆಂಚುಗಳು ಹೋದರೆ ಅದನ್ನು ಹಾಕಿಸಿಕೊಳ್ಳುವುದಕ್ಕೆ ಬದಲು ಇನ್ನೂ ನಾಲ್ಕು ಹೆಂಚುಗಳನ್ನು ಒಡೆದು ಹಾಕಿ ಒಳಗೆಲ್ಲ ನೀರು ಸೋರುತ್ತದೆ ಎಂದರೆ ನಾವೇನು ಮಾಡಬೇಕಪ್ಪ? ಪ್ರತಿಸಲವೂ ದುಡ್ಡು ಖರ್ಚುಮಾಡಿಕೊಂಡು ತುಮಕೂರಿನಿಂದ ಬಂದು ರಿಪೇರಿ ಮಾಡಿಸುವುದಕ್ಕಾಗುತ್ತದೆಯೆ? ಬಾಡಿಗೆಗೆ ಇರುವವರು ಸಣ್ಣ ಪುಟ್ಟ ರಿಪೇರಿಗಳನ್ನು ಅವರೇ ಮಾಡಿಕೊಳ್ಳಬೇಕು' ಎಂದು ಕಾವೇರಮ್ಮ ಉತ್ತರ ಕೊಟ್ಟಳು.

ಕಡೆಗೆ ತಾನು ವಸೂಲು ಮಾಡಿದ್ದ ರೂಪಾಯಿಗಳಲ್ಲಿ ಎಂಟು

ರೂಪಾಯಿಗಳನ್ನು ಖರ್ಚು ಮಾಡಿ ಮನೆಗೆ ತಾನೇ ರಿಪೇರಿ ಮಾಡಿಸಿ, ಹೊಸ ಹೆಂಚುಗಳನ್ನು ಹಾಕಿಸಿ, ಸುಣ್ಣವನ್ನು ಹೊಡಿಸಿಕೊಟ್ಟಳು. 'ನಮ್ಮ ಹಳ್ಳಿಯಲ್ಲಿ ನಮಗೊಂದು ಗುಡಿಸಿಲಾದರೂ ಇದೆ ಎಂದರೆ ಎಷ್ಟೋ ಸಂತೋಷ' ಎಂದು ಖರ್ಚಾದ ಹಣಕ್ಕೆ ಸಮಾಧಾನಪಟ್ಟುಕೊಂಡಳು.

ರೈತರು ಗುತ್ತಿಗೆ ಹಣವನ್ನು ತಂದುಕೊಟ್ಟರು. ಎಲ್ಲ ಸುಮಾರು ಮುನ್ನೂರೈವತ್ತು ರೂಪಾಯಿಗಳ ವರೆಗೆ ಬಂತು. ಆಮೇಲೆ ಸೀತಾರಾಮು ವನ್ನು ಜತೆಯಲ್ಲಿ ಕರೆದುಕೊಂಡು ಆ ಇಪ್ಪತ್ತು ಎಕರೆ ಭೂಮಿಯ ಸ್ಥಿತಿ ಏನಾಗಿದೆಯೋ ನೋಡಿಕೊಂಡು ಬರೋಣವೆಂದು ಕಾವೇರಮ್ಮ ಹೊರ ಟಳು. ದಾರಿಯಲ್ಲಿ ಜಮೀನಿನ ಮಾತಿಗೆ ಬದಲು ಗೃಹಕೃತ್ಯದ—ಮುಖ್ಯ ವಾಗಿ ಸೀತಾರಾಮು, ಶಿವಮೊಗ್ಗ ಮೊದಲಾದುವುಗಳ ಕಡೆಗೆ ಮಾತು ಹೊರಟಿತು. ಕಾವೇರಮ್ಮನೇ ಮೊದಲು ಮಾತಿಗೆ ಆರಂಭಿಸಿದಳು.

'ಏನಪ್ಪಾ ಸೀತಾರಾಮು! ಶಿವಮೊಗ್ಗದಿಂದ ಕಾಗದಗಳೇನೂ ಬರಲಿಲ್ಲವೇ? ನೀನೇನೂ ಜವಾಬು ಕೊಡಲಿಲ್ಲವೇ? ಮಗು ಬಾಣಂತಿ ಹೇಗಿದ್ದಾರಂತೆ?'

'ಅಲ್ಲಿಂದ ನಾಲ್ಕೈದು ಕಾಗದಗಳು ಬಂದುವು. ನನ್ನ ಹೆಂಡತಿಯೂ ಮೂರು ಕಾಗದಗಳನ್ನು ಬರೆದಳು. ಮಗು ಮತ್ತು ಬಾಣಂತಿ ಆರೋಗ್ಯ ವಾಗಿದ್ದಾರೆ. ನಿನ್ನ ಸೊಸೆಯೇನೋ ಬೇಗ ತುಮಕೂರಿಗೆ ಹಿಂದಿರುಗ ಬೇಕು ಎಂದು ಆಸೆಪಡುತ್ತಿದ್ದಾಳೆ.'

'ನೀನೇನೂ ಕಾಗದಗಳನ್ನು ಬರೆಯಲಿಲ್ಲವೇ?'

'ನನ್ನ ಮಾವನವರಿಗೆ ಹಿಂದೆ ನಾನೊಂದು ಕಾರ್ಡು ಬರೆದೆನಮ್ಮ! ಆ ದಿವಸ ನಿನಗೆ ಮೈ ಸ್ವಸ್ಥವಿಲ್ಲದೆ ಹೋಗಿ, ತಲೆಗೆಲ್ಲ ಗಾಯಗಳನ್ನ ಮಾಡಿಕೊಂಡು, ವಾಂತಿ ಮಾಡಿಕೊಂಡು ನೀನು ಮಲಗಿಬಿಟ್ಟೆ. ಇನ್ನು ಶಿವಮೊಗ್ಗಕ್ಕೆ ಹೋಗುವುದು ಸಾಧ್ಯವಿಲ್ಲ ಎಂದುಕೊಂಡು,—ತಾಯಿಗೆ ಮೈ ಸ್ವಸ್ಥವಿಲ್ಲ, ನಾನೀಗ ಶಿವಮೊಗ್ಗಕ್ಕೆ ಬರುವುದಕ್ಕಾಗುವುದಿಲ್ಲ ಎಂದು ಬರೆದು ಹಾಕಿದೆ. ಅಷ್ಟೇ ಹೊರ್ತು ಬೇರೆ ಯಾವ ಕಾಗದವನ್ನೂ ನಾನು ಬರೆಯಲಿಲ್ಲ. ನನ್ನ ಹೆಂಡತಿಯ ಕಾಗದಗಳಿಗೂ ನಾನು ಜವಾಬು ಕೊಡಲಿಲ್ಲ. ನಿನಗೆ ಇಷ್ಟವಿಲ್ಲದ ಕೆಲಸವನ್ನು ನಾನೇಕೆ ಮಾಡಲಮ್ಮ?

ಈಗ ನನ್ನ ಇಷ್ಟ, ನನ್ನ ಸುಖ, ನನ್ನ ಸಂತೋಷ—ಎಲ್ಲವನ್ನೂ ಬಲಿ ಕೊಟ್ಟುಬಿಟ್ಟಿದೇನೆ ಆ ದಿವಸ ಇದ್ದಕ್ಕಿದ್ದ ಹಾಗೆ ನೀನು ಏಕೆ ಹಾಗೆ ಮಾಡಿದೆಯೋ ನನಗಂತೂ ಅರ್ಥವಾಗಿಲ್ಲ.'

'ಏನಪ್ಪಾ ಸೀತಾರಾಮು! ನೀನೂ ಬಿ.ಎ. ಪ್ಯಾಸ್ ಮಾಡಿದ್ದೀಯಲ್ಲ. ನಿನಗೂ ಇಪ್ಪತ್ತೈದು ವರ್ಷ ಆಯಿತು. ಏನು ಮಾಡಬೇಕು? ಏನು ಮಾಡಬಾರದು? ಎಂದಿಷ್ಟು ವಿವೇಕ ವಿವೇಚನೆ ನಿನಗೆ ಇರಬೇಡವೇ?'

'ನಾನೇನಮ್ಮ ಅವಿವೇಕ ಮಾಡಿದ್ದು? ನಾನು ನಿನ್ನ ಮಾತಿಗೆ ಸಹ ಬರಲಿಲ್ಲವಲ್ಲ. ಇದ್ದಕ್ಕಿದ್ದ ಹಾಗೆ ಅಡಿಗೆಯ ಮನೆಯಿಂದ ಹಾಲಿಗೆ ಬಂದು ಗೋಡೆಗೆ ಢಿಕ್ಕಿ ಹೊಡೆದುಕೊಂಡು ಸಾವಿನ ಕೂಗುಗಳನ್ನೆಲ್ಲ ಕೂಗಿದೆ. ಯಾರಾದರೂ ನನ್ನನ್ನು ಹುಡುಕಿಕೊಂಡು ಆ ಹೊತ್ತಿಗೆ ಬಂದುಬಿಟ್ಟಿದ್ದರೆ ಏನು ಗತಿ? ಪಕ್ಕದ ಮನೆಯವರೋ ಯಾರೋ—ಇದೇನು ಗಲಾಟೆ ಸೀತಾರಾಮುರಾಯರ ಮನೆಯಲ್ಲಿ? ಎಂದು ನೋಡುವುದಕ್ಕೆ ಬಂದುಬಿಟ್ಟಿದ್ದರೆ ಏನು ಗತಿ? ನನ್ನ ಮಾನ ಹೋಗುತ್ತಿತ್ತಲ್ಲ. ನೀನೇ ಆಲೋಚಿಸು. ನೀನು ಹಿರಿಯಳು. ನನ್ನ ಮನಸ್ಸಿಗೆ ಆ ದಿನ ಬಹಳ ಬೇಸರಿಕೆ ಆಯಿತು. ಎಲ್ಲಿಯಾದರೂ ದೇಶಾಂತರ ಹೊರಟುಹೋಗೋಣ; ಹೆಂಡತಿಯೂ ಬೇಡ, ತಾಯಿಯೂ ಬೇಡ, ಸಂಸಾರ ಸುಖವೂ ಬೇಡ—ಎನ್ನುವಷ್ಟು ಬೇಸರಿಕೆ ಆಯಿತು. ಕಡೆಗೆ ನಾನು ಸಮಾಧಾನ ಮಾಡಿಕೊಂಡೆ. ಅಪ್ಪ ತೀರಿಕೊಂಡು ಎರಡು ವರ್ಷಗಳಾದುವು; ಈಗ ನಾನು ದೇಶಾಂತರ ಹೊರಟುಹೋದರೆ ಮನೆಗೂ ಕೆಟ್ಟ ಹೆಸರು, ಮುಂದೆ ಸಂಸಾರ ಹೇಗೆ ನಡೆದೀತು? ಎಂದು ಆಲೋಚನೆ ಮಾಡಿಕೊಂಡು ಸುಮ್ಮನಾದೆ. ಇದ್ದ ಮಾತು ಹೇಳಿದೇನಮ್ಮ.'

'ಒಳ್ಳೆಯದಪ್ಪ! ಏನೋ ದುಃಖ ಬಂತು. ನೀನು ಅನ್ಯಾಯವಾಗಿ ಕೆಟ್ಟುಹೋಗುತ್ತೀಯಲ್ಲ ಎಂದು ಸಂಕಟ ಒಂದು ಕಡೆ; ನಿನ್ನ ತಂದೆ ನಡುಗಾಲದಲ್ಲಿ ನನ್ನ ಕೈಬಿಟ್ಟು ಹೋದ ಹಾಗೆ ಹಿರಿಯ ಮಗ ನೀನೂ ನನ್ನ ಕೈಬಿಟ್ಟು ಹೋಗುತ್ತೀಯಲ್ಲ ಎಂದು ಸಂಕಟ ಇನ್ನೊಂದು ಕಡೆ; ನೀನು ಬದುಕೋ ಮಾರ್ಗ ನಿನಗೆ ತಿಳಿಯದಲ್ಲ, ನೀನೂ ಕಷ್ಟಕ್ಕೆ

ಸಿಕ್ಕಿಕೊಂಡು ನಮ್ಮನ್ನೂ ಕಷ್ಟಕ್ಕೆ ಸಿಕ್ಕಿಸುತ್ತೀಯಲ್ಲ ಎಂದು ದೊಡ್ಡ ಚಿಂತೆ ಮತ್ತೊಂದು ಕಡೆ. ನಿನ್ನ ಹತ್ತಿರ ಹೇಳಿಕೊಳ್ಳೋಣ ಎಂದರೆ ನಿನ್ನ ಬುದ್ಧಿ ಈಗಿದ್ದ ಹಾಗೆ ಇನ್ನು ಸ್ವಲ್ಪಹೊತ್ತಿಗೆ ಇರುವುದಿಲ್ಲ. ಶಿವಮೊಗ್ಗಕ್ಕೆ ಹೋಗಿದ್ದಾಗ ಅಪಮಾನ ಎಂದರೆ, ಅಂಥ ಅಪಮಾನಪಟ್ಟುಕೊಂಡು ನೀನು ಹಿಂದಿರುಗಿ ಬಂದೆ. ಪುನಃ ಆ ಊರ ಮುಖ ನೋಡುವುದಿಲ್ಲ, ಪುನಃ ಆ ಅತ್ತೆಯ ಮುಖ ನೋಡುವುದಿಲ್ಲ, ಅವರ ಮನೆ ಹೊಸಿಲು ಮೆಟ್ಟುವುದಿಲ್ಲ—ಎಂದು ಗಟ್ಟಿಮನಸ್ಸು ಮಾಡಿಕೊಂಡು ಬಂದೆ. ನಿನ್ನ ಆ ಅತ್ತೆ, ಮಾಟಗಾತಿ ತುಮಕೂರಿಗೆ ಬಂದಳು. ಏನು ಯಕ್ಷಿಣಿ ವಿದ್ಯೆ ಮಾಡಿದಳೋ! ನಿನಗೇನು ಆಸೆ ತೋರಿಸಿದಳೋ! ನಿನಗಾದ ಅಪಮಾನವನ್ನೆಲ್ಲ ಮರೆತು ಗಿರಕ್ಕನೆ ಅವಳ ಕಡೆ ತಿರುಗಿಬಿಟ್ಟೆ. ತಿರುಗು, ಬೇಡ ಎಂದು ನಾನೇಕೆ ಹೇಳಲಪ್ಪ! ಚಾಟಿಯೇಟಿನ ಮಾತೆಲ್ಲ ಮರೆತು, ನಾಮಕರಣಕ್ಕೆ ಬರುತ್ತೇನೆ, ನನ್ನ ತಾಯಿಯಿಂದ ಒಂದು ಒಪ್ಪಿಕೆ ಮಾತು ಪಡೆಯಿರಿ ಎಂದು ಅವರಿಗೆ ನೀನು ಹೇಳಿದೆ. ಹೇಳಿದೆಯೋ ಇಲ್ಲವೋ?'

'ಹೇಳಿದೆನಮ್ಮ! ದೊಡ್ಡವಳು, ತಾಯಿ ಎಂದು ನೀನಿರುವಾಗ, ನಿನ್ನ ಒಪ್ಪಿಕೆ ಬೇಕೋ ಬೇಡವೊ? ಅವರು ಬಂದು ನಿನ್ನನ್ನು ಕೇಳಬೇಕೋ ಬೇಡವೋ?'

'ಅಪ್ಪ ಸೀತಾರಾಮು! ಅಪಮಾನಮಾಡಿದವರು ಅವರು, ಅಪಮಾನ ಮಾಡಿಸಿಕೊಂಡವನು ನೀನು. ನೀವಿಬ್ಬರೂ ರಾಜೀಗೆ ಬಂದಿದ್ದಿರಿ. ಅವರು ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಬಂದಿದ್ದರು, ನೀನು ಹೋಗುವುದಕ್ಕೂ ಸಿದ್ಧನಾಗಿದ್ದೆ. ಮಧ್ಯೆ ನನ್ನನ್ನೇಕೆ ಎಳೆದೆ? ಮೊದಲೇ ನನ್ನನ್ನು ಕಂಡರೆ ಆ ಬಿಕನಾಸಿ ಮೂಗುಮುರಿಯುತ್ತಾಳೆ; ನಾನು ಹಟಮಾರಿ, ಲಂಕಿಣಿ—ಎಂದು ಏನೇನೋ ಹೆಸರುಗಳನ್ನು ಕೊಟ್ಟು ಮಾನ ತೆಗೆಯುತ್ತಾಳೆ. ಅವಳ ಹತ್ತಿರ ನನಗೇನು ಬೇಕಾಗಿದೆ ಪಂಚಾಯತಿ. ಆ ದಿನ ಕೃಷ್ಣರಾಯರು, ದೊಡ್ಡಮನುಷ್ಯರು, ನಿನ್ನ ತಂದೆಯ ಸ್ನೇಹಿತರು ಬಂದಿದ್ದರಪ್ಪ. ನಾನು ಹೆಚ್ಚು ಮಾತನಾಡಲಿಲ್ಲ. ನೀನು,—ನನ್ನತ್ತೆ ಮಾವ ಬಂದಿದ್ದಾರೆ, ಮೂರು ಗಂಟೆಗೆ ಮನೆಗೆ ಬರುತ್ತಾರೆ ಎಂದು ತಿಳಿಸಿದ ಮಗ, ನನ್ನನ್ನ ತಾಯಿ, ಹಿರಿಯಳು ಎಂದು

ನಿಜವಾಗಿ ಗೌರವ ಇಟ್ಟಿರುವ ಮಗನಾಗಿದ್ದಿದ್ದರೆ—ಏನಮ್ಮ! ಮಧ್ಯಾಹ್ನ ಮೂರು ಗಂಟೆಗೆ ಅವರು ಬರುತ್ತಾರಲ್ಲ. ನಾಮಕರಣಕ್ಕೆ ಬರಬೇಕೆಂದು ಕರೆಯುವುದಕ್ಕೆ ಬಂದಿದ್ದಾರೆ. ನೀನು ಶಿವಮೊಗ್ಗಕ್ಕೆ ಬರುವುದು ಅವರಿಗೇನೂ ಮುಖ್ಯವಲ್ಲ, ನಾನು ಅಲ್ಲಿಗೆ ಹೋಗಬೇಕೆಂಬುದು ಮುಖ್ಯ. ನೀನೂ ಬಂದರೆ ಅವರಿಗೆ ಸಂತೋಷವೇ! ಈಗೇನು ಮಾಡೋಣ? ನಾವು ಮುಂದಾಗಿ ಆಲೋಚನೆ ಮಾಡಿಕೊಂಡು ಒಂದೇ ಮಾತನ್ನು ಇಬ್ಬರೂ ಆಡೋಣ ನಿನ್ನ ಅಭಿಪ್ರಾಯ ಏನು? ನಿನ್ನಿಷ್ಟ ತಿಳಿಸು. ಹಿಂದೆ ಆದ ಪ್ರಕರಣವನ್ನೆಲ್ಲ ಈಗೇಕೆ ನಾವು ಎತ್ತಿ ಆಡಬೇಕು? ನನಗೇನೋ ಹೆಂಡತಿಯನ್ನ ಮಗನನ್ನ ನೋಡಬೇಕೆಂದು ಆಸೆಯಿದೆ. ಏನು ಮಾಡೋಣ? ಎಂದು ಕೇಳಿದ್ದಿದ್ದರೆ ಚೆನ್ನಾಗಿರುತ್ತಿತ್ತು. ನೀನು ನನಗೆ ಆ ಗೌರವ ಕೊಟ್ಟೆಯೇನಪ್ಪ? ಮೊದಲೇ ನನ್ನ ಆಲೋಚನೆ ಕೇಳಲಿಲ್ಲ. ಅವರು ಮಾತನಾಡುವುದಕ್ಕೆ ನಮ್ಮ ಮನೆಗೆ ಬರುವ ಮೊದಲೇ ನೀನು ಶಿವಮೊಗ್ಗಕ್ಕೆ ಹೋಗುವ ಭರವಸೆ ಅವರಿಗೆ ಕೊಟ್ಟೆ. ನಮ್ಮ ಮನೆಯಲ್ಲಿ ಅವರೊಡನೆ ನಾನು ಮಾತನಾಡುವಾಗ ಮರಳಿಯಂತೆ ಮೆಲ್ಲಗೆ ಕೊಟಡಿಗೆ ಹೋಗಿ ಕುಳಿತೆ. ನನ್ನನ್ನ ಅವರ ಮಧ್ಯೆ ಸಿಕ್ಕಿಸಿದೆ. ನಾನೇನು ಮಾಡಬೇಕಪ್ಪ? ನೀನು ಯೋಚನೆ ಮಾಡಬೇಡ: ನನ್ನ ತಾಯಿಗೂ ನನ್ನತ್ತೆಗೂ ಪರಸ್ಪರ ಪ್ರೀತಿಯೇನೂ ಇಲ್ಲ. ಆಕೆಯನ್ನು ನಿಮ್ಮೂರಕ್ಕೆ ಗುರಿಮಾಡುವುದು ಬೇಡ. ಏನಿದ್ದರೂ ನಾನೇ ಮಾತನಾಡುವುದು ಒಳ್ಳೆಯದು ಎಂದು ನೀನೇ ಎಲ್ಲವನ್ನೂ ಆಡಿದ್ದರೆ ಚೆನ್ನಾಗಿರುತ್ತಿತ್ತು. ನಿನ್ನ ಮನಸ್ಸಿನಲ್ಲಿ ಏನು ಸೀತಾರಾಮು! ಈ ತಾಯಿ ಒಬ್ಬಳು ಮಹಾಮಾರಿ; ನನ್ನನ್ನೂ ನನ್ನ ಹೆಂಡತಿಯನ್ನೂ ಹುರಿದುಕೊಂಡು ತಿನ್ನುತ್ತಾಳೆ ಎಂದು ತಾನೆ ಇದೆ. ನನ್ನತ್ತೆ ಮಾವಂದಿರು ಎಷ್ಟು ಒಳ್ಳೆಯವರು! ಅವರನ್ನು ಸಂತೋಷಪಡಿಸೋಣ ಎಂದರೆ ಈ ತಾಯಿ ಅಡ್ಡ ಬರುತ್ತಾಳಲ್ಲ—ಎಂದು ನಿನಗೂ ನನ್ನ ಮೇಲೆ ಖಾರ ಇದೆ. ಸತ್ಯ ಹೇಳು ಸೀತಾರಾಮು! ನಾನೂ ಆರೇಳು ಮಕ್ಕಳನ್ನು ಹೆತ್ತವಳು. ನನಗೂ ಜನರ ಮರ್ಮ ತಿಳಿಯುಯುತ್ತದೆ.'

'ನೀನು ಹೇಳುವ ಮಾತು ಸತ್ಯವಮ್ಮ! ನಾನೇಕೆ ಮರೆಮಾಚಿ

ನರಕಕ್ಕೆ ಹೋಗಲಿ? ನಿನಗೆ ನನ್ನ ಹೆಂಡತಿಯನ್ನು ಕಂಡರೇನೇ ಆಗುವುದಿಲ್ಲವಲ್ಲ. ಅವಳೇನು ಪಾಪ ಮಾಡಿದಳು? ನಾನು ನನ್ನ ಹೆಂಡತಿಯೊಡನೆ ಸುಖವಾಗಿರುವುದನ್ನು ತಾಯಿಯೇ ಸೈರಿಸುವುದಿಲ್ಲವಲ್ಲ. ಈ ಭಾಗ್ಯಕ್ಕೆ ಮದುವೆಯನ್ನು ಏಕೆ ಮಾಡಬೇಕಾಗಿತ್ತು? ಅತ್ತೆ ಸೊಸೆಯರ ವ್ಯಾಜ್ಯ ಎನ್ನುವುದು ಲೋಕಪ್ರಸಿದ್ಧವಾಗಿರುವಂತೆ ನನ್ನ ಮನೆಯಲ್ಲೇ ನನ್ನ ತಾಯಿ ತನ್ನ ಸೊಸೆಯನ್ನು ಗೋಳುಹೊಯ್ದುಕೊಳುತ್ತಾಳಲ್ಲ. ಅವಳ ಮಾತೆತ್ತುವಾಗಲೆಲ್ಲ— ಆ ತೊನ್ನು ಹಿಡಿದವಳು! ಆ ತೊನ್ನು ಹಿಡಿದವಳ ಮೋಹದಲ್ಲಿ ಬೀಳಬೇಡ!—ಎಂದು ನನಗೆ ಹೇಳುತ್ತಾಳಲ್ಲ. ನಾನೇನುಮಾಡಲಿ? ದೇವರೇ! ಎಲ್ಲಿಯಾದರೂ ವಿಷತೆಗೆದುಕೊಂಡು ಸತ್ತುಹೋಗಲೇ, ಕೆರೆಯಲ್ಲಿ ಬಿದ್ದು ಪ್ರಾಣಬಿಡಲೇ ಎಂದು ಈ ಹಾಳು ಜೀವಕ್ಕೇನೆ ಹೇಸಿಬಿಟ್ಟದ್ದೇನೆ. ಆದ್ದರಿಂದ ನೀನು ಪ್ರಸನ್ನಳಾದರೆ ಸಾಕಪ್ಪ! ಎಂದು ಹಗಲಿರಳೂ ದೇವರನ್ನು ಪ್ರಾರ್ಥಿಸುತ್ತಿದ್ದೇನೆ. ನಾನು ನಿನಗೆ ಒಳ್ಳೆಯ ಮಗನಾಗಿರಬೇಕು, ತಾಯಿಯನ್ನು ಸಂತೋಷಪಡಿಸಬೇಕು— ಎಂದು ಕಾಯಾ ಮನಸಾ ವಾಚಾ ನಡೆದುಕೊಳ್ಳುತ್ತಿದೇನೆ. ಆದರೂ ನೀನು ಪ್ರಸನ್ನಳಾಗುವುದೇ ಇಲ್ಲವಲ್ಲ. ನನ್ನ ಹೆಂಡತಿ, ಅತ್ತೆ, ಮಾವ—ಇವರ ಮಾತುಗಳು ಬರದಿಲ್ಲವೋ ನೀನು ನಿಜವಾಗಿಯೂ ತಾಯಿಯಂತೆ ಬಹಳ ಪ್ರೇಮದಿಂದ ನಡೆದುಕೊಳ್ಳುತ್ತೀಯೆ; ಬಹಳ ನ್ಯಾಯವಾಗಿರುತ್ತೀಯೆ, ನನ್ನ ಕಷ್ಟದುಃಖ ಎಲ್ಲ ನಿನ್ನ ಮನಸ್ಸಿಗೆ ಹತ್ತುತ್ತದೆ. ಆಗ ನಾನೇ ಭಕ್ತಿಯಿಂದ ಕರಗಿಹೋಗುತ್ತೇನೆ. ಅವರ ಮಾತೇನಾದರೂ ಬಂದುಬಿಟ್ಟಿತೋ ನಿನ್ನ ಸ್ವರೂಪವೇ ಬದಲಾಯಿಸಿಹೋಗುತ್ತದೆಯಲ್ಲ. ನಾನೇನು ಮಾಡಬೇಕು? ಈಗ ನನ್ನ ಹೆಂಡತಿಯನ್ನು ನಾನೇನು ಮಾಡಬೇಕು ಎಂದು ನಿನ್ನ ಇಷ್ಟ! ಅವಳನ್ನು ನಾನು ಖೂನಿ ಮಾಡಿಬಿಡಬೇಕೇ? ಹೇಳು.'

'ಅಪ್ಪ ಸೀತಾರಾಮು! ಮನಸ್ಸನ್ನು ಸಮಾಧಾನಕ್ಕೆ ತಂದುಕೊಳ್ಳಪ್ಪ! ನಿನ್ನ ಹೆಂಡತಿಯನ್ನ ಖೂನಿಮಾಡಿಬಿಡು ಎಂದು ನಾನು ಹೇಳುವಂಥ ಪಾಪಿಷ್ಠೆಯೇ? ನೀನು ಖೂನಿ ಮಾಡಿದರೆ ನಾಳೆ ನಿನ್ನನ್ನು ಗಲ್ಲಿಗೇರಿಸುತ್ತಾರೆ. ನನ್ನ ಮಗನನ್ನ ಗಲ್ಲಿಗೇರಿಸಲಿ ಎಂದು ನಾನು ಹೇಳುತ್ತೇ

ನೆಯೆ? ಹಾಗೆ ಏರಿಸಿದರೆ ಸಂತೋಷಪಡುತ್ತೀನೆಯೆ? ನಿನ್ನ ಹೆಂಡತಿಯನ್ನ ಏನು ಮಾಡಬೇಕು? ಎಂದು ಕೇಳಿದೆ. ಕೇಳಿದ್ದು ಒಳ್ಳೆಯದೇ ಆಯಿತು. ಈ ನಿನ್ನ ಹೆಂಡತಿಯನ್ನು ನೀನು ಬಿಟ್ಟುಬಿಡಬೇಕಪ್ಪ! ಅವಳೊಡನೆ ಸಂಸಾರ ನಡಸಬಾರದಪ್ಪ! ನಿನಗೆ ಬೇರೆ ಮದುವೆ ಮಾಡಿಸುತ್ತೀನೆ. ಆ ಹೆಂಡತಿಯೊಡನೆ ನೀನು ಸುಖವಾಗಿರು. ಈಗಿರುವ ಹೆಂಡತಿಮಾತ್ರ ಬೇಡಪ್ಪ, ಬೇಡ!'.

ಸೀತಾರಾಮು ಎರಡು ನಿಮಿಷ ಗಂಭೀರವಾಗಿ ಕುಳಿತಿದ್ದನು. ಅವನ ಕಣ್ಣುಗಳಲ್ಲಿ ನೀರು ಚಿಮ್ಮಲಾರಂಭಿಸಿತು.

'ಅಮ್ಮ! ಇದು ನ್ಯಾಯವೇ? ಹತ್ತು ಜನ ಒಪ್ಪುವ ಮಾತೇ? ಅಧರ್ಮವಲ್ಲವೇ? ನನ್ನ ಹೆಂಡತಿ ಅಂಥ ಅಪರಾಧ ಏನು ಮಾಡಿದ್ದಾಳೆ? ಅಪರಾಧ ಮಾಡಿದ್ದರೆ ನಿನ್ನ ಕಾಲುಕಟ್ಟಿಕೊಂಡು ಕ್ಷಮಾಪಣೆ ಕೇಳಿಕೊಳ್ಳುತ್ತಾಳೆ. ದಯವಿಟ್ಟು ಕ್ಷಮಿಸಿಬಿಡು. ಅವಳಿಗಾಗಿ ನೀನು ಕ್ಷಮಿಸುವುದಕ್ಕೆ ಇಷ್ಟಪಡದಿದ್ದರೆ ನೀನು ಹೆತ್ತಿರುವ ಈ ಪಾಪಿಷ್ಠ ಮಗನಿಗಾಗಿ ಕ್ಷಮಿಸಮ್ಮ! ನಿನ್ನ ಕಾಲುಗಳನ್ನು ಕಟ್ಟಿಕೊಳ್ಳುತ್ತೇನೆ' ಎಂದು ಅಳುತ್ತಳುತ್ತ ಸೀತಾರಾಮು ಕೆಳಕ್ಕೆ ಬಿದ್ದು ತಾಯಿಯ ಕಾಲುಗಳನ್ನು ಕಟ್ಟಿಕೊಂಡನು.

ಕಾವೇರಮ್ಮನಿಗೂ ಕಣ್ಣೀರು ಉಕ್ಕುತ್ತಿತ್ತು. ಆಕೆಯೂ ಅಳುತ್ತ,

'ಕಾಲು ಬಿಡಪ್ಪ ಸೀತಾರಾಮು! ಕಾಲು ಬಿಡು. ಈ ತಾಯಿತನ ಸಾಕಪ್ಪ! ಬಂಜೆಯಾಗಿದ್ದರೆ ಯಾವ ಸಂಕಟವೂ ಇಲ್ಲ. ಏಳು, ಎದ್ದೇಳಪ್ಪ! ನೀನೂ ಸಂಕಟಪಡುತ್ತಿದ್ದೀಯೆ. ನಾನೂ ಸಂಕಟಪಡುತ್ತಿದೇನೆ. ಎದ್ದು ಕುಳಿತುಕೋ.'

ಎಂದು ಹೇಳಿ ತನ್ನ ಮಗನನ್ನು ಎಬ್ಬಿಸಿ ಕೂಡಿಸಿದಳು. ಸೀತಾರಾಮು ತಾಯಿಯ ಮುಖವನ್ನು ನೋಡದೆ ನೆಲವನ್ನೇ ನೋಡುತ್ತಿದ್ದನು. ಅವನಿಗೆ ಮೇಲಿಂದಮೇಲೆ ದುಃಖ ಉಕ್ಕಿಬರುತ್ತಿತ್ತು. ಅವನ ಅಳು ನಿಲ್ಲಲಿಲ್ಲ. ತಾಯಿ, ತಾನೂ ಅಳುತ್ತ, 'ಸಮಾಧಾನಮಾಡಿಕೊಳ್ಳಪ್ಪ ಸೀತಾರಾಮು! ಎಂದು ಹೇಳುತ್ತಿದ್ದಳು. ಸೀತಾರಾಮುವಿಗೆ ತನ್ನ ಎದುರಿನಲ್ಲಿ ತಾಯಿಯೂ ಕಣ್ಣೀರುಹಾಕುತ್ತ ಕುಳಿತಿರುವ ಒಂದು

ದೃಶ್ಯ, ಆ ದಿವಸ ತನ್ನ ಅತ್ತೆ ಒಂದು ಸಾವಿರ ರೂಪಾಯಿಗಳನ್ನು ನಿನಗೆ ಕೊಡುತ್ತೇನಪ್ಪ ಎಂದು ಮುಂತಾಗಿ ಹೇಳುತ್ತ ಕಣ್ಣೀರು ಹರಿಸು ತ್ತಿದ್ದ ದೃಶ್ಯ—ಎರಡೂ ಚಿತ್ತರಂಗದಲ್ಲಿ ನಿಂತು ಪರಸ್ಪರ ಯುದ್ಧಕ್ಕೆ ತೊಡಗಿದಂತೆ ಭಾಸವಾಯಿತು. ಸಾಮಾನ್ಯ ಕಾಲಗಳಲ್ಲಿ ಎಲ್ಲರೂ ತಂತಮ್ಮ ಕರ್ತವ್ಯಗಳನ್ನು ತಿಳಿದವರೇ ಆಗಿರುತ್ತಾರೆ, ಧರ್ಮ ರಹಸ್ಯ ಗಳನ್ನೂ ಬೋಧಿಸುವವರೇ ಆಗಿರುತ್ತಾರೆ. ಭಿನ್ನಧ್ಯೇಯಗಳೂ ಭಿನ್ನನಿಷ್ಠೆ ಗಳೂ ಎದುರಿಗೆ ಬಂದು ನಿಂತಾಗ, ಯಾವುದು ಧರ್ಮ? ಯಾವುದು ಅಧರ್ಮ? ಎಂದು ತರ್ಕಿಸತೊಡಗಿದಾಗ ಸರಿಯಾದ ಮಾರ್ಗವನ್ನು ತೋರಿಸುವವರಾರು? ಅನೇಕ ಸಂದರ್ಭಗಳಲ್ಲಿ ಆಪಾತತಃ ಧರ್ಮವೆಂ ಬುದು ಪರಿಣಾಮದಲ್ಲಿ ಧರ್ಮವಾಗದೆ ಹೋಗಬಹುದು. ಕಟ್ಟಕಡೆಯಲ್ಲಿ ನಿಷ್ಪಕ್ಷಪಾತಿಗಳಾದ ನಿರ್ಮತ್ಸರರಾದ ಮಹಾತ್ಮರು ಯಾರಾದರೂ, 'ಹೀಗೆ ಮಾಡು, ಇದೇ ಧರ್ಮ' ಎಂದು ಹೇಳಿದರೆ ನಮ್ಮ ಜವಾಬ್ದಾರಿ ತೀರಿತೆಂದು, ಅದರ ಫಲಾಫಲಗಳು ನಮಗೆ ಸೇರಿದ್ದಲ್ಲವೆಂದು, ಎಲ್ಲ ವನ್ನೂ ಆ ಮಹಾತ್ಮರ ತಲೆಯಮೇಲೆ ಹೇರಿ ಹೇಳಿದ ಕೆಲಸವನ್ನು ಮಾಡ ಬಹುದು. ಇದಕ್ಕಾಗಿಯೇ ನಾವು ರಾಮಾಯಣ ಭಾರತಾದಿಗಳಲ್ಲಿ ಬರುವ ಸಂಕಷ್ಟ ಸನ್ನಿವೇಶಗಳಲ್ಲಿ ಮಹಾತ್ಮರು ಧರ್ಮ ಸೂಕ್ಷ್ಮಗಳನ್ನು ಹೇಗೆ ಬಿಡಿಸಿದ್ದಾರೆ? ಮಹಾತ್ಮರು ಧರ್ಮಗಳನ್ನು ಹೇಗ ಆಚರಿಸಿ ದ್ದಾರೆ ಎನ್ನುವುದನ್ನು ತಿಳಿದುಕೊಳ್ಳುವುದು ಒಳ್ಳೆಯದು.

ಪ್ರಕೃತದಲ್ಲಿ ಸೀತಾರಾಮು ಬಹಳ ಪ್ರಯತ್ನಪಟ್ಟು ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು,

'ಅಮ್ಮ! ನೀನೂ ಹೆಣ್ಣುಮಕ್ಕಳನ್ನು ಹೆತ್ತಿದ್ದೀಯಲ್ಲ. ನಿನ್ನ ಮಗಳೊಬ್ಬಳನ್ನು ನಿನ್ನ ಆ ಅಳಿಯ ನಾಳೆ ಹೀಗೆ ತೊರೆದುಬಿಟ್ಟರೆ ನಿನಗೆ ಸಂಕಟವಾಗುವುದಿಲ್ಲವೇ? ಅದನ್ನು ನೀನು ಆಲೋಚಿಸಬೇಡ. ನಾವು ಒಬ್ಬರಿಗೆ ಕೇಡುಕನ್ನು ಮಾಡಿದರೆ, ಇಂದಲ್ಲ ನಾಳೆ, ಅದು ನಮ್ಮ ಮೇಲೆಯೇ ತಿರುಗುತ್ತದೆ. ನೀನು ಈಗ ನನಗೆ ಹೇಳುತ್ತಿರುವ ಮಾತು ನಾಳೆ ನಮ್ಮ ಸಂಸಾರಕ್ಕೇನೆ ಮೃತ್ಯು. ಆಲೋಚಿಸು. ನನಗೆ ನನ್ನ ಹೆಂಡತಿಯ ಮೇಲಿರುವ ಪ್ರೇಮ ಒತ್ತಟ್ಟಿಗಿರಲಿ. ನಿರಪರಾಧಿನಿಯಾದ

ಸರೋಜಳನ್ನು – ಶ್ರೀರಾಮ ಸೀತಾದೇವಿಯನ್ನು ಕಾಡುಪಾಲು ಮಾಡಿದಂತೆ – ನಾನು ತೊರೆದುಬಿಡುವ ಮಹಾ ಪಾಪಕಾರ್ಯವೂ ಒತ್ತಟ್ಟಿಗಿರಲಿ. ಇದು ನಮ್ಮ ಸಂಸಾರದ ಏಳಿಗೆಗೆ ಹಾನಿಕರವಲ್ಲವೆ?'.

'ಅಪ್ಪ ಸೀತಾರಾಮು! ನೀನೂ, ನಮ್ಮ ಸಂಸಾರವೂ ಏಳಿಗೆಗೆ ಬರಬೇಕು ಎಂದೇ ನಾನು ಹೇಳುತ್ತೀದೇನಪ್ಪ! ನಾನೇನು ಮಾಡಲಿ? ಆ ದಿವಸವೇ ನಾನು ನಿನಗೆ ಹೇಳಿದೆ: ನಿನ್ನ ಹೆಂಡತಿಯದು ಬಹಳ ಕೆಟ್ಟ ಜಾತಕ. ಅವಳು ನಮ್ಮ ಮನೆಯನ್ನು ಮೆಟ್ಟಿದ್ದೇ ತಡ, ನಿನ್ನ ತಂದೆ ತೀರಿಕೊಂಡರು ಎಂದು ನಾನು ಹೇಳಲಿಲ್ಲವೇ?'

'ಆದದ್ದು ಆಗಿ ಹೋಯಿತು! ನೀನೂ ವೈಧವ್ಯವನ್ನು ಅನುಭವಿಸುವುದು ನಿನ್ನ ಹಣೆಯಲ್ಲಿ ಬರೆದಿತ್ತು ಈಗ ಆ ಹಳೆಯ ಮಾತನ್ನು ಏತಕ್ಕೆ ಎತ್ತಿ ಆಡುತ್ತೀಯೆ?'

'ಆ ಕೆಟ್ಟ ಜಾತಕದ ಹುಡುಗಿಯಿಂದ ಅವಳು ಹುಟ್ಟಿದ ಮನೆಗೂ ಕೇಡು, ಅವಳು ಹೊಕ್ಕ ಮನೆಗೂ ಕೇಡು!'

'ಹಾಗಿದ್ದರೆ ಆ ಹುಡುಗಿಯನ್ನು ಏತಕ್ಕೆ ತಂದುಕೊಂಡೆ? ತಿಳಿದೂ ತಿಳಿದೂ ಸೊಸೆಯನ್ನಾಗಿ ಮಾಡಿಕೊಂಡಮೇಲೆ ಹೆತ್ತವರು ಹೇಗೆ ಸುಮ್ಮನಿದ್ದಾರೆಯೋ ಹಾಗೆಯೇ ತಂದುಕೊಂಡವರೂ ಸುಮ್ಮನೆ ಇರಬೇಡವೇ?'

'ನನ್ನ ಮಾತನ್ನು ನಿನ್ನ ತಂದೆ ನಡಸಲಿಲ್ಲವಲ್ಲಪ್ಪ! ನನ್ನ ಮಾತು ಕೇಳಿದ್ದರೆ ಈ ತೊಂದರೆಗಳಾವುವೂ ನಿನಗೆ ಬರುತ್ತಿರಲಿಲ್ಲ. ನನಗೂ ಯಾವ ಸಂಕಟವೂ ಇರುತ್ತಿರಲಿಲ್ಲ.'

'ಅದಕ್ಕಾಗಿ ಈಗ ನೀನು ನಿನ್ನ ಹಟ ಸಾಧಿಸಿಕೊಳ್ಳುತ್ತೀಯೆ ಅಮ್ಮ? ಅಪ್ಪ ಎಂತಿದ್ದರೂ ಸತ್ತ. ಈಗ ನಾನು ನಿನ್ನ ಮಾತಿನಂತೆ ನಡೆಯುತ್ತೇನೆ ಎಂದು ಭರವಸೆಯಿಟ್ಟುಕೊಂಡು ಈ ಪಾಪ ಕೆಲಸವನ್ನು ನನಗೆ ಹೇಳುತ್ತೀಯೆ.'

'ಸೀತಾರಾಮು! ನಾನೇನು ಮಾಡಲಿ ಹೇಳಪ್ಪ? ನನ್ನನ್ನು ಇತರರು ಅನ್ನುವುದಿರಲಿ. ನೀನು ಸಹ ನನ್ನನ್ನು ಅನ್ನುವಂತಾಯಿತು. ನಿನ್ನ ತಂದೆ ನನ್ನನ್ನ ಕಷ್ಟಕ್ಕೆ ಸಿಕ್ಕಿಸಿ ತಾವೇನೋ ಕಣ್ಮುಚ್ಚಿಕೊಂಡು

ಬಿಟ್ಟರು. ಮುಂದೆ ಆಗುವ ದ್ರವ್ಯನಷ್ಟ, ಮಾನನಷ್ಟ, ಪ್ರಾಣನಷ್ಟ ಗಳನ್ನೆಲ್ಲ ಅನುಭವಿಸು ಎಂದು ಹೇಳಿಬಿಟ್ಟು ಕಣ್ಮುಚ್ಚಿಕೊಂಡುಬಿಟ್ಟರು. ನಾನು ಈ ಮದುವೆ ಬೇಡವೋ ಬೇಡವೋ ಎಂದು ದೊಡ್ಡ ಜಗಳ ಮಾಡಿದೆ, ಮೂರು ದಿವಸ ಊಟಮಾಡಲಿಲ್ಲ. ಆದರೂ ನಿನ್ನ ತಂದೆ ಒಂದೇ ಹಟದಿಂದ ನಡಸಿಬಿಟ್ಟರು.'

'ನನ್ನ ಮತ್ತು ಸರೋಜಳ ಮದುವೆ ನಾವು ಹುಡುಗರಾಗಿದ್ದಾಗಲೇ ನಿಷ್ಕರ್ಷೆಯಾಗಿ ಹೋಗಿತ್ತು. ನೀನೇಕೆ ಜಗಳ ಮಾಡಬೇಕಾಗಿತ್ತು?'

'ಸೀತಾರಾಮು! ಈ ಮಾತುಗಳನ್ನೆಲ್ಲ ನಿನ್ನತ್ತೆ ಹೇಳಿ ಕೊಟ್ಟಳೇನಪ್ಪ? ಈ ದಿವಸವೇ–ಇಷ್ಟು ವರ್ಷಕ್ಕೆ ನಿನ್ನ ಬಾಯಿಂದ ಆ ಮಾತುಗಳು ಬರುತ್ತಿರುವುದು? ನನಗೆ ಗೊತ್ತಿದೆ. ಇನ್ನೂ ಏನೇನು ಉಪದೇಶಮಾಡಿದ್ದಾಳೋ! ಅವಳು ತನ್ನ ಮಗಳನ್ನ ನಿಜವಾಗಿಯೂ ನಿನಗೆ ಕೊಟ್ಟು ಮದುವೆ ಮಾಡಬೇಕು ಎಂದು ನಿಷ್ಕರ್ಷೆ ಮಾಡಿದ್ದಳೇ ನಪ್ಪ! ಅಯ್ಯೋ ಹುಚ್ಚೇ! ನಾನು ಹೇಳುತ್ತಿರುವುದೇನು? ನೀನು ಪ್ಯಾಸ್ ಮಾಡಿದ್ದೀಯೆ. ಆದರೆ ಸ್ವಲ್ಪ ಬೆಪ್ಪು. ಒಳಹೊಕ್ಕು ಜನರ ಮರ್ಮ ತಿಳಿಯೋ ಜಾಣತನ ಇಲ್ಲ. ಅವಳು ಸರೋಜಳನ್ನ ಡೆಪ್ಯುಟಿ ಕಮಿಷನರ್ ಮಗನಿಗೋ ಕಡೆಗೆ ಅಸಿಸ್ಟೆಂಟ್ ಕಮಿಷನರ್ ಮಗ ನಿಗೋ ಕೊಟ್ಟು ಮದುವೆ ಮಾಡಬೇಕು ಎಂದು ಆರುಳು ಮರುಳು ಸಾಮರ್ಥ್ಯ ಮಾಡಿದಳು. ಪಾಪ! ಕೃಷ್ಣರಾಯರು ಸಾಧು! ಆ ಗಯ್ಯಾಳಿ ಹೆಂಡತಿಯ ಮಾತಿಗೆ ಯಾರು ಹೋಗುವವರು ಎಂದುಕೊಂಡು ತೆಪ್ಪಗಾದರು. ಕೃಷ್ಣರಾಯರನ್ನೂ ಸರೋಜಳನ್ನೂ ಕರೆದುಕೊಂಡು ದೊಡ್ಡ ಮನುಷ್ಯರ ಮನೆಗಳಿಗೆಲ್ಲ ಅಲೆದಳು. ಹುಡುಗಿಯನ್ನ ನೋಡಿದ ದೊಡ್ಡ ಮನುಷ್ಯರು–ಹುಡುಗಿ ಬೆಳ್ಳಗೆ ಚೆನ್ನಾಗಿದ್ದಾಳೆ, ಓದಿಯೂ ಇದ್ದಾಳೆ; ಆದರೆ ಜಾತಕಗಳನ್ನು ತೋರಿಸೋಣ, ಕೂಡಿ ಬಂದರೆ ಆಲೋಚಿಸೋಣ ಎಂದು ಹೇಳಿದರು. ಜೋಯಿಸರ ಕೈಯಲ್ಲಿ ಜಾತಕ ಕೊಟ್ಟರೆ— ಈ ಸಂಬಂಧ ಮಾಡಬೇಡಿ, ಆ ಹುಡುಗಿಯ ಜಾತಕ ಚೆನ್ನಾಗಿಲ್ಲ ಎಂದು ಹೇಳಿದವರೇ! ಬಾಯಿಬಿಟ್ಟು ಏನು ಕೆಟ್ಟದ್ದು ಎಂದು ಮಾತ್ರ ಹೇಳಲೊಲ್ಲರು. ಈ ಸಂಬಂಧ ಬೇಡ, ಬೇರೆ ಹುಡುಗಿ

ಯನ್ನ ನೋಡಿ ಎಂದು ಹೇಳುತ್ತಿದ್ದರು. ಆ ದೊಡ್ಡ ಮನುಷ್ಯರು ಹೀಗೆ ಬೇಡ ಬೇಡ ಎಂದು ಹೇಳಿ, ಕೃಷ್ಣರಾಯರಿಗೂ ಬೇಜಾರಾಗಿ ಹೋಗಿ ಸರೋಜಳ ಮದುವೆ ಆಗದೆ ನಿಂತಿತ್ತು. ದಿನ ಬೆಳಗಾದರೆ ಆ ಗಯ್ಯಾಳಿ, – ಅಲ್ಲಿಗೆ ಕಾಗದ ಬರೆಯಿರಿ, ಇಲ್ಲಿಗೆ ಕಾಗದ ಬರೆಯಿರಿ. ಬೇಕಾದರೆ ಹೊಸ ಜಾತಕವನ್ನೇ ಬರೆಸಿಡಿ ಎಂದು ಹೇಳುತ್ತ ಬಂದಳು. ಕೃಷ್ಣರಾಯರು ದೊಡ್ಡ ಮನುಷ್ಯರು ನೋಡು! ಅವರು ಅಂಥ ಕೆಲಸ ಏನೂ ಮಾಡಲಿಲ್ಲ. ಗೊತ್ತಾಯಿತೇನಪ್ಪ! ನೀನು ಬಿ.ಎ., ಪ್ಯಾಸ್ ಮಾಡಿದ್ದು ಯಾವಾಗ? ನಿನಗೆ ಆಗ ಎಷ್ಟು ವರ್ಷ?'

'ನನಗೆ ಆಗ ಇಪ್ಪತ್ತು ವರ್ಷ ತುಂಬಿತ್ತಮ್ಮ!'

'ನಿನಗೆ ಮದುವೆ ಆದಾಗ ಎಷ್ಟುವರ್ಷ ಆಗಿತ್ತಪ್ಪ?'

'ಆಗ ಇಪ್ಪತ್ತೆರಡು ವರ್ಷ.'

'ಬಿ.ಎ., ಪ್ಯಾಸ್ ಮಾಡಿದ ಮಗ, ಇಪ್ಪತ್ತು ವರ್ಷ ತುಂಬಿದವನು, ಸಂಪಾದನೆ ಮಾಡುವ ಮಗ, ಕೈಗೆಬಂದ ಮಗ ಎದುರಿಗಿರುವಾಗ ಅವನ ಮದುವೆ ಬೇಗ ಮಾಡಬೇಕು ಎಂದು ಈ ಹೆತ್ತ ತಾಯಿಗೆ ಇರುತ್ತದೆಯೋ ಇಲ್ಲವೋ? ಹೇಳು ಸೀತಾರಾಮು! ನಿನ್ನ ಮದುವೆ ನೀನು ಪ್ಯಾಸ್ ಮಾಡುತ್ತಲೂ ಆಗಬೇಕಾದ್ದು ಎರಡು ವರ್ಷ ತಡವಾಗಿ ಹೋಯಿತು. ಏಕೆ ತಡವಾಯಿತಪ್ಪ?'

'ನಾನೇ ಬೇಡ ಅನ್ನುತ್ತಿದ್ದೆ. ಜತೆಗೆ ನಿನಗೂ ಅಪ್ಪನಿಗೂ ಮದುವೆ ವಿಚಾರದಲ್ಲಿ ಜಗಳ ಇದೆ ಎಂದು ತಿಳಿದಿತ್ತು.'

'ನೀನು ಬೇಡ ಅನ್ನೋ ಮಾತಿರಲಿ. ನಡೆದ ಸಂಗತಿ ಹೇಳುತ್ತೀನೆ, ಕೇಳಪ್ಪ! ಕೃಷ್ಣರಾಯರು ನಮ್ಮ ಮನೆಗೆ ಬಂದರು. ನಿನ್ನ ತಂದೆಯನ್ನು ಕಂಡು,— ಹಿಂದೆಯೇ ನಿಮ್ಮ ಹುಡುಗನಿಗೂ ನಮ್ಮ ಸರೋಜಾಗೂ ಮದುವೆ ಮಾಡಬೇಕು ಎಂದು ನಿಷ್ಕರ್ಷೆ ಮಾಡಿದ್ದೆವಲ್ಲ. ಈಗ ಸೀತಾರಾಮು ಬಿ.ಎ., ಪ್ಯಾಸ್ ಮಾಡಿ ಆಯಿತು. ಸರೋಜಾನೂ ಎಸ್. ಎಸ್. ಎಲ್. ಸಿ., ಮಾಡಿ ಆಯಿತು. ಮದುವೆ ಮಾಡಿಬಿಡೋಣ. ಒಳ್ಳೆಯ ಮುಹೂರ್ತ ನೋಡಿಸೋಣ – ಎಂದು ಹೇಳಿದರು. ಏನಪ್ಪ ಸೀತಾರಾಮು! ಮದುವೆ ಪ್ರಸ್ತಾಪ ಮಾಡುವುದಕ್ಕೆ

ಗಂಡಸೊಬ್ಬನೇ ಬರುವುದು ಪದ್ಧತಿಯೋ, ಗಂಡ ಹೆಂಡತಿ – ಇಬ್ಬರೂ ಬಂದು, ಗಂಡಸು ಗಂಡಸಿನ ಜತೆಯಲ್ಲಿ ಹೆಂಗಸು ಹೆಂಗಸಿನ ಜತೆಯಲ್ಲಿ ಮಾತನಾಡುವುದು ಪದ್ಧತಿಯೋ? ಹೇಳಪ್ಪ. ನೀನೂ ಹತ್ತುಕಡೆ ಮದುವೆಗಳಾಗಿರುವುದನ್ನು ನೋಡಿದ್ದೀಯಲ್ಲ.'

'ಇಬ್ಬರೂ ಬರಬೇಕಮ್ಮ ಗಂಡ, ಹೆಂಡತಿ, ಆ ಹುಡುಗಿ, ಜತೆಗೆ ಯಾರಾದರೂ ಇತರರು ಬಂದು ಮಾತನಾಡಬೇಕು. ಹುಡುಗಿಯನ್ನು ತೋರಿಸಬೇಕು ಅದೇ ರೂಢಿ'

'ನಿನಗೆ ರೂಢಿ ಗೊತ್ತಿದೆಯಲ್ಲ! ನಿನ್ನತ್ತೆ ಎನ್ನುವವಳು ನಮ್ಮ ಮನೆ ಮೆಟ್ಟಿಕೊಂಡು ಬಂದು ಮಾತನಾಡಿದಳೇನಪ್ಪ? ಅವಳ ಮುಖವನ್ನು ನಮ್ಮ ಮನೆಯಲ್ಲಿ ನೀನು ನೋಡಿದ್ದೆಯಾ?'

'ಇಲ್ಲಮ್ಮ. ಆಕೆ ಬಂದ ಹಾಗೆ ನನಗೆ ಜ್ಞಾಪಕವಿಲ್ಲ'

'ಸರಿ, ನೀನೇ ನೋಡು, ನಿನ್ನತ್ತೆ ನನ್ನನ್ನು ಹೇಗೆ ಕಾಣುತ್ತಿದ್ದಳು ಎಂಬುದನ್ನು ಆಲೋಚನೆಮಾಡು. ಡೆಪ್ಯುಟಿ ಕಮಿಷನರ್ ಮನೆಗೆ, ಅಸಿಸ್ಟೆಂಟ್ ಕಮಿಷನರ್ ಮನೆಗೆ ಮಗಳನ್ನ ಕರೆದುಕೊಂಡು ಅಲೆದವಳು ನನ್ನ ಮನೆಗೆ ಬರೋದಕ್ಕೆ ಆಗಲಿಲ್ಲವಲ್ಲ! ಅವಳ ದೊಡ್ಡಸ್ತಿಕೆ ನೋಡಿದೆಯಾ ಅಪ್ಪ? ಕೃಷ್ಣರಾಯರ ಮೇಲಿನ ಸ್ನೇಹದಿಂದ ನಿನ್ನ ತಂದೆ ಅದನ್ನೆಲ್ಲ ಗಮನಿಸಲಿಲ್ಲ. ನನಗಂತೂ ಮೊದಲಿಂದ ಒಪ್ಪಿಕೆ ಇದೆ. ಮನೆಯಾಕೆಯನ್ನು ಒಪ್ಪಿಸುವುದು ಒಳ್ಳೆಯದು – ಎಂದು ತಮ್ಮ ಸ್ನೇಹಿತರಿಗೆ ಹೇಳಿದರು. ಆಗ ಕೃಷ್ಣರಾಯರೂ ನಿನ್ನ ತಂದೆಯೂ ನಮ್ಮ ಮನೆಯ ಹಾಲಿನೊಳಕ್ಕೆ ಬಂದು ಅಡಿಗೆಯ ಮನೆಯಲ್ಲಿದ್ದ ನನ್ನನ್ನು ಕರೆದರು. ನಾನು ಅಡಿಗೆ ಮಾಡುತ್ತಿದ್ದವಳು ಹಾಗೆಯೇ ಬಂದೆ. ಆಗ ಕೃಷ್ಣರಾಯರು ಮದುವೆ ಮಾತು ಆಡಿದರು. ನಾನು,– ಋಣಾನುಬಂಧ ಹೇಗಿದೆಯೋ ಏನೋ. ನೀವು ನಮಗೆ ಚೆನ್ನಾಗಿ ತಿಳಿದವರು. ನಿಮ್ಮ ಮಗಳನ್ನು ಹಿಂದೆ ನಾನು ನೋಡಿದ್ದೇನೆ. ಜಾತಕಗಳನ್ನು ತೋರಿಸೋಣ. ಕೂಡಿಬಂದರೆ ಅದಕ್ಕೇನು? ಮದುವೆ ಮಾಡೋಣ – ಎಂದು ಹೇಳಿದೆ. ಕೃಷ್ಣರಾಯರು, ಜಾತಕಗಳನ್ನು ತೋರಿಸುವುದೇ ಬೇಡ. ಮನಸ್ಸು ಗಟ್ಟಿಮಾಡಿದರೆ ಆಯಿತು. ಅದೂ

ಅಲ್ಲದೆ ಎಷ್ಟೋ ವರ್ಷಗಳ ಹಿಂದೆಯೇ–ಸೀತಾರಾಮು ಲೋವರ್ ಸೆಕಂಡರಿಗೆ ಕಟ್ಟಿದ್ದಾಗಲೇ ಅವನನ್ನೂ ಸರೋಜಳನ್ನೂ ಪಕ್ಕಪಕ್ಕದಲ್ಲಿ ಕೂಡಿಸಿ ವಧೂವರರ ಸಾಮ್ಯ ನೋಡಿ ಆಗಿದೆ. ಆ ದಿವಸವೇ ನಾನೂ ಶ್ರೀನಿವಾಸರಾಯರೂ ಅವರಿಬ್ಬರ ಮದುವೆಯನ್ನು ನಿಷ್ಕರ್ಷೆಮಾಡಿ ಬಿಟ್ಟೆವು. ನಿಮ್ಮ ಸ್ನೇಹಿತಳು ತುಳಸಾಬಾಯಿ ಸಹ ಈ ಮದುವೆ ಆಗ ಬೇಕು ಎನ್ನುತ್ತಾಳೆ. ನಾನು ಶ್ರೀನಿವಾಸರಾಯರಿಗೆ ಹೇಳಿದ್ದೇನೆ. ನೀವು ನಮ್ಮ ಮನೆಗೆ ಬಂದು ಬಹಳ ವರ್ಷಗಳಾದುವು ಎರಡು ದಿನ ಬೆಂಗಳೂರಿಗೆ ಎಲ್ಲರೂ ಬನ್ನಿ. ಹುಡುಗಿಯನ್ನು ನೋಡಿದ ಹಾಗೂ ಆಗುತ್ತದೆ—ಎಂದು ಹೇಳಿದರು. ಏನಪ್ಪ ಸೀತಾರಾಮು! ಹುಡುಗಿಯನ್ನು ನೋಡುವುದಕ್ಕೆ ನಾವು ಬೆಂಗಳೂರಿಗೆ ಬರಬೇಕು ಎಂದು ಹೇಳಿದರಪ್ಪ! ನಿನ್ನ ತಂದೆಗೆ ಅವರ ಸ್ನೇಹದಮೇಲೆ ದೃಷ್ಟಿ ಹೋಯಿತೇ ಹೊರತು ನನ್ನ ಮರ್ಯಾದೆಮೇಲೆ ದೃಷ್ಟಿ ಹೋಗಲಿಲ್ಲ.'

'ಹೌದಮ್ಮ ನಾವೆಲ್ಲ ಬೆಂಗಳೂರಿಗೆ ಹೋದದ್ದು ಜ್ಞಾಪಕವಿದೆ. ಅಲ್ಲಿ ಸರೋಜಳನ್ನ ನೋಡಿದ್ದು ಜ್ಞಾಪಕವಿದೆ.'

'ಜ್ಞಾಪಕವಿದೆಯೇ ಸೀತಾರಾಮು? ಒಳ್ಳೆಯದಪ್ಪ. ನಿನ್ನ ತಾಯಿಯನ್ನು ಯಾವ ದುಃಸ್ಥಿತಿಗೆ ಇಳಿಸಿದರು ನಿನ್ನ ತಂದೆ? ನಾನು ಪ್ರಯಾಣಕ್ಕೆ ಮೊದಲು ಜಗಳಮಾಡಿದೆ: ಕೃಷ್ಣರಾಯರು ಬಂದು ನನ್ನೊಡನೆ ಮಾತನಾಡಿದರು. ನೀವು ಹೋಗಿ ತುಳಸಾಬಾಯಿಯೊಡನೆ ಮಾತನಾಡಿ. ನಾನೇಕೆ ಬರಬೇಕು? ನಾನು ಬರುವುದಿಲ್ಲ. ಎರಡ ನೆಯದಾಗಿ, ಮದುವೆ ಸಂಬಂಧ ಬೆಳಸೋವರ ಮನೆಯಲ್ಲಿ ಮೊದಲೇ ಊಟ ತಿಂಡಿ ತೀರ್ಥ ಏನನ್ನೂ ಮಾಡಬಾರದು. ಬೇಡ, ಬೇಡ– ಎಂದು ಹೇಳಿದೆ. ನಿನ್ನ ತಂದೆ ಒಂದೇ ಹಟ ಹಿಡಿದರು. ಕೃಷ್ಣರಾಯರ ಮನೆಗೆ ಹೋಗುವುದಕ್ಕೆ ಕಾಲವೇನು? ಕಾರಣವೇನು? ನಾವು ಬೇಕಾದಾಗ ಹೋಗಬಹುದು. ಚಿಲ್ಲರೆ ಬುದ್ಧಿ ತೋರಿಸಬೇಡ, ದೊಡ್ಡ ರೀತಿಯಲ್ಲಿ ನಡೆದುಕೋ. ನಾನು ಹೋಗುವ ಕಡೆ ನೀನೂ ಬಾ ಎಂದು ಹೇಳಿ ಬಲಾತ್ಕಾರ ಮಾಡಿ ಬೆಂಗಳೂರಿಗೆ ಕರೆದುಕೊಂಡುಹೋದರು. ತುಳಸಾಬಾಯಿ–ನಿನ್ನತ್ತೆ–ನನಗೆ ಬಹಳ ಉಪಚಾರಮಾಡಿದಳಪ್ಪ!

ನಿಮಿಷಕ್ಕೊಂದು ಬಾರಿ ನಾರಣಾಚಾರಿಯನ್ನು ಕರೆಯೋದು ಆಳನ್ನ ಕರೆಯೋದು, ಆ ಕೆಲಸ ಈ ಕೆಲಸ ಹೇಳೋದು – ಒಂದು ದರ್ಬಾರ್ ನಡಸಿದಳಪ್ಪ! ಅಂಥ ದರ್ಬಾರ್ ನಾನು ಎಲ್ಲಿಯೂ ನೋಡಿಲ್ಲ. ನನ್ನ ದುಃಖ ನುಂಗಿಕೊಂಡೆ ಅಲ್ಲಿ ಎರಡು ದಿನ ಇದ್ದು ತುಮಕೂರಿಗೆ ವಾಪಸು ಬಂದದ್ದಾಯಿತು. ನೀನು ಹುಡುಗಿಯನ್ನು ನೋಡಿ ಮೆಚ್ಚಿಕೊಂಡೆಯಪ್ಪ! ಮೆಚ್ಚಬೇಕಾದ ಹುಡುಗಿಯೆ! ಬೆಳ್ಳಗಿದ್ದಾಳೆ, ಓದಿದಾಳೆ. ಬೆಂಗಳೂರಿನಲ್ಲಿದ್ದ ಎರಡು ದಿನ ನನಗೆ ಬೇಕಾದ ವಿಷಯಗಳನ್ನು ನಾನೂ ಅಲ್ಲಿ ಇಲ್ಲಿ ಕೇಳಿ ಸಂಗ್ರಹಿಸಿಕೊಂಡೆ.'

'ನನಗೆ ಈ ವಿಚಾರಗಳೆಲ್ಲ ಗೊತ್ತಿಲ್ಲಮ್ಮ. ಅಪ್ಪ ಸರೋಜಾನ ತುಮಕೂರಿಗೇನೆ ಕರಸಬೇಕಾಗಿತ್ತು. ನನ್ನತ್ತೆಯೂ ತುಮಕೂರಿಗೆ ಬಂದು ನಿನ್ನನ್ನು ಒಲಿಸಿಕೊಳ್ಳಬೇಕಾಗಿತ್ತು. ಈಗ ಅವುಗಳನ್ನೆಲ್ಲ ಜ್ಞಾಪಿಸಿಕೊಳ್ಳಬಾರದು. ನೀನು ಮರೆತುಬಿಡಬೇಕಮ್ಮ. ಮದುವೆ ಆಗಿಹೋಯಿತು. ಮನಸ್ಸಿನಲ್ಲಿ ಹಿಂದಿನ ದ್ವೇಷ ಬೆಳಸಬಾರದು.'

'ನನಗೆ ದ್ವೇಷ ಇಲ್ಲ ಸೀತಾರಾಮು. ನಿನ್ನ ತಂದೆ ಹಟಮಾಡಿ ಕರೆದುಕೊಂಡುಹೋದರು, ನಾನು ಬೆಂಗಳೂರಿಗೆ ಹೋಗಲಿಲ್ಲವೇ? ನಿನಗೇ ಗೊತ್ತಿದೆಯಲ್ಲ ನಾನು ಹೋಗಿಬಂದೆ ನೋಡು. ವಾಪಸು ಬಂದಮೇಲೆ ನಾನು ನಿನ್ನ ತಂದೆಗೆ ಹೇಳಿದೆ: ನಿಮ್ಮ ಮತ್ತು ಕೃಷ್ಣರಾಯರ ಸ್ನೇಹ ಹೇಗಾದರೂ ಇರಲಿ. ನನ್ನ ಮಗ ಬೆಳೆಯೋ ಪೈರು. ಜಾತಕ ಹೊಂದುತ್ತದೆಯೋ ಇಲ್ಲವೋ ನೋಡಬೇಕು. ಜಾತಕಗಳು ಕೂಡಿ ಬಂದರೆ ಮಾರಾಯರಾಗಿ ಮದುವೆ ಮಾಡಿ, ಕೂಡಿಬರದಿದ್ದರೆ ಖಂಡಿತ ಈ ಮದುವೆ ಬೇಡ – ಎಂದು ಹಟಮಾಡಿದೆ. ಜಾತಕಗಳನ್ನು ತೋರಿಸುವುದಕ್ಕೆ ಕೃಷ್ಣರಾಯರಿಗೂ ಇಷ್ಟವಿರಲಿಲ್ಲ, ನಿನ್ನ ತಂದೆಗೂ ಇಷ್ಟವಿರಲಿಲ್ಲ. ನಾನು ನನ್ನ ಹಟವನ್ನು ಬಿಡಲಿಲ್ಲ. ನಿನ್ನ ಮದುವೆ ತಪ್ಪಿಹೋಯಿತು. ಆ ತುಳಸಾಬಾಯಿ ಆ ಮಧ್ಯೆ ತನ್ನ ಮಗಳನ್ನ ದೊಡ್ಡಕಡೆ ಕೊಡಬೇಕು ಎಂದು ಬೆಂಗಳೂರೆಲ್ಲ ಅಲೆದಳು. ಮಲ್ಲೇಶ್ವರ, ಬಸವನಗುಡಿ, ಶಂಕರಪುರ – ಎಲ್ಲರ ಬಂಗಲೆಗಳಿಗೂ ಹೋಗಿ ಬಂದಳು. ನಾನು ನಿನ್ನ ತಂದೆಗೆ ಬೇರೆ ಹೆಣ್ಣುಗಳನ್ನು ನೋಡಿ ಎಂದು

ಹೇಳಿದರೆ ನಾನು ಕೃಷ್ಣರಾಯರಿಗೆ ಮಾತು ಕೊಟ್ಟಿದ್ದೇನೆ. ಏನೇ ಆಗಿ ಹೋಗಲಿ ನಾನು ಮಾತಿಗೆ ತಪ್ಪುವುದಿಲ್ಲ, ಬೇರೆ ಕಡೆ ಹೆಣ್ಣನ್ನು ನೋಡು ವುದಿಲ್ಲ – ಎಂದು ಅವರು ಹಟಹಿಡಿದು ಕುಳಿತುಬಿಟ್ಟರು. ನಾನು ಹೆಂಗಸು ಏನು ಮಾಡಿಯೇನು? ತುಳಸಾಬಾಯಿ ಅಲೆನ ಹಾಗೆ ನಾನು ಅಲೆಯುವುದಕ್ಕೆ ನನಗೆ ಸಾಮರ್ಥ್ಯ ಎಲ್ಲಿದೆಯಪ್ಪ?'

'ನೀನು ಹಟಮಾಡಿದರೂ ಈ ಮದುವೆ ಆಯಿತಲ್ಲಮ್ಮ? ಹೇಗಾ ಯಿತು? ನಿನ್ನ ಹಟ ನೀನು ಬಿಟ್ಟೆ ಎಂದು ಕಾಣುತ್ತದೆಯಲ್ಲ.'

'ಹೌದಪ್ಪ, ಬಿಟ್ಟೆ. ಆದರೂ ಅವಳು ನನ್ನನ್ನು ಹಟಮಾರಿ ಎಂದು ನನ್ನ ಮುಖಕ್ಕೇನೆ ಹೇಳುತ್ತಾಳೆ. ನೀನೇ ನೋಡು. ನನ್ನ ಹಟವನ್ನು ನಾನು ಬಿಟ್ಟದ್ದು ಹೇಳುತ್ತೇನೆ, ಕೇಳು ಸೀತಾರಾಮು! ನಾನು ತಾಯಿ ನೋಡು, ಹಡೆದವಳು. ನನ್ನ ಮಗನಿಗೆ ವರದಕ್ಷಿಣೆ ಬೇಕೇ? ಆಯುಸ್ಸು ಬೇಕೇ? ಎಂದು ಯಾರಾದರೂ ಕೇಳಿದರೆ, ನಾನು ಏನು ಹೇಳ ಬಹುದು?

'ಮಗನಿಗೆ ಆಯುಸ್ಸು ಇರಲಿ, ವರದಕ್ಷಿಣೆ ಬೇಡ ಎಂದು ಎಂಥ ತಾಯಿಯಾದರೂ ಹೇಳುತ್ತಾಳಮ್ಮ!'

'ಅದೇ ನೋಡಪ್ಪ ಸೀತಾರಾಮು! ನೀನು ಜಾಣ! ಚೆನ್ನಾಗಿ ಗ್ರಹಿಸಿಕೊಂಡೆ. ನನ್ನ ಜತೆಯಲ್ಲಿ ನೀನಿದ್ದರೆ ಬುದ್ಧಿವಂತನಾಗಿಯೇ ಇರು ತ್ತೀಯಪ್ಪ! ನೀನೇನು ಪ್ಯಾಸ್ ಮಾಡಿಲ್ಲವೇ? ಕಚೇರಿಯಲ್ಲಿ ಬುದ್ಧಿ ವಂತ ಎಂದು ಅನ್ನಿಸಿಕೊಂಡಿದ್ದೀಯೆ, ಎಲ್ಲರ ಹತ್ತಿರವೂ ಒಳ್ಳೆಯ ಹೆಸರು ಸಂಪಾದಿಸಿದ್ದೀಯೆ ಆದರೆ ಆ ಮಾಟಗಾತಿ ಎದುರು ಬಂದುಬಿಟ್ಟಳೋ ನಿನ್ನ ಬುದ್ಧಿ ಏಕೋ ಮಂಕಾಗಿಹೋಗುತ್ತೆ! ಅವಳು ನಿನ್ನ ಕಿವಿಯಲ್ಲಿ ಏನು ಊದಿಬಿಟ್ಟದ್ದಾಳೋ! ನಿನ್ನ ನೆತ್ತಿಗೆ ಏನು ತಿಕ್ಕಿಬಿಟ್ಟದ್ದಾಳೋ! ಆ ಭಗವಂತನಿಗೇನೇ ಗೊತ್ತು. ನೋಡಿದೆಯಾ ಸೀತಾರಾಮು! ನಾನು ಜಾತಕಗಳನ್ನ ತೋರಿಸಲೇಬೇಕು ಎಂದ ಹಟಮಾಡಿದಾಗ, ನಿನ್ನ ತಂದೆ ಸರೋಜಳ ಜಾತಕವನ್ನು ತರಿಸಿ ತಿಮ್ಮಣ್ಣ ಜೋಯಿಸರ ಹತ್ತಿರ ಹೋಗಿ ನಿನ್ನದನ್ನೂ ಅದನ್ನೂ ಕೊಟ್ಟುಬಂದರು. ಮಾರನೆಯ ದಿನ ಆ ಜೋಯಿಸರನ್ನು ಕರೆದುಕೊಂಡು ಮನೆಗೆ ಬಂದರು. ನಾನು

ಕೇಳಿದ್ದಕ್ಕೆ ಜೋಯಿಸರು, 'ಜಾತಕಗಳೇನೂ ಉತ್ಕೃಷ್ಟವಲ್ಲ. ಮೂರ ನೆಯ ದರ್ಜೆ. ಹುಡುಗಿಯ ಜಾತಕಕ್ಕಿಂತ ಹುಡುಗನ ಜಾತಕ ಮೇಲು; ಹುಡುಗನ ಜಾತಕ ಫಲಗಳಿಂದ ಹುಡುಗಿಯ ಜಾತಕದ ಕೆಲವು ದೋಷ ಗಳು ಹೋಗಬಹುದು. ಆದರೆ ಮನಸ್ಸು ಗಟ್ಟಿಮಾಡಿ ಮದುವೆ ಮಾಡ ಬೇಕು ಎಂದಿದ್ದರೆ ಜಾತಕಗಳನ್ನು ನೋಡಬೇಕಾದ್ದೇ ಇಲ್ಲ; ಮಾಡಬಹುದು. ಅದಕ್ಕೂ ಶಾಸ್ತ್ರವಿದೆ. ಹಾಗೆ ಎಷ್ಟೋ ಜನ ಮಾಡಿ ದ್ದಾರೆ. ಈಗಿನ ಕಾಲದಲ್ಲಿ ಜಾತಕಗಳನ್ನು ನೋಡದೇನೇ ಹುಡುಗ ಹುಡುಗಿ ಒಬ್ಬರನ್ನೊಬ್ಬರು ಮೆಚ್ಚಿಕೊಂಡರೆ ಸಾಕು, ಮದುವೆಗಳನ್ನು ಮಾಡಿಬಿಡುತ್ತಾರೆ—ಎಂದು ಹೇಳಿದರು. ನಿನ್ನ ತಂದೆ ನನ್ನ ಕಡೆ ತಿರುಗಿ, ತೃಪ್ತಿ ಆಯಿತೋ ಇಲ್ಲವೋ? ಜಾತಕ ಜಾತಕ ಎಂದು ಸುಮ್ಮನೆ ಹಟ ಮಾಡುತ್ತಿದ್ದೀಯೆ—ಎಂದು ಮೂದಲಿಸಿದರು. ಜೋಯಿ ಸರು ತಮ್ಮ ಮನೆಗೆ ಹೊರಟು ಹೋದರು.'

'ಏನಮ್ಮ! ನನ್ನ ಹಾಳು ಮದುವೆ ವಿಚಿತ್ರ ಕಥೆಯಾಗಿ ಕಾಣುತ್ತದೆ ಯಲ್ಲ. ನೀನು ಜಾತಕಕ್ಕೋಸ್ಕರ ಏತಕ್ಕೆ ಪೇಚಾಡಿದೆ? ಅದರಲ್ಲಿರು ವುದೆಲ್ಲ ನಡೆಯುತ್ತದೆಯೇ? ನನಗಂತೂ ಅದರಲ್ಲಿ ನಂಬಿಕೆಯಿಲ್ಲಮ್ಮ.'

'ಸೀತಾರಾಮು! ನಿನ್ನಪ್ಪ ಸತ್ತದ್ದು ನಿಜವೋ ಸುಳ್ಳೋ? ನಿನಗೆ ಅದರಲ್ಲಿ ನಂಬಿಕೆ ಇದೆಯೋ ಇಲ್ಲವೋ ಹೇಳಪ್ಪ!'

'ಏನ್ನು ಪ್ರಶ್ನೆ ಕೇಳಿದೆಯಮ್ಮ! ಹಾಳು ಪ್ರಶ್ನೆ! ಸತ್ತನಲ್ಲ— ಇನ್ನೂ ನನಗೆ ದುಃಖ ಆರಿಲ್ಲವಲ್ಲ. ಸತ್ತದ್ದನ್ನು ನಂಬದೆ ಹೇಗಿರಲಿ?'

'ಅದು ಅವಳ ಜಾತಕದಲ್ಲಿತ್ತಪ್ಪ! ಮುಂದೆ ಏನಾಯಿತು ಎನ್ನುವು ದನ್ನು ಹೇಳುತ್ತೇನೆ, ಕೇಳು. ನಿನ್ನ ತಂದೆ ಊಟಮಾಡಿಕೊಂಡು ಕಚೇರಿಗೆ ಹೊರಟುಹೋದರು. ನಾನು ಊಟಮಾಡಿಕೊಂಡು ಜೋಯಿ ಸರ ಮನೆಗೆ ಹೋದೆ. ನಾನು ಬರುವುದನ್ನು ಜೋಯಿಸರು ನಿರೀ ಕ್ಷಿಸಿರಲಿಲ್ಲ. ಒಳಕ್ಕೆ ಬರಮಾಡಿಕೊಂಡರು. ನಾನು ಅವರಿಗೆ ಹೇಳಿದೆ: ಅಪ್ಪಾ ಜೋಯಿಸರೆ! ಮನಸ್ಸು ಗಟ್ಟಿಮಾಡಿ ಮದುವೆ ಮಾಡೋ ವಿಚಾರ ಹೇಳಿದಿರಿ. ನಾನು ಮನಸ್ಸು ಹಾಗೆ ಗಟ್ಟಿಮಾಡಿಲ್ಲಪ್ಪ! ಈ ತಾಯಿ ಹೃದಯ ಏಕೋ ಏನೋ ಈ ಅನಿಷ್ಟ ಮದುವೆ ಬೇಡ ಎಂದು ಹೇಳುತ್ತಾ

ಇದೆ. ಹುಡುಗಿಯ ಜಾತಕ ತೆಗೆಯಿರಿ. ದೋಷ ಏನೇನು? ಎನ್ನು ವುದನ್ನು ನನಗೆ ಖಂಡಿತವಾಗಿ ಮುಚ್ಚುಮರೆಯಿಲ್ಲದೆ ತಿಳಿಸಿ. ಇದು ನನ್ನ ಮಗನ ವಿಚಾರ, ನಾನು ಒಂಬತ್ತು ತಿಂಗಳು ಹೊತ್ತು ಬೇನೆಪಟ್ಟು ಹೆತ್ತು, ಕಷ್ಟದಿಂದ ಬೆಳಸಿದ ನನ್ನ ಮಗನ ವಿಚಾರ. ನನ್ನ ಯಜಮಾನರೂ ಹೆತ್ತವರೇ—ಆದರೂ ನಾನು ತಾಯಿ—ನನಗೆ ಹೆಚ್ಚು ಹಕ್ಕಿದೆ. ಹೇಳಿ, ಮುಚ್ಚುಮರೆ ಮಾಡಬೇಡಿ ಎಂದು ಖಂಡಿಸಿ ಕೇಳಿದೆ. ಆಗ ಜೋಯಿ ಸರು, ಹೇಳಲೇಬೇಕೇನಮ್ಮ ಎಂದರು. ಹೇಳದಿದ್ದರೆ ಆಣೆಯಿಡುತ್ತೇನೆ ಎಂದೆ. ಆಗ ಅವರು ಆಣೆಗೀಣೆ ಬೇಡ. ಹುಡುಗಿಯದು ಬಹಳ ಕೆಟ್ಟ ಜಾತಕ. ನಿಮಗೆ ಬಹಳ ತೊಂದರೆ ಇದೆ. ಆ ಹುಡುಗಿಗೆ ಯಾವ ಹೆಚ್ಚುದಿನ ಬದುಕಿರೋದಿಲ್ಲ- ಎಂದರು. ನನ್ನೆದೆ ಒಡೆದುಹೋಯಿತು. ಆಮೇಲೆ ಇನ್ನೇನು ದೋಷವಿದೆ ಎಂದು ನಾನು ಕೇಳಿದೆ. ಸೀತಾ ರಾಮು! ಸೀತಾರಾಮು! ನಿನಗೆ ದೇವರು ನೂರು ವರ್ಷ ಆಯುಸ್ಸು ಕೊಟ್ಟಿರಲಪ್ಪ! ದೀರ್ಘಾಯುಸ್ಸು ನಿನಗಿರಲಪ್ಪ!' ಎಂದು ಹೇಳುತ್ತ ಹೇಳುತ್ತ ಕಾವೇರಮ್ಮ ಅಳುತ್ತಾ ಮಾತು ನಿಲ್ಲಿಸಿಬಿಟ್ಟಳು.

'ಮುಂದೆ ಹೇಳಮ್ಮ! ಜೋಯಿಸರು ಏನೆಂದರು? ಏಕೆ ಅಳು ತ್ತೀಯೆ?'

'ಜೋಯಿಸರು ಏನೆಂದರು ಎಂದು ಕೇಳುತ್ತೀಯೇನಪ್ಪ? ಆ ಹುಡುಗಿಗೆ ಮಾಂಗಲ್ಯ ಬಲವೇ ಇಲ್ಲ. ಮದುವೆಯಾದ ಕೆಲವು ವರ್ಷ ಗಳಿಗೇನೇ ಏನಾಗುತ್ತದೆಯೋ ಎಂದುಬಿಟ್ಟರು. ನಾನು ಕುಸಿದುಬಿದ್ದು ಹೋದೆ. ಈ ಸಂಬಂಧ ಆಗಬಹುದೇ ಜೋಯಿಸರೇ? ಎಂದು ಕೇಳಿದೆ. ಜಾತಕರೀತ್ಯಾ ಮಾಡಬಾರದಮ್ಮ ಎಂದರು. ಇನ್ನೇನು ದೋಷಗಳಿವೆ ಎಂದು ಕೇಳಿದೆ. ಆಗ ಜೋಯಿಸರು, ಒಟ್ಟಿನಲ್ಲಿ ಕೈ ಹಿಡಿದ ಗಂಡನಿಗೂ ಅಪಾಯ, ಮಾವಂದರಿಗೂ ಅಪಾಯ ಎದ್ದು ಕಾಣುತ್ತಿದೆ ಎಂದು ಹೇಳಿದರು. ನಾನು ಮನೆಗೆ ಹಿಂತಿರುಗಿದೆನಪ್ಪ ಸೀತಾರಾಮು!'

'ಮತ್ತೆ ಈ ಮದುವೆ ಏಕಾಯಿತಮ್ಮ? ನನಗೂ ಈಗ ಸಂಕಟ. ನಿನಗೂ ಈಗ ಸಂಕಟ. ಅಪ್ಪ ಏಕೆ ಹಾಗೆ ಹಟ ಮಾಡಿದ?'

'ನನ್ನನ್ನ ಹಟಮಾರಿ ಎಂದು ನಿನ್ನತ್ತೆ ಅನ್ನುತ್ತಾಳಲ್ಲ! ನೀನೂ ಹಾಗೆಯೇ ತಿಳಿದುಕೊಂಡಿದ್ದೀಯಲ್ಲ! ಹಟ ಯಾರದಪ್ಪ? ನಿನ್ನ ತಂದೆ ಕಚೇರಿಯಿಂದ ಹಿಂದಿರುಗಿದಮೇಲೆ ನಾನು ದೊಡ್ಡ ರಗಳೆ ಮಾಡಿದೆ: ನಿಮ್ಮ ಹಟ ಬಿಟ್ಟುಬಿಡಿ. ನಾನು ಈ ಮದುವೆಗೆ ಒಪ್ಪುವುದಿಲ್ಲ. ಕಂಡೂ ಕಂಡೂ ಕೈಗೆ ಬಂದ ಮಗನನ್ನು ಯಾರು ಕಳೆದುಕೊಳ್ಳುತ್ತಾರೆ? ನಿಮಗೆ ಅವಿವೇಕ ಏಕೆ ಮುಚ್ಚಿಕೊಂಡಿತು? ನೀವೂ ಹೆತ್ತವರೇ ಅಲ್ಲವೆ? ನಾನು ಬದುಕಿರುವಾಗ ನನ್ನ ಮಗನನ್ನ ತುಳಸಬಾಯಿಗೆ ನಾನು ಬಲಿ ಕೊಡುವುದಿಲ್ಲ. ನನ್ನ ಹೆಣ ಈ ಮನೆಯಿಂದ ಸಾಗಿಹೋದ ಮೇಲೆ ಬೇಕಾದ್ದು ಮಾಡಿಕೊಳ್ಳಿ. ನಿಮ್ಮ ಕೈ ತಡೆಯುವವರಾರು? ನನ್ನ ಮಗ ನನ್ನ ಕಣ್ಣೆದುರಿಗೆ ಹಚ್ಚಗಿರಲಿ. ನಾನು ತಿಮ್ಮಣ್ಣ ಜೋಯಿಸರ ಹತ್ತಿರ ಆ ಹುಡುಗಿಯ ಜಾತಕವನ್ನೆಲ್ಲ ತಿಳಿದುಕೊಂಡು ಬಂದೆ. ನಿಮ್ಮ ಹಟದಿಂದ ನನ್ನನ್ನು ಪೂರ್ತಿ ಮುಳುಗಿಸಿಬಿಡುತ್ತೀರಿ. ಬೇಡ, ಬೇಡ ಎಂದು ಹೇಳಿದೆನಪ್ಪ. ನಾನು ಹೇಳಿದ್ದರಲ್ಲಿ ತಪ್ಪಿದ್ದರೆ ತಿಳಿಸಪ್ಪ ಸೀತಾರಾಮು! ನೀನು ಆಯುಸ್ಸು ಹೊಯ್ದುಕೊಂಡು ಅಭಿವೃದ್ಧಿಗೆ ಬಂದು ಚೆನ್ನಾಗಿ ಬದುಕಿ ಬಾಳಬೇಕು ಎಂದು ಈ ಹೆತ್ತ ಹೊಟ್ಟೆ ಹೇಳುವುದಿಲ್ಲವೇ?'

'ಕೇಳದೇ ಏನಮ್ಮ? ಆದರೂ ಅಪ್ಪ ನಿನ್ನ ಮಾತು ತಳ್ಳಿ ಹಾಕಿದ್ದೂ ಕಡೆಗೆ ನೀನು ಸೋತದ್ದೂ ಹೇಗೆ? ಅಪ್ಪನೂ ಯೋಚನೆ ಮಾಡದೇ ಇರುತ್ತಾನೆಯೇ? ನಾನು ಸಾಯಲಿ ಎಂದು ಅಪ್ಪನಿಗೇಕೆ ಇರುತ್ತದೆ?'

'ನಾನು ತೀರ ಹಟಮಾಡಿ, ಅನ್ನ ನೀರು ಬಿಟ್ಟು ಅಳುತ್ತಾ ಮಲಗಿದ್ದಾಗ ನಿನ್ನ ತಂದೆ ಬಂದು ಒಂದು ಮಾತು ಹೇಳಿದರಪ್ಪ: ಹುಡುಗಿಯ ಜಾತಕವನ್ನೇನೋ ಕೇಳಿಬಂದೆಯಲ್ಲ. ಹುಡಗನ ಜಾತಕವನ್ನು ವಿವರವಾಗಿ ಕೇಳಿದೆಯಾ? ಎಂದರು. ನಾನು ಕೇಳಲಿಲ್ಲ. ನಮ್ಮ ಸೀತಾರಾಮುವಿನ ಜಾತಕ ಚೆನ್ನಾಗಿದೆ ಎಂದು ಅವರೇ ಹೇಳಿದ್ದರಲ್ಲ. ನಾನೇಕೆ ಕೇಳಲಿ? ಎಂದೆ. ಆಗ ನಿನ್ನ ತಂದೆ ಹೇಳಿದರು: ನಿನಗೆ ಒಂದು ಗುಟ್ಟು ತಿಳಿಸುತ್ತೇನೆ. ನೀನೂ ಆಲೋಚನೆ ಮಾಡು; ಹುಚ್ಚು ಹಟ ಮಾಡಬೇಡ. ಸೀತಾರಾಮುವಿಗೆ

ಎರಡನೆಯ ಕಂಕಣ ಪ್ರಾಪ್ತಿ ಇದೆ. ಆದ್ದರಿಂದ ಸೀತಾರಾಮುವಿಗೆ ಅಪಾಯವಿಲ್ಲ. ಆ ಸರೋಜಳ ಜಾತಕ ಏನೋ ಕೆಟ್ಟದ್ದು. ಅದು ನನಗೆ ಚೆನ್ನಾಗಿ ಗೊತ್ತಿದೆ. ಆ ಹುಡುಗಿ ಬಹಳ ವರ್ಷ ಇರಲಾರಳು. ನೀನು ಸೀತಾರಾಮುವಿಗೆ ಈಗ ಬೇರೆ ಕಡೆ ಹೆಣ್ಣು ಹುಡುಕುವುದಕ್ಕೆ ಹೋದರೆ ಹೆತ್ತವರು ಯಾರು ಕಂಡೂ ಕಂಡೂ ತಮ್ಮ ಮಗಳನ್ನು ಕೊಟ್ಟಾರು? ಮಾವನಿಲ್ಲದ ನಕ್ಷತ್ರ ಎಂದೇನೋ ತಿಮ್ಮಣ್ಣ ಜೋಯಿಸರು ಹೇಳಿದರು. ಆದರೆ ಪಾದದಲ್ಲಿ ವ್ಯತ್ಯಾಸ ಇದೆ; ದೋಷ ಪ್ರಬಲವಾಗದೇ ಹೋಗಬಹುದು; ಶಾಂತಿ ಮಾಡಿಸಿದ ರಾಯಿತು ಎಂದು ಇತರ ಜೋಯಿಸರು ಹೇಳಿದ್ದಾರೆ. ಭಯಪಡಬೇಡ. ಚೆನ್ನಾಗಿ ಆಲೋಚನೆ ಮಾಡು– ಎಂದು ಹೇಳಿದರು. ನನಗೆ ಅವರ ಮಾತಿನಲ್ಲಿ ನಂಬಿಕೆ ಬರಲಿಲ್ಲ. ನನ್ನನ್ನ ಒಪ್ಪಿಸುವುದಕ್ಕೆ ಏನೋ ಹೇಳುತ್ತಿದ್ದಾರೆ ಎಂದು ನಾನು ಭಾವಿಸಿದೆ. ಆಮೇಲೆ ನನ್ನ ಹಟ ಬಿಟ್ಟು ಊಟಮಾಡಿ ಜೋಯಿಸರ ಮನೆಗೆ ಹೋದೆ. ಏನಪ್ಪಾ ಜೋಯಿಸರೆ! ನಮ್ಮ ಸೀತಾರಾಮುವಿನ ಜಾತಕದ ವಿಚಾರ ಏನು? ನನ್ನ ಯಜಮಾನರು ಏನೋ ಹೇಳುತ್ತಾರಲ್ಲ– ಎಂದು ಕೇಳಿದೆ. ಅದಕ್ಕೆ ಜೋಯಿಸರು, ಹೌದಮ್ಮ! ನಿಮ್ಮ ಹುಡುಗನಿಗೆ ಎರಡನೆಯ ಕಂಕಣ ಪ್ರಾಪ್ತಿ ಇದೆ. ಹುಡುಗನ ಜಾತಕವೂ ಪ್ರಶಸ್ತವಲ್ಲ, ಹುಡುಗಿಯದೂ ಪ್ರಶಸ್ತವಲ್ಲ. ಆದರೆ ಹುಡುಗಿಯದಕ್ಕಿಂತ ಹುಡುಗನದು ಮೇಲು– ಎಂದು ತಿಳಿಸಿದರು. ನಾನು ಇನ್ನು ಹಟಮಾಡಿ ಪ್ರಯೋಜನವಿಲ್ಲ ಎಂದು ತಿಳಿದುಕೊಂಡೆ. ಜೋಯಿಸರನ್ನ ಇನ್ನೊಂದು ಮಾತು ಕೇಳಿದೆ: ಹುಡುಗಿಗೆ ಮಾಂಗಲ್ಯ ಬಲವೇ ಇಲ್ಲ ಎಂದು ಹೇಳಿದಿರಿ. ಹುಡುಗನಿಗೆ ಎರಡನೆಯ ಕಂಕಣಪ್ರಾಪ್ತಿ ಎಂದು ಹೇಳಿದಿರಿ. ಮೊದಲು ಯಾವ ದೋಷ ತಟ್ಟೀತು? ಮುಂದೆ ನಾನು ಏನುಮಾಡಬೇಕು? ಹೇಳಿ ಎಂದು ಕೇಳಿದೆ. ಜೋಯಿಸರು, ಅಮ್ಮ! ಮೊದಲನೆಯ ಹೆಂಡತಿ ಇದ್ದರೂ ಚಿಂತೆಯಿಲ್ಲ, ಎರಡನೆಯ ಮದುವೆ ಒಂದು ಮಾಡಿಬಿಡಿ. ಆ ಎರಡನೆಯ ಹುಡುಗಿಯದು ಒಳ್ಳೆಯ ಜಾತಕ ಆಗಿದ್ದರೆ ಎಲ್ಲ ದೋಷ ಗಳನ್ನೂ ಅದು ಹೊಡೆದುಹಾಕಬಹುದು. ನಿಮ್ಮ ಹುಡುಗನಿಗೆ ಎರಡ

ನೆಯ ಮದುವೆ ಖಂಡಿತ ತಲೆಗೆ ಕಟ್ಟಿದ್ದು. ಜಾತಕದಲ್ಲಿ ಸ್ಪಷ್ಟವಾಗಿದೆ. ಎಂದು ತಿಳಿಸಿದರಪ್ಪ. ನೋಡಿದೆಯಾ ಸೀತಾರಾಮು ! ಮದುವೆಗಳು ಎನ್ನುವುದು ಬರಿ ಬಾಯ ಮಾತಲ್ಲಪ್ಪ ! ಪ್ರಾಣ ಪ್ರಾಣಗಳೇ ಹೋಗಿ ಸಂಸಾರ ಸಂಸಾರಗಳೇ ಕುಸಿದು ಬೀಳುತ್ತವೆ. ಆಮೇಲೆ ತಿಮ್ಮಣ್ಣ ಜೋಯಿಸರನ್ನ ನನ್ನ ವಿಚಾರ ಕೇಳಿದೆ. ಬೇರೆ ಜೋಯಿಸರ ಅಭಿಪ್ರಾಯ ಹೇಳಿದೆ. ಆದಕ್ಕೆ ಅವರು, ನನಗೆ ತೋರಿದ್ದನ್ನು ನಾನು ಹೇಳಿದೇನಮ್ಮ. ಬೇರೆ ಜೋಯಿಸರ ಮಾತು ನನಗೇಕೆ ? ಎಂದುಬಿಟ್ಟರು.'

'ಈಗೆಲ್ಲ ಅರ್ಥವಾಯಿತಮ್ಮ ! ನನಗೆ ದಿಕ್ಕೇ ತೋಚುವುದಿಲ್ಲ. ಮನಸ್ಸಿಗೆ ಒಂದು ದೊಡ್ಡ ಕಳವಳ. ನಿನ್ನನ್ನು ಆಡಿದರೆ ನಾನು ನರಕಕ್ಕೆ ಹೋದೇನು ? ನೀನೇನು ಮಾಡೀಯೆ ? ಎಲ್ಲ ನನಗೆ ಒಳ್ಳೆಯ ದಾಗಲಿ, ನಾನು ಬದುಕಲಿ ಬಾಳಲಿ ಎಂದೇ ಆಲೋಚನೆ ಮಾಡಿ ಹೇಳುತ್ತಿದ್ದೀಯೆ.'

'ನೋಡಿದೆಯಾ ಅಪ್ಪ ! ನನಗೆ ಯಾರ ಮೇಲೆ ದ್ವೇಷವಿದೆ ಯಪ್ಪ ? ಹೇಳು ನೋಡೋಣ. ಈಗ ನನ್ನ ತಲೆಗೆ ಮುಸುಕು ಬಂದ ಮೇಲೆ, ಒಂದು ಅನಾಹುತ ಅಂತೂ ಆಗಿ ಹೋಯಿತಲ್ಲ. ನೆತ್ತಿಯ ಸಂಕಟ ಅನುಭವಿಸಿದೆನಲ್ಲ. ನಾಳೆ ಇನ್ನೊಂದು ಅನಾಹುತ ಆದೀತು. ಬಸಿರ ಸಂಕಟ ಸೇರಿಕೊಂಡೀತು. ಮೊದಲು ನಿನಗೆ ಎರಡನೆಯ ಮದುವೆ ಮಾಡಿಬಿಡಬೇಕು. ಸುತರಾಂ ಸಾವಕಾಶ ಮಾಡಬಾರದು– ಎಂದು ಪೇಚಾಡುತ್ತಿದ್ದೇನೆ. ಈಗ ಎಂತಿದ್ದರೂ ನಮ್ಮ ಹಳ್ಳಿಗೆ ಬಂದಿದ್ದೇವೆ. ಶೀನಪ್ಪನ ಮನೆಯಲ್ಲೇ ಇಳಿದು ಕೊಂಡಿದ್ದೇವೆ. ಅವನು ಹೇಳಿದ ಹುಡುಗಿ ಹಳ್ಳಿಯಲ್ಲೇ ಇದ್ದಾಳೆ. ನೀನು ಕಣ್ಣಿಂದ ನೋಡಪ್ಪ ! ಮುಂದೆ ಅವಳೇ ಆಗುತ್ತಾಳೋ ಬೇರೊಬ್ಬಳು ಆಗು ತ್ತಾಳೋ ಯಾರಿಗೆ ಗೊತ್ತು ? ಈಗ ನೀನು ಮಾತ್ರ ನನ್ನ ಮಾತಿಗೆ ಪ್ರತಿಹೇಳಬೇಡಪ್ಪ!'

'ಅಮ್ಮ ! ಈ ದಿನ ತಾನೆ ನನಗೆ ನನ್ನ ಹಾಳು ಮದುವೆಯ ವಿವರಗಳೆಲ್ಲ ತಿಳಿದಿದ್ದು. ನನಗೆ ಒಂದು ತಿಂಗಳು ವಿರಾಮ ಕೊಡು. ನಾನು ಮೊದಲು ಮನಸ್ಸನ್ನು ಸಮಾಧಾನಕ್ಕೆ ತಂದುಕೊಳ್ಳಬೇಕು.

ಈಗಿನ ಪರಿಸ್ಥಿತಿಯಲ್ಲಿ ಏನು ಮಾಡಬಹುದು ಎಂಬುದನ್ನು ಆಲೋಚನೆ ಮಾಡಬೇಕು. ಈಗ ದೊಡ್ಡ ಸಂಕಟದ ಸಮಸ್ಯೆ ಎದುರಿಗೆ ನಿಂತಿದೆ.'

'ಆಗಲಪ್ಪ, ಆಲೋಚನೆ ಮಾಡು. ಈ ದಿನ ನೀನು ಹುಡುಗಿಯನ್ನು ನೋಡಿದರೆ ಈ ದಿನವೇ ಮುಹೂರ್ತ ನಡೆದು ಹೋಗುತ್ತದೆಯೆ? ಹುಡುಗಿಯನ್ನು ನೋಡುವುದಕ್ಕೆ ನಿನ್ನ ಆಕ್ಷೇಪಣೆ ಏನು? ಬೀದಿಯಲ್ಲಿ ಹೋಗುವ ಎಷ್ಟೋ ಜನರನ್ನು ನೋಡಿದ ಹಾಗೆ ಅವಳನ್ನು ನೋಡಿದೆ ಎಂದು ತಿಳಿದುಕೋ. ನಾನು ಶೀನಪ್ಪನನ್ನು ಕೇಳಿ ಆ ಹುಡುಗಿಯ ಜಾತಕ ತೆಗೆದುಕೊಳ್ಳುತ್ತೇನೆ. ಆಗಬಹುದೇನಪ್ಪ ಸೀತಾರಾಮು?'

'ನನ್ನನ್ನು ಏನೂ ಕೇಳಬೇಡಮ್ಮ! ಈಗ ನಾನು ಬದುಕಿದ್ದರೂ ಒಂದು ಕಷ್ಟವೇ. ಜುಗುಪ್ಸೆಪಟ್ಟುಕೊಂಡು ಪ್ರಾಣಕಳೆದುಕೊಂಡರೂ ಕಷ್ಟವೇ! ದೇವರು ನನ್ನನ್ನು ಎಂಥ ಸ್ಥಿತಿಯಲ್ಲಿ ಸಿಕ್ಕಿಸಿಬಿಟ್ಟಿದ್ದಾನೆ!'

'ಅಪ್ಪಾ ಸೀತಾರಾಮು! ತಾಯಿ ಹೇಳುತ್ತಾಳೆ; ಅವಳ ಮಾತು ಕೇಳಿ ಬಿಡೋಣ; ಅದರ ಪಾಪ ಪುಣ್ಯ ಅವಳ ತಲೆಯ ಮೇಲೆ– ಎಂದು ಗಟ್ಟಿಮನಸ್ಸು ಮಾಡು. ನನ್ನ ಹತ್ತಿರ ಮಾತನಾಡುವಾಗ ನನ್ನಂತೆ, ನಿನ್ನತ್ತೆಯ ಹತ್ತಿರ ಮಾತನಾಡುವಾಗ ನಿನ್ನತ್ತೆಯಂತೆ, ಹೇಗೆಂದರೆ ಹಾಗೆ ತಿರುಗಬೇಡ.'

'ಎರಡು ದಿನ ಮೆಂಟಲ್ ಆಸ್ಪತ್ರೆಯಲ್ಲಿದ್ದು ಬರುತ್ತೇನಮ್ಮ! ನನಗೆ ಬುದ್ಧಿ ಏಕೋ ಹುಚ್ಚುಹುಚ್ಚು ತಿರುಗುತ್ತಿದೆ.'

'ಇನ್ನು ಅದೊಂದು ಸಂಕಟ ನನಗೆ ತಂದಿಡುತ್ತೀಯೇನಪ್ಪ! ಸಾಕು. ಎದ್ದೇಳು, ಹೋಗೋಣ. ಮನಸ್ಸು ಗಟ್ಟಿಮಾಡು. ಮುಂದೆ ನೀನೇ ಸುಖಪಡುತ್ತೀಯೆ. ಈಗಿನ ಹೆಂಡತಿಯ ಮೇಲೆ ಭ್ರಾಂತಿ ಇಟ್ಟುಕೊಂಡಿದ್ದರೆ ಸಂಸಾರಗಳು ಕೂಲಿಹೋಗುತ್ತವೆ. ನಾನೂ ತೀರ ಕೆಟ್ಟುಹೋಗುತ್ತೇನೆ'

ಎಂದು ಹೇಳಿ ಕಾವೇರಮ್ಮ ಎದ್ದಳು. ಸೀತಾರಾಮು ಒಂದು ಯಂತ್ರದಂತೆ ಆಕೆಯನ್ನು ಹಿಂಬಾಲಿಸಿದನು. ಅಲ್ಲಿ ಮುಂದೆ ಜಮೀನು ಕಾಣಿಸಿತು. ಬೆಳೆಯೇನೂ ಇರಲಿಲ್ಲ. ನಾಲ್ಕು ಎಕರೆಯಷ್ಟು ಜಮೀನನ್ನು ಉತ್ತು ಹಾಗೆಯೇ ಬಿಟ್ಟಿದ್ದುದು ಮಾತ್ರ ಕಂಡುಬಂತು. ಅಲ್ಲಿಂದ

ಹಳ್ಳಿಗೆ ಹಿಂದಿರುಗಿದರು. ಕಾವೇರಮ್ಮ ಹೇಳಿದಂತೆ ಶೀನಪ್ಪ ತನ್ನ ತಂಗಿಯನ್ನೂ ಆಕೆಯ ಮಗಳನ್ನೂ ಕರಸಿದನು. ಸೀತಾರಾಮು ಆ ಹುಡುಗಿಯನ್ನು ಮನಸ್ಸಿಲ್ಲದ ಮನಸ್ಸಿನಿಂದ ನೋಡಿದನು. ಸುಮಾರು ಹದಿನೈದು ವರ್ಷ. ಬಾದಾಮಿಬಣ್ಣ; ಹಳ್ಳಿಯ ಹುಡುಗಿಯರಲ್ಲಿ ಚೆಲುವೆ. ಆದರೆ ಸರೋಜಳಿಗೆ ಯಾವ ಅಂಶದಲ್ಲಿಯೂ ಸಮಳಲ್ಲ. ಹುಡುಗಿಯ ಹೆಸರು ಪದ್ಮಾ. ತಂದೆಯಿಲ್ಲದ ಹುಡುಗಿ; ಅಣ್ಣ ತಮ್ಮಂದಿರಿಲ್ಲ, ಅಕ್ಕತಂಗಿಯರೂ ಇಲ್ಲ.

ಬೆಟ್ಟದ ಹಲಸೂರಿನ ಕೆಲಸಗಳೆಲ್ಲ ಮುಗಿದುವು. ಕಾವೇರಮ್ಮನ ಮನಸ್ಸು ಸಮಾಧಾನದಿಂದ ಹಗುರವಾಗಿತ್ತು. ಸೀತಾರಾಮುವಿನ ಮನಸ್ಸು ದುಃಖದಿಂದ ಭಾರವಾಗಿತ್ತು. ತುಮಕೂರಿಗೆ ಹಿಂದಿರುಗಿದರು. ಮನೆಯನ್ನು ಸೇರಿದಾಗ ಸೀತಾರಾಮುವಿನ ಮೇಜಿನ ಮೇಲೆ ಸರೋಜಳ ಕಾಗದ ಕಾದು ಕುಳಿತಿತ್ತು!

# ೧೫. ಬರಿಗೈ ಆಯಿತು

ಬೆಟ್ಟದ ಹಲಸೂರಿನಿಂದ ಹಿಂದಿರುಗಿದಮೇಲೆ ಸೀತಾರಾಮು ಮೊದಲಿನ ಸೀತಾರಾಮುವಾಗಿರಲಿಲ್ಲ. ಮೊದಲು ತಾಯಿಯ ಮೇಲೆ ಏನೋ ಅಸಮಾಧಾನ, ಏನೋ ಕೋಪ ಇದ್ದದ್ದು ಹೋಗಿ ಈಗ ತಾಯಿಯದೇನೂ ತಪ್ಪಿಲ್ಲ, ಆಕೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಹೋದೆ, ಹಿಂದೆ ಆದ ಪ್ರಕರಣಗಳು ತನಗೆ ತಿಳಿದಿರಲಿಲ್ಲ ಎಂಬ ಅಭಿಪ್ರಾಯಗಳು ಅವನ ಮನಸ್ಸಿನಲ್ಲಿ ನಾಟಿದುವು. ಈಗೇನು ಮಾಡಬೇಕು? ಹಾಳು ವಿಧಿಯ ಕೈಯಲ್ಲಿ ಸಿಕ್ಕಿಕೊಂಡು ಸಂಕಟ ಸ್ಥಿತಿಯಿಂದ ಪಾರಾಗಲು ಮಾರ್ಗವೇ ಇಲ್ಲದೆ ಹೋಯಿತಲ್ಲ. ಯಾರನ್ನು ಸಲಹೆ ಕೇಳಿದರೆ ಏನು? ಒಬ್ಬೊಬ್ಬರು ಒಂದೊಂದು ರೀತಿ ಸಲಹೆ ಮಾಡುತ್ತಾರೆ. ರಾಮಣ್ಣ ಹೇಳುವ ಸಲಹೆ ಆಗಲೇ ತಿಳಿದಿದೆ. ಅವನಿಗೆ ಈ ಪ್ರಕರಣಗಳನ್ನೆಲ್ಲ ತಿಳಿಸುವುದರಿಂದ ಆಗುವ ಪ್ರಯೋಜನ ಅಷ್ಟರಲ್ಲಿಯೇ ಇದೆ. ಒಂದು ವಿಚಾರಕ್ಕೆ ತಿಳಿಸದೇ ಇರುವುದೇ ಮೇಲು. ಈಗ ನಾನು ಇನ್ನೊಂದು ಮದುವೆ ಮಾಡಿಕೊಂಡರೆ ಲೋಕನಿಂದೆಗೆ ಗುರಿಯಾಗುತ್ತೇನೆ; ನಿರಪರಾಧಿನಿಯಾದ ಸರೋಜಳನ್ನು ಸಂಕಟಕ್ಕೆ ಸಿಕ್ಕಿಸುತ್ತೇನೆ. ಮಾಡಿಕೊಳ್ಳದೇ ಇದ್ದರೆ ಆ ಕೆಟ್ಟ ಜಾತಕದ ಕೆಟ್ಟ ಫಲದಿಂದ ನಾನೇ ಸಾಯಬಹುದು. ಆಗ ಸರೋಜ ನಿರಂತರ ದುಃಖಕ್ಕೆ ಈಡಾಗುತ್ತಾಳೆ; ತಾಯಿಯೂ ಬಹಳ ಸಂಕಟವನ್ನನುಭವಿಸುತ್ತಾಳೆ. ಒಂದು ವೇಳೆ ಎರಡನೆಯ ಮದುವೆಯನ್ನು ಮಾಡಿಕೊಂಡರೆ ಒಳ್ಳೆಯದಾಗುವ ಸಂಭವವಿರಬಹುದು. ಈಗಿನ ನಿಷ್ಠುರದ ದ್ವೇಷದ ವಾತಾವರಣದಲ್ಲಿ ಎರಡನೆಯ ಮದುವೆಯ ಪ್ರಸ್ತಾಪ ಬಹಳ ಅನರ್ಥಕಾರಿ. ಈ ಸಂದರ್ಭದಲ್ಲಿ ಏನು ಮಾಡಬೇಕು? ಎಂದು ಸೀತಾರಾಮುವಿನ ಮನಸ್ಸಿನಲ್ಲಿ ವಿಚಾರ-ಮಥನ ನಡೆಯುತ್ತಿತ್ತು.

ಸರೋಜಳ ಕಾಗದವನ್ನು ಒಡೆದು ನೋಡಿಕೊಂಡನು. ಅದರ ಸಾರಾಂಶ ಇಷ್ಟೇ: ನಾನು ಭೂಮಿಗೆ ಭಾರವಾಗಿ ಬಹಳ ದಿವಸ ಇರಬಾರದು. ಇದ್ದಷ್ಟು ದಿನ ನನಗೂ ಸಂಕಟ, ನಿಮಗೂ ಕೋಪ.

ನಾನೇನೋ ನಿಮ್ಮ ಪದತಲದಲ್ಲಿ ಪ್ರಾಣಾರ್ಪಣೆ ಮಾಡಲು ಸಿದ್ಧಳಿದ್ದೇನೆ. ಆದರೆ ಈಗ ಹುಟ್ಟಿರುವ ಕಂದನನ್ನು ಬಿಟ್ಟು ಹೇಗೆ ಸಾಯಲಿ ? ಮನಸ್ಸು ಬಾರದಲ್ಲ! ಆ ಕಂದನಿಗಾಗಿ ಈ ಜೀವ ಹಿಡಿದುಕೊಂಡಿರಬೇಕು ಎಂದು ಮನಸ್ಸು ಹೇಳುತ್ತಿದೆಯಲ್ಲ! ನಿಮ್ಮ ಮನಸ್ಸು ಹೀಗೇಕೆ ಕಲ್ಲಾಗಿ ಹೋಯಿತು ? ಹಿಂದೆ ನೀವು ಆಡುತ್ತಿದ್ದ ಪ್ರೇಮದ ಮಾತುಗಳೆಲ್ಲ ಈಗೆಲ್ಲಿ ಹೋದುವು ? ನಿಮಗೆ ನಾನು ಬೇಡವಾಗಿದ್ದರೆ ಹೇಳಿಬಿಡಿ. ನಾನೂ ಮನಸ್ಸನ್ನು ಕಲ್ಲಾಗಿ ಮಾಡಿಕೊಳ್ಳುತ್ತೇನೆ. ನಿಮಗೆ ನಾನು ಬೇಕಾಗಿದ್ದರೆ ಒಂದು ಬಾರಿ ಬಂದುಬಿಟ್ಟು ಹೋಗಿ. ಇತಿ ತಮ್ಮ ಚರಣ ದಾಸಿ—ಸರೋಜ.

ಕಾಗದವನ್ನು ಓದಿಕೊಂಡು, 'ಸರೋಜ! ನೀನು ಹೋಗಿಬಿಟ್ಟರೆ ನನ್ನ ಕಷ್ಟಕ್ಕೆ ಪರಿಹಾರ ದೊರೆತಂತೆಯೇ. ಆದರೆ ನೀನು ಸಾಯಬೇಕೆಂದು ನನ್ನ ಮನಸ್ಸು ಹೇಳುವುದಿಲ್ಲ. ನೀನು ಬದುಕಿರಬೇಕು. ನನ್ನ ಹೆಂಡತಿಯಾಗಿ ಇರಬೇಕು, ನನ್ನೊಡನೆ ಸಂಸಾರವನ್ನು ನಡಸಬೇಕು ಎಂದು ಮನಸ್ಸು ಹೇಳುತ್ತಿದೆ. ಆದರೆ ನನ್ನ ತಾಯಿಯ ಶಂಕೆ ಭೀತಿ ಅಳಿಯಬೇಕು, ನಾನೂ ದೀರ್ಘಾಯುಸ್ಸಿನಿಂದ ಕೂಡಿರಬೇಕು. ಇದಕ್ಕೆ ಮಾರ್ಗ ತೋರಿಸು' ಎಂದು ಗಟ್ಟಿಯಾಗಿಯೇ ಸೀತಾರಾಮು ಹೇಳಿಕೊಂಡನು. ಸರೋಜಳ ಕಾಗದಕ್ಕೆ ಉತ್ತರವನ್ನೇನೂ ಬರೆಯಲಿಲ್ಲ.

ಸೀತಾರಾಮು ಬದಲಾವಣೆ ಹೊಂದಿರುವನೆಂಬುದು ಚಾಣಾಕ್ಷನಾದ ರಾಮಣ್ಣನಿಗೆ ತಿಳಿಯಿತು. ಮೊದಲಿನಷ್ಟು ಹೆಚ್ಚಾಗಿ ಅವನು ರಾಮಣ್ಣನ ಮನೆಗೆ ಹೋಗುತ್ತಿರಲಿಲ್ಲ, ಮೊದಲಿನಂತೆ ತನ್ನ ಸಂಸಾರ ವಿಷಯಗಳನ್ನು – ಮುಖ್ಯವಾಗಿ ತಾಯಿಯ ಮೇಲಿನ ಆರೋಪಣೆಗಳನ್ನು ಹೇಳಿಕೊಳ್ಳುತ್ತಿರಲಿಲ್ಲ, ತನ್ನ ವಿಚಾರವಾಗಿ ಸಲಹೆಗಳನ್ನು ಕೇಳುತ್ತಿರಲಿಲ್ಲ; ಎಲ್ಲಕ್ಕಿಂತ ಮುಖ್ಯವಾಗಿ ಹಿಂದೆ ಶಿವಮೊಗ್ಗದಿಂದ ಕಾಗದ ಬಂತೇ ? ಏನು ಬರೆದಿದ್ದಾರೆ ? ಎಂದು ಮುಂತಾಗಿ ಕುತೂಹಲದಿಂದ ಕೇಳುತ್ತಿದ್ದವನು ಈಗ ಮೈಸೂರು ಸಂಸ್ಥಾನದಲ್ಲಿ ಶಿವಮೊಗ್ಗ ಎಂಬ ಊರಿದೆ ಎಂಬುದನ್ನೇ ತಿಳಿಯದವನಂತೆ ಮಾತು ಕಥೆ ಆಡುತ್ತಿದ್ದುದು ರಾಮಣ್ಣನ ಗಮನಕ್ಕೆ ಬಂತು. 'ಸರಿ. ತಾಯಿಯ ಮಾತಿಗೆ ಮರುಳಾಗಿದ್ದಾನೆ. ನಾಲ್ಕು ದಿನ

ಕಳೆಯಲಿ, ಅವನಿಗೆ ಬುದ್ಧಿ ಬರುತ್ತದೆ. ನಾನು ಹಿಂದೆ ಹೇಳಿದ ಮಾತು ಅವನಿಗೆ ಪಥ್ಯವಾಗಲಿಲ್ಲ. ಮುಂದೆ ಆಗುವ ಅನಿಷ್ಟಗಳನ್ನೆಲ್ಲ ಅನುಭವಿಸುತ್ತಾನೆ ' ಎಂದು ರಾಮಣ್ಣ ತನಗೆ ತಾನೇ ಸಮಾಧಾನ ಹೇಳಿಕೊಂಡನು.

ಸೂರ್ಯೋದಯ, ಮಧ್ಯಾಹ್ನ, ಸೂರ್ಯಾಸ್ತ—ತಪ್ಪದೆ ಭಗವನ್ನಿಯಮದಂತೆ ನಡೆಯುತ್ತಿದ್ದುವು. ಭೂದೇವಿ ನಿತ್ಯವೂ ಸೂರ್ಯದೇವನಿಗೆ ಪೊಡೆಯುರುಳು ಸೇವೆಯನ್ನು ಸಲ್ಲಿಸುತ್ತಿದ್ದಳು. ದಕ್ಷಿಣಾನಿಲ ಕ್ರಮಕ್ರಮವಾಗಿ ನೈರುತ್ಯೇಶಾನ್ಯಮಾರುತವಾಗಿ ಮಾರ್ಪಟ್ಟು ಮೋಡಗಳ ದಳಗಳನ್ನು ಆಕಾಶದ ಥಾಳಿಗೆ ನುಗ್ಗಿಸುತ್ತಿತ್ತು. ಪ್ರಕೃತಿದೇವಿ ಜಡಭರಿತಳಾದಳು. ಸಿಡಿಲು ಗುಡುಗುಗಳ ಆರ್ಭಟದಿಂದ ಲೋಕವೆಲ್ಲ ನಡುಗಿಹೋಯಿತು. ತುಂಗಾನದಿಯ ಪ್ರವಾಹ ಉತ್ತುಂಗವಾಗುತ್ತ ಬಂತು. ತೀರ್ಥಹಳ್ಳಿಯಲ್ಲಿ ರಾಮೇಶ್ವರ ದೇವಸ್ಥಾನದ ಹತ್ತಿರಕ್ಕೆ ನೀರು ಒರುತ್ತಿದೆ ಎಂದು ಆ ಊರಿನ ಜನ ಭಯದಿಂದ ತತ್ತಳಿಸಿದರು. ಸಕ್ಕರೆ ಬಯಲು ಅರ್ಧ ನೀರಿನಲ್ಲಿ ಮುಳುಗಿದೆ ಎಂದು ವರ್ತಮಾನ ಬಂತು. ಶಿವಮೊಗ್ಗದಲ್ಲಿ ಕುಂಬಾರಗುಂಡಿಗೆ ನೀರು ನುಗ್ಗಿತು. ದೊಡ್ಡ ಬ್ರಾಹ್ಮಣರ ಕೇರಿ ಚಿಕ್ಕ ಬ್ರಾಹ್ಮಣರ ಕೇರಿಯ ಮನೆಗಳು ಖಾಲಿಯಾಗತೊಡಗಿದುವು. ಅಡ್ವೋಕೇಟ್ ಸುಬ್ಬರಾಯರ ಮನೆಯ ಪಕ್ಕದ ಸಂದಿನಲ್ಲಿ ನೀರು ನುಗ್ಗುವಂತಾಯಿತು. ತುಂಗಾ ನದಿಯ ಪ್ರವಾಹವು ನಿಮಿಷ ನಿಮಿಷಕ್ಕೂ ಏರುತ್ತಿತ್ತು. ಧಾರಾಕಾರವಾಗಿ ಮಳೆ ಬೀಳುತ್ತಲೇ ಇತ್ತು.

ಊರಿಗೆ ಅಪಾಯ ಒದಗಿದ್ದರೂ ಪ್ರವಾಹದ ಆಂಥ ರುದ್ರರಮಣೀಯ ದೃಶ್ಯವನ್ನು ನೋಡಬೇಕೆಂದು ಕೊಡೆಗಳನ್ನು ಹಿಡಿದುಕೊಂಡು ಸೇತುವೆಯ ಬಳಿಗೆ ಹೊರಟವರು ಎಷ್ಟೋ ಮಂದಿ! ಮನೆಯ ಹಿಂಭಾಗದ ಎತ್ತರದ ದಿಣ್ಣೆಯ ಮೇಲೆ ನಿಂತು ನೋಡುತ್ತಿದ್ದವರು ಎಷ್ಟೋ ಮಂದಿ! ಆ ಪ್ರವಾಹದಲ್ಲಿ ತೇಲಿಕೊಂಡುಬರುತ್ತಿದ್ದ ಮರಗಳೂ, ಬಿದಿರು ಮೆಳೆಗಳೂ ಮೆರವಣಿಗೆಯಲ್ಲಿ ಬರುವ ದೇವರ ರಥಗಳಂತೆ ಒಂದರ ಹಿಂದೆ ಒಂದು ಬಹುದೂರದವರೆಗೂ ಕಾಣಿಸುತ್ತಿದ್ದುವು. ಕಾಡುಗಳಲ್ಲಿ ಕಡಿದು ಹಾಕಿದ್ದ, ಅರಣ್ಯ ಶಾಖೆಯವರು ದಾಸ್ತಾನು ಮಾಡಿದ್ದ ಚೌಬೀನಿ

ಮರಗಳು ಬಿಡಿ ಬಿಡಿಯಾಗಿ, ಗುಂಪು ಗುಂಪಾಗಿ ಹೊಡೆದುಕೊಂಡು ಬರುತ್ತಿದ್ದುವು. ಯಾರ ಮನೆಗಳದೋ ಏನೋ ದೊಡ್ಡ ದೊಡ್ಡ ಹಂಡೆಗಳು ಪ್ರವಾಹದಲ್ಲಿ ತೇಲಿ ಬರುವ ಹಡಗುಗಳಂತೆ ತಲೆಗಳನ್ನಲ್ಲಾಡಿಸುತ್ತ ಭರದಿಂದ ಹೋಗುತ್ತಿದ್ದುವು. ಅಂತಹ ಅಪಾಯ ಪ್ರವಾಹವಾಗಿದ್ದರೂ ಕೆಲವರು ಧೈರ್ಯಶಾಲಿಗಳು ಆ ಹಂಡೆಗಳನ್ನು ತಡೆದು ತರುವುದಕ್ಕಾಗಿ ದೋಣಿಗಳನ್ನೂ ಕಟ್ಟುಮರಗಳನ್ನೂ ಹುಟ್ಟುಗಳಿಂದ ನಡಸುತ್ತ ಆ ಮಳೆಯಲ್ಲಿಯೇ ಸಾಹಸ ಮಾಡುತ್ತಿದ್ದರು. ಅವರ ಸಾಹಸ ಪ್ರಯತ್ನಗಳನ್ನು ಸೇತುವೆಯ ಮೇಲಿದ್ದವರು ಮೆಚ್ಚಿಕೊಳ್ಳುತ್ತ, ಹಂಡೆಯನ್ನು ಹಿಡಿದಾಗ ಭೇಷ್! ಭಲೆ! ಎಂದು ಕೂಗುತ್ತ ಚಪ್ಪಾಳೆ ಹೊಡೆಯುತ್ತಿದ್ದರು. ಮರಣದೊಡನೆ ವಿನೋದ ಯುದ್ಧ ಮಾಡುವ ಪಟುಭಟರಂತೆ ಆ ವೀರ ಅಂಬಿಗರು ಪ್ರವಾಹದೊಡನೆ ಹೋರಾಡಿ ಹಲವು ಹಂಡೆಗಳನ್ನು ಹಿಡಿದು ತಡಿಗೆ ತಂದರು.

ಜನರು ಆ ತುಂಗಾಪ್ರವಾಹವನ್ನು ಮಳೆಯಲ್ಲೇ ನಿಂತು ನೋಡುತ್ತಿದಾರೆ! ಆ ಪ್ರವಾಹದಲ್ಲಿ ಕೊಚ್ಚಿಕೊಂಡು ಬರುತ್ತಿರುವ ಮನುಷ್ಯ ಸಂಸಾರದ ಪ್ರಕೃತಿ ಸಂಸಾರದ ನೂರಾರು ಸಾವಿರಾರು ವಸ್ತುಗಳನ್ನು ನೋಡಿ ನೋಡಿ ಆನಂದಿಸುತ್ತಿದಾರೆ! 'ಅಯ್ಯೋ! ಅಲ್ಲಿ ನೋಡಿ! ಅಲ್ಲಿ ನೋಡಿ! ಒಂದು ಮರದ ತೊಟ್ಟಿಲು ತೇಲಿ ಬರುತ್ತಿದೆ!' ಎಂದು ಯಾರೋ ಕೂಗಿಕೊಂಡರು.! 'ಅಯ್ಯೋ—ಮಗು ಇದೆಯಲ್ಲ! ಯಾರ ಮನೆಯದೋ? ನೋಡಿ, ನೋಡಿ, ಸದ್ಯ ಆ ಮಗುವನ್ನು ಹಿಡಿದು ತನ್ನಿರಪ್ಪ!' ಎಂದು ಧ್ವನಿಗಳು ನೂರಾರು ಕೊರಲುಗಳಿಂದ ಹೊರಟವು. ಅಂಬಿಗರು ಹುಟ್ಟು ಹಾಕುತ್ತ ಹೊರಟರು. ತೊಟ್ಟಿಲು ಎಲ್ಲಿ ತಪ್ಪಿಸಿಕೊಂಡು ಹೋಗಿಬಿಡುತ್ತದೆಯೋ? ಅಲೆಗಳ ಹೊಡೆತದಲ್ಲಿ ತೊಟ್ಟಿಲೆಲ್ಲಿ ಮಗುಚಿಕೊಂಡುಬಿಡುವುದೋ ಎಂದು ಜನರು ಬಿಟ್ಟ ಬಾಯಿ ಬಿಟ್ಟ ಕಣ್ಣುಗಳಿಂದ ನೋಡುತ್ತಿದ್ದರು. ಅಂಬಿಗರ ಎರಡು ಮೂರು ತಂಡಗಳು ಪ್ರವಾಹದ ಎರಡು ಮೂರು ಕಡೆಗಳಲ್ಲಿ ದೋಣಿಗಳನ್ನು ನಡಸುತ್ತ ಆ ತೊಟ್ಟಿಲನ್ನು ಮಗುವಿನ ಸಮೇತ ಹಿಡಿಯಲು ಬಹಳ ಸಾಹಸ ಮಾಡುತ್ತಿದ್ದರು. ಮೊದಲನೆಯ ತಂಡದವರು

ಅದರ ಸಮೀಪಕ್ಕೆ ಹೋಗುವುದರೊಳಗಾಗಿ ಆ ತೊಟ್ಟಿಲು ಮುಂದಕ್ಕೆ ಹಾದುಹೋಗಿತ್ತು. ಅದನ್ನು ದೋಣಿಯವರು ಹಿಂಬಾಲಿಸಿದರು. ಎರಡನೆಯ ತಂಡದವರ ಕೈಗೆ ತೊಟ್ಟಿಲು ಸಿಕ್ಕಿತು! ಭಲೆ! ಭಲೆ! ಭೇಷ್! ಎಂದು ಸೇತುವೆಯ ಮೇಲಿಂದ ಜನಘೋಷವಾಯಿತು. ದೋಣಿಯಲ್ಲಿದ್ದವರು ಮೊದಲು ತೊಟ್ಟಿಲಿಂದ ಮಗುವನ್ನು ಎತ್ತಿಕೊಂಡು ರಕ್ಷಣೆ ಮಾಡಿದರು. ಅನಂತರ ಆ ತೊಟ್ಟಿಲನ್ನು ಹಿಡಿದುಕೊಂಡು, ತಡಿಗೆ ತಿರುಗಿದರು. ಆದರೆ ಈ ಪ್ರಕರಣಗಳೆಲ್ಲ ಆಗುವ ಹೊತ್ತಿಗೆ ದೋಣಿ ಒಂದು ಫರ್ಲಾಂಗ್ ದೂರ ಹೋಗಿಬಿಟ್ಟಿತ್ತು. ಕಾಲು ಗಂಟೆ ಯೊಳಗಾಗಿ ಮಗುವನ್ನು ತಂದು ಅಂಬಿಗರು ತೋರಿಸಿದರು. ಜನರ ಮುತ್ತಿಗೆಯೋ ಮುತ್ತಿಗೆ! ಮಗು ಬದುಕಿದೆ! ಆರು ತಿಂಗಳಿರಬಹುದು! ಮೊದಲು ಬೆಚ್ಚಗೆ ಹೊದ್ದಿಸಿರಿ — ಎಂದು ಮಾತುಗಳಾಗುತ್ತಿದ್ದುವು. ಅಲ್ಲಿದ್ದ ಪುಣ್ಯಾತ್ಮರು ತಮ್ಮ ಅಂಗಿಗಳನ್ನು ಕೆಲವರೂ, ಹೊದ್ದಿದ್ದ ಟವಲ್ಲು ಗಳನ್ನು ಕೆಲವರೂ ಕೊಟ್ಟು ರಕ್ಷಣೆ ಮಾಡಿದರು. ಅದರ ತಾಯಿ ತಂದೆ ಗಳಾರು? ಯಾವ ಊರಿನ ಮಗು ಅದು? ಎಂಬುದನ್ನೆಲ್ಲ ಮುಂದೆ ಪತ್ತೆ ಮಾಡುವ ಸಲುವಾಗಿ ಪೋಲೀಸ್ ಸ್ಟೇಷನ್ನಿಗೆ ವರ್ತಮಾನ ಕೊಟ್ಟರು. ಮಳೆ ಧಾರಾಕಾರವಾಗಿ ಸುರಿಯುತ್ತಲೇ ಇತ್ತು. ತುಂಗಾ ಪ್ರವಾಹ ಉತ್ತುಂಗವಾಗಿ ಹರಿಯುತ್ತಲೇ ಇತ್ತು.

ಮಳೆಗಾಳಿಗಳ ಹೊಡೆತದಲ್ಲಿ ಶಿವಮೊಗ್ಗದ ವಾತಾವರಣವೆಲ್ಲ ಒಂದು ವಾರದಿಂದ ತೀವ ತಂಡಿಗಳಿಂದ ತುಂಬಿಹೋಗಿತ್ತು. ನೆಲವೆಲ್ಲ ಕೆಸರು, ಚರಂಡಿಗಳೆಲ್ಲ ಹೊಲಸು, ಎಲ್ಲಿ ನೋಡಿದರಲ್ಲಿ ಕೊಚ್ಚೆ, ಕುಂಟೆ. ಹೊರಗೆ ತಲೆಹಾಕುವ ಹಾಗಿಲ್ಲ, ನೆಲದ ಮೇಲೆ ಕಾಲಿಡುವ ಹಾಗಿಲ್ಲ. ದುರ್ಗಿ ಗುಡಿಯ ಬಡಾವಣೆ ಕ್ಷೇಮಪ್ರದೇಶದಲ್ಲಿತ್ತು. ಟೌನ್ ಹಾಲಿನ ಸುತ್ತ ತಗ್ಗು ನೆಲದಲ್ಲಿ ಸಣ್ಣ ಸಣ್ಣ ಕೆರೆಗಳಾಗಿದ್ದುವು. ಆಸ್ಪತ್ರೆ ಮತ್ತು ಹೈಸ್ಕೂ ಲುಗಳ ಹತ್ತಿರ ಭಯಭರಿತ ವಾತಾವರಣವಿತ್ತು. ಎಲ್ಲಿ ನೀರು ಅತ್ತ ಕಡೆಗೆ ನುಗ್ಗಿಬರುವುದೋ ಎಂದು ಜನ ಹೆದರಿದ್ದರು ಇಂಥ ಭಯಂಕರ ದಿನಗಳಲ್ಲಿ ಒಂದು ದಿನ ಸರೋಜ, 'ಅಮ್ಮ! ಮಗು ಏಕೋ ಹಾಲನ್ನೇ ಕುಡಿಯುವುದಿಲ್ಲ. ನೆನ್ನೆ ರಾತ್ರಿ ನಿದ್ರೆ ಮಾಡಲಿಲ್ಲ, ಮೈ ಬೆಚ್ಚಗಿರುವ

ಹಾಗಿದೆ. ಸ್ವಲ್ಪ ನೋಡಮ್ಮ!' ಎಂದು ತಾಯಿಗೆ ಹೇಳಿದಳು. ತಾಯಿ ಮಗುವಿನ ಕೈ ಕೊಟ್ಟಿ ಪಕ್ಕೆಗಳನ್ನು ಮುಟ್ಟಿನೋಡಿ, 'ಇದೇನು ಮಾಡು ತ್ತದೆ! ಎರಡು ಕಸ್ತೂರಿಮಾತ್ರೆಗಳನ್ನು ಅರೆದು ಹಾಕಿದರೆ ಹೋಗು ತ್ತದೆ. ಹಾಳು ಮಳೆ, ತಂಡಿ ಗಾಳಿ. ಮಗುವಿಗೆ ಶೀತ ಆಗಿರಬೇಕು. ಬೆಚ್ಚಗೆ ಹೊದ್ದಿಸು' ಎಂದು ಹೇಳಿ ಮೊಲೆಹಾಲಿನಲ್ಲಿ ಕಸ್ತೂರಿಮಾತ್ರೆ ಯೊಂದನ್ನು ತೇದು, ಮಗುವಿಗೆ ಕುಡಿಸಿದಳು. ಬೆಳಗ್ಗೆ, ಮಧ್ಯಾಹ್ನ ಮತ್ತು ಸಾಯಂಕಾಲ ನಡೆದ ಈ ಔಷಧೋಪಚಾರಗಳಿಂದ ಮಗುವಿಗೆ ಗುಣ ವಾಗಲಿಲ್ಲ. 'ಲೇಡಿ ಡಾಕ್ಟರನ್ನು ಕೇಳಿ ಜ್ವರಕ್ಕೆ ಔಷಧ ತೆಗೆದುಕೊಂಡು ಬಾರಪ್ಪ' ಎಂದು ರಘುವಿಗೆ ತಾಯಿ ಹೇಳಿದಳು. ಅವನು ಆಕೆಗೆ ತಿಳಿಸಿ ಔಷಧವನ್ನು ತಂದುಕೊಟ್ಟನು. ಅದರಿಂದಲೂ ಗುಣವಾಗಲಿಲ್ಲ. ಮಗು ಉಸಿರಾಡುವುದೇ ಕಷ್ಟವಾಗಿ ಕಾಣುತ್ತಿತ್ತು. ಆಮೇಲೆ ದೊಡ್ಡ ಡಾಕ್ಟ ರನ್ನು ಕರಸಿ ತೋರಿಸಬೇಕು ಎಂಬ ಆಲೋಚನೆ ಬಂತು. ಕೃಷ್ಣ ರಾಯರು, 'ಮಗುವಿಗೆ ಮೊದಲು ಜ್ವರ ಕಾಣಿಸಿಕೊಂಡಾಗಲೆ ದೊಡ್ಡ ಡಾಕ್ಟರಿಗೆ ಹೇಳಿಕಳಿಸಬೇಕಾಗಿತ್ತೋ ಇಲ್ಲವೋ? ಮೂರು ದಿನ ತಳ್ಳಿದೆ. ಈಗ ಹೇಳಿಕಳಿಸುತ್ತಿದ್ದೀಯೆ' ಎಂದು ತಮ್ಮ ಹೆಂಡತಿಯನ್ನು ಆಕ್ಷೇಪಿ ಸಿದರು. ಆಕೆ, 'ಏನೋ ಸ್ವಲ್ಪ ಮೈ ಬೆಚ್ಚಗಿದ್ದರೆ ಕಸ್ತೂರಿಮಾತ್ರೆ, ಗೋರೋಜನ ಮೊದಲಾದ ಮನೆ ಔಷಧಗಳಿಂದಲೇ ಗುಣವಾಗಿ ಹೋಗುತ್ತೆ. ಎಳೆಯ ಮಗುವಿಗೆ ಎತ್ತಿಕೊಳ್ಳುತ್ತಲೂ ಆಸ್ಪತ್ರೆ ಔಷಧ ವನ್ನು ಯಾರು ಕುಡಿಸುತ್ತಾರೆ? ನನಗೇನು ಮಗುವಿನ ಮೇಲೆ ಅಕ್ಕರೆಯಿ ಲ್ಲವೇ?' ಎಂದು ಉತ್ತರ ಹೇಳಿದಳು. ಮೆಡಿಕಲ್ ಆಫೀಸರನ್ನು ಕರೆ ತರಲು ನಾಗರಾಜ ಆ ಮಳೆಯಲ್ಲಿ ಮೋಟಾರಿನಲ್ಲಿ ಹೋದನು. ಹಿಂದೆ ಹೇಳಿದ ಪ್ರಕರಣಗಳಿಂದ ಆ ಮೆಡಿಕಲ್ ಆಫೀಸರು ಪ್ರವಾಹದಲ್ಲಿ ನೊಂದವರು, ಭಯಪಟ್ಟವರು ಮೊದಲಾದವರಿಗೆ ಔಷಧೋಪಚಾರಗ ಳನ್ನು ಏರ್ಪಾಟು ಮಾಡುವುದಕ್ಕಾಗಿ ಸುತ್ತಾಡುತ್ತಿದ್ದರು. ನಾಗರಾಜ ಆತನನ್ನು ಕಂಡು ಮನೆಯ ವಿದ್ಯಮಾನಗಳನ್ನು ತಿಳಿಸಿ ಮೋಟಾರಿನಲ್ಲಿ ಆತನನ್ನು ಮನೆಗೆ ಕರೆದುಕೊಂಡು ಬಂದನು.

ಮಗುವನ್ನು ಡಾಕ್ಟರು ಪರೀಕ್ಷೆ ಮಾಡಿ, 'ಇದು ನ್ಯೂಮೋನಿಯ

ಕೇಸ್. ಜ್ವರ ನೂರೆರಡು ಡಿಗ್ರಿಗಳಷ್ಟಿದೆ. ಆ್ಯಂಟಿಫ್ಲಾಜಿಸ್ಟಿನ್ ಹಾಕಿ. ಔಷಧವನ್ನು ಕಳಿಸುತ್ತೇನೆ, ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು' ಎಂದು ಹೇಳಿದರು. ಡಾಕ್ಟರು ನಾಗರಾಜನಿಗೆ ಇಂಗ್ಲಿಷಿನಲ್ಲಿ ಹೇಳಿದರೂ ಸರೋಜ ಇಂಟರ್‌ಮೀಡಿಯೇಟ್ ಪ್ಯಾಸ್ ಮಾಡಿದ್ದುದರಿಂದ ಅವಳಿಗೆ ಎಲ್ಲವೂ ಅರ್ಥವಾಯಿತು, ಅವಳ ಕಣ್ಣೀರು ಹರಿದು ಹೋಯಿತು. ಆಸ್ಪತ್ರೆಯಿಂದ ನರ್ಸೊಬ್ಬಳನ್ನು ಕಳಿಸಿಕೊಡುವುದಾಗಿ ಡಾಕ್ಟರು ಹೇಳಿ ಮೋಟಾರಿನಲ್ಲಿ ಹಿಂದಿರುಗಿದರು ರಘು ಔಷಧವನ್ನೂ, ಆ್ಯಂಟಿ ಫ್ಲಾಜಿಸ್ಟಿನ್, ಅದಕ್ಕೆ ಬೇಕಾದ ಹತ್ತಿ, ಲಿಂಟ್ ಬಟ್ಟೆ, ಸುತ್ತುಪಟ್ಟಿ—ಎಲ್ಲವನ್ನೂ ತಂದನು. ಆಸ್ಪತ್ರೆಯಿಂದ ಬಂದ ನರ್ಸು ಮಗುವಿಗೆ ಆ್ಯಂಟಿ ಫ್ಲಾಜಿಸ್ಟಿನ್ನನ್ನು ಹಾಕಿ ಹೊರಟುಹೋದಳು.

ಹೊರಗಿನ ವಾತಾವರಣದಂತೆಯೇ ಆ ಮನೆಯ ವಾತಾವರಣವೂ ನಿರುತ್ಸಾಹಕರವಾಗಿ ಬಾಷ್ಪಭರಿತವಾಗಿ ಪರಿಣಮಿಸಿತು. ಆ ಮೂರು ತಿಂಗಳ ಚಿಕ್ಕ ಜೀವದಲ್ಲಿ ಆ ಮನೆಯ ದೊಡ್ಡ ಜೀವಗಳೆಲ್ಲ ಆನುಕಂಪಕ್ಕೆ ಸಿಕ್ಕಿಕೊಂಡು ಪೇಚಾಡತೊಡಗಿದುವು. ಕೃಷ್ಣರಾಯರು ಕಚೇರಿಗೆ ಹೋಗಲಿಲ್ಲ. ನಾಗರಾಜ ಎರಡು ದಿನಗಳ ರಜ ತೆಗೆದುಕೊಂಡನು. ತುಳಸಾಬಾಯಿಯಂತೂ ಮಗುವಿನ ತೊಟ್ಟಿಲು ಬಿಟ್ಟು ಕದಲಲಿಲ್ಲ.

ಮಗುವಿಗೆ ಜ್ವರದ ವೇಗ ಇಳಿಯಲಿಲ್ಲ ಎಷ್ಟು ಬಾರಿ ಉಷ್ಣಮಾಪಿಯನ್ನಿಟ್ಟು ನೋಡಿದರೂ 102°-103° ಡಿಗ್ರಿಗಳಷ್ಟು ಜ್ವರ ಕಂಡುಬರುತ್ತಿತ್ತು. ಸಾಲದ್ದಕ್ಕೆ ಪಕ್ಕೆಗಳನ್ನು ಎತ್ತಿಹಾಕುವುದು, ಉಸಿರಾಡುವುದಕ್ಕೆ ಕಷ್ಟಪಡುವುದು, ಒಮ್ಮೊಮ್ಮೆ ಕಣ್ಣುಗಳನ್ನು ಅಗಲವಾಗಿ ತೆರೆದು ನೋಡುವುದು,—ಈ ದುರ್ಲಕ್ಷಣಗಳೆಲ್ಲ ಕಂಡ.ಬರುತ್ತಿದ್ದುವು. ಸರೋಜ ತನ್ನ ಮಗುವಿನ ಮುಖವನ್ನೇ ನೋಡುತ್ತ ಕಣ್ಣೀರನ್ನೊರಸಿಕೊಳ್ಳುತ್ತ, ಹಾಲೇನಾದರೂ ಕುಡಿಯುತ್ತದೆಯೋ ಏನೋ ನೋಡೋಣವೆಂದು ಅರ್ಧಗಂಟೆಗೊಮ್ಮೆ ಪರೀಕ್ಷೆಮಾಡುತ್ತ, ಆ ಮಗು ಕುಡಿಯದೇ ಹೋದಾಗ 'ಅಯ್ಯೋ ನನ್ನ ಕಂದ! ಕಂದ! ಎರಡು ದಿನಗಳಿಂದ ಒಂದು ತೊಟ್ಟು ಹಾಲೂ ಹೊಟ್ಟೆಗೆ ಹೋಗಿಲ್ಲವಲ್ಲ' ಎಂದು ಉದ್ಗಾರ ತೆಗೆಯುತ್ತಿದ್ದಳು. ತುಳಸಾಬಾಯಿ ತನ್ನ ಮಗಳನ್ನು ಸಮಾಧಾನಪಡಿಸುತ್ತಿದ್ದಳು. ಆಕೆ

ದೇವರ ಮನೆಗೆ ಹೋಗಿ ಮುಡಿಪು ಕಟ್ಟಿಟ್ಟು, 'ನಮ್ಮಪ್ಪ ಶ್ರೀನಿವಾಸ! ವೆಂಕಟರಮಣ! ಮಗುವನ್ನು ಬದುಕಿಸಿಕೊಡಪ್ಪ! ಚೌಲಕ್ಕೆ ತಿರುಪತಿ ಬೆಟ್ಟಕ್ಕೇನೇ ಬರುತ್ತೇವೆ. ಬಂಗಾರದಲ್ಲಿ ವಿಗ್ರಹ ಮಾಡಿಸಿ ನಿನ್ನ ಹುಂಡಿ ಯಲ್ಲಿ ಹಾಕುತ್ತೇವೆ' ಎಂದು ಹರಕೆಮಾಡಿಕೊಂಡಳು.

ಆ ದಿನ ಮಧ್ಯಾಹ್ನದ ಮೇಲೆ ಹೊರಗಡೆ ಮಳೆ ನಿಂತು ಸ್ವಲ್ಪ ಸ್ವಲ್ಪವಾಗಿ ಸೂರ್ಯನು ಇಣಿಕಿ ನೋಡುವಂತಾಯಿತು. ಬೀದಿಗಳಲ್ಲಿ ಜನಗಳ ಓಡಾಟ ಎಂದಿನಂತೆ ಪ್ರಾರಂಭವಾಯಿತು. ಅವರವರು ತಂತಮ್ಮ ಕೆಲಸಗಳಿಗೆ ಹೋಗುತ್ತಿದ್ದರು. ಲೋಕ ಎಂದಿನಂತೆ ಚೇತನಗೊಂಡು ನಡೆಯ ತೊಡಗಿತು. ಮಳೆಯಿರಲಿ ಬಿಸಿಲಿರಲಿ, ಬೆಳಕಿರಲಿ ಕತ್ತಲೆಯಿರಲಿ ಮನೆಯಲ್ಲಿ ರೋಗಿಗಳಿದ್ದರೆ ಎಲ್ಲರೂ ಆತಂಕ ಪಡುವವರೇ ಆಗಿರುತ್ತಾರೆ. ಅಯ್ಯೋ ಪಾಪ! ಕೈಯಲ್ಲಿ ಸೀಸೆ ಹಿಡಿದು ಕೊಂಡು, ಬೈಸ್ಕಲ್ ತುಳಿಯುತ್ತ ವೈದ್ಯನ ಬಳಿಗೆ ಭರದಿಂದ ಹೋಗು ತ್ತಿರುವ ಆ ಹುಡುಗನನ್ನು ನೋಡಿ! ತಾಯಿಗೆ ಕಾಯಿಲೆಯೆ? ತಂದೆಗೆ ಕಾಯಿಲೆಯೆ? ದೊಡ್ಡ ಜೀವಕ್ಕೆ ಅಲ್ಲ. ಎಳೆಯ ಮಗುವಿಗೆ ಕಾಯಿಲೆಯೆ? ಹೋಗಪ್ಪಾ ಹೋಗು. ಮೊದಲು ವೈದ್ಯನನ್ನು ಕಂಡು ಔಷಧ ತಂದುಕೊಡು. ದೇವರಿಗೆ ಕರುಣೆ ಬರಲಿ! ನಿಮ್ಮ ಮನೆಯ ಮಗುವಿಗೆ ಗುಣವಾಗಲಿ, ನಮ್ಮ ಸರೋಜಳ ಮಗುವಿಗೂ ಗುಣವಾಗಲಿ. ಗಂಡ ತೊರೆದ ಹೆಣ್ಣು ಕಣ್ಣೀರು ಬಿಡುತ್ತಿದಾಳೆ! ಲವಕುಶರನ್ನು ಆಡಿಸಿ ಕೊಂಡು, ಪಾಲಿಸಿಕೊಂಡು, ಸೀತಾದೇವಿ ತನ್ನ ದುಃಖವನ್ನು ಮರೆತಳು. ತನ್ನ ಮಗುವನ್ನು ಕಳೆದುಕೊಂಡರೆ ಸರೋಜ ಯಾರನ್ನು ನೋಡಿಕೊಂಡು ದುಃಖವನ್ನು ಮರೆತಾಳು?

ಜಟಕಾಗಾಡಿಯಲ್ಲಿ ಆ ಮನೆಯ ಮುಂದೆ ಇಳಿದ ವೈದ್ಯನಾರು? ಕೈಯಲ್ಲಿ ಆಕರ್ಷಕದ ರಬ್ಬರ್ ಕೊಳವೆಗಳನ್ನು ಹಿಡಿದುಕೊಂಡು ಕೆಳಕ್ಕೆ ಇಳಿಯುತ್ತಿದಾನೆ! ಮನೆಯಿಂದ ಯಜಮಾನ ಆತುರದಿಂದ ಬಂದು ಒಳಕ್ಕೆ ಕರೆದೊಯ್ಯುತ್ತಿದಾನೆ! ಯಾರಿಗೆ ಕಾಯಿಲೆ? ಯಜಮಾನಿಗೆ ಕಾಯಿಲೆಯೆ? ಅಲ್ಲ. ಯಜಮಾನಿ ತೊಡೆಯಲ್ಲಿ ಮಗುವನ್ನು ಮಲಗಿಸಿ ಕೊಂಡು ಕಣ್ಣೀರ ಮುಖವನ್ನು ಮೇಲಕ್ಕೆತ್ತಿ ವೈದ್ಯನನ್ನು ದೈನ್ಯದೃಷ್ಟಿ

ಯಿಂದ ನೋಡುತ್ತಿದಾಳೆ! ನಾಡಿಯನ್ನು ಹಿಡಿದು ನೋಡಿದ್ದಾಯಿತು, ಜ್ವರದ ತಾಪವನ್ನು ನೋಡಿದ್ದಾಯಿತು, ಶ್ವಾಸಕೋಶಗಳನ್ನು ಪರೀಕ್ಷಿಸಿದ್ದಾಯಿತು.

ಎಲೈ ಧನ್ವಂತರಿಯೆ! ಅಮೃತಕಳಶದಿಂದ ಒಂದು ತೊಟ್ಟು ಅಮೃತವನ್ನು ಆ ಮಗುವಿನ ಬಾಯಿಗೆ ಕೊಡಲಾರೆಯಾ? ಸಾಯುವ ಮನುಷ್ಯರಿಗೆ ಅಮೃತವನ್ನು ಎರೆದರೆ ಪುಣ್ಯವುಂಟು ಅಮರರಿಗೆ ಅಮೃತವೇಕೆ? ಈ ಪಾಪಿ ಭೂಲೋಕಕ್ಕೆ ಅಮೃತವನ್ನು ಕೊಂಡು ಬಾ! ದೇವಲೋಕದಿಂದ ಬೆಂಕಿಯನ್ನು ಕದ್ದು ತಂದು ಮನುಷ್ಯ ಲೋಕವನ್ನು ಉದ್ಧಾರ ಮಾಡಿದ ಪ್ರೊಮಿತಿಯಸ್ಸಿನಂತೆ, ದೇವಲೋಕದಿಂದ ಅಮೃತವನ್ನು ಭೂಲೋಕಕ್ಕೆ ಕದ್ದು ತಂದು ನಮ್ಮನ್ನು ಉದ್ಧಾರ ಮಾಡು. ಅಯ್ಯೋ! ದೇವೇಂದ್ರನಿಗೇಕೆ ಮನುಷ್ಯರ ಮೇಲೆ ಮತ್ಸರವೋ? ಭೂಲೋಕದಲ್ಲಿ ಅಮೃತವನ್ನು ಸಿದ್ಧಗೊಳಿಸುತ್ತಿದ್ದ ನಾಗಾರ್ಜುನನನ್ನು ಆ ಪಾಪಿ ದೇವೇಂದ್ರನು ತಡೆದನೇಕೆ?

ಆಚೆಯ ಮನೆಯಲ್ಲಿಯೂ ಮಗುವಿಗೆ ಕಾಯಿಲೆಯೆ? ಲೋಕವೆಲ್ಲ ನರಳುವ ಎಳೆಯ ಮಕ್ಕಳಿಂದ ತುಂಬಿಹೋದಂತೆ ಕಾಣುತ್ತಿದೆಯಲ್ಲ! ಯಮಭಟರ ಧಾಳಿ ಈ ಎಳೆಯ ಮಕ್ಕಳ ಮೇಲೆಯೇ ಏಕಾಗುತ್ತಿದೆ? ಎಲ್ಲ ಮಕ್ಕಳೂ ಬದುಕಿಕೊಳ್ಳಲಿ! ನಮ್ಮ ಸರೋಜಳ ಮಗುವೂ ಬದುಕಿಕೊಳ್ಳಲಿ!

ಹಗಲು ಮುಗಿಯಿತು, ರಾತ್ರಿ ಕಾಲಿಕ್ಕಿತು. ಕಾಯಿಲೆ ಇರುವ ಮನೆಯಲ್ಲಿ ಹಗಲು ಏನೋ ಒಂದು ಧೈರ್ಯ, ರಾತ್ರಿ ಕಾಲಕ್ಕಿತೆಂದರೆ ಮೃತ್ಯುವಿನ ಛಾಯೆ ಮನೆಯ ಮೇಲೆ ಬಿದ್ದಂತೆ ಏನೋ ಭಯ. ಅಮಾವಾಸ್ಯೆಯ ಕರಾಳ ರಾತ್ರಿಯಾದರೆ ಒಳಗಿನ ವಿದ್ಯುದ್ದೀಪಗಳಿಗೂ ಅಪಮೃತ್ಯು ಹಿಡಿಯುತ್ತದೆ. ಮಗುವಿಗೆ ಗುಣವಾದೀತೇ? ಗುಣವಾಗಲಪ್ಪ ದೇವರೇ! ಎಂದು ಮನಸ್ಸಿನಲ್ಲಿ ಆಡಿಕೊಳ್ಳುತ್ತಿದ್ದ ಹಾಗೆಯೇ ಮನೆಯ ದೀಪಗಳು ಆರಿಹೋದುವು. ಹೊರಗೆ ಬೀದಿಯ ದೀಪಗಳೂ ಆರಿಹೋದವು. ಕಗ್ಗತ್ತಲೆ ಶಿವಮೊಗ್ಗದಲ್ಲಿ ಕವಿದುಕೊಂಡಿತು. ಹಳೆಯ ಲಾಂದ್ರಗಳನ್ನೂ, ಮೊಂಬತ್ತಿಗಳನ್ನೂ ಹಣತೆಗಳನ್ನೂ ಹುಡುಕಿ,

ಒಂದೊಂದನ್ನಾಗಿ ಹಚ್ಚಿ ಬಾಣಂತಿಯ ಕೋಣೆಯಲ್ಲಿ, ಹಾಲಿನಲ್ಲಿ, ಮುಂದುಗಡೆಯ ಕೊಟಡಿಗಳಲ್ಲಿ, ಅಡಿಗೆಯ ಮನೆಯಲ್ಲಿ ಇಟ್ಟದ್ದಾಯಿತು. ವಿದ್ಯುದ್ದೀಪಗಳಿಗೆ ಪಳಗಿದ ಕಣ್ಣುಗಳಿಗೆ ಆ ದೀಪಗಳು ಬೆಳಗುತ್ತಿದ್ದರೂ ಮಂಕುಮಂಕಾಗಿ ಸುತ್ತಲ ಪದಾರ್ಥಗಳೇ ಕಾಣಲೊಲ್ಲವು. ಆ ದೀಪ ಗಳನ್ನು ಸ್ವಲ್ಪ ಬಿಟ್ಟು ಕತ್ತಲೆಯ ಮೊತ್ತ ಸಮಯ ನಿರೀಕ್ಷಣೆ ಮಾಡುವ ಮೃತ್ಯುವಿನ ಬಳಗದಂತೆ ಮೂಲೆಗಳಲ್ಲಿ ಅಡಗಿಕೊಂಡಿತು. ಗಾಳಿ ನುಗ್ಗ ದಂತೆ ಬೀದಿಯ ಬಾಗಿಲನ್ನೂ ಕಿಟಕಿಗಳನ್ನೂ ಮುಚ್ಚಿದ್ದಾಯಿತು. ಆ ಮಬ್ಬು ಬೆಳಕಿನಲ್ಲಿ ಇಷ್ಟು ಜನಗಳ ಓಡಾಟ ಪ್ರೇತಗಳ ಓಡಾಟದಂತೆ ಕಂಡುಬರುತ್ತಿತ್ತು. ಅಂತಹ ದುಶ್ಯಕುನಗಳ ದುರ್ಲಕ್ಷಣಗಳ ವಾತಾ ವರಣ ಕೃಷ್ಣರಾಯರ ಮನೆಯಲ್ಲಿ ತುಂಬಿತ್ತು. ತುಳಸಾಬಾಯಿ ಬಾಣಂ ತಿಯ ಕೊಟಡಿಯಲ್ಲಿ ಮೌನವಾಗಿ ಕುಳಿತಿದ್ದ ನಾಗರಾಜನನ್ನು ಅವನ ಕೊಟಡಿಗೆ ಕರೆದುಕೊಂಡು ಹೋಗಿ, ಬಾಗಿಲನ್ನು ಓರೆಮಾಡಿ,

'ಅಪ್ಪಾ ನಾಗರಾಜ! ಸ್ವಾರಸ್ಯ ಏನೂ ಕಾಣುವುದಿಲ್ಲಪ್ಪ. ಮತ್ತೊಮ್ಮೆ ಹೋಗಿ ಡಾಕ್ಟರನ್ನು ಕರೆದುಕೊಂಡು ಬಾ! ಬಂದು ನೋಡಲಿ' ಎಂದು ಹೇಳಿದಳು.

'ಏಕಮ್ಮ ಗಾಬರಿ ಮಾಡುತ್ತೀಯೆ? ಮಗು ನಿದ್ರೆ ಮಾಡುತ್ತಾ ಇದೆ. ಒಮ್ಮೊಮ್ಮೆ ಏನೋ ಕಣ್ಣು ಅರಳಿಸಿ ನೋಡುತ್ತದೆ. ಅಷ್ಟೇ. ಬೇಕಾಗಿದ್ದರೆ ಡಾಕ್ಟರನ್ನು ಕರೆದುಕೊಂಡು ಬರುತ್ತೇನೆ' ಎಂದು ನಾಗರಾಜ ಹೇಳಿದನು.

'ಅಯ್ಯೋ! ಅದು ನಿದ್ರೆ ಅಲ್ಲಪ್ಪ! ನಿನಗೆ ಈ ಅವಲಕ್ಷಣಗಳೆಲ್ಲ ಏನು ಗೊತ್ತು? ನಾನು ಎರಡು ಕೂಸುಗಳನ್ನು ಕಳೆದುಕೊಂಡವಳು. ಆ ಲಕ್ಷಣಗಳನ್ನೆಲ್ಲ ಕಂಡವಳು. ತಾಯಿಯ ಪರಿಸೆ ಈಗ ಮಗಳಿಗೂ ಬಂತು. ಅಯ್ಯೋ ಸರೋಜ! ನಿನ್ನ ಹೊಟ್ಟೆಯಾದರೂ ತಣ್ಣಗಿರಲಿ ಎಂದರೆ ಚೊಚ್ಚಲಿಗೇನೇ ಹೀಗಾಗಬೇಕೆ? ನೀನು ಹೋಗಿ ಬಾರಪ್ಪ ನಾಗರಾಜ! ಕೆಟ್ಟದಿನ, ದೀಪಗಳು ಬೇರೆ ಹೋಗಿಬಿಟ್ಟವೆ. ಮೆಲ್ಲಗೆ ಆ ಮಗುವನ್ನು ಮನೆಯ ಹಿಂದಿನ ಕೊಟ್ಟಿಗೆಗೆ ಸಾಗಿಸಿದ್ದರೆ ಆಗಿತ್ತು. ಅದನ್ನು ಹೇಗೆ ತೆಗೆದುಕೊಂಡು ಹೋಗುವುದಪ್ಪ? ಸರೋಜ ಆ

ಮಗುವನ್ನು ಬಿಟ್ಟಾಳೆಯೇ? ಅವಳನ್ನು ಹಿಡಿಯುವುದು ಹೇಗೆ? ನನಗಂತೂ ಕೈಕಾಲೇ ಬಿದ್ದುಹೋಯಿತು. ನೀನು ಹೋಗಿ ಬಾ! ದೇವರ ಮೇಲೆ ಎಲ್ಲ ಭಾರವನ್ನೂ ಹಾಕಿದ್ದೇನೆ.'

'ಆಗಲಮ್ಮ. ನಾನು ಹೋಗಿ ಡಾಕ್ಟರನ್ನು ಕರೆದುಕೊಂಡು ಬರುತ್ತೇನೆ. ನೀನೂ ಗಾಬರಿ ಮಾಡಿಕೊಂಡು ಸರೋಜಳಿಗೂ ಗಾಬರಿ ಹಿಡಿಸಬೇಡ.'

'ನನಗೇನು ಅಷ್ಟು ಬುದ್ಧಿಯಿಲ್ಲವೇ?'

ನಾಗರಾಜ ಮೋಟಾರಿನಲ್ಲಿ ಹೋಗಿ ಅರ್ಧ ಗಂಟೆಗೆ ದೊಡ್ಡ ಡಾಕ್ಟರನ್ನು ಕರೆದುಕೊಂಡು ಬಂದನು. ಆ ಡಾಕ್ಟರು ಮೃತ್ಯುವಿನೊಡನೆ ಹೋರಾಟ ನಡಸಲು ಬೇಕಾದ ಆಯುಧಗಳನ್ನು ಸಜ್ಜುಮಾಡಿಕೊಂಡು ಬಂದಿದ್ದನು. ಮನುಷ್ಯರಲ್ಲಿ ವೈದ್ಯವರ್ಗ ಮರಣದೊಡನೆ ಸಾಹಸ ಯುದ್ಧಕ್ಕೆ ತೊಡಗಿದೆ. ಪ್ಲೇಗು, ಕಾಲರಾ, ಇನ್‌ಫ್ಲೂಯಂಜ, ವಿಷಮ ಶೀತಜ್ವರ ಮೊದಲಾದ ಪಟುಭಟರ ಸೇನಾಧಿಪತ್ಯದಲ್ಲಿ ಮರಣ ದೇವತೆ ಮನುಷ್ಯನಮೇಲೆ ಆಕ್ರಮಣ ಮಾಡುತ್ತದೆ. ಆ ಶತ್ರುಗಳಿಗೆ ತಕ್ಕ ಪ್ರತ್ಯಸ್ತ್ರಗಳನ್ನು ತಪಸ್ಸಿನಿಂದ ಸಂಪಾದಿಸಿ ವೈದ್ಯರು ಮನುಷ್ಯರನ್ನು ಆ ರೋಗಗಳಿಂದ ಬಹುಮಟ್ಟಿಗೆ ಮುಕ್ತರನ್ನಾಗಿ ಮಾಡಿದ್ದಾರೆ. ಭೇದೋಪಾಯದಿಂದ ಶತ್ರುಗಳ ಗುಟ್ಟನ್ನು ತಿಳಿದು, ಅವರ ವಿಷಮಾಸ್ತ್ರಗಳನ್ನು ಅವರ ಮೇಲೆಯೇ ಪ್ರಯೋಗಿಸಿ ಅವರನ್ನು ನಿಶ್ಶಕ್ತರನ್ನಾಗಿ ಮಾಡಿದ್ದಾರೆ. ಬ್ರಹ್ಮನ ಲೇಖನಿಯಿಂದ ಮನುಷ್ಯರ ಹಣೆಯಬರಹಗಳನ್ನು ಬೇರೆಯಾಗಿ ಬರಸಿದ್ದಾರೆ; ಮನುಷ್ಯರ ಸರಾಸರಿ ಆಯುಃಪ್ರಮಾಣವನ್ನು ಬ್ರಹ್ಮನೇ ವಿಧಿಯಿಲ್ಲದೆ ಹೆಚ್ಚಿಸುತ್ತ ಹೋಗಬೇಕಾಗಿದೆ. ಬ್ರಹ್ಮನಿಗೆ ಪ್ರತಿ ಬ್ರಹ್ಮನಾಗಿರುವ ಅಂತಹ ವೈದ್ಯನನ್ನೂ ಮೃತ್ಯು ಕಟ್ಟಕಡೆಯಲ್ಲಿ ಆಹುತಿ ತೆಗೆದುಕೊಳ್ಳುವಾಗ ಸರೋಜಳ ಎಳೆಯ ಮಗು ಆ ಮೃತ್ಯುವನ್ನು ಏನು ಪ್ರತಿಭಟಿಸೀತು?

ಡಾಕ್ಟರು ಮಗುವನ್ನು ಪರೀಕ್ಷಿಸಿ ಒಂದು ಇಂಜೆಕ್ಷನ್ ಕೊಡುವುದಕ್ಕೆ ಸಿದ್ಧಮಾಡಿಕೊಂಡನು. ಸರೋಜಳ ಕರುಳು ನೋವಿನಿಂದ ನುಲಿಯಿತು. 'ಸೂಜಿಯಿಂದ ಚುಚ್ಚಬೇಡಿ, ಬೇಡಿ' ಎಂದು ಕೈ ಅಡ್ಡವಿಟ್ಟು

ತಡೆಯುವುದಕ್ಕೆ ಹೋದಳು. ನಾಗರಾಜ ಅವಳನ್ನು ಹಿಂದಕ್ಕೆ ಎಳೆದು ಕೊಂಡು, 'ಸುಮ್ಮನಿರು ಸರೋಜ! ಇಂಜೆಕ್ಷನ್ ಕೊಡುತ್ತಾರೆ, ಮಗುವಿಗೆ ಗುಣವಾಗುತ್ತದೆ' ಎಂದು ಸಮಾಧಾನ ಹೇಳಿದನು. 'ನನ್ನ ಎಳೆಯ ಕಂದನಿಗೆ ಚುಚ್ಚಬೇಡಿ' ಎಂದು ಸರೋಜ ಗಟ್ಟಿಯಾಗಿ ಅಳ ತೊಡಗಿದಳು. ಅವಳನ್ನು ನೋಡಿ ತುಳಸಾಬಾಯಿ ಅಳುತ್ತಾ ನಿಂತು ಬಿಟ್ಟಳು. ಡಾಕ್ಟರು ಇಂಜೆಕ್ಷನ್ ಕೊಟ್ಟು ಕೊಟಡಿಯಿಂದ ಹೊರಕ್ಕೆ ಬರುತ್ತಾ ಕೃಷ್ಣರಾಯರೊಡನೆ, 'ನಿಮಗೆ ಭರವಸೆಯನ್ನೇನೂ ಕೊಡ ಲಾರೆ. ಕೊನೆಯುಸಿರು ಇರುವವರೆಗೂ ಮಾಡುವ ಚಿಕಿತ್ಸೆ ಮಾಡಿ ನೋಡೋಣ. ಈ ರಾತ್ರಿ ಕಳೆಯಬೇಕು' ಎಂದು ಹೇಳಿದರು. ನಾಗ ರಾಜ ಸರೋಜಳನ್ನು ತಾಯಿಯ ವಶಕ್ಕೆ ಕೊಟ್ಟು ಹೊರಕ್ಕೆ ಬಂದನು. ಡಾಕ್ಟರು ತಮ್ಮ ಮನೆಗೆ ವಾಪಸು ಹೋದರು.

ಹುಡುಗರೆಲ್ಲರ ಊಟಗಳಾದುವು. ತುಳಸಾಬಾಯಿ, 'ನಾನಿಲ್ಲಿ ನೋಡಿಕೊಳ್ಳುತ್ತೇನೆ. ನೀವೂ ನಾಗರಾಜ ಊಟಮಾಡಿಕೊಂಡು ಬನ್ನಿ. ಸರೋಜಳನ್ನು ಕರೆದುಕೊಂಡು ಹೋಗಿ. ಅವಳು ನಿನ್ನೆಯಿಂದ ಒಂದು ತುತ್ತು ಅನ್ನವನ್ನೂ ತಿಂದಿಲ್ಲ' ಎಂದು ಹೇಳಿದಳು. ಸರೋಜ ತನಗೆ ಊಟ ಬೇಕಿಲ್ಲವೆಂದು ಹಟಮಾಡಿದಳು. ಕಡೆಗೆ ತಂದೆ ಮತ್ತು ಅಣ್ಣ ಬಲಾತ್ಕಾರಮಾಡಿ ಕರೆದುಕೊಂಡು ಹೋದರು. ದುಃಖದಿಂದ ಹೊಟ್ಟೆ ತುಂಬಿರುವಾಗ ಯಾರಿಗೆ ಅನ್ನ ಇಳಿದೀತು? ಊಟದ ಶಾಸ್ತ್ರ ಮಾಡಿ ಕೊಂಡು ಐದು ನಿಮಿಷಗಳಲ್ಲಿ ಹಿಂದಿರುಗಿದರು. ಆ ಬಳಿಕ ತುಳಸಾ ಬಾಯಿ ಹೋಗಿ ಎರಡು ತುತ್ತು ಹೊಟ್ಟೆಗೆ ಹಾಕಿಕೊಂಡು ಬಂದಳು. ರಾತ್ರಿ ಹತ್ತು ಗಂಟೆಯಾಯಿತು. ತುಳಸಾಬಾಯಿ ನಾಗರಾಜನಿಗೆ, 'ನೀನು ಮಲಗಿಕೋ ಹೋಗಪ್ಪ, ನಾವು ನೋಡಿಕೊಳ್ಳುತ್ತೇವೆ' ಎಂದು ಹೇಳಿ ಕಳಿಸಿಕೊಟ್ಟಳು. ಸುಖ ಸಂತೋಷಗಳಲ್ಲೇ ಬೆಳೆದಿದ್ದ ನಾಗರಾಜನಿಗೆ ಆ ಎರಡು ದಿನಗಳ ಅನುಭವ ಒಂದು ಹೊಸ ಪ್ರಪಂಚವಾಗಿ ಕಂಡು ಬಂದಿತು. ಅವನಿಗೂ ಓಡಾಟ, ಪೇಚಾಟ, ಮನಸ್ಸಿನ ಕಳವಳಗ ಳಿಂದ ಸುಸ್ತಾಗಿ ಹೋಗಿತ್ತು. ಅವನು ಕೊಟಡಿಗೆ ಹೋಗಿ ಮಲಗಿ ಕೊಂಡನು.

ಶಿವಮೊಗ್ಗದ ಬೀದಿಗಳಲ್ಲಿ ಕಗ್ಗತ್ತಲೆ ಕವಿದಿತ್ತು. ದುರ್ಗಿಗುಡಿಯ ಬಡಾವಣೆಯಲ್ಲಿ ರಸ್ತೆಯ ಪಕ್ಕದ ಮರಗಳು ಭೂತಗಳಂತೆ ಕಾಣುತ್ತಿದ್ದುವು. ಕೃಷ್ಣರಾಯರ ಮನೆಯಲ್ಲಿ ಬಾಣಂತಿಯ ಕೊಟಡಿಯಲ್ಲೊಂದು ಲಾಂದ್ರದ ದೀಪ ಉರಿಯುತ್ತಿತ್ತು; ಹಾಲಿನಲ್ಲೊಂದು ದೀಪ ಉರಿಯುತ್ತಿತ್ತು. ಕೃಷ್ಣರಾಯರು ಬಾಣಂತಿಯ ಕೊಟಡಿಯ ಮುಂದುಗಡೆ ಹಾಸಿಗೆಯನ್ನು ಹಾಕಿಕೊಂಡು ಮಲಗಿದರು. ತುಳಸಾಬಾಯಿ ತೊಟ್ಟಿಲ ಬಳಿಯೇ ಕುಳಿತಿದ್ದು ಮಗು ಸಂಕಟಪಡುತ್ತಿದ್ದದನ್ನು ನೋಡುತ್ತಿದ್ದಳು. ಸರೋಜ ಪಕ್ಕದಲ್ಲಿಯೇ ಮಲಗಿದ್ದು ಕಣ್ಣುಗಳನ್ನು ತೆರೆದುಕೊಂಡಿದ್ದಳು. ರಾತ್ರಿ ಹನ್ನೆರಡು ಗಂಟೆಗೆ ಕೃಷ್ಣರಾಯರು ಎದ್ದು ಬಂದು ಮಗುವನ್ನು ನೋಡಿದರು. ತುಳಸಾಬಾಯಿಗೆ, 'ನೀನು ಸ್ವಲ್ಪ ಮಲಗಿಕೊಂಡು ನಿದ್ರೆಮಾಡು. ನಾನು ನೋಡಿಕೊಳ್ಳುತ್ತೇನೆ' ಎಂದು ಹೇಳಿ ತಾವು ತೊಟ್ಟಿಲ ಬಳಿ ಕುಳಿತು, ಆಕೆಯನ್ನು ಮಲಗುವಂತೆ ಮಾಡಿದರು. ಸರೋಜ ಎರಡು ದಿನಗಳಿಂದಲೂ ನಿದ್ದೆಕೆಟ್ಟಿದ್ದುದರಿಂದ ಅವಳಿಗೆ ಆಗ ತಾನೆ ಜೊಂಪು ಹತ್ತಿತ್ತು. ಮಗುವಿಗೆ ಸಂಕಟ ಹೆಚ್ಚುತ್ತ ಬಂದು ಅದರ ಮುಲುಗಾಟವೂ ಹೆಚ್ಚಾಯಿತು! ಪದೇಪದೇ ಕಣ್ಣುಗಳನ್ನು ಅಗಲವಾಗಿ ಅರಳಿಸಿ ಬಹಳ ಕಷ್ಟಪಟ್ಟು ಉಸಿರಾಡುತ್ತಿತ್ತು. ರಾತ್ರಿ ಮೂರು ಗಂಟೆಗೆ ಮಗುವಿನ ಮೂಗಿನ ಹೊಳ್ಳೆಗಳಿಂದ ಕಪ್ಪು ದ್ರವ ಸ್ವಲ್ಪ ಹೊರಸೂಸಿತು. ಕೃಷ್ಣರಾಯರು ಮೆಲ್ಲನೆ ತಮ್ಮ ಹೆಂಡತಿಯನ್ನು ಎಚ್ಚರಿಸಿ ಸ್ಥಿತಿಯನ್ನು ತಿಳಿಸಿದರು. ಆಕೆ ತಟ್ಟನೆ ಎದ್ದು, 'ಮಗುವನ್ನು ಬೇಗ ಕೊಟ್ಟಿಗೆಗೆ ಸಾಗಿಸಬೇಕು. ಇಲ್ಲಿ ಬೇಡ' ಎಂದು ಹೇಳುತ್ತ ಸರೋಜಳನ್ನು ನೋಡಿದಾಗ ಆಕೆಗೆ ಸ್ವಲ್ಪ ನಿದ್ರೆ ಬಂದಿದ್ದುದು ತಿಳಿದುಬಂತು. ಕೂಡಲೇ ಆಕೆ ನಾಗರಾಜನ ಕೊಟಡಿಗೆ ಎದ್ದುಹೋಗಿ ಅವನನ್ನು ಎಬ್ಬಿಸಿದಳು.

'ಅಪ್ಪಾ ನಾಗರಾಜ! ಎದ್ದೇಳಪ್ಪ. ಎಲ್ಲ ಕೈಮೀರಿಹೋಯಿತು. ಸ್ವಲ್ಪ ಸರೋಜಳ ಹತ್ತಿರ ಇರು. ನಾವು ಮಗುವನ್ನು ಕೊಟ್ಟಿಗೆಗೆ ಒಯ್ಯುತ್ತೇವೆ. ಅವಳು ಎದ್ದರೆ ಕೊಟ್ಟಿಗೆಗೆ ಬಿಡಬೇಡ—ಎದ್ದು ಬಾರಪ್ಪ!' ಎಂದು ಅಳುತಳುತ ಹೇಳಿ ಅವನನ್ನು ಕರೆದುಕೊಂಡು

ಬಂದಳು. ನಾರಣಾಚಾರಿಯನ್ನು ಎಬ್ಬಿಸಿ, ಆಳೊಬ್ಬನನ್ನು ಎಬ್ಬಿಸು ವಂತೆ ಹೇಳಿ, ತೊಟ್ಟಿಲನ್ನು ಬಿಚ್ಚಿಸಿ ಗಲಭೆಯಿಲ್ಲದೆ ಕೊಟ್ಟಿಗೆಗೆ ಮಗು ವನ್ನು ಸಾಗಿಸಿದಳು. ಈ ದುರಂತ ಪ್ರಕರಣವನ್ನು ನೋಡುತ್ತಿದ್ದ ನಾಗ ರಾಜನಿಗೆ ಮರಣವೆಂಬುದರ ಘೋರ ದೃಶ್ಯ, ಅದರ ದುಃಖ ಅನುಭವ ವಾಗಿ ಅವನಿಗೆ ಅಳು ಬಂದುಬಿಟ್ಟಿತು. ತಂದೆತಾಯಿಗಳು ಆ ಮಗನನ್ನು ಸಮಾಧಾನ ಮಾಡಬೇಕಾಯಿತು. 'ಅಪ್ಪ! ನೀನೇನೋ ಧೈರ್ಯ ಶಾಲಿ, ದುಃಖವನ್ನು ತಡೆದುಕೊಳ್ಳತಕ್ಕವನು ಎಂದು ನಾನಿದ್ದರೆ ನೀನೂ ನನ್ನಂತೆ ಆದೆಯಲ್ಲಪ್ಪ' ಎಂದು ತುಳಸಾಬಾಯಿ ಉದ್ಗಾರ ತೆಗೆದು, 'ನೀನು ಇಲ್ಲಿಯೇ ಕೊಟಡಿಯ ಹತ್ತಿರ ಇರಪ್ಪ. ಧೈರ್ಯ ತಂದುಕೊ' ಎಂದು ಹೇಳಿ ಕೊಟ್ಟಿಗೆಗೆ ಹೋದಳು.

ಕೊಟ್ಟಿಗೆಯ ಕತ್ತಲೆಯಲ್ಲಿ ಒಂದು ಲಾಂದ್ರವನ್ನಿಟ್ಟುಕೊಂಡು ಕೃಷ್ಣರಾಯರೂ ತುಳಸಾಬಾಯಿಯೂ ತಮ್ಮ ಮೊಮ್ಮಗನ ಮರಣ ಸಂಕಟವನ್ನು ನೋಡುತ್ತ ಕುಳಿತಿದ್ದರು. ತಮ್ಮ ಅಳಿಯನ ನಡತೆ, ಬೀಗಿತ್ತಿಯ ಹಟ, ಸರೋಜಳ ದುಃಖ — ಅವುಗಳ ಮಾತುಗಳೂ ಮಧ್ಯೆ ಮಧ್ಯೆ ರೋದನವೂ ನಡೆಯುತ್ತಿತ್ತು.

ಬೆಳಗಿನ ಜಾವ ಸುಮಾರು ಐದು ಗಂಟೆಯ ಸಮಯ. ಸರೋಜ ಳಿಗೆ ಎಚ್ಚರವಾಗಿ ಅವಳು ತಟ್ಟನೆ ಹಾಸಿಗೆಯಲ್ಲಿ ಎದ್ದು ಕುಳಿತು ಸಹಜ ಪ್ರೇರಣೆಯಿಂದ ಹಿಂದೆ ತೊಟ್ಟಿಲಿದ್ದ ಕಡೆಗೆ ಕೈಚಾಚಿದಳು. ಕೈಗೇನೂ ಸಿಕ್ಕಲಿಲ್ಲ. ತಿರುಗಿ ನೋಡಿದಳು, ತೊಟ್ಟಿಲು ಕಂಡುಬರಲಿಲ್ಲ.

'ತೊಟ್ಟಿಲೆಲ್ಲಿ? ನನ್ನ ಮಗುವೆಲ್ಲಿ?' ಎಂದು ಅಳುತ್ತಾ ಎದ್ದು ಹೊರಟಳು. ನಾಗರಾಜ ಅವಳನ್ನು ತಡೆದು, 'ಸರೋಜ! ಹೋಗ ಬೇಡಮ್ಮ—ಇಲ್ಲೇ ಇರು' ಎಂದನು.

'ನನ್ನ ಮಗುವನ್ನು ತೋರಿಸು! ಅಮ್ಮ ಎಲ್ಲಿಗೆತ್ತಿಕೊಂಡು ಹೋದಳು? ಅಯ್ಯೋ! ನನ್ನ ಮಗು ಎಲ್ಲಿ?' ಎಂದು ಗಟ್ಟಿಯಾಗಿ ಕೂಗಿ ಕೊಂಡು ಮುಂದಕ್ಕೆ ನುಗ್ಗಿದಳು. ನಾಗರಾಜ ಬಹು ಪ್ರಯತ್ನದಿಂದ ಅವಳನ್ನು ತಡೆದು ಹಿಡಿದನು. ಅವನ ಕಣ್ಣುಗಳಿಂದ ನೀರು ಹರಿಯು ತ್ತಿದ್ದುದಲ್ಲದೆ, ಮಾತುಗಳು ಸರಿಯಾಗಿ ಹೊರಡದೆ ಗದ್ಗದವಾಯಿತು.

'ಅಮ್ಮ ಸರೋಜ! ಮಗು ಕೊಟ್ಟಿಗೆಯಲ್ಲಿದೆಯಮ್ಮ! ಸಮಾಧಾನ ಮಾಡಿಕೊ. ಅಮ್ಮ ನೋಡಿಕೊಳ್ಳುತ್ತಿದಾಳೆ'

'ಬಿಡು! ನನ್ನನ್ನು ಬಿಡು! ಕಿರಾತ! ನಾನು ಹೋಗಿ ನೋಡುತ್ತೇನೆ. ಅಮ್ಮ ನನ್ನ ಕಂದನನ್ನು ಚಳಿಯಲ್ಲೇಕೆ ಇಟ್ಟುಕೊಂಡಿದ್ದಾಳೆ? ಅಪ್ಪ ಎಲ್ಲಿ? ನಾನು ಕೊಟ್ಟಿಗೆಗೆ ಹೋಗುತ್ತೇನೆ.'

'ಬೇಡ ಸರೋಜ!'

'ನೀನಾರು ನನ್ನನ್ನು ತಡೆಯುವುದಕ್ಕೆ? ಹೋಗಾಚೆ!'

ಸ್ವಲ್ಪ ಸಮಾಧಾನ ಮಾಡಿಕೋ! ಅಮ್ಮನನ್ನೇ ಕರಸುತ್ತೇನೆ. ನಿನ್ನ ಮಗು ಏನೂ ಆಗಿಲ್ಲ. ಜೀವದಿಂದ ಇದೆ!'

'ನನ್ನನ್ನು ಬಿಡುತ್ತೀಯೋ ಇಲ್ಲವೋ! ನಿನ್ನ ಭಾವನನ್ನು ಕೂಗಿ ದೂಡಿಸಿಬಿಡುತ್ತೇನೆ!...ಅಯ್ಯೋ! ಅವರ ಮಗು ಕೊಟ್ಟಿಗೆಯಲ್ಲಿ ಸತ್ತಿರುವುದನ್ನು ನೋಡುವುದಕ್ಕೂ ಬರಲಿಲ್ಲ!' ನಾಗರಾಜನಿಗೆ ಹುಣ್ಣಿನಮೇಲೆ ಬರೆ ಎಳೆದಂತಾಯಿತು. ತಾನಲ್ಲವೇ ಕಾರಣ ಆ ಭಾವ ಕೋಪಿಸಿಕೊಂಡು ಹೊರಟುಹೋಗುವುದಕ್ಕೆ. ತನ್ನ ತಂಗಿಯನ್ನು ಅವಳ ಗಂಡನಿಂದ ಅಗಲಿಸಿದ ಮಹಾ ಪಾಪಿಷ್ಠ ತಾನಲ್ಲವೇ? ಎಂಥ ದುಃಖ, ಎಂಥ ಕಷ್ಟ ಸರೋಜಳಿಗೆ ತನ್ನಿಂದ ಒದಗಿತು. ಆ ಕಷ್ಟ ದುಃಖಗಳ ಜತೆಗೆ ತನ್ನ ಮಗುವನ್ನು ಕಳೆದುಕೊಳ್ಳುವ ಈ ದುರಂತವೂ ಸೇರಿತು—ಎಂದು ದುಃಖಪರವಶನಾಗಿ ನಾಗರಾಜ ಕೆಳಕ್ಕೆ ಕುಸಿದು ಬಿದ್ದುಹೋದನು. ಆ ಸಮಯದಲ್ಲಿ ಸರೋಜ ತಟ್ಟನೆ ಕೊಟಡಿಯಿಂದ ಹಾಲಿಗೆ ಬಂದು ಕೊಟ್ಟಿಗೆಯ ಕಡೆಗೆ ಓಡಿದಳು. ಹಿಂದೆಯೇ ನಾಗರಾಜ ಹೋಗಿ ಅವಳನ್ನು ಹಿಡಿದುಕೊಂಡನು. ಅಣ್ಣನಿಗೂ ತಂಗಿಗೂ ಹೋರಾಟ. 'ಅಮ್ಮಾ! ಮಗು ಎಲ್ಲಿ!' ಎಂದು ಅವಳು ಗಟ್ಟಿಯಾಗಿ ಕಿರಿಚಿದಳು. ಆ ಕೂಗನ್ನು ಕೇಳಿ ತುಳಸಾಬಾಯಿ ಮನೆಯ ಕಡೆ ಧಾವಿಸಿ ಬಂದಳು. ಸರೋಜಳನ್ನು ಬಿಡಿಸಿಕೊಂಡು, 'ಅಮ್ಮ! ನಿನ್ನ ಮಗು ಬದುಕಿದೆ, ಕರೆತರುತ್ತೇನೆ. ನೀನು ಕೊಟಡಿಗೆ ಬಾರಮ್ಮ' ಎಂದು ಸಮಾಧಾನೋಕ್ತಿಯಿಂದ ಅವಳನ್ನು ಕೊಟಡಿಗೆ ತಂದು ಸೇರಿಸಿದಳು. ಈ ಪ್ರಕರಣ ಮುಗಿಯುವ ಹೊತ್ತಿಗೆ ಬೆಳಕು ಹರಿಯುತ್ತಿತ್ತು. ನಾಗರಾಜ, 'ಅಮ್ಮ!

ನೀನೇ ಈ ಕೊಟಡಿಯ ಹತ್ತಿರ ಇರು. ಸರೋಜಳನ್ನು ಹಿಡಿಯುವುದಕ್ಕೆ ನನ್ನ ಕೈಯಲ್ಲಾಗುವುದಿಲ್ಲ. ನಾನೇ ಕೊಟ್ಟಿಗೆಗೆ ಹೋಗುತ್ತೇನೆ' ಎಂದು ಹೇಳಿದನು.

'ಆಗಲಪ್ಪ, ಅಲ್ಲಿರು. ಪುನಃ ನೀನು ಇಲ್ಲಿಗೇನೇ ಬರುವಿಯಂತೆ' ಎಂದು ಹೇಳಿ ಅವನನ್ನು ತಾಯಿ ಕಳಿಸಿ, ಮಗಳನ್ನು ನೋಡಿಕೊಳ್ಳುತ್ತಿದ್ದಳು. ಆದರೆ ಮಗಳನ್ನು ಕೊಟಡಿಯಲ್ಲೇ ನಿಲ್ಲಿಸುವುದು ಸಾಧ್ಯವಾಗದೇ ಹೋಯಿತು. ಸರೋಜ ಜೋರಾಗಿ ತಾಯಿಯನ್ನು ಒಂದು ನೂಕು ನೂಕಿಬಿಟ್ಟು ಕೊಟ್ಟಿಗೆಗೆ ಬಂದುಬಿಟ್ಟಳು.

'ನನ್ನ ಮಗುವನ್ನು ಇಲ್ಲಿಗೇಕೆ ಕರೆತಂದೆ ಹೇಳಪ್ಪ? ಮಕ್ಕಳನ್ನು ಹೆತ್ತವನೋ ಗೊಡ್ಡೋ ನೀನು? ಕೊಡು ನನ್ನ ಮಗುವನ್ನಿಲ್ಲಿ!' ಎಂದು ತೊಟ್ಟಿಲಿಗೆ ಸರೋಜ ಕೈ ಹಾಕಿದಳು. ಕೃಷ್ಣರಾಯರು ಎಂದೂ ಗಟ್ಟಿಯಾಗಿ ಅತ್ತವರಲ್ಲ. ಆ ದಿನ ಬೆಳಗ್ಗೆ, 'ಅಮ್ಮ ಸರೋಜ!' ಎನ್ನುತ್ತಿದ್ದ ಹಾಗೆಯೇ ಬಿಕ್ಕಿ ಬಿಕ್ಕಿ ಅಳುತ್ತ ಅವಳ ಕೈ ತಡೆದು ಹಿಡಿದರು. ಮಗೂ ಇನ್ನೂ ಕುಟುಕುಜೀವದಲ್ಲಿತ್ತು; ನೀಲಿ ತುಟಿಗಳ ದಂತದ ಬೊಂಬೆಯಂತೆ ತೊಟ್ಟಿಲಲ್ಲಿ ಮಲಗಿತ್ತು. ಮೊದಲಿನ ನರಳಾಟ ಮುಲುಗಾಟಗಳು ನಿಂತಿದ್ದುವು. ಯಾವಾಗಲೋ ಒಮ್ಮೊಮ್ಮೆ ಕಣ್ಣುಗಳನ್ನು ಸ್ವಲ್ಪ ಅರಳಿಸಿ ನೋಡಿ ಮತ್ತೆ ಕಣ್ಣುಮುಚ್ಚುತ್ತಿತ್ತು. ಕೈಕಾಲುಗಳ ಚಲನೆಯೇನೂ ಇರಲಿಲ್ಲ. ತುಳಸಾಬಾಯಿಯೂ ಕೊಟ್ಟಿಗೆಗೆ ಬಂದು ಆ ಮಗುವನ್ನು ಎರಡು ನಿಮಿಷ ನೋಡುತ್ತ ನಿಂತಳು. ಬಳಿಕ, 'ಸಾಕಮ್ಮ ಮಗುವನ್ನು ನೋಡಿದ್ದು! ಒಳಕ್ಕೆ ಹೋಗು. ಈ ಬಳಿಯಲ್ಲಿ ನೀನಿದ್ದರೆ ನಿನಗೇನಾದರೂ ಆದರೆ ನಾನೇನು ಮಾಡಲಮ್ಮ! ನೀನಿಲ್ಲಿರಬೇಡ' ಎಂದು ಮಗಳಿಗೆ ಹೇಳಿದಳು.

'ನಾನು ಇಲ್ಲಿಂದ ಹೋಗುವುದಿಲ್ಲ. ನಿನ್ನ ಮಗಳು ಸತ್ತಳು ಎಂದು ತಿಳಿದುಕೋ' ಎಂದು ಸರೋಜ ಹುಚ್ಚಿಯಂತೆ ಆರ್ಭಟಿಸಿದಳು. ಕಡೆಗೆ ಕೃಷ್ಣರಾಯರು ಮಗುವಿನ ಅಂತ್ಯಕಾಲ ಸಮೀಪಿಸುತ್ತಿರುವುದನ್ನು ನೋಡಿ, ಬಲಾತ್ಕಾರವಾಗಿ ತಮ್ಮ ಮಗಳನ್ನು ಹಿಡಿದೆಬ್ಬಿಸಿ ಒಳಕ್ಕೆ ಕರೆದೊಯ್ದರು. ದಾರಿಯುದ್ದಕ್ಕೂ ಅಳುತ್ತ, ತಂದೆಯೊಡನೆ ಹೋರಾಡುತ್ತ

ನನ್ನ ಮಗುವನ್ನು ಬಿಟ್ಟು ಹೋಗುವುದಿಲ್ಲ–ಎಂದು ಕೂಗಾಡುತ್ತ ಸರೋಜ ಪುನಃ ತನ್ನ ಕೊಟಡಿಯನ್ನು ಸೇರಿದಳು. 'ತೊಟ್ಟಿಲಿಲ್ಲದೆ ಕೊಟಡಿ ಬಿಕೋ ಅಂತ ಕಾಣುತ್ತದೆಯಲ್ಲ! ನನ್ನ ಮಗು ಇಲ್ಲದೆ ಪ್ರಪಂಚವೇ ಶೂನ್ಯವಾಗಿ ಕಾಣುತ್ತದೆಯಲ್ಲ!' ಎಂದು ಗಟ್ಟಿಯಾಗಿ ಸರೋಜ ಅಳುತ್ತಿದ್ದಳು.

ಸ್ವಲ್ಪ ಹೊತ್ತಾದ ಮೇಲೆ ತುಳಸಾಬಾಯಿ, 'ಅಪ್ಪಾ ನಾಗರಾಜ! ನೀನು ಒಳಕ್ಕೆ ಹೋಗಿ ನಿನ್ನ ತಂದೆಯನ್ನು ಕಳಿಸಪ್ಪ, ಸಾಕು, ಇನ್ನು ನೀನಿಲ್ಲಿರಬೇಡ' ಎಂದು ಹೇಳಿದಳು. ನಾಗರಾಜನಿಗೆ ಅತೀವ ದುಃಖ ವುಂಟಾಯಿತು. ಮರಣದ ಎದುರಿಗೆ ಮನುಷ್ಯನ ನಿಸ್ಸಹಾಯ ಸ್ಥಿತಿ ಕಂಡುಬಂತು. ಮನುಷ್ಯನನ್ನು ಹದ್ದುಬಸ್ತಿನಲ್ಲಿಡುವುದಕ್ಕೆ ತನ್ನ ಪರಮಾಧಿಕಾರವನ್ನು ತೋರಿಸುವುದಕ್ಕೆ, ದೇವರು ಇಟ್ಟುಕೊಂಡಿರುವ ಅಸ್ತ್ರವದು. ಎಂತಹ ನಾಸ್ತಿಕನೂ ತನ್ನ ಪ್ರಿಯ ಬಂಧುವಿಗೆ ಮರಣಕಾಲ ಸನ್ನಿಹಿತವಾಗಿದ್ದಾಗ ದೇವರು ಕಾಪಾಡಲಿ ಎಂದು ಅಂತರಂಗದಲ್ಲಿ ಮೌನವಾಗಿ ಪ್ರಾರ್ಥಿಸುತ್ತಾನೆ. ಸಾಮಾನ್ಯ ಜನ ಎಲ್ಲ ದೇವರುಗಳಿಗೂ ಹರಕೆಯನ್ನು ಹೊರುತ್ತಾರೆ; ಯಾವ ಜಾತಿಯ, ಮತದ ಸಂತನನ್ನಾದರೂ ಸರಿಯೆ, ರೋಗಿಯನ್ನು ಬದುಕಿಸಿಕೊಡೆಂದು ಬೇಡಿಕೊಳ್ಳುತ್ತಾರೆ. ಪ್ರಬಲನಾದ ಶತ್ರುವಾಗಿದ್ದರೂ ಗೋಚರನಾಗಿ ಪ್ರಾಣಾಪಹಾರ ಪ್ರಯತ್ನ ದಲ್ಲಿದ್ದರೆ ನಮ್ಮ ಶಕ್ತಿಮೀರಿ ಎದುರಿಸಬಹುದು. ಆ ಪ್ರಯತ್ನದಲ್ಲಿ ನಮ್ಮ ಪ್ರಾಣವನ್ನಾದರೂ ಬಿಡಬಹುದು. ಪ್ರಬಲವೂ ಅಗೋಚರವೂ ಆದ ಮೃತ್ಯು ಅಗೋಚರ ಪಾಶಗಳಿಂದ ಆ ಜೀವವನ್ನು ಎಳೆದುಕೊಳ್ಳುತ್ತಿದ್ದರೆ ನಾವೇನು ಮಾಡಬಲ್ಲೆವು? ನಮ್ಮ ರೋಷ ಪೌರುಷಗಳು ಏನು ರಕ್ಷಣೆ ಕೊಡಬಲ್ಲುವು. ನಾಗರಾಜನಿಗೆ ಈ ಮರಣದೆದುರು ಚಕ್ರವರ್ತಿಯೂ ನಿಸ್ಸಹಾಯಕನೆಂಬುದು ತಿಳಿದು ಬಂತು. ಕಣ್ಣೀರು ಹರಿಸುತ್ತ, ತಂದೆ ತಾಯಿಗಳ ದುಃಖವನ್ನೂ ಸರೋಜಳ ದುಃಖವನ್ನೂ ನೆನಸಿಕೊಳ್ಳುತ್ತ ಈ ಹಾಳು ಪ್ರಪಂಚವೆಂಬುದು ದುಃಖಭರಿತವಾದದ್ದು, ಈ ಕಠಿನ ಪ್ರಪಂಚ ದಲ್ಲಿ, ಕಷ್ಟದಲ್ಲಿದ್ದವರಿಗೆ ಕರುಣೆ ಸಹಾನುಭೂತಿ ತೋರಬೇಕು ಎಂಬ ಭಾವ ನೆಗಳಿಂದ ಮನೆಯೊಳಕ್ಕೆ ಬಂದು ತಂದೆಯನ್ನು ಕೊಟ್ಟಿಗೆಗೆ ಕಳಿಸಿದನು.

ಬೆಳಗ್ಗೆ ಸುಮಾರು ಎಂಟು ಗಂಟೆಗೆ ಆ ಎಳೆಯ ಮಗುವಿನ ಜೀವ ಹೋಗಿಬಿಟ್ಟಿತು. ತುಳಸಾಬಾಯಿ ಗಟ್ಟಿಯಾಗಿ ಅಳುತ್ತಾ ಮನೆಯೊಳಕ್ಕೆ ಬಂದಳು. ಹುಡುಗರೆಲ್ಲರೂ ಅಳುತ್ತಿದ್ದರು. ನಾಗರಾಜ ಸರೋಜಳನ್ನು ತಡೆದು ಹಿಡಿದು ತಾನೇ ಸಮಾಧಾನ ಹೊಂದದವನಾಗಿದ್ದರೂ ಅವಳನ್ನು ಸಮಾಧಾನಪಡಿಸುತ್ತಿದ್ದನು. ಗೋಳಾಟಗಳೆಲ್ಲ ಕೆಲವು ಕಾಲ ನಡೆದುವು. ಇರುವಾಗ ಎತ್ತಿಕೊಂಡು ಮುದ್ದಾಡುವುದು, ನೋಡಿ ನಲಿಯುವುದು ; ಈಗ ಮಣ್ಣಿನೊಡನೆ ಮಣ್ಣಾಗಿ ಸೇರಿಸುವುದು. ಕ್ಷಣದಲ್ಲಿ ಆಗುವ ವ್ಯತ್ಯಾಸ. ಅದು ಚೊಚ್ಚಲ ಮಗು. ಹೊರಗೆ ಎಲ್ಲಿಯೂ ಹೂಳಬಾರದು, ಮಾಟ ಮಾಡುವವರು ಆ ಎಳೆಯ ಮಗುವಿನ ಎಲುಬುಗಳನ್ನು ತೆಗೆದುಕೊಂಡುಹೋಗಿಬಿಡುತ್ತಾರೆ ಎಂಬ ಮೂಢ ನಂಬಿಕೆ ಬಾಧಿಸತೊಡಗಿತು. ಕಡೆಗೆ ಕಾಂಪೌಂಡಿನಲ್ಲಿಯೇ ಒಂದು ಮೂಲೆಯಲ್ಲಿ ನಾರಣಾಚಾರಿ ಮತ್ತು ಆಳಿನ ಸಹಾಯದಿಂದ ಮಗುವನ್ನು ಮಣ್ಣು ಮಾಡಲು ಸಾಗಿಸಿದ್ದಾಯಿತು. ಕೃಷ್ಣರಾಯರು, ಪ್ರಪಂಚಾನುಭವವುಳ್ಳವರು, ಹುಟ್ಟು ಸಾವುಗಳನ್ನು ಎಷ್ಟೋ ನೋಡಿದವರು, ಶಾಂತರು. ಆ ತಮ್ಮ ಮೊಮ್ಮಗನನ್ನು ಗುಣಿಯೊಳಕ್ಕಿಡುವಾಗ, ಒಳಕ್ಕಿರಿಸಲೊಲ್ಲದೆ ಮತ್ತೆ ಮತ್ತೆ ನೋಡಿ, ಬಿಕ್ಕಿ ಬಿಕ್ಕಿ ಅಳುತ್ತ ಕಡೆಗೆ ಮುಖವನ್ನು ತಿರುಗಿಸಿಕೊಂಡರು. ಮಣ್ಣನ್ನು ನೂಕುತ್ತಿದ್ದಾಗ 'ಅಯ್ಯೋ! ಬೇಡ!' ಎಂದು ತಡೆಯುವುದಕ್ಕೂ ಹೋದರು. ಮೋಹಪಾಶ ಪ್ರಬಲವಾಗಿದ್ದರೂ ಮೃತ್ಯುಪಾಶದ ಮುಂದೆ ಏನುಮಾಡಬಲ್ಲುದು? ಅಂತ್ಯಕ್ರಿಯೆಗಳೆಲ್ಲ ಮುಗಿದುವು.

ಮನೆಯ ಹಿಂಭಾಗದಲ್ಲಿ ಕೊಟ್ಟಿಗೆಯ ಹಿಂದುಗಡೆ ಅಂತ್ಯಕ್ರಿಯೆ ನಡೆದದ್ದರಿಂದ ಸರೋಜಳ ಕಣ್ಣಿಗೆ ಏನೂ ಕಾಣಿಸಲಿಲ್ಲ. ಅವಳು ಕಿಟಕಿಯಲ್ಲಿ ಮುಖವಿಟ್ಟುಕೊಂಡು ಗೇಟಿನ ಕಡೆಗೆ ನೋಡುತ್ತ ನಿರೀಕ್ಷಿಸುತ್ತಿದ್ದಳು. ಅಲ್ಲಿ ಯಾರೂ ಏನನ್ನೂ ಹೊರಕ್ಕೆ ತೆಗೆದುಕೊಂಡು ಹೋಗಲಿಲ್ಲ. ಮಗು ಇನ್ನೂ ಜೀವದಿಂದಿರಬಹುದು ಎಂಬ ತಾಯಿಯ ಆಶೆ ಅವಳಿಗೆ. ಬಳಿಕ ಎಲ್ಲರಿಗೂ ಸ್ನಾನಗಳಾಗಬೇಕಾದಾಗ ಅವಳಿಗೆ ತನ್ನ ಮಗು ಸತ್ತೇಹೋಯಿತೆಂದೂ ಮಣ್ಣು ಮಾಡಿ ಆಗಿಹೋಯಿತೆಂದೂ

ತಿಳಿಯಿತು. ಅವಳು ಗಟ್ಟಿಯಾಗಿ ಅಳುತ್ತಾ, 'ನನ್ನ ಮಗುವನ್ನು ಮಣ್ಣು ಮಾಡಿದೆ, ನನ್ನನ್ನೂ ಮಣ್ಣುಮಾಡಪ್ಪ! ಎಂದು ಕೃಷ್ಣ ರಾಯರ ಪಾದಗಳ ಮೇಲೆ ಬಿದ್ದುಬಿಟ್ಟಳು. ಪ್ರಜ್ಞೆ ತಪ್ಪಿಹೋಯಿತು. ತುಳಸಾಬಾಯಿ ಕುಸಿದು ಬಿದ್ದುಹೋದಳು. ಕೃಷ್ಣರಾಯರೂ ನಾಗ ರಾಜನೂ ಬಹಳ ಕಷ್ಟಪಟ್ಟು ಆ ತಾಯಿಗೆ ಮಗಳಿಗೆ– ಇಬ್ಬರಿಗೂ ಶೈತ್ಯೋಪಚಾರ ಮಾಡಿ ಪ್ರಜ್ಞೆ ಬರುವಂತೆ ಮಾಡಿದರು. ಆ ದಿನ ಕೃಷ್ಣ ರಾಯರ ಮನೆ ಸ್ಮಶಾನಸದೃಶವಾಗಿತ್ತು.

## ೧೬. ಕರುಳ ನುಲಿತಗಳು

ಕೃಷ್ಣರಾಯರ ಮನೆಯಲ್ಲಿ ಒಂದು ಸಣ್ಣಜೀವ ಹೋದದ್ದಕ್ಕೆ ಆ ಮನೆಯವರಿಗೆ ಲೋಕವೇ ಶೂನ್ಯವಾದ ಹಾಗೆ ಕಂಡುಬಂತು. ಲೋಕಕ್ಕಾದರೋ ತನ್ನ ನಿತ್ಯದ ಗಡಿಬಿಡಿಯಲ್ಲಿ ಕೃಷ್ಣರಾಯರ ಮನೆ ಒಂದು ಶೂನ್ಯವಾಗಿ ಅದಕ್ಕೂ ಕಂಡುಬಂತು ಹೊರಗಿನ ಲೋಕ ಎಂದಿನಂತೆ ನಡೆಯುತ್ತಿತ್ತು. ಆ ಮನೆಯಲ್ಲಿಯೂ ಎಂದಿನಂತೆ ನಡೆಯಬೇಕಾದ ಕೆಲಸಗಳನ್ನು ನಿಲ್ಲಿಸುವುದಕ್ಕಾಗುತ್ತದೆಯೇ? ನಾರಣಾಚಾರಿ ಸ್ನಾನ ಮಾಡಿಕೊಂಡು ಅಡಿಗೆಯನ್ನು ಮಾಡಲೇಬೇಕು. ಮನಸ್ಸಿರಲಿ, ಇಲ್ಲದಿರಲಿ, ಅಳುವಿನ ಮಧ್ಯೆ ತುತ್ತುಗಳನ್ನು ದುಃಖಸಂತಪ್ತರು ನುಂಗಲೇಬೇಕು. ಹಾಗೆಯೇ ದಿನದಿನಕ್ಕೂ ದುಃಖ ಕಡಮೆಯಾಗುತ್ತ ಕಾಲ ವೈದ್ಯನ ಕೈಗುಣ ಕಂಡುಬರುತ್ತ ಹೋಗಬೇಕು. ಈ ಪ್ರಪಂಚ ಹೀಗೆ ಯುಗಯುಗಾಂತರಗಳಿಂದ ನಡೆದುಕೊಂಡುಬರುತ್ತಿದೆ.

ತುಮಕೂರಿಗೆ ಒಂದು ಕಾರ್ಡನ್ನು ಕೃಷ್ಣರಾಯರು ಬರೆದು ಹಾಕಿದರು.

ಹಗಲು ಕಳೆದಾಯಿತು. ಕಪ್ಪುಮುಸುಕಿನ ಕಾಳರಾತ್ರಿ ತನ್ನ ಸಹಸ್ರ ತೋಳುಗಳಿಂದ ಶಿವಮೊಗ್ಗವನ್ನು ಆಕ್ರಮಿಸಿತು. ಆದರೆ ವಿದ್ಯುದ್ದೀಪಗಳು ಬೆಳಗುತ್ತಿದ್ದುದರಿಂದ ನಿರಾಶೆಯ ನಿಶೆಯಲ್ಲಿ ಆಶಾಜ್ಯೋತಿಗಳು ಕುಡಿಯಿಟ್ಟಂತೆ ಕಾಣುತ್ತಿದ್ದುವು. ದೀಪವಿದ್ದರೆ ಧೈರ್ಯ. ತೇಜೋಮೂರ್ತಿಯೊಬ್ಬನು ಜತೆಗಿರುವನೆಂಬ ಒಂದು ಭರವಸೆ. ರಾತ್ರಿ ಎಂಟು ಗಂಟೆಗೆ ಕೃಷ್ಣರಾಯರ ಮನೆಯಲ್ಲಿ ಊಟದ ಶಾಸ್ತ್ರ ಆಯಿತು. ಬಾಣಂತಿಯ ಕೊಟಡಿಯ ಬಾಗಿಲನ್ನು ಮಧ್ಯಾಹ್ನವೇ ಮುಚ್ಚಿ ಅದಕ್ಕೆ ಬೀಗವನ್ನು ಹಾಕಿಬಿಟ್ಟಿದ್ದರು. ಎಲ್ಲರೂ ಹಾಸಿಗೆಗಳನ್ನು ಹಾಲಿನಲ್ಲಿಯೇ ಹಾಕಿಕೊಳ್ಳುವುದೆಂದು ತೀರ್ಮಾನವಾಯಿತು. ನಾಗರಾಜ ತನ್ನ ಕೊಟಡಿಯಲ್ಲೇ ತಾನು ಮಲಗುವುದಾಗಿ ತಿಳಿಸಿದನು. ಆದರೆ ತುಳಸಾಬಾಯಿ ಅದಕ್ಕೊಪ್ಪದೆ ಹಾಲಿನಲ್ಲೇ ಅವನಿಗೂ ಹಾಸಿಗೆಯನ್ನು ಹಾಸಿಕೊಟ್ಟಳು. ಅಡಿಗೆಯವನ ಕೆಲಸಗಳೆಲ್ಲ ಮುಗಿಯುವ ಹೊತ್ತಿಗೆ ರಾತ್ರಿ ಒಂಬತ್ತು

ಗಂಟೆ ಆಯಿತು. ಹಿತ್ತಿಲಕಡೆಯ ಬಾಗಿಲುಗಳನ್ನು ಭದ್ರವಾಗಿ ಹಾಕಿಸಿ, ನಾರಣಾಚಾರಿಯನ್ನು ಒಳಗಿನ ನಡುಮನೆಯಲ್ಲಿ ಮಲಗಿಕೊಳ್ಳುವಂತೆ ಯಜಮಾನಿ ಅಪ್ಪಣೆ ಮಾಡಿದಳು. ಬೀದಿಯ ವರಾಂಡದಲ್ಲಿ ಇಬ್ಬರು ಆಳುಗಳು ಮಲಗುವಂತೆ ಏರ್ಪಾಟಾಗಿತ್ತು. ಎಲ್ಲ ಕೋಣೆಗಳ ಬಾಗಿಲುಗಳನ್ನೂ ಎಳೆದುಕೊಂಡು, ಬೀಗಗಳನ್ನು ಹಾಕಿದ್ದಾಯಿತು ; ಹಾಲಿನ ಕಿಟಕಿಗಳನ್ನು ಸಹ ಮುಚ್ಚಿ ಬಿರಡೆಗಳನ್ನು ಹಾಕಿದ್ದಾಯಿತು. ಈ ರೀತಿ ಎಲ್ಲ ಬಂದೋಬಸ್ತುಗಳನ್ನು ಮಾಡಿ ಹಿಂದಿನ ರಾತ್ರಿ ಆ ಸಣ್ಣಜೀವ ಇದ್ದದ್ದನ್ನೂ ಈಗ ಇಲ್ಲದ್ದನ್ನೂ ಹೋಲಿಸಿಕೊಳ್ಳುತ್ತ, ಮೌನದುಃಖದಿಂದ, ಸ್ವಲ್ಪ ರೋದನದಿಂದ ಬಾಣಂತಿಯ ಕೊಟಡಿಯ ಕಡೆಗೆ ನೋಡುತ್ತ, ಆ ಮಗುವಿನ ಮುಲುಗಾಟ, ನರಳಾಟ ಕಿವಿಯಲ್ಲಿ ಪ್ರತಿಧ್ವನಿಸಿದಂತೆ ತೋರುತ್ತಿರಲು, ಕಣ್ಣಿಗೆ ಕಟ್ಟಿದಂತೆ ಕಾಣುತ್ತಿರಲು ಮಣ್ಣುಮಾಡಿದ್ದ ಮಗು ಮತ್ತೆ ಎದ್ದುಬಂದಿತೋ ಎಂದು ಶಂಕಿಸುತ್ತ ಹಾಸಿಗೆಗಳಲ್ಲಿ ಎಲ್ಲರೂ ಕುಳಿತಿದ್ದರು. ಸ್ವಲ್ಪ ಹೊತ್ತಾದ ಮೇಲೆ ಹುಡುಗರೆಲ್ಲ ಮಲಗಿಬಿಟ್ಟರು. ಗೋಡೆಯ ಪಕ್ಕದಲ್ಲಿ ತುಳಸಾಬಾಯಿ, ಆಕೆಯ ಪಕ್ಕದಲ್ಲಿ ಸರೋಜ, ಸರೋಜಳ ಪಕ್ಕದಲ್ಲಿ ಕೃಷ್ಣರಾಯರು, ಕೃಷ್ಣರಾಯರ ಪಕ್ಕದಲ್ಲಿ ಸಣ್ಣ ಹುಡುಗರು, ಅನಂತರ ಸುಕನ್ಯೆ, ಅವಳ ಪಕ್ಕದಲ್ಲಿ ರಘು, ಕೊನೆಯಲ್ಲಿ ನಾಗರಾಜ—ಹೀಗೆ ವ್ಯವಸ್ಥೆ ಮಾಡಿಕೊಂಡರು. ಹಾಲಿನ ದೀಪವನ್ನು ಆರಿಸಲಿಲ್ಲ. ಅದು ಪ್ರಕಾಶಮಾನವಾಗಿ ಉರಿಯುತ್ತಲೇ ಇತ್ತು.

ರಾತ್ರಿ ಹನ್ನೊಂದು ಗಂಟೆ ಹೊಡೆಯಿತು. ನಾಗರಾಜನಿಗೆ ಅರ್ಧ ನಿದ್ರೆ. ತುಳಸಾಬಾಯಿ ಮತ್ತು ಕೃಷ್ಣರಾಯರು ಎಚ್ಚರವಾಗಿಯೇ ಇದ್ದು ತಮ್ಮ ಮಗಳನ್ನು ಸಮಾಧಾನ ಪಡಿಸುತ್ತಿದ್ದರು ತುಳಸಾಬಾಯಿ ತನ್ನ ಮಗಳನ್ನು ಹೊಟ್ಟೆಯಲ್ಲಿ ಸೇರಿಸಿಕೊಂಡಂತೆ ಹತ್ತಿರಕ್ಕೆ ಎಳೆದುಕೊಂಡು ಮಲಗಿದ್ದಳು. 'ಮಗು ಅಳುತ್ತಿದೆ—ಹಾಲು ಕೊಡಬೇಕು. ಬಿಡಮ್ಮ' ಎಂದು ಸರೋಜ ತಾಯಿಯ ತೆಕ್ಕೆಯಿಂದ ಬಿಡಿಸಿಕೊಂಡು ಹಾಸಿಗೆಯ ಮೇಲೆ ಕುಳಿತುಬಿಟ್ಟಳು. ತಾಯಿ ತಂದೆಗಳು ತಾವೂ ಎದ್ದು ಕುಳಿತ್ಕೊಂಡು, 'ಅಮ್ಮ! ಮಲಗಿಕೋ. ಹೀಗೆಲ್ಲ ಮಾಡಬಾರದು. ಮಧ್ಯರಾತ್ರಿ' ಎಂದು ಸಮಾಧಾನ ಮಾಡಿದರು.

'ಈಗ ಪಕ್ಕದಲ್ಲಿ ಮಗು ಇತ್ತಲ್ಲಮ್ಮ!'

'ಅಯ್ಯೋ ಭ್ರಾಂತಿಯೇ! ಇತ್ತಮ್ಮ ಇತ್ತು! ನಮ್ಮ ದುರದೃಷ್ಟ! ನೀನು ಹೀಗೆ ದುಃಖಪಡುವುದನ್ನು ನಾವು ನೋಡಬೇಕಾಗಿ ಬಂತು. ಮಲಗಿಕೋ ಸರೋಜ!' ಎಂದು ತಾಯಿ ಹೇಳಿದಳು.

'ಕೊಟಡಿಗೆ ಏಕೆ ಬೀಗ ಹಾಕಿದ್ದೀರಿ? ಬೀಗದ ಕೈ ಕೊಡು' ಎಂದು ಹೇಳುತ್ತ ಸರೋಜ ತಟ್ಟನೆ ಎದ್ದು ಕೊಟಡಿಗೆ ಹೊರಡಲುದ್ಯುಕ್ತಳಾದಳು. ಕೃಷ್ಣರಾಯರು ಆಕೆಯನ್ನು ಹಿಡಿದು ನಿಲ್ಲಿಸಿ,

'ಬಾರಮ್ಮ ಸರೋಜ! ಅಲ್ಲೇನೂ ಇಲ್ಲ' ಎಂದರು

'ನನ್ನ ಮಗುವನ್ನು ಏನು ಮಾಡಿದೆ ಹೇಳಪ್ಪ?' ಎಂದು ಕೇಳಿ ಸರೋಜ ಅಳತೊಡಗಿದಳು.

'ಆಗಲಮ್ಮ! ಹೇಳುತ್ತೇನೆ. ನೀನು ಬಂದು ಮಲಗಿಕೋ' ಎಂದು ಹೇಳಿ ಸರೋಜಳನ್ನು ಹಾಸಿಗೆಗೆ ತಂದು ಮಲಗಿಸಿದರು.

ರಾತ್ರಿ ಒಂದು ಗಂಟೆಯಾಯಿತು. ಕಳ್ಳರು ಕೊರಮರು ಮನೆಗಳಿಗೆ ಕನ್ನಹಾಕುವುದಕ್ಕೆ ಹೊಂಚುವ ಸಮಯ. ಭೂತ ಪ್ರೇತಗಳೂ ಪಿಶಾಚಗಳೂ ಸ್ಮಶಾನದಿಂದ ಊರೊಳಕ್ಕೆ ಬಂದು ಸುತ್ತಾಡುವ ಸಮಯ. ಅಪಮೃತ್ಯುಗಳಿಗೆ ಈಡಾದವರ ಅಥವಾ ಇನ್ನೂ ಅಂತ್ಯಕ್ರಿಯೆಗಳು ಮುಗಿಯದೆ ಇರುವ ಹೆಣಗಳಲ್ಲಿ ಭೇತಾಳಗಳು ಸೇರಿಕೊಂಡು ಮನುಷ್ಯರಂತೆ ಚೇಷ್ಟೆ ಮಾಡುವ ಸಮಯ. ಕಪ್ಪು ಮೈಯ ಯಮದೂತರು ಆಯುಸ್ಸು ಮುಗಿದ ಜೀವರುಗಳ ಸುತ್ತ ನಿಂತಿರುವ ಸಮಯ. ಹೊಸದಾಗಿ ಮಣ್ಣು ಮಾಡಿದ್ದ ಎಳೆಯ ಮಕ್ಕಳ ಹೆಣಗಳನ್ನು ಮಾಟಗಾರರು ಹೊರಕ್ಕೆ ತೆಗೆದು ಎಲುಬುಗಳನ್ನು ಬಗಿದುಕೊಳ್ಳುವ ಸಮಯ. ಎಲ್ಲ ಕಡೆಗಳಲ್ಲೂ ಮೃತ್ಯುಮೌನ. ತುಳಸಾಬಾಯಿಗೆ ಜೊಂಪು ಹತ್ತಿತ್ತು, ಕೃಷ್ಣರಾಯರಿಗೆ ಕಣ್ಣು ಎಳೆದುಕೊಂಡು ಹೋಗುತ್ತಿತ್ತು. ಆದರೂ ಒಮ್ಮೊಮ್ಮೆ ಬಲಾತ್ಕಾರವಾಗಿ ಕಣ್ಣುಬಿಟ್ಟು ನೋಡುತ್ತ, ನಿದ್ರೆಯೊಡನೆ ಹೋರಾಡುತ್ತಿದ್ದರು. ಹಾಗೆ ಒಮ್ಮೆ ಕಣ್ಣುಬಿಟ್ಟು ನೋಡಿದಾಗ ಸರೋಜ ಪಕ್ಕದಲ್ಲಿರಲಿಲ್ಲ! ಅವಳು ಹಾಲಿನಿಂದ ನಡುಮನೆಗೆ ಹೋಗುವ ಬಾಗಿಲನ್ನು ತೆರೆಯುವ ಸನ್ನಾಹದಲ್ಲಿದ್ದದ್ದು ಕಂಡುಬಂತು! ತಟ್ಟನೆ ಎದ್ದು ಹೋಗಿ ಆಕೆ

ಯನ್ನು ಹಿಡಿದುಕೊಂಡರು. 'ಎಲ್ಲಿಗೆ ಹೋಗುತ್ತೀಯಮ್ಮ ಸರೋಜ?' ಎಂದು ಕೇಳಿದರು.

'ಮಗು ಕೊಟ್ಟಿಗೆಯಲ್ಲಿ ಒಂದೇ ಮಲಗಿದೆಯಪ್ಪ!'

ಕೃಷ್ಣರಾಯರಿಗೆ ಏನೊಂದು ಉತ್ತರವೂ ತೋರಲಿಲ್ಲ. ಅವರ ಕಣ್ಣುಗಳಿಂದ ಪಳಪಳನೆ ನೀರು ಸುರಿಯಿತು. ತಾವು ತಮ್ಮ ಬಸಿರ ಸಂಕಟವನ್ನು ಅನುಭವಿಸುವುದು ಕಷ್ಟ. ತಮ್ಮ ಮಕ್ಕಳು ಆ ಬಸಿರ ಸಂಕಟವನ್ನು ಅನುಭವಿಸುತ್ತಿದ್ದರೆ ನೋಡುವುದು ಅತಿ ಕಷ್ಟ. ಕೃಷ್ಣ ರಾಯರಿಗಂತೂ ತಮ್ಮ ಹಿರಿಯ ಮಗಳಾದ ಸರೋಜಳಲ್ಲಿ ಅಧಿಕ ಪ್ರೇಮ. ಆ ಪ್ರೀತಿಯ ಮಗಳು ತನ್ನ ಮಗುವನ್ನು ಕಳೆದುಕೊಂಡು ಸಂಕಟಪಡು ವುದನ್ನು ನೋಡಲಾರದೆ ಹೋದರು. ಅವರಿಗೆ ಮಾತೇ ಹೊರಡಲೊ ಲ್ಲದು. ಮೆಲ್ಲಗೆ ಸರೋಜಳನ್ನು ಹಾಸಿಗೆಯ ಬಳಿಗೆ ಕರೆತಂದು ಮಲಗಿ ಸಿದರು. ತಾವು ಹಾಸಿಗೆಯಲ್ಲೇ ಎದ್ದು ಕುಳಿತಿದ್ದರು. ಸುಮಾರು ಅರ್ಧ ಗಂಟೆಯವರೆಗೂ ಮಗಳನ್ನು ತಟ್ಟುತ್ತಿದ್ದು–ಅವಳು ಪುನಃ ಏಳ ದಂತೆ ನೋಡಿಕೊಳ್ಳುತ್ತಿದ್ದರು. ಸರೋಜಳಿಗೆ ಸ್ವಲ್ಪ ಜೊಂಪುಹತ್ತಿತು. ಆದರೂ ಇದ್ದಕ್ಕಿದ್ದ ಹಾಗೆ 'ಮಗು! ನನ್ನ ಮಗು ಎಲ್ಲಪ್ಪ?' ಎಂದು ಕನವರಿಕೆ. ಕೊನೆಗೆ ಕನವರಿಕೆಯೂ ನಿಂತಿತು. ಹಾಲಿನಲ್ಲಿ ನಿಶ್ಶಬ್ದ!

ಈ ಕೊನೆಯಿಂದ ಆ ಕೊನೆಯವರೆಗೆ ಮಕ್ಕಳೆಲ್ಲ ಮಲಗಿರುವು ದನ್ನು ಕೃಷ್ಣರಾಯರು ನೋಡಿದರು. ತಮ್ಮ ಸಂಸಾರವೆಲ್ಲ ಒಂದು ಪೆಟ್ಟಿಗೆಯಲ್ಲಿ ಅಡಕವಾದಂತೆ ಅವರಿಗೆ ಭಾವನೆಯಾಯಿತು. ಹಾಗೆಯೇ ಮನಸ್ಸು ತುಮಕೂರಿಗೂ ಓಡಿತು. ತಮ್ಮ ಅಳಿಯನನ್ನು ಅವನು ಮಗುವಾಗಿದ್ದ ಲಾಗಾಯಿತು ಅವರು ಬಲ್ಲರು; ಅವನನ್ನು ಎತ್ತಿ ಆಡಿಸಿ ದವರು ಅವರು. ಹುಡುಗ ಯೋಗ್ಯ ಎಂಬುದನ್ನು ಚೆನ್ನಾಗಿ ಬಲ್ಲರು. ತಮ್ಮಲ್ಲಿ ಅವನಿಗೆ ಹಿರಿಯ ಗೌರವ ಎಂಬುದನ್ನು ಬಲ್ಲರು. ಆದರೆ ಈಗ ಅಂಥ ಅಳಿಯ ತಮ್ಮ ಮಾತನ್ನು ನಡಸಲಿಲ್ಲವಲ್ಲ! ತಮ್ಮ ಆಪ್ತ ಸ್ನೇಹಿತನ ಹೆಂಡತಿ—ಬೀಗಿತ್ತಿಯಾದಕಾರಣದಿಂದಲೋ ಏನೋ— ತಮಗೆ ವಿರೋಧವಾಗಿ ನಡೆಯುತ್ತಿದಾಳಲ್ಲ. ಅಪರಿಚಿತಸ್ಥರನ್ನು ಏಕೆ ಆಡಬೇಕು? ಬಂಧುಗಳಿಗಿಂತ ಹೆಚ್ಚಾಗಿ ತಾವು ಸ್ನೇಹಿತರು ನಡೆದು

ಕೊಂಡು ಹೋಗುತ್ತಿರಲಿಲ್ಲವೇ? ಆಗ ಕಾವೇರಮ್ಮ ಎಷ್ಟೋ ಆದರ ದಿಂದ ಸ್ನೇಹದಿಂದ ನಡೆದುಕೊಳ್ಳುತ್ತಿರಲಿಲ್ಲವೇ? ತಮ್ಮ ಪ್ರೀತಿಯ ಮಗಳು ಸುಖವಾಗಿ ಬಾಳಬಹುದೆಂದು ನಂಬಿ ಸ್ನೇಹಿತನ ಮಗನಿಗೇನೆ ಮದುವೆಮಾಡಿಕೊಟ್ಟರೆ ಹೀಗಾಗಬೇಕೇ? ತಮ್ಮ ಹೆಂಡತಿಗೂ ಕಾವೇರ ಮ್ಮನಿಗೂ ಏನೋ ವೈಮನಸ್ಯ ಬೆಳೆದುಬಿಟ್ಟಿದೆಯಲ್ಲ! ಅದು ಸರಿಹೋ ಗುವುದು ಹೇಗೆ? ಎಂದು ಮುಂತಾಗಿ ಆಲೋಚಿಸುತ್ತಿದ್ದಹಾಗೆಯೇ ತುಳಸಾಬಾಯಿ, 'ಅಯ್ಯೋ! ನಾನು ಬರುವುದಿಲ್ಲ! ಅಯ್ಯೋ! ನಾನು ಬರುವುದಿಲ್ಲ!' ಎಂದು ಕಿರಿಚಿದಳು. ಕೃಷ್ಣರಾಯರು ಆಕೆಯನ್ನು ತಟ್ಟನೆ ಎಬ್ಬಿಸಿ ಕೂಡಿಸಿದರು.

'ಅದೇಕೆ ಹಾಗೆ ಕಿರಿಚುತ್ತೀಯೆ? ಎಲ್ಲಿಗೆ ನೀನು ಬರುವುದಿಲ್ಲ ಎಂದು ಕೂಗುತ್ತೀಯೆ? ನಿನ್ನನ್ನು ಯಾರು ಕರೆದರು?' ಎಂದು ಕೇಳಿ ದರು.

ತುಳಸಾಬಾಯಿ ನಡುಗುತ್ತ, ತೊದಲು ನುಡಿಯಿಂದ, 'ಅಯ್ಯೋ! ನನಗೆ ಭಯವಾಗುತ್ತೆ!' ಎಂದಳು

'ಭಯ ಏಕೆ? ನೀನೇನು ಎಳೆಯ ಹುಡುಗಿಯೆ? ನೀನೇ ಅಧೈರ್ಯಪಟ್ಟರೆ ಮಕ್ಕಳು ಹೆದರಿಕೊಳ್ಳುವುದಿಲ್ಲವೇ? ಧೈರ್ಯ ತಂದುಕೋ. ಏನಾಯಿತು?

'ಯಾರೋ ಕಪ್ಪಗೆ ಕಾಣಿಸಿಕೊಂಡರು. ಬಾ ಎಂದು ನನ್ನನ್ನು ಕರೆದರು. ನಾನು ಬರುವುದಿಲ್ಲ ಎಂದು ಕಿರಿಚಿಕೊಂಡೆ.'

'ನಿನಗೆ ಮನಸ್ಸಿಗೆ ಭ್ರಾಂತಿ. ಕಪ್ಪಗೆ ಕಾಣಿಸುವುದಕ್ಕೆ ಇಲ್ಲಿ ಯಾರಿದ್ದಾರೆ? ದೀಪ ಕಣ್ಣು ಕೋರೈಸುವ ಹಾಗೆ ಉರಿಯುತ್ತಾ ಇದೆ. ಬಾಗಿಲು ಕಿಟಕಿಗಳನ್ನೆಲ್ಲ ಹಾಕಿದೆ. ಪಕ್ಕದಲ್ಲಿ ನಾವೆಲ್ಲ ಇದ್ದೇವೆ.'

'ಅಯ್ಯೋ! ನಿಮಗೆ ಗೊತ್ತಿಲ್ಲ. ನನ್ನ ಕಣ್ಣಿಗೆ ಚೆನ್ನಾಗಿ ಕಂಡಿತು. ಕಪ್ಪನೆ ದೇಹ, ವಿಕಾರ ಮುಖ, ಕೈಯಲ್ಲಿ ಏನೋ ಹಿಡಿದಿತ್ತು' ಎಂದು ತುಳಸಾಬಾಯಿ ಹೇಳುತ್ತ ಹೇಳುತ್ತ ಹಾಲಿನ ವೆಂಟಿಲೇಟರ್ ಒಂದರ ಕಡೆಗೆ ದೃಷ್ಟಿಯನ್ನು ಆಕಸ್ಮಾತ್ ತಿರುಗಿಸಿ, 'ಅಯ್ಯೋ! ಅಲ್ಲೇ ಇದೆ' ಎಂದು ಕಿರಿಚಿ ಹಾಸಿಗೆಯಮೇಲೆ ಉರುಳಿದಳು. ಕೃಷ್ಣರಾಯರು

ಧೈರ್ಯಶಾಲಿಗಳೇ ಆಗಿದ್ದರೂ ಹಿಂದಿನ ಎರಡು ದಿನಗಳ ಪ್ರಕರಣ, ಅಂದಿನ ಬೆಳಗ್ಗೆಯ ಪ್ರಕರಣ, ಸರೋಜಳು ಎದ್ದು ಹೋಗುತ್ತಿದ್ದುದು— ಎಲ್ಲವೂ ಸೇರಿ ಒಂದು ಭಯಂಕರ ವಾತಾವರಣ ಆವರಿಸಿದಂತೆ ಅವರಿಗೂ ಮೈ ನಡುಗಿತು. ಅವರು ನಾಗರಾಜನನ್ನು ಎಬ್ಬಿಸಿದರು. ಅವನಿಗೆ ಯಾವ ವಿವರಗಳೂ ತಿಳಿಯದು. ತಾಯಿ ಹೆದರಿಕೊಂಡಿದ್ದಾಳೆ ಎಂಬಿಷ್ಟು ಮಾತು ಕೃಷ್ಣರಾಯರಿಂದ ತಿಳಿಯಿತು. ' ಆ ವೆಂಟಿಲೇಟರ್ ನೋಡಿ, ಅಲ್ಲೇ ಇದೆ ಎಂದು ಕಿರಿಚಿದಳಪ್ಪ! ಅಲ್ಲೇನಿದೆ?' ಎಂದು ಕೃಷ್ಣ ರಾಯರು ಆ ಕಡೆ ನೋಡಿದಾಗ ಕೆಂಡದಂಥ ಎರಡು ಕಣ್ಣುಗಳು ಕಪ್ಪನೆ ಒಂದು ದೇಹ ಕಂಡವು! ಅವರ ಮೈ ನಡುಗಿಹೋಯಿತು, ಬೆವರು ಕಿತ್ತುಕೊಂಡಿತು. ಅಷ್ಟುಹೊತ್ತಿಗೆ ' ಮಿಯಾವ್! ಮಿಯಾವ್!' ಎಂಬ ಧ್ವನಿ ಕೇಳಿಸಿತು. ನಾಗರಾಜ ಅದನ್ನು ಕೇಳಿ, ಅದು ಕರಿಯ ಬೆಕ್ಕು ಎಂದು ಕಾಣುತ್ತದಪ್ಪ! ಅಷ್ಟೆ!' ಎಂದು ಹೇಳಿ ಮೂಲೆಯಲ್ಲಿದ್ದ ಕೋಲನ್ನು ಎತ್ತಿ ಬೆದರಿಸಿದನು. ಅಲ್ಲಿದ್ದ ಕಪ್ಪನೆಯ ರೂಪ ಮಾಯ ವಾಗಿಹೋಯಿತು. ಕೃಷ್ಣರಾಯರು ಮತ್ತೆ ನೋಡಿದಾಗ ಅದು ಅಲ್ಲಿರ ಲಿಲ್ಲ. ಮನೆಯ ಕಿಟಕಿಯ ಬಾಗಿಲುಗಳನ್ನೆಲ್ಲ ಹಾಕಿದ್ದುದರಿಂದ ಪಕ್ಕದ ಮನೆಯ ಕರಿಯ ಬೆಕ್ಕು ವೆಂಟಿಲೇಟರಿನಲ್ಲಿ ಹೊಂಚುತ್ತಿತ್ತು. ಭಯಸ್ಥರಿಗೆ ಹುಲುಸರವಿ ಹಾವಹುದು ಎನ್ನುವಂತೆ ಆ ಕರಿಯ ಬೆಕ್ಕು ಯಮದೂತನೋ ಪಿಶಾಚವೋ ಎನ್ನುವ ಹಾಗೆ ಕಂಡುಬಂತು. ಕೃಷ್ಣ ರಾಯರು ಧೈರ್ಯವನ್ನು ತಂದುಕೊಂಡರು. ತುಳಸಾಬಾಯಿಯನ್ನು ಎಬ್ಬಿಸಿ ಆಕೆಗೂ ಧೈರ್ಯ ಹೇಳಿದರು. ನಾಗರಾಜ, ' ಅದು ಬೆಕ್ಕಮ್ಮ! ಇನ್ನೇನೂ ಅಲ್ಲ. ಧೈರ್ಯವಾಗಿರು. . ನಾನೇ ಈ ಕೋಲಿನಿಂದ ಬೆದರಿಸಿ ಓಡಿಸಿದೆ. ಮಿಯಾವ್, ಮಿಯಾವ್ ಎಂದು ಕೂಗಿ ಹೊರಟು ಹೋಯಿತು' ಎಂದು ಹೇಳಿದನು.

' ಪಿಶಾಚಗಳು ಬೆಕ್ಕಿನ ಹಾಗೂ ಬರುತ್ತವೆಯಪ್ಪ! ಅದೇನು ಬೆಕ್ಕೇನೋ? ಪಿಶಾಚವೋ? ಬೆಳಗ್ಗೆ ತಾನೆ ಆ ಹಾಳು ಮಗುವನ್ನು ಮಣ್ಣು ಮಾಡಿದರು ನಿಮ್ಮಪ್ಪ! ಅದೋ ಕೊರಗಿ ಕೊರಗಿ ಪ್ರಾಣಬಿಟ್ಟಿತು. ಏನು ವಾಂಛಲ್ಯ ಹಚ್ಚಿಕೊಂಡಿತ್ತೋ?' ಎಂದು ಕಣ್ಣೀರು ಮಿಡಿಯುತ್ತ

ಭಯದಿಂದ ನಡುಗುತ್ತ ತುಳಸಾಬಾಯಿ ಹೇಳಿದಳು. ಆ ಮಾತು ಮುಗಿಯುವ ಹೊತ್ತಿಗೆ ಮತ್ತೆ ಆ ವೆಂಟಲೇಟರಿನ ಕಡೆ ನೋಟ ಹೋಯಿತು. ಮತ್ತೆ ಅಲ್ಲಿ ಕಪ್ಪಗೆ ಕಾಣಿಸುತ್ತಲೂ, ಕೃಷ್ಣರಾಯರ ಭುಜವನ್ನು ಹಿಡಿದುಕೊಂಡು, 'ಅಗೋ ನೋಡಿ! ಮತ್ತೆ ಭೂತ ಅಲ್ಲಿ ಬಂದು ನಿಂತಿದೆ' ಎಂದು ತೋರಿಸಿದಳು. ಕೃಷ್ಣರಾಯರೂ ನಾಗರಾಜನೂ ತಲೆಯೆತ್ತಿ ನೋಡಿದಾಗ ಅದು ಬೆಕ್ಕೆಂಬುದು ಸ್ಪಷ್ಟವಾಗಿ ಕಂಡಿತು. ತುಳಸಾಬಾಯಿಗೆ ಧೈರ್ಯವನ್ನು ಹೇಳಿ ಮತ್ತೆ ಆ ಬೆಕ್ಕನ್ನು ಓಡಿಸಿದ್ದಾಯಿತು. ಆಕೆಗೆ ಇನ್ನೂ ಧೈರ್ಯ ಬರಲೆಂದು ಬೀದಿಯ ವರಾಂಡದ ದೀಪವನ್ನು ಹಾಕಿ ಅಲ್ಲಿದ್ದ ಆಳುಗಳನ್ನು ಎಚ್ಚರವಾಗಿ ಕುಳಿತಿರುವಂತೆ ಕೃಷ್ಣರಾಯರು ಏರ್ಪಾಟು ಮಾಡಿದರು. ಇತ್ತ ಒಳಗಿನ ನಡುಮನೆಯಲ್ಲಿದ್ದ ನಾರಣಾಚಾರಿಯನ್ನು ಎಬ್ಬಿಸಿ ಅಲ್ಲಿಯೂ ದೀಪವನ್ನು ಹಾಕಿದ್ದಾಯಿತು. ಮಕ್ಕಳು ಮಾತ್ರ ನಿದ್ರೆಮಾಡುತ್ತಿದ್ದರು. ದೊಡ್ಡವರೆಲ್ಲ ಹೀಗೆ ದೀಪಗಳನ್ನು ಹಾಕಿಕೊಂಡು ಎಚ್ಚರವಾಗಿ ಮಾತನಾಡುತ್ತ ಕುಳಿತಿದ್ದರು. ಬೆಳಗಿನ ಜಾವ ನಾಲ್ಕು ಗಂಟೆ ಹೊಡೆದಮೇಲೆ ಭೂತಪ್ರೇತಾದಿಗಳೆಲ್ಲ ಸ್ವಸ್ಥಾನಗಳನ್ನು ಸೇರಿಕೊಂಡವೆಂಬ ನಂಬಿಕೆಯಿಂದ ಧೈರ್ಯ ಹೆಚ್ಚಿತು. ಜತೆಗೆ ಎಲ್ಲ ಕಡೆಯೂ ದೀಪಗಳು, ಆಳುಗಳ ಓಡಾಟ, ನಾರಣಾಚಾರಿ ನೀರೊಲೆಯನ್ನು ಹಚ್ಚುವ ಗಲಾಟೆ—ಇವುಗಳಿಂದ ಮನೆ ತುಂಬಿದಂತಾಗಿ ಹಿಂದಿನ ಭಯಂಕರ ವಾತಾವರಣ ಬಹುಮಟ್ಟಿಗೆ ತೊಲಗಿಹೋಯಿತು. ತುಳಸಾಬಾಯಿ ಧೈರ್ಯದಿಂದ ನೀರಮನೆಗೆ ಹೋಗಿ ಕೈಕಾಲುಗಳನ್ನು ತೊಳೆದುಕೊಂಡು ಬಂದಳು. ಕೈಕಾಲುಗಳನ್ನು ತೊಳೆದುಕೊಂಡುಬಿಟ್ಟರೆ ಪೀಡೆ ಪಿಶಾಚಗಳು ಹತ್ತಿರ ಬರುವುದಿಲ್ಲ ಎಂದು ಯಾರೋ ಆಕೆಗೆ ಹೇಳಿದ್ದರು!

ಮೇಲಿನ ಪ್ರಕರಣಗಳೆಲ್ಲ ಮುಗಿಯುವ ಹೊತ್ತಿಗೆ ಸರೋಜಳಿಗೆ ಎಚ್ಚರಿಕೆಯಾಗಿ, ಅವಳು ಮಗುವನ್ನು ನೆನಸಿಕೊಂಡು ಅಳುವುದಕ್ಕೆ ತೊಡಗಿದಳು. ಮತ್ತೆ ಎಲ್ಲರ ಕಣ್ಣುಗಳಲ್ಲಿಯೂ ನೀರು. ತುಳಸಾಬಾಯಿ ಮಗಳನ್ನು ಸಮಾಧಾನಪಡಿಸುತ್ತ, 'ನಾನೂ ಎರಡನ್ನು ಕಳೆದುಕೊಂಡವಳು. ಏನೋ ನಿನ್ನ ಅದೃಷ್ಟ ಹೀನ ಅದೃಷ್ಟ! ಚೊಚ್ಚಲಿಗೇನೇ

ಕೈಬರಿದು ಮಾಡಿಕೊಂಡೆಯಮ್ಮ! ಒಂದು ಹೋದರೇನು, ಮತ್ತೊಂದು ಆಗುತ್ತೆ' ಎಂದು ಹೇಳಿ, ಮರುಕ್ಷಣದಲ್ಲಿಯೇ, 'ಅಯ್ಯೋ! ಆ ಭಾಗ್ಯ ನೀನು ಕೇಳಿಕೊಂಡು ಬಂದಿದ್ದೀಯಾ ನನ್ನಮ್ಮ! ಆ ನಿನ್ನಪ್ಪ, ಆ ಮಹಾರಾಕ್ಷಸಿಯ ಕೈಯಿಂದ ನಿನ್ನ ಗಂಡ ಬಿಡುಗಡೆ ಹೊಂದಲಿಲ್ಲ! ಅವನಿಗೆ ಇನ್ನು ಏನು ದುರ್ಬೋಧನೆ ಮಾಡಿ ನಿನ್ನ ತಲೆಯಮೇಲೆ ಕಲ್ಲು ಎಳೆದುಬಿಡುತ್ತಾಳೋ! ನಿನ್ನ ತಂದೆ ನನ್ನ ಮಾತು ಕೇಳಲಿಲ್ಲ. ಅವರೇ ನಿನ್ನ ತಲೆಯಮೇಲೆ ಕಲ್ಲುಹಾಕಿಬಿಟ್ಟರು. ಸ್ನೇಹಿತರ! ಸ್ನೇಹಿತರು! ಎಂದು ಕಷ್ಟಪಟ್ಟುಕೊಂಡು ಅತ್ತಳು! ಆ ಸ್ನೇಹಿತ ಸಿಗದೆ ಕಣ್ಣುಮುಚ್ಚಿ ಕೊಂಡನು. ಈಗ ಆ ಸ್ನೇಹಿತರ ಹೆಂಡತಿಯ ಮುಂದೆ ನಿಂತುಕೊಂಡು ನಿನ್ನ ತಂದೆ ಅಳಲಿ!' ಎಂದು ಸುಂತಾಗಿ ಒಂದಕ್ಕೆ ನಾಲ್ಕು ಮಾತು ಗಳನ್ನು ಪ್ರೋಂಭಾವನೆಮಾಡಿ ತಾನೂ ಅಳುತ್ತ ಕುಳಿತಳು. ಹೀಗೆ ದುಃಖದಮೇಲೆ ದುಃಖ, ಕೋಪದಮೇಲೆ ಕೋಪ ಗಂಡೂರನು ಸ್ಫೋಟಕಗಳಂತೆ ಆ ಸಂಸಾರಕ್ಕೆ ಒದಗಿದುವು.

ಬೆಳಗ್ಗೆ ಐದುಗಂಟೆಯ ಹೊತ್ತಿಗಲ್ಲ ನಾರಣಾಚಾರಿ ಹಾಸಿಗೆ ಎದ್ದು, 'ನೀರು ಕಾದಿದೆ ಕಾಫಿ ಆಗಿದೆ' ಎಂದು ಹೇಳಿದನು. ದುಃಖದ ಅಥವಾ ಹೋರಾಟದ ಒಂದು ಸನ್ನಿವೇಶದಿಂದ ಅಸ್ವಸ್ಥ ಮನಸ್ಸನ್ನು ತಿರುಗಿಸುವುದಕ್ಕೆ ಕಾಫಿ ಒಳ್ಳೆಯ ಸಾಧನ. ಅದು ಕೋಪ ತಾಪಗಳ ಉಪಶಮನಕಾರಿಯೂ ಹೌದು, ಚೇತನಕ್ಕೆ ಉತ್ಸಾಹ ಕಾರಿಯೂ ಹೌದು. ಅದರಲ್ಲಿಯೂ ಬೆಳಗಿನ ಹೊತ್ತಿನ ಕಾಫಿ ಎಂದರೆ ದೇವತೆಗಳಿಗೂ ದುರ್ಲಭವಾದ ಭೂಲೋಕದ ಅಮೃತ. ಮನುಷ್ಯ ತಾನು ದೇವತೆಗಳೊಡನೆ ಸುಖಸಂತೋಷಗಳಲ್ಲಿ ಸ್ಪರ್ಧಿಸುವಾಗ ಅಮೃತಕ್ಕೆ ಪ್ರತಿಯಾಗಿ ಅವನು ಒದಗಿಸಿಕೊಂಡ ಪಾನೀಯ ಅದು. ಹಿಂದೆ ಯಜ್ಞಯಾಗಗಳ ಕಾಲದಲ್ಲಿ ಸೋಮಪಾನ ಮಾಡುತ್ತಿದ್ದರಂತೆ. ಈಗ ಯಜ್ಞಗಳಿಲ್ಲದಿದ್ದರೂ ಸಿಗರೇಟ್ ಧೂಮಗಳು ಬಾಯಿಂದ ಹೊರಸೂಸುತ್ತವೆ; ಸೋಮರಸಕ್ಕೆ ಬದಲು ಕಾಫಿ ಹೊಟ್ಟೆಯನ್ನು ಸೇರುತ್ತದೆ.

ನಾಗರಾಜ ಮತ್ತು ತುಳಸಾಬಾಯಿ ನೀರಮನೆಗೆ ಹೋದರು. ನಾರಣಾಚಾರಿ ಇಬ್ಬರಿಗೂ ಕೈಗೆ ನೀರನ್ನು ಹಾಕಿ, ಹಲ್ಲುಪುಡಿಯನ್ನು

ಕೊಟ್ಟನು. ಮುಖಪ್ರಕ್ಷಾಳನ ದಂತಧಾವನಗಳು ಮುಗಿದು ಅವರು ಹಿಂದಿರುಗಿದರು. ಬಳಿಕ ಕೃಷ್ಣರಾಯರು ತಮ್ಮ ಮಗಳನ್ನು ಕರೆದುಕೊಂಡುಹೋದರು. ಅವರದೂ ಮುಗಿದು ಅವರೂ ಹಿಂದಿರುಗಿದರು. ಬಿಸಿಬಿಸಿಯಾದ ಹದವಾದ ರುಚಿಯಾದ ಕಾಫಿ ಹೊಗೆಯಾಡುತ್ತ ಬಂತು. ಆ ದಿವಸ ಬೆಳಗ್ಗೆ ಎಲ್ಲರೂ ಎರಡೆರಡು ಲೋಟ ಕಾಫಿ ಕುಡಿದರು ಎಲ್ಲರಿಗೂ ದುಃಖ ಆರಿತು. ಬೆಳಕು ಹರಿಯುತ್ತಿದ್ದುದನ್ನು ಎಲ್ಲರೂ ನೋಡಿ ತಾವೆಲ್ಲ ರೈಲುಪ್ರಯಾಣದಲ್ಲಿ ಬೇರೊಂದು ಊರನ್ನು ತಲುಪಿದಂತೆ ಭಾವಿಸಿಕೊಂಡರು. ಹೀಗೆ ಕಾಲಪ್ರಯಾಣದಲ್ಲಿ ಒಂದು ದಿನ ಕಳೆಯಿತು.

ಅಷ್ಟು ಹೊತ್ತಿನಲ್ಲಿ ಅಂಚೆಯ ಆಳು ಕಾರ್ಡನ್ನು ತಂದು ಕೊಟ್ಟನು. ಸೀತಾರಾಮನು ಅದನ್ನು ಓದುತ್ತ ಕಣ್ಣೀರು ತುಂಬಿದನು. ಎಂಥ ವಿಚಿತ್ರ! ಆ ಮಗುವನ್ನು ತಾನು ಕಣ್ಣಿಂದ ಸಹ ನೋಡಲಿಲ್ಲ. ಅದನ್ನು ಎತ್ತಿಕೊಂಡು ಒಂದು ಬಾರಿಯೂ ಮುದ್ದಿಸಲಿಲ್ಲ, ಆಡಿಸಲಿಲ್ಲ. ಅದು ಹೇಗಿತ್ತು? ಎಂಬುದು ಕೂಡ ತಿಳಿಯದು. ಆದರೆ ತಾನು ಅದರ ಜನಕ; ತನ್ನದು ಆ ಮಗು, ಆ ಮಗು ಹೋಗಿಬಿಟ್ಟಿತಲ್ಲ - ಎಂಬ ಸಂಕಟ ಆ ತಂದೆಗೆ ಕಣ್ಣೀರನ್ನು ತಂದಿತು. ದೂರದಲ್ಲಿದ್ದರೂ ಕಣ್ಣಿಂದ ನೋಡದೇ ಇದ್ದರೂ ಅಗೋಚರವಾದ ಪಾಶಗಳು ಅಜ್ಞಾತವಾಗಿ ಹೇಗೆ ಪ್ರಭಾವವನ್ನು ಬೀರುತ್ತವೆ! ತನ್ನ ಪಾಡೇ ಹೀಗಾಯಿತಲ್ಲ. ಇನ್ನು ಒಂಬತ್ತು ತಿಂಗಳು ಹೊತ್ತು ಹೆತ್ತು, ಪಾಲಿಸಿ ಆಡಿಸಿ ನೋಡಿ ನಲಿಯುತ್ತಿದ್ದ ತನ್ನ ಹೆಂಡತಿ ಆ ಮಗುವನ್ನು ಕಳೆದುಕೊಂಡು ಹೇಗಿದ್ದಾಳೋ? ಅಯ್ಯೋ ವಿಧಿಯೆ! ನಾನು ಪಕ್ಕದಲ್ಲಿದ್ದು ಸಂತೈಸುವಂತೆ ಕೂಡ ಆಗಲಿಲ್ಲವಲ್ಲ! ಎಂದು ಪೇಚಾಡುತ್ತ ಕಣ್ಣೀರನ್ನೊರಸಿಕೊಳ್ಳುತ್ತ ಒಳಕ್ಕೆ ಹೋಗಿ ತಾಯಿಗೆ ಸಮಾಚಾರವನ್ನು ತಿಳಿಸಿದನು. ಆಕೆ ಅಡಿಗೆಯ ಮನೆಯಿಂದ ಹೊರಕ್ಕೆ ಬಂದುಬಿಟ್ಟಳು.

'ಅಪ್ಪಾ ಸೀತಾರಾಮು! ನನಗೂ ದುಃಖವಾಗುತ್ತದೆಯಪ್ಪ! ಹುಟ್ಟಿದ ಪಾಪಕ್ಕೆ ಏನೋ ಆಯುಸ್ಸಿನಿಂದ ಇದ್ದಿದ್ದರೆ ಆಗಿತ್ತು. ನೀನೂ ನನ್ನ ಕಣ್ಣಮುಂದೆ ಸಂಕಟಪಡುವ ಹಾಗಾಯಿತು. ಏನು ಮಾಡು

ವುದಪ್ಪ ? ಕೆಟ್ಟ ಜಾತಕ ! ಅದೀಗ ತಾರ್ಕಣ್ಯಕ್ಕೆ ಬಂತು' ಎಂದು ಕಾವೇರಮ್ಮ ಹೇಳಿದಳು.

'ಏನೋ ಅಮ್ಮ ! ನಾನು ಶಿವಮೊಗ್ಗಕ್ಕೆ ಹೋಗಿದ್ದಿದ್ದರೆ ಚೆನ್ನಾಗಿರುತ್ತಿತ್ತು, ಅಪಕೀರ್ತಿ ತಪ್ಪುತ್ತಿತ್ತು. ಮಗುವಿಗೆ ಆಯುಸ್ಸನ್ನು ನಾನೇನೂ ಕೊಡುತ್ತಿರಲಿಲ್ಲ. ಆದರೆ ನಾಲ್ಕು ಜನರ ಬಾಯಲ್ಲಿ ನಾನು ಬೀಳುತ್ತಿರಲಿಲ್ಲ. ಈಗ ನನ್ನ ಹೆಂಡತಿಗೂ, ನನ್ನ ಅತ್ತೆಮಾವಂದಿರಿಗೂ ನನ್ನ ವಿಚಾರದಲ್ಲಿ ಎಂಥ ಕೆಟ್ಟ ಅಭಿಪ್ರಾಯ ಬಂದುಹೋಯಿತು.'

'ಇನ್ನೂ ಆ ಚಾಂಚಲ್ಯ ಹಚ್ಚಿಕೊಳ್ಳಬೇಡ ಸೀತಾರಾಮು ! ಆ ಚಪಲ ಬಿಟ್ಟುಬಿಡು. ಮನಸ್ಸು ಗಟ್ಟಿಮಾಡು. ಈಗ ಆ ಮಾತೆಲ್ಲ ಆಡಬೇಡ. ನಿನಗೆ ಮೂರು ದಿನ ಸೂತಕ. ಒಂದು ದಿನ ಕಳೆದು ಹೋಯಿತು. ಇನ್ನೆರಡು ದಿನ ಉಳಿದಿದೆಯಪ್ಪ. ಹುಡುಗರಿಗೆಲ್ಲ ಸ್ನಾನ ಆಗಬೇಕು, ನಿನಗೂ ಆಗಬೇಕು' ಎಂದು ಕಾವೇರಮ್ಮ ಹೇಳುತ್ತಾ ಮುಂದಿನ ಏರ್ಪಾಟುಗಳನ್ನು ಮಾಡತೊಡಗಿದಳು.

ಆದರೆ ಸೀತಾರಾಮುವಿನ ಮನಸ್ಸು ದುಗುಡದಿಂದ ತುಂಬಿತ್ತು. ತನ್ನ ತಾಯಿಯ ಅಪ್ರತ್ಯಕ್ಷ ನಿರ್ಬಂಧದಿಂದಲ್ಲವೇ ತಾನು ಶಿವಮೊಗ್ಗಕ್ಕೆ ಹೋಗದೆ ನಿಂತದ್ದು. ಎಂತಹ ಕಠಿನಾತ್ಮನಾದರೂ ಸಾವುನೋವು ಗಳಲ್ಲಿ ಆತ್ಮೀಯರ ಬಳಿಯಿದ್ದು ಸಮಾಧಾನ ಮಾಡುವುದಿಲ್ಲವೇ ? ತನ್ನ ಮಗುವನ್ನು ಕಳೆದುಕೊಂಡ ಸಂಕಟ ಒಂದು, ತನ್ನ ಹೆಂಡತಿಯ ಮನಸ್ಸನ್ನು ವಿಪರೀತ ನೋಯಿಸಿದ್ದು ಎರಡನೆಯದು, ಆಕೆ ಬಸಿರ ಸಂಕಟವನ್ನನುಭವಿಸುವಾಗ ತಾನು ಸಮಾಧಾನ ಹೇಳುವುದಕ್ಕೆ ಪಕ್ಕದಲ್ಲಿಲ್ಲದೆ ಹೋದದ್ದು ಮೂರನೆಯದು. ಅವನಿಗೆ ದುಃಖವನ್ನು ತಡೆದುಕೊಳ್ಳಲಾಗಲಿಲ್ಲ. ನಿಟ್ಟುಸಿರುಬಿಡುತ್ತ ತನ್ನ ಕೊಟಡಿಗೆ ಹಿಂದಿರುಗಿ ಅಳುತ್ತಾ ಕುಳಿತುಕೊಂಡನು. ಕಾವೇರಮ್ಮ ಹಿಂದೆಯೇ ಹೋದಳು.

'ಅಪ್ಪ ಸೀತಾರಾಮು ! ಮಗು ಹೋಯಿತು ಎಂದರೆ ದೊಡ್ಡ ಸಂಕಟವೇನೋ ನಿಜ. ಆ ಬೀಗಿತ್ತಿಯಮೇಲೆ ನನಗೆ ಅಷ್ಟು ದ್ವೇಷ ವಿದ್ದರೂ, ನನ್ನ ಮೊಮ್ಮಗುವಿನಮೇಲೆ ನಿನಗಿದ್ದಂತೆಯೇ ನನಗೂ

ಪ್ರೇಮ ಇತ್ತಪ್ಪ. ಅದು ನಿನ್ನ ಮಗು ಅಲ್ಲವೇ! ಆದರೆ ದೇವರು ಅದಕ್ಕೆ ಆಯುಸ್ಸುಕೊಡಲಿಲ್ಲ. ಏನು ಮಾಡುವುದು? ಅದು ಎಲ್ಲೋ ಸಣ್ಣಜೀವ; ಬೆಳೆಯಲಿಲ್ಲ, ಬಾಳಲಿಲ್ಲ, ಆಕಾರ ಹೊಂದಿದ್ದ ಮಣ್ಣು! ಅದರ ಚಿಂತೆ ಹೆಚ್ಚಾಗಿ ಹಚ್ಚಿಕೊಳ್ಳಬೇಡಪ್ಪ ಬದುಕಿ ಬಾಳಿ ಸಂಸಾರ ನಡಸುತ್ತಿದ್ದ ದೊಡ್ಡ ಜೀವಗಳೇ ಹೋಗಿಬಿಡುತ್ತವೆ; ಸಂಸಾರಗಳೇ ಕುಸಿದು ಬೀಳುತ್ತವೆ; ಮಾನವಾಗಿದ್ದವರು ಬೀದಿಯಲ್ಲಿ ಭಿಕ್ಷಕ್ಕೆ ಹೊರಡ ಬೇಕಾಗುತ್ತದೆ. ನಿಮ್ಮಪ್ಪ ನಮ್ಮನ್ನು ಕಷ್ಟಕ್ಕೆ ಸಿಕ್ಕಿಸಿ ಹೊರಟು ಹೋಗಲಿಲ್ಲವೇ? ಅದಕ್ಕಿಂತ ದೊಡ್ಡ ನಷ್ಟವೇ ಇದು? ಮನಸ್ಸನ್ನು ಗಟ್ಟಿಮಾಡು. ಗಂಡಸು ಹೆಂಗಸಿನಂತೆ ಧೈರ್ಯಗೆಟ್ಟು ಅಳುತ್ತಾ ಕುಳಿತು ಕೊಳ್ಳಬಾರದು.'

'ಅಮ್ಮ! ನೀನು ಏನಾದರೂ ತಿಳಿದುಕೋ. ನನಗೆ ಸಂಕಟದ ಹೊತ್ತು. ನಿನ್ನ ಭಯದಿಂದ ಆಗ ನಾನು ಶಿವಮೊಗ್ಗಕ್ಕೆ ಹೋಗಲಿಲ್ಲ. ಈಗ ನೀನು ಒಪ್ಪಿದರೂ ಸರಿಯೆ, ಒಪ್ಪದಿದ್ದರೂ ಸರಿಯೆ. ನಾನು ಶಿವಮೊಗ್ಗಕ್ಕೆ ಹೋಗಿ ಬರುತ್ತೇನೆ. ಮಗು ಸತ್ತಿತು—ಎಂದು ತಿಳಿಸಿ ದರೂ ನಾನು ಹೋಗದೇ ಇದ್ದರೆ ನಾನು ಕಿರಾತನಿಗಿಂತ ಕೇಡಿಗ ನಲ್ಲವೇ? ಅವಳದು ಕೆಟ್ಟ ಜಾತಕವೋ ಸುಟ್ಟ ಜಾತಕವೋ ಅವಳು ನನ್ನ ಹೆಂಡತಿ! ಅವಳೇ ಸಾಯುತ್ತಾಳೋ ನಾನೇ ಸಾಯುತ್ತೇನೋ, ಮುಂದೆ ಏನು ನಡೆಯುತ್ತದೋ ಅದನ್ನೆಲ್ಲ ಈಗ ಆಲೋಚಿಸಿ ಪ್ರಯೋಜನವಿಲ್ಲ. ಅವಳು ಬದುಕಿರುವ ವರೆಗೂ ನಾನು ಆದರಿಸ ಬೇಕಾದ್ದು ನನ್ನ ಕರ್ತವ್ಯ, ನನ್ನ ಧರ್ಮ. ಆ ಮಗುವಿನಂತೆ ಅವಳೂ ಸತ್ತುಹೋದರೆ ಅಲ್ಲಿಗೆ ತೀರಿತು ಋಣಾನುಬಂಧ. ಈ ಕಷ್ಟಕಾಲದಲ್ಲಿ ಈ ದುಃಖದ ಸಮಯದಲ್ಲಿ, ಮಗುವಿನ ತಂದೆ ಎನ್ನಿಸಿಕೊಂಡ ನಾನು ತುಮಕೂರಿನಲ್ಲೇ ನಿಂತುಬಿಡುವುದು ಸುತರಾಂ ಸರಿಯಲ್ಲ.'

'ನಿನ್ನಿಷ್ಟವಪ್ಪ! ನಾನೇಕೆ ಅಡ್ಡ ಬರಲಿ? ನನ್ನ ಭಯಕ್ಕಾಗಿ ನೀನೇಕೆ ಶಿವಮೊಗ್ಗಕ್ಕೆ ಹೋಗದೇ ಇರಬೇಕು? ನನ್ನ ಭಯಕ್ಕಾಗಿ ನೀನೇಕೆ ನಿನ್ನ ಹೆಂಡತಿಯನ್ನು ಸಮಾಧಾನಪಡಿಸದೆ ಇರಬೇಕು? ನಾನೂ ಮಕ್ಕಳನ್ನು ಹೆತ್ತವಳು. ಮೂರು ತಿಂಗಳ ಆ ಸಣ್ಣಜೀವ

ಹೋದದ್ದಕ್ಕೆ ನೀನು ಇಷ್ಟೆಲ್ಲ ಮಾತನಾಡಿದೆ. ಸಾಕೆ, ಇಪ್ಪತ್ತೈದು ವರ್ಷದ ಮಗ, ಕೈಗೆ ಬಂದ ಮಗ ನನಗೆ ಹೋಗಿಬಿಟ್ಟರೆ ನಾನು ಯಾರ ಹತ್ತಿರ ಇಷ್ಟೆಲ್ಲ ಮಾತನಾಡಬೇಕು? ನಿಮ್ಮಪ್ಪ ಏನಾದರೂ ಮತ್ತೆ ಎದ್ದು ಬಂದು ನನ್ನನ್ನ ಸಮಾಧಾನ ಮಾಡುತ್ತಾರೆಯೇ? ಹೆಂಡತಿಯ ಮೇಲೆ ಅಷ್ಟೊಂದು ಪ್ರೇಮ ಇಟ್ಟುಕೊಂಡವನು ನೀನು, ಈಗ ಧೈರ್ಯ ಮಾಡಿ ನನ್ನನ್ನ ಎದುರಿಸೋ ಹಾಗೆ ಹಿಂದೆಯೇ ಧೈರ್ಯಮಾಡಿ ಎದುರಿಸಿ ಶಿವಮೊಗ್ಗಕ್ಕೆ ಹೋಗಿಬರುತ್ತ, ನಿನ್ನತ್ತೆ ಕುಣಿಸಿದಂತೆಲ್ಲ ಕುಣಿಯುತ್ತ ಇದ್ದಿದ್ದರೆ ಚೆನ್ನಾಗಿರುತ್ತಿತ್ತು. ನಿನ್ನ ಹೆಂಡತಿ ಹೆರುವ ಕಾಲಕ್ಕೆ ಅಲ್ಲೇ ಇದ್ದು, ಎರಡು ದಿನ ಬಾಣಂತಿತನವನ್ನು ಮಾಡಿ, ಆಮೇಲೆ ತಾನುಕೂರಿಗೆ ಬಂದಿದ್ದರೆ ಚೆನ್ನಾಗಿರುತ್ತಿತ್ತು. ಮಗು ಹೋಯಿತು ಎಂದು ಈಗ ತಿಳಿದು ಸಮಾಧಾನ ಮಾಡುವುದಕ್ಕೆ ಹೋಗುವುದು ನ್ಯಾಯವಾಗಿತ್ತು. ಈಗ ಯಾವ ಮುಖದಿಂದ ಶಿವಮೊಗ್ಗಕ್ಕೆ ಹೋಗಿ ಆ ತುಳಸಾಬಾಯಿಯ ಮುಂದೆ ನಿಲ್ಲುತ್ತೀಯೆ? ಹೇಳಪ್ಪ ಸೀತಾರಾಮು! ಅವಳನ್ನ ನೀನೇನು ಬಲ್ಲೆ! ನೂರು ಜನ ಗಂಡಸರಿಗೆ ಅವಳೊಬ್ಬಳು ಸಮ! ಹಿಂದೆಯೆಲ್ಲ ನಿನ್ನ ಮುಂದೆ ಜೇನ್ನೆಯಂಥ ಮಾತನಾಡಿದಳು! ನಿನ್ನನ್ನ ಹಾರಿಸಿಕೊಂಡು ಹೊರಟು ಹೋಗೋಣ ಅಂತ ಮಾಯಾವಿದ್ಯೆ ಮಾಡಿದಳು! ಈಗ ನೀನು ಹೋಗಿ ಹೊಸಿಲು ಮೆಟ್ಟೋ ವೇಳೆಗೆ ಅವಳ ಅವತಾರ ಏನಾಗಿ ತಿರುಗುತ್ತದೆಯೋ! ನೀನು ಒಳ್ಳೆಯವನೇ, ಸಾಧು! ಪುನಃ ಅಪಮಾನಪಟ್ಟುಕೊಂಡು ಬರೋದಂತೂ ಖಂಡಿತ. ಖಂಡಿತ ಸೀತಾರಾಮು! ಈ ತಾಯಿ ಕೆಟ್ಟವಳು, ಕಿರಾತೆ ಎಂದು ತಿಳಿಯಬೇಡ.'

'ಹಾಗಾದರೆ ಈಗ ನಾನೇನು ಮಾಡಬೇಕು ಎನ್ನುತ್ತೀಯೆ? ಆ ಮಗುವಿನ ಆಯುಸ್ಸು ಮುಗಿದ ಹಾಗೆ ನನ್ನ ಆಯುಸ್ಸು ಮುಗಿಯಲಿಲ್ಲವಲ್ಲ! ಈ ಸಂಕಟ ನಾನು ಅನುಭವಿಸಲಾರೆನಲ್ಲ!'

'ಇರಲಪ್ಪ! ಸಂಕಟವೇ, ನಿನಗೂ ಸಂಕಟವೇ, ನನಗೂ ಸಂಕಟವೇ. ಮನಸ್ಸು ಗಟ್ಟಿಮಾಡು. ಸಂಕಟ ಸಹಿಸಿಕೋ. ಈಗ ಸ್ನಾನಕ್ಕೆ ಏಳು. ನಿನಗೇನು! ಇನ್ನೂ ಇಪ್ಪತ್ತೈದು ವರ್ಷ. ದಿವ್ಯವಾಗಿ ನೀನಿದ್ದೀಯೆ, ದಿವ್ಯನಾದ ಮಕ್ಕಳು ಮುಂದೆ ನಿನಗೂ ಆಗುತ್ತೆ.

ಶಿವಮೊಗ್ಗದ ವ್ಯಾಮೋಹ ಬಿಟ್ಟುಬಿಡು. ಸ್ನಾನಕ್ಕೆ ಏಳಪ್ಪ! ನೀನು ಬದುಕೋ ಮಾರ್ಗ ನೋಡು. ಈ ತಾಯಿಯ ಮಾತು ತಳ್ಳಿಹಾಕ ಬೇಡ.'

ಸೀತಾರಾಮು ಕೊಟಡಿಯಿಂದ ಹೊರಕ್ಕೆ ಬಂದನು. 'ಅಮ್ಮ! ಈ ತುಮಕೂರು ಸಾಕು. ಬೇರೆ ಎಲ್ಲಿಗಾದರೂ ವರ್ಗಮಾಡಿಸಿಕೊಂಡು ಹೊರಟುಹೋಗುತ್ತೇನೆ.'

'ಆಗಲಪ್ಪ. ಮುಂದಿನ ಆಲೋಚನೆ ಆಮೇಲೆ ಮಾಡೋಣ.'

ಎಲ್ಲರಿಗೂ ಸ್ನಾನಗಳಾದವು. ಆ ಮನೆಯಲ್ಲಿಯೂ ಆ ದಿವಸವೆಲ್ಲ ದುಃಖ ಮತ್ತು ಮೌನ ತುಂಬಿದ್ದುವು.

## ೧೭. ತರೀಕೆರೆಯಲ್ಲಿ

ಶಿವಮೊಗ್ಗದಲ್ಲಿ ನಡೆದ ದುರಂತಪ್ರಕರಣ ಕೃಷ್ಣರಾಯರ ತಂಗಿಗೆ ಕಾಗದದ ಮೂಲಕ ತಿಳಿಯಿತು. ಆಕೆಗೆ ಬಹಳ ಸಂಕಟವಾಯಿತು. ಸರೋಜಳ ಮೇಲೆ ಆಕೆಗೆ ಸಹಜವಾದ ಪ್ರೇಮ. ಜತೆಗೆ ಹೆರಿಗೆಯ ಕಾಲಕ್ಕೆ ತಾನಿದ್ದು ಅವಳನ್ನು ಆದರಿಸಿದ್ದು, ಆ ಗಂಡ ತೊರೆದ ಹೆಣ್ಣು ಸಂಕಟಪಟ್ಟದ್ದು – ಎಲ್ಲವನ್ನೂ ಜ್ಞಾಪಿಸಿಕೊಂಡು ಸಮಾಧಾನಮಾಡಿ ಬರೋಣವೆಂದು ತನ್ನ ಮಗ ಸ್ವಾಮಿಯನ್ನು ಕರೆದುಕೊಂಡು ಆಕೆ ಶಿವಮೊಗ್ಗಕ್ಕೆ ಬಂದಳು.

ಆಕೆ ಮನೆಯೊಳಕ್ಕೆ ಬಂದಾಗ ಸರೋಜ ಕೃಷ್ಣರಾಯರ ಕೊಟಡಿಯಲ್ಲಿ ಮಲಗಿದ್ದಳು. ಕೃಷ್ಣರಾಯರಿಗಾಗಲಿ ತುಳಸಾಬಾಯಿಗಾಗಲಿ ಆಕೆ ಬರುತ್ತಾಳೆಂಬುದು ತಿಳಿದಿರಲಿಲ್ಲ. ಆಕೆ ನೀರಮನೆಗೆ ಹೋಗಿ ಕೈಕಾಲುಗಳನ್ನು ತೊಳೆದುಕೊಂಡು ಹಾಲಿಗೆ ಬಂದಳು. 'ಸರೋಜ ಎಲ್ಲಿ ಅತ್ತಿಗೆ?' ಎಂದು ಕಣ್ಣೀರು ಹನಿಸುತ್ತ ತುಳಸಾಬಾಯಿಯನ್ನು ಕೇಳಿದಳು. ಆಕೆ ತಾನೂ ಕಣ್ಣೀರು ಹಾಕುತ್ತ ಕೃಷ್ಣರಾಯರ ಕೊಟಡಿಯನ್ನು ತೋರಿಸಿದಳು. ಆಕೆ ಬಾಗಿಲನ್ನು ತೆರೆದು ಮಂಚದ ಮೇಲೆ ಮಲಗಿದ್ದ ಸರೋಜಳನ್ನು ನೋಡಿದುದೊಂದೇ ತಡ, ಸರೋಜ, 'ಅತ್ತೆ! ಬಂದೆಯಾ!' ಎಂದಿಷ್ಟು ಮಾತ್ರ ಆಡಿದಳು. ಮುಂದೆ ಮಾತು ಹೊರಡಲಿಲ್ಲ. ಒಂದೇ ಕ್ಷಣದಲ್ಲಿ ಮಂಚವಿಳಿದು ಅತ್ತೆಯ ತೋಳ ತೆಕ್ಕೆಯಲ್ಲಿ ಬಿದ್ದಳು. ಸ್ವಲ್ಪ ಹೊತ್ತಿನವರೆಗೆ ಬರಿಯ ಅಳು; ಯಾರದೂ ಮಾತಿಲ್ಲ.

ಆಮೇಲೆ ಮಗುವಿನ ಕಾಯಿಲೆಯ ವಿವರಗಳು, ಅದರ ನರಳಾಟ ಮುಲುಗಾಟಗಳ ವರ್ಣನೆ, ಕಡೆಗೆ ಮಣ್ಣುಮಾಡಿದ್ದು, ಆ ರಾತ್ರಿಯಲ್ಲಿ ತುಳಸಾಬಾಯಿ ಹೆದರಿಕೊಂಡದ್ದು — ಇವೆಲ್ಲವನ್ನೂ ಕೃಷ್ಣರಾಯರೂ ತುಳಸಾಬಾಯಿಯೂ ತಿಳಿಸಿದರು. ಅವುಗಳನ್ನೆಲ್ಲ ಕೇಳಿದ ಮೇಲೆ ಆಕೆ,

'ಕಿಟ್ಟಣ್ಣ! ಇವರು ಸ್ಥಳ ಬದಲಾಯಿಸುವುದು ಒಳ್ಳೆಯದು. ಅತ್ತಿಗೆಯನ್ನೂ ಸರೋಜಳನ್ನೂ ತರೀಕೆರೆಗೆ, ನನ್ನ ಮನೆಗೆ ಕಳಿಸಿಕೊಡು.

ಒಂದು ತಿಂಗಳು ಇಟ್ಟುಕೊಂಡಿದ್ದು ಆರೈಕೆ ಮಾಡುತ್ತೇನೆ. ದುಃಖ ಮರೆಯುತ್ತೆ' ಎಂದು ಹೇಳಿದಳು.

'ನನ್ನನ್ನ ತುಮಕೂರಿಗೆ ಕರೆದುಕೊಂಡು ಹೋಗಿ ಬಿಟ್ಟುಬಿಡಿ. ಸ್ಥಳ ಬದಲಾಯಿಸಿದ ಹಾಗೂ ಆಗುತ್ತೆ. ನನ್ನ ಗಂಡನ್ನ ನಾನು ಸೇರಿಕೊಂಡ ಹಾಗೂ ಆಗುತ್ತೆ. ಆಯಿತಲ್ಲ ನಾನು ಹೆತ್ತ ಸಂಭ್ರಮ! ಇನ್ನು ಬಾಣಂತಿತನವೂ ಸಾಕು!' ಎಂದು ಸರೋಜ ಉತ್ತರ ಕೊಟ್ಟಳು.

ತುಳಸಾಬಾಯಿ ನೆಟಿಕೆಗಳನ್ನು ಮುರಿಯುತ್ತ, 'ಗಂಡ! ಗಂಡ! ಎಂದು ಏಕೆ ಸಾಯುತ್ತೀಯೋ ಅಮ್ಮ! ನಿನ್ನ ಪ್ರಾಣಕ್ಕೆ ಅವನೊಬ್ಬ ಗಂಡ! ಕಟುಕನಾದರೂ ಮೇಲು. ತನ್ನ ಹೆಂಡತಿ, ತನ್ನ ಮಗು ಎಂದರೆ ಎಷ್ಟೋ ಮಮತೆ ಇರುತ್ತೆ. ಕಟುಕನಿಗಿಂತ ನೀಚನಾಗಿದ್ದಾನೆ ಆ ನಿನ್ನ ಗಂಡ! ಮಗು ಸತ್ತಿತು ಎಂದು ತಿಳಿಸಿದರೂ ಇಲ್ಲಿಗೆ ಬಾರದೆ ದ್ವೇಷ ಸಾಧಿಸುತ್ತಿದ್ದಾನೆ. ಇನ್ನು ನಿನ್ನನ್ನಿಟ್ಟುಕೊಂಡು ಅವನು ಬಾಳುತ್ತಾನೆಯೆ? ಯಾವುದಕ್ಕೂ ಈಗ ನಾಲ್ಕನೆಯ ತಿಂಗಳು. ಹುಟ್ಟಿ ಒಂದು ವಾರವಾಯಿತು. ಈ ತಿಂಗಳು ಕಳೆದಮೇಲೆ ಆಲೋಚನೆ ಮಾಡೋಣ ಅಮ್ಮ. ಈಗ ನಿನ್ನ ಆರೋಗ್ಯ ಕುದರಿಕೊಂಡರೆ ಸಾಕು' ಎಂದು ಹೇಳಿದಳು.

'ಮಗು ಬದುಕಿದ್ದರೆ ಮೂರನೆಯ ತಿಂಗಳು, ನಾಲ್ಕನೆಯ ತಿಂಗಳು ಎಂದು ಲೆಕ್ಕ ನೀನು ಮಾಡಬಹುದು. ಅದು ಹೋಗಿಬಿಟ್ಟಿತಲ್ಲ! ಅಪ್ಪ ಅದನ್ನು ಮಣ್ಣುಮಾಡಿಬಿಟ್ಟನಲ್ಲ!' ಎಂದು ಹೇಳುತ್ತ ಹೇಳುತ್ತ ಸರೋಜ ಗಟ್ಟಿಯಾಗಿ ಅಳುವುದಕ್ಕೆ ತೊಡಗಿದಳು. ಮತ್ತೆ ಎಲ್ಲರಿಗೂ ಕಣ್ಣೀರು ಹರಿಯಿತು ಸ್ವಲ್ಪ ಸಮಾಧಾನಕ್ಕೆ ಬಂದಮೇಲೆ ಸರೋಜ ಮುಂದು ವರಿದು, 'ಅತ್ತೆ! ಗಂಡಸರ ಮನಸ್ಸು ಒಂದೇ ತರಹ ಕಠಿನವಾಗಿರೋದಿಲ್ಲ. ನಾನು ಕಣ್ಣೆದುರಿಗೆ ಓಡಾಡುತ್ತಿದ್ದರೆ ಏನೋ ನೆಪದಲ್ಲಿ ಅಡ್ಡ ಮಾತು ಆಡಬೇಕಾಗುತ್ತೆ; ಹಾಗೆಯೇ ಆದರಿಸಬೇಕಾಗುತ್ತೆ. ನಾನೇನು ಅಪರಾಧ ಮಾಡಿದ್ದೇನೆ? ಎಂದು ಅವರನ್ನೇ ಕೇಳುತ್ತೇನೆ' ಎಂದು ಹೇಳಿದಳು.

ಕೃಷ್ಣರಾಯರು, 'ಆಗಲಮ್ಮ ಸರೋಜ! ನಿನ್ನನ್ನ ತುಮಕೂರಿಗೆ

ಸೇರಿಸೋ ವಿಚಾರ ಆಲೋಚನೆ ಮಾಡೋಣ ಈಗ ನಿನ್ನ ಅತ್ತೆಯ ಜತೆಯಲ್ಲಿ ನೀನೂ ನಿನ್ನ ತಾಯಿ ಹೋಗಿಬಿಟ್ಟು ಬನ್ನಿ. ತರೀಕೆರೆಯಲ್ಲಿ ಕೆಲವು ದಿನಗಳ ಮಟ್ಟಿಗೆ ಇರಿ. ತುಮಕೂರಿನ ಸಮಾಚಾರವನ್ನು ತಿಳಿದುಕೊಂಡು ಮುಂದಿನ ಏರ್ಪಾಟು ಮಾಡುತ್ತೇನೆ' ಎಂದು ಸಮಾಧಾನಪಡಿಸಿದರು.

ಆ ದಿನ ಸಾಯಂಕಾಲ ನಾಲ್ಕು ಗಂಟೆಯ ಹೊತ್ತಿಗೆ ಮೋಟಾರಿನಲ್ಲಿ ತುಳಸಾಬಾಯಿ, ಸರೋಜ, ಕೃಷ್ಣರಾಯರ ತಂಗಿ ಮತ್ತು ಆಕೆಯ ಮಗ ಸ್ವಾಮಿ ತರೀಕೆರೆಗೆ ಹೊರಟರು. ತರೀಕೆರೆ ಸೇರುವ ಹೊತ್ತಿಗೆ ಸಾಯಂಕಾಲ ಐದು ಗಂಟೆ. ಕೃಷ್ಣರಾಯರ ತಂಗಿಗೆ ನಾಲ್ಕು ಜನ ಮಕ್ಕಳು. ಮೂರು ಗಂಡು, ಒಂದು ಹೆಣ್ಣು. ಅವರಲ್ಲಿ ಹಿರಿಯ ಮಗ ಸ್ವಾಮಿ. ಅವನನ್ನೇ ಹಿಂದೆ ಕೃಷ್ಣರಾಯರ ಮನೆಯಲ್ಲಿ ಓದಿಕೊಂಡಿರುವುದಕ್ಕೆ ಬಿಡಬೇಕೆಂದು ಆ ತಂಗಿ ಉದ್ದೇಶಪಟ್ಟು, ತುಳಸಾಬಾಯಿ ಅದನ್ನು ಸಾಗಗೊಡದೆ ಹೋಗಿದ್ದು. ಈಚೆಗೆ ಅವನು ತನ್ನ ದೊಡ್ಡಪ್ಪನ ಮನೆಯಲ್ಲಿ ಆಶ್ರಯ ಪಡೆದು ಇಂಟರ್‌ಮೀಡಿಯಟ್ ಪ್ಯಾಸ್ ಮಾಡಿ, ಬೆಂಗಳೂರಿಗೆ ಹೋಗಿ ಸೆಂಟ್ರಲ್ ಕಾಲೇಜನ್ನು ಸೇರಿಕೊಂಡು ಬಿ. ಎಸ್‌ಸಿ. ಪರೀಕ್ಷೆಗೆ ಕಟ್ಟಿ ಆಗ ತಾನೇ ಅದರಲ್ಲಿಯೂ ತೇರ್ಗಡೆ ಹೊಂದಿದ್ದನು. ವಯಸ್ಸಿನಲ್ಲಿ ಸರೋಜಳಿಗಿಂತ ಎರಡು ವರ್ಷ ದೊಡ್ಡವನು. ಸ್ವಾಮಿ ಮಾತಿನಲ್ಲಿ ಸರಸಿ, ಪ್ರವೃತ್ತಿಯಲ್ಲಿ ಹಾಸ್ಯಗಾರ, ಸ್ವಲ್ಪ ಕುಚೇಷ್ಟೆಯೂ ಉಂಟು. ಆದರೆ ದುಷ್ಟನಲ್ಲ, ಪೋಕರಿಯಲ್ಲ. ವ್ಯಾಯಾಮ ಕ್ರೀಡೆಗಳಲ್ಲಿ ಅವನಿಗೆ ಪರಮಾಸಕ್ತಿ; ಒಳ್ಳೆಯ ಮೈಕಟ್ಟುಳ್ಳ ಯುವಕ.

ತರೀಕೆರೆಯಲ್ಲಿ ತುಳಸಾಬಾಯಿಗೂ ಸರೋಜಳಿಗೂ ಸ್ವಾಮಿ ಬಹಳವಾಗಿ ಉಪಚಾರ ಮಾಡುತ್ತಿದ್ದನು. ಅವರ ಹಾಸಿಗೆಗಳನ್ನು ತಾನೇ ಹಾಕಿಕೊಡುವುದು, ಅವುಗಳನ್ನು ತಾನೇ ಸುತ್ತಿಡುವುದು, ಊಟಕ್ಕೆ ಮಣೆಗಳನ್ನು ಹಾಕುವುದು, ಎಲೆಗಳನ್ನು ಹಾಕುವುದು, ಜತೆಯಲ್ಲಿ ತಾನು ಕುಳಿತು ವಿನೋದ ಮಾಡುತ್ತ ಊಟ ಮಾಡುವುದು, ಮಧ್ಯಾಹ್ನ ಏನಾದರೂ ಕಥೆಗಳನ್ನು ಹೇಳುವುದು, ಸರೋಜಳಿಗೆ ವೃತ್ತಪತ್ರಿಕೆಗಳನ್ನು ತಂದುಕೊಡುವುದು, ಹಣ್ಣು ಹೂವುಗಳನ್ನು ದಿನವೂ ಒದಗಿಸುವುದು—

ಇತ್ಯಾದಿಯಾಗಿ ಸಣ್ಣ ಪುಟ್ಟ ಆದರಾತಿಥ್ಯಗಳನ್ನು ಅವನು ಮಾಡುತ್ತಿದ್ದನು. ಕೃಷ್ಣರಾಯರ ತಂಗಿ ದಿನವೂ ಹೆಚ್ಚುಗಟ್ಟಲೆ ತಿಂಡಿ ಮತ್ತು ಅಡಿಗೆಗಳನ್ನು ಮಾಡುತ್ತಿದ್ದಳು. ಬೆಳಗ್ಗೆ ಅತಿಥಿಗಳಿಗೆ ಸ್ಪೆಷಲ್ ಕಾಫಿ, ಜತೆಗೆ ಉಪ್ಪಿಟ್ಟೋ, ದೋಸೆಯೋ, ಇಡ್ಲಿಯೋ ಪೂರಿಯೋ ಉಪಾಹಾರಕ್ಕೆ. ಅಡಿಗೆ: ಒಂದು ಪಲ್ಯ, ಒಂದು ಕೂಟು ಅಥವಾ ಹುಳಿ, ಸಾರು, ಬಜ್ಜಿ, ಬೋಂಡ ಅಥವಾ ಉಪ್ಪೇರಿ ಮತ್ತು ಮನೆಯಲ್ಲೇ ಹೆಪ್ಪು ಹಾಕಿದ ಗಟ್ಟಿ ಕೆನೆ ಮೊಸರು. ಮಧ್ಯಾಹ್ನದ ಉಪಾಹಾರಕ್ಕೆ ಕಾಫಿ ಅಥವಾ ಟೀ; ಚಕ್ಕುಲಿಯೋ ತೇಂಗೊಳಲೋ ಮತ್ತೆ ಏನಾದರೊಂದು, ಹಣ್ಣುಗಳು. ರಾತ್ರಿಯೂ ಬಿಸಿ ಅಡಿಗೆ ಆಗುತ್ತಿತ್ತು. ರಾತ್ರಿ ಅವರಿಗೆ ಕುಡಿಯುವುದಕ್ಕೆ ಬೆಳ್ಳಿ ಲೋಟಗಳಲ್ಲಿ ಒಳ್ಳೆಯ ಹಸುವಿನ ಹಾಲು. ಬಾಣಂತಿಗೆ ವಾರಕ್ಕೆ ರಡು ಬಾರಿ, ತುಳಸಾಬಾಯಿಗೆ ಪ್ರತಿ ಶುಕ್ರವಾರ ತಾನೇ ಎಣ್ಣೆಹಚ್ಚಿ ಎರೆಯುತ್ತಿದ್ದಳು. ತುಳಸಾಬಾಯಿ ತನ್ನ ಮನೆಯಲ್ಲಿ ಎಂದೂ ಅಂತಹ ಉಪಚಾರಗಳನ್ನು ಇತರರಿಗೆ ಮಾಡಿದ್ದಿಲ್ಲ. ಒಂದು ದಿನವಾದರೂ ಕೃಷ್ಣರಾಯರ ತಂಗಿ ಸಿಡುಕು ಮಾಡಿಕೊಂಡಿದ್ದಿಲ್ಲ.

ಒಂದು ದಿನ ಮಧ್ಯಾಹ್ನ ಸ್ವಾಮಿ ಕುಚೋದ್ಯಕ್ಕಾಗಿ, 'ಅತ್ತೆ! ನಿನ್ನನ್ನ ಒಂದು ಪ್ರಶ್ನೆ ಕೇಳಬೇಕಲ್ಲ' ಎಂದನು. ತುಳಸಾಬಾಯಿ, 'ಅದೇನು ಪ್ರಶ್ನೆಯೋ ಕೇಳಪ್ಪ. ಅದಕ್ಕೇನು? ನನಗೆ ತೋರಿದ ಉತ್ತರ ಹೇಳುತ್ತೇನೆ' ಎಂದಳು.

'ನೀನು ಹೆಚ್ಚು ಗಟ್ಟಿಗಿತ್ತಿಯೋ, ಮಾವ ಹೆಚ್ಚು ಗಟ್ಟಿಗನೋ? ಸಂಸಾರದಲ್ಲಿ ಹೇಗೆ? ಹೇಳತ್ತೆ!'.

'ನಿನ್ನ ಮಾವನವರೇ ಗಟ್ಟಿಗರಪ್ಪ! ನನ್ನದೇನು? ಹೆಂಗಸಿನ ಪಾರುಪತ್ಯ ಏನು ನಡೆಯುತ್ತೆ?'

'ನೀನೇ ಹೆಚ್ಚು ಗಟ್ಟಿಗಿತ್ತಿ ಅತ್ತೆ! ಒಟ್ಟಿನಲ್ಲಿ ಹೆಂಗಸರೇ ಹೆಚ್ಚು ಪ್ರಬಲರು ಎಂದು ನನಗೆ ಕಾಣುತ್ತೆ.'

'ಹೆಂಗಸರೇ ಹೆಚ್ಚು ಪ್ರಬಲರು ಎನ್ನುವುದು ಹೇಗಪ್ಪ?'

'ನಿನಗೊಂದು ಕಥೆ ಹೇಳುತ್ತೇನೆ, ಕೇಳು. ಚಿಕ್ಕಮಗಳೂರಿನಲ್ಲಿ ನಡದದ್ದು. ಗಂಡ ಹೆಂಡತಿ ಒಂದು ಹೊಸ ಸಂಸಾರ ಹೂಡಿದ್ದರು.

ಗಂಡನಿಗೆ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಒಂದು ಗುಮಾಸ್ತೆ ಕೆಲಸ. ತಿಂಗಳಿಗೆ ಐವತ್ತು ರೂಪಾಯಿ ಸಂಬಳ. ಅವನು ಸಂಸಾರ ಹೂಡಿದಾಗ ಅವನ ಹೆಂಡತಿಗೆ ತವರುಮನೆಯವರು ಪಾತ್ರೆ ಪದಾರ್ಥ ಕೊಡಬೇಕಲ್ಲ! ತವರು ಮನೆಯವರು ಅಷ್ಟೇನೂ ಸ್ಥಿತಿವಂತರಲ್ಲ. ಅವರು ಅಡಿಗೆಗೆ ಬೇಕಾದ ಕೆಲವು ಪಾತ್ರೆಗಳನ್ನು ತೆಗೆದುಕೊಟ್ಟಿದ್ದರು. ನೀರು ಕಾಯಿಸುವುದಕ್ಕೆ ಹಂಡೆ ತೆಗೆದುಕೊಟ್ಟಿರಲಿಲ್ಲ. ಹುಡುಗಿಗೆ, ಉಪಾಯ ಮಾಡಿ ನಿನ್ನ ಗಂಡನ ಸಂಪಾದನೆಯಲ್ಲೇ ಒಂದು ಚಿಕ್ಕ ಹಂಡೆ ಕೊಂಡುಕೊಳ್ಳಮ್ಮ; ನಮಗೆ ಈಗ ಚೈತನ್ಯವಿಲ್ಲ—ಎಂದು ತಂದೆ ತಾಯಿ ಹೇಳಿದರು. ಆ ಹುಡುಗಿ, – ಹೇಗೋ ಮಾಡಿಕೊಳ್ಳುತ್ತೇನೆ, ನೀವೇನೂ ನೊಂದುಕೊಳ್ಳಬೇಡಿ ಎಂದು ಅವರಿಗೆ ಸಮಾಧಾನ ಹೇಳಿದಳು.'

'ಅವಳು ಒಳ್ಳೆಯ ಹುಡುಗಿಯಪ್ಪ ಸ್ವಾಮಿ!' ಎಂದು ಸರೋಜ ಟೀಕೆ ಮಾಡಿದಳು.

'ಅವಳೇನೋ ಒಳ್ಳೆಯವಳು ಸರೋಜ! ಅವಳ ಗಂಡ, ಆ ಅಳಿಯದೇವರು, ಹತ್ತನೆಯ ಗ್ರಹ. . . . . .'

'ಹೌದಪ್ಪ! ನೀನು ಹೇಳುವುದು ನಿಜ. ಹೆಣ್ಣುಮಕ್ಕಳು ಒಳ್ಳೆಯವರಾಗಿಯೇ ಇರುತ್ತಾರಪ್ಪ! ಆ ಗಂಡಂದಿರು ಮಾತ್ರ ಕಿರಾತರು ನೋಡು' ಎಂದು ತುಳಸಾಬಾಯಿ ಟೀಕಿಸಿದಳು.

'ಮುಂದಿನ ಕಥೆ ಹೇಳುತ್ತೇನೆ, ಕೇಳು. ಆ ಹುಡುಗಿಯ ಗಂಡ ಬಹಳ ಗಲಾಟೆ ಮಾಡಿದ: ನಿನ್ನಪ್ಪ ಅಮ್ಮನಿಗೆ ಒಂದು ಹಂಡೆ ತೆಗೆದು ಕೊಡೋ ಯೋಗ್ಯತೆಯಿಲ್ಲ. ಈಗ ಸ್ನಾನಕ್ಕೆ ನೀರನ್ನು ಹೇಗೆ ಕಾಯಿಸಬೇಕು? ನಾನು ಹಂಡೆ ತಂದುಕೊಡುವುದಿಲ್ಲ. ಏನು ಮಾಡುತ್ತೀಯೋ ಮಾಡಿಕೋ ಎಂದು ಗದರಿಸಿದ. ಹುಡುಗಿ,— ಒಂದು ಡಬ್ಬದಲ್ಲಿ ಕಾಯಿಸಿದರೂ ಆಯಿತು, ಒಂದು ತಪ್ಪಲೆಯಲ್ಲಿ ಕಾಯಿಸಿದರೂ ಆಯಿತು, ಏತಕ್ಕೆ ರೇಗಾಡುತ್ತೀರಿ ಎಂದಳು. ಅವನಿಗೆ ಕೋಪ ಬಂತು. ಇನ್ನು ಹದಿನೈದು ದಿನಗಳೊಳಗಾಗಿ ನಿನ್ನಪ್ಪ ಹಂಡೆ ತಂದುಕೊಟ್ಟರೆ ಸರಿ, ಇಲ್ಲವಾದರೆ ನಿನ್ನನ್ನು ಮನೆಬಿಟ್ಟು ಓಡಿಸಿಬಿಡುತ್ತೇನೆ. ಜೋಕೆ! ಸದ್ಯಕ್ಕೆ ನೀರು ಕಾಯಿಸುವುದಕ್ಕೆ ಒಂದು ದೊಡ್ಡ ಮಡಕೆ ತಂದುಕೊಡುತ್ತೇನೆ—

ಎಂದು ಹೇಳಿದ. ಹೇಳಿದಂತೆಯೇ ಒಂದು ದೊಡ್ಡ ಮಡಕೆಯನ್ನು ತಂದುಕೊಟ್ಟ. ಹುಡುಗಿ ಅದನ್ನೇ ಜೋಪಾನವಾಗಿ ಬಳಸುತ್ತ ಕಾಲ ತಳ್ಳಿದಳು.'

' ಆ ಹುಡುಗಿ ಒಳ್ಳೆಯ ಜಾಣೆ!' ಎಂದು ಸರೋಜ ಹೇಳಿದಳು.

' ಮುಂದೆ ಕೇಳು ಸರೋಜ! ಆ ಹುಡುಗಿಯ ಜಾಣತನ ಈಗಲೇ ನೀನೇನು ಕಂಡೆ. ಹದಿನೈದು ದಿನವಾಯಿತು, ಒಂದು ತಿಂಗಳಾಯಿತು, ಮೂರು ತಿಂಗಳಾಯಿತು. ತವರು ಮನೆಯಿಂದ ಹಂಡೆ ಬರಲಿಲ್ಲ. ಆ ಹುಡುಗಿಯ ಗಂಡ ದಿನವೂ ರೇಗಾಡುತ್ತಿದ್ದ. ಒಂದು ದಿನ ಬೆಳಗ್ಗೆ ಅವನು ಊಟಮಾಡುತ್ತಾ ಇದ್ದಾಗ ಹಂಡೆಯ ಮಾತೆತ್ತಿ—ನಿನ್ನಪ್ಪನಿಗೆ ನಾಚಿಕೆಯಿಲ್ಲ, ನಿನ್ನಮ್ಮನಿಗೆ ನಾಚಿಕೆಯಿಲ್ಲ ಶುದ್ಧ ಭಂಡರು, ಗತಿಯಿಲ್ಲದವರು ಎಂದು ಮುಂತಾಗಿ ಬಾಯಿಗೆ ಬಂದಹಾಗೆ ಬಯ್ಯ ತೊಡಗಿದ. ಹೆಂಡತಿ,—ಹಾಗೆಲ್ಲ ಹಿರಿಯರನ್ನ ಬಯ್ಯಬೇಡಿ. ನಮಗೆ ಶ್ರೇಯಸ್ಸಲ್ಲ. ಬೇಕಾದರೆ ನನ್ನನ್ನು ಬಯ್ಯಿರಿ ಎಂದು ಹೇಳಿದಳು. ಮಾತಿಗೆ ಮಾತು ಬೆಳೆಯಿತು. ಆ ಮಾತಿನ ಜಗಳದಲ್ಲೇ ಊಟವೂ ಮುಗಿಯುತ್ತ ಬಂದಿತ್ತು. ಅವನು ತಟ್ಟನೆ ಕೋಪದಿಂದ ಎದ್ದು ನೀರ ಮನೆಗೆ ಹೋಗಿ, ಕೈತೊಳೆದುಕೊಂಡು, ಒಂದು ಕಟ್ಟಿಗೆಯೆತ್ತಿ ಆ ಮಡಕೆಯನ್ನು ಒಡೆದುಹಾಕಿಬಿಟ್ಟ! ಕೋಟು ರುಮಾಲು ಹಾಕಿಕೊಂಡು ಹೆಂಡತಿಯನ್ನು ರಟ್ಟೆಹಿಡಿದೆಳೆದು ಬೀದಿಯ ಬಾಗಲಾಚೆ ನೂಕಿಬಿಟ್ಟು ಹೊರಬಾಗಿಲಿಗೆ ಬೀಗಹಾಕಿ, ಬೀಗದ ಕೈಯನ್ನು ಜೇಬಿನಲ್ಲಿ ಹಾಕಿಕೊಂಡು,—ಹೋಗು ನಿನ್ನಮ್ಮನ ಮನೆಗೆ! ಎಂದು ಹೇಳಿಬಿಟ್ಟು ಕಚೇರಿಗೆ ಹೊರಟುಹೋದ.'

' ಎಂಥ ಕಿರಾತನಪ್ಪ ಅವನು!' ಎಂದು ತುಳಸಾಬಾಯಿ ನಿಟ್ಟುಸಿರು ಬಿಟ್ಟಳು

' ಅಯ್ಯೋ ಪಾಪ! ಹೆಂಗಸಾಗಿ ಹುಟ್ಟಬಾರದಪ್ಪ ಸ್ವಾಮಿ!' ಎಂದು ಸರೋಜ ಹೇಳುತ್ತ ಕಣ್ಣೀರು ಮಿಡಿದಳು.

' ಆ ಹುಡುಗಿ ಏನು ಮಾಡಬೇಕು? ಐದು ನಿಮಿಷ ಕಣ್ಣೀರು ಹಾಕುತ್ತ ಅಲ್ಲೇ ನಿಂತಿದ್ದಳು ' ಎಂದು ಸ್ವಾಮಿ ಕಥೆ ಮುಂದುವರಿಸಿ

ದನು. ‘ ಆಗ ಪಕ್ಕದ ಮನೆ ಹೆಂಗಸು ಏತಕ್ಕೋ ಹೊರಕ್ಕೆ ಬಂದವಳು, ಏಕಮ್ಮ ಹೊರಗೆ ನಿಂತಿದ್ದೀರಿ? ಎಂದು ಕೇಳಿದಳು. ಆ ಹುಡುಗಿ, ಏನೂ ಇಲ್ಲ, ಸುಮ್ಮನೆ ನಿಂತಿದ್ದೇನೆ—ಎಂದು ಹೇಳುತ್ತ ಪಕ್ಕದ ಮನೆಯೊಳಕ್ಕೆ ಹೋದಳು. ಹಾಗೆಯೇ ಹಿತ್ತಿಲ ಕಡೆಗೆ ಹೋಗಿ ಆ ಮನೆಗೂ ತಮ್ಮ ಮನೆಗೂ ಮಧ್ಯವಿದ್ದ ಮೋಟು ಗೋಡೆಯನ್ನು ಹತ್ತಿ ಆಚೆ ಇಳಿದು ತನ್ನ ಮನೆ ಸೇರಿಕೊಂಡಳು. ಎಲೆ ಹಾಕಿಕೊಂಡು ಚೆನ್ನಾಗಿ ಊಟ ಮಾಡಿದಳು. ಕೈತೊಳೆದುಕೊಂಡು ಹಿತ್ತಿಲ ಭಾಗಕ್ಕೆ ಬಂದು ಪಕ್ಕದ ಮನೆಯವಳನ್ನು ಕರೆದು, ಅಮ್ಮ! ನನ್ನ ಯಜಮಾನರು ಸಾಯಂಕಾಲ ಬಂದು ನನ್ನ ವಿಚಾರ ಕೇಳಿದರೆ, ಎರಡು ರೂಪಾಯಿ ಈಸಿಕೊಂಡು ಬಸ್ಸಿಗೆ ಹೊರಟುಹೋದಳು ಎಂದು ಹೇಳಿಬಿಡಿ—ಎಂದು ಹೇಳಿಕೊಟ್ಟು ಸ್ವಸ್ಥವಾಗಿ ಮನೆಯೊಳಕ್ಕೆ ಬಂದು ಬೀದಿಯ ಬಾಗಲಿಗೆ ಅಗುಳಿ ನೂಕಿ ಹಾಸಿಗೆ ಹಾಕಿಕೊಂಡು ಮಲಗಿಬಿಟ್ಟಳು.’

‘ ಆ ಹುಡುಗಿ ಒಳ್ಳೆಯ ಗಟ್ಟಿಗಿತ್ತಿ ನೋಡು!’ ಎಂದು ತುಳಸಾ ಬಾಯಿ ಹೊಗಳಿದಳು.

‘ ಅದೇ ಅತ್ತೆ ನಾನು ಹೇಳಿದ್ದು! ಹೆಂಗಸರೇ ಗಟ್ಟಿಗಿತ್ತಿಯರು ಎಂದು. ಮುಂದೆ ತಮಾಷೆ ನೋಡು. ಸಾಯಂಕಾಲ ಆ ಗಂಡ ತನ್ನ ಸ್ನೇಹಿತನೊಡನೆ ಮನೆಯ ಕಡೆ ಬಂದ. ಬೀದಿಯ ಬಾಗಲಿಗೆ ತಾನು ಹಾಕಿದ್ದ ಬೀಗ ಹಾಗೆಯೇ ಹಾಕಿತ್ತು. ತನ್ನ ಹೆಂಡತಿ ಏನಾದಳೋ? ಪಕ್ಕದ ಮನೆಯಲ್ಲಿದ್ದಾಳೋ ಏನೋ? ಎಂದು ಅಲ್ಲಿ ಹೋಗಿ ವಿಚಾರಿಸಿದ. ಆ ಹೆಂಗಸು—ಒಳ್ಳೆಯ ಗಂಡಸರಪ್ಪ ನೀವು! ನಿಮ್ಮ ಹೆಂಡತಿಯನ್ನು ಹಾಗೆ ಬೀದಿಯಲ್ಲಿ ಬಿಟ್ಟು ಹೊರಟುಹೋದಿರಲ್ಲ! ಹೋಗಬಹುದೇ? ಆಕೆ ಅಳುತ್ತಾ ನಮ್ಮ ಹತ್ತಿರ ಬಂದು ಎರಡು ರುಪಾಯಿ ಈಸಿಕೊಂಡು ಬಸ್ಸಿಗೆ ಹೊರಟುಹೋದಳು ಎಂದು ಉತ್ತರ ಕೊಟ್ಟಳು. ಆ ಗಂಡನಿಗೆ ಮುಖ ಚಿಕ್ಕದಾಯಿತು. ಬೀಗ ತೆಗೆದು ಬಾಗಲನ್ನು ನೂಕಿದರೆ, ಅದು ಹಿಂದಕ್ಕೆ ಹೋಗಲಿಲ್ಲ! ಒಳಗಿನಿಂದ ಯಾರೋ ಅಗುಳಿ ಹಾಕಿಬಿಟ್ಟಿದ್ದಾರೆಂದು ಗೊತ್ತಾಯಿತು. ಅಯ್ಯೋ! ನಾನು ಕಚೇರಿಗೆ ಹೋಗಿದ್ದಾಗ ಯಾರೋ ಕಳ್ಳರು ಮನೆಗೆ ಹಿಂಭಾಗದಿಂದ

ನುಗ್ಗಿದರೋ ಏನೋ—ಎಂದು ಪೇಚಾಡುತ್ತ ಸ್ನೇಹಿತನನ್ನು ಪೊಲೀಸ್ ಸ್ಟೇಷನ್ನಿಗೆ ಕಳಿಸಿಕೊಟ್ಟ ; ಬೀದಿಯಲ್ಲಿನ ಜನವನ್ನು ಸಹಾಯಕ್ಕೆ ಕರೆದ. ಇದನ್ನೆಲ್ಲ ಹೆಂಡತಿ ಬಾಗಿಲ ಸಂದಿನಲ್ಲಿ ನೋಡಿ ಕಿಟಕಿಯನ್ನು ಮೆಲ್ಲಗೆ ತೆರೆದು ಅದರಲ್ಲಿ ಮುಖವಿಟ್ಟಳು ! ಆ ಗಂಡ ಹೆಂಡತಿಯನ್ನು ನೋಡಿದ! ಎಲಾ ಇದೇನು! ಒಳಗೇ ಇದ್ದಾಳಲ್ಲ ಇವಳು ! ಒಳಕ್ಕೆ ಹೇಗೆ ಹೋದಳೋ? ಹೇಗಾದರೂ ಇರಲಿ ಎಂದುಕೊಂಡು,—ಬಾಗಿಲು ತೆಗೆ! ಎಂದು ಜೋರು ಹುಕುಂ ಮಾಡಿದ. ಆ ಹುಡುಗಿ,—ಪೇಟೆಗೆ ಹೋಗಿ ಹಂಡೆಯನ್ನು ಕೊಂಡುಕೊಂಡು ಬಂದರೆ ಬಾಗಿಲನ್ನು ತೆರೆಯುತ್ತೇನೆ. ಇಲ್ಲವಾದರೆ ತೆರೆಯೋದಿಲ್ಲ. ಬೀದಿಯಲ್ಲೇ ನಿಂತಿರಿ ಎಂದು ಹೇಳಿದಳು '

' ಒಳ್ಳೆಯ ಕಥೆ ಸ್ವಾಮಿ! ಆ ಹುಡುಗಿ ಒಳ್ಳೆಯ ಗಟ್ಟಿಗಿತ್ತಿ!' ಎಂದು ತುಳಸಾಬಾಯಿ ನಗುವುದಕ್ಕೆ ತೊಡಗಿದಳು. ಸರೋಜ ತಾನೂ ನಗುತ್ತ, ' ಒಳ್ಳೆಯ ಉಪಾಯ ಮಾಡಿದಳು!' ಎಂದು ಹೇಳಿದಳು

' ಬೀದಿಯಲ್ಲಿ ಜನ ಸೇರುವುದಕ್ಕೆ ಮೊದಲಾಯಿತು. ಆ ಗಂಡ ಏನು ಮಾಡಬೇಕು? ಇನ್ನು ತನ್ನ ಮಾನ ಎಲ್ಲಿ ಹೋಗುತ್ತದೋ ಎಂದು ಹೆದರಿಕೊಂಡು ಕಮುಕ್ ಕಿಮುಕ್ ಎನ್ನದೆ ಪೇಟೆಗೆ ಹೋಗಿ ಒಂದು ಹಂಡೆಯನ್ನು ಕೊಂಡುಕೊಂಡು ಬಂದ.' ಎಂದು ಸ್ವಾಮಿ ಮುಗಿಸಿದನು.

ಆ ದಿನವೆಲ್ಲ ಆ ಕಥೆಯ ವ್ಯಾಖ್ಯಾನ ನಡೆಯಿತು. ಕಥೆ ಬಹಳ ಚೆನ್ನಾಗಿದೆ ಎಂದು ಎಲ್ಲರೂ ಮೆಚ್ಚಿಕೊಂಡರು.

ಮತ್ತೊಂದು ದಿನ ಮಧ್ಯಾಹ್ನ ತಿಂಡಿ ಕಾಫಿ ವಿನಿಯೋಗವಾಗುತ್ತಿದ್ದಾಗ ಸ್ವಾಮಿ, ' ಅತ್ತೆ! ನಮ್ಮ ಶಿವಮೊಗ್ಗದ ಕಾಲೇಜಿನಲ್ಲಿ ಒಬ್ಬರು ಕಿವುಡ ಲೆಕ್ಚರರ್ ಇದ್ದರು. ನಿನಗೆ ಗೊತ್ತೇ?' ಎಂದು ಕೇಳಿದ.

' ನನಗೆ ಗೊತ್ತಿಲ್ಲಪ್ಪ! ನಿನ್ನ ಕಾಲೇಜ್ ಲೆಕ್ಚರರು ನನಗೆ ಹೇಗೆ ಗೊತ್ತಾಗಬೇಕು?'

' ಆತ ದುರ್ಗಿಗುಡಿಯಲ್ಲೇ, ನಿಮ್ಮ ಮನೆಯಿಂದ ಮೂರನೆಯ ಮನೆಯಲ್ಲಿದ್ದ!'

' ಇದ್ದಿರಬಹುದಪ್ಪ! ನಾವು ಬಂಗಲೆಯಲ್ಲಿ ವಾಸಮಾಡೋದು! ನೆರೆಹೊರೆಯಲ್ಲಿ ಯಾರಿದ್ದಾರೆ ಎನ್ನುವುದನ್ನು ಯಾರು ವಿಚಾರಿಸುತ್ತಾರೆ?'

'ಕಿವುಡು ಲೆಕ್ಚರರನ್ನು ಕಾಲೇಜಿನಲ್ಲಿ ಏಕೆ ಸೇರಿಸಿಕೊಂಡರು?' ಎಂದು ಸರೋಜ ನಗುತ್ತಾ ಕೇಳಿದಳು.

'ನಮ್ಮ ವಿಶ್ವವಿದ್ಯಾನಿಲಯದಲ್ಲಿ ಕಿವುಡ ಲೆಕ್ಚರರುಗಳೂ ಅಸಿಸ್ಟೆಂಟ್ ಪ್ರೊಫೆಸರುಗಳೂ ತಕ್ಕಮಟ್ಟಿಗೆ ಇದ್ದಾರೆ ಸರೋಜ! ನಮ್ಮ ಕಾಲೇಜಿನ ಲೆಕ್ಚರರು ಒಳ್ಳೆಯ ಮನುಷ್ಯರು. ಕ್ಲಾಸಿಗೆ ಬಂದರೋ ಸುಮ್ಮನೆ ಲೆಕ್ಚರ್ ಮಾಡಿಬಿಡೋದು, ಬೋರ್ಡ್‌ಮೇಲೆ ಬರೆದು ಬಿಡೋದು. ತೆಪ್ಪಗೆ ಹೊರಟುಹೋಗೋದು. ಹುಡುಗರನ್ನು ಒಂದು ಮಾತೂ ಆಡಿಸುತ್ತಿರಲಿಲ್ಲ, ಒಂದು ಪ್ರಶ್ನೆಯನ್ನೂ ಕೇಳುತ್ತಿರಲಿಲ್ಲ.'

'ಮಧ್ಯೆ ಪ್ರಶ್ನೆ ಕೇಳಬೇಡವೇ? ಹುಡುಗರಿಗೆ ತಿಳಿಯಿತು ಇಲ್ಲ ಎಂದು ಗೊತ್ತು ಮಾಡಿಕೊಳ್ಳಬೇಡವೇ?' ಎಂದು ಸರೋಜ ಕೇಳಿದಳು.

'ಹೈಸ್ಕೂಲುಗಳಲ್ಲಿ ಪ್ರಶ್ನೆಗಿಶ್ನೆ ಕೇಳೋದು ರೂಢಿ ಕಾಲೇಜುಗಳಲ್ಲಿ ಸುಮ್ಮನೆ ಲೆಕ್ಚರ್ ಮಾಡೋದು ರೂಢಿ. ಪಾಪ! ಆ ಕಿವುಡು ಲೆಕ್ಚರರ್ ಪ್ರಶ್ನೆ ಕೇಳಿದರು ಅಂತ ಇಟ್ಕೊಕೋ. ಹುಡುಗರ ಉತ್ತರ ಅವರಿಗೆ ಕೇಳಿಸಬೇಕಲ್ಲ! ಆದ್ದರಿಂದ ಅವರು ಯಾವ ಗೋಜಿಗೂ ಹೋಗುತ್ತಿರಲಿಲ್ಲ. ನಾನು ಅವರಿಗೆ ಪ್ರಿಯ ಶಿಷ್ಯ! ಹೊರಗೆ ಏನಾದರೂ ಪೇಟೆ ಕಡೆ ಹೊರಟರೆ,—ಸ್ವಾಮಿ! ಸ್ವಲ್ಪ ಜತೆಯಲ್ಲಿ ಬಾ ಎಂದು ಕರೆಯುತ್ತಿದ್ದರು. ಹೋಟೆಲಿನಲ್ಲಿ ತಿಂಡಿ ಕೊಡಿಸುತ್ತಿದ್ದರು.'

'ಹಾಗಾದರೆ ಅವರು ಒಳ್ಳೆಯ ಮನುಷ್ಯರು ಹೌದು!' ಎಂದು ಸರೋಜ ನಗುತ್ತಾ ಹೇಳಿದಳು.

'ಅತ್ತೆ! ಹೊರಗೆ ಹೋದಾಗ ಅವರು ಏನು ಮಾಡುತ್ತಿದ್ದರು ಗೊತ್ತೆ?'

'ನನಗೆ ಗೊತ್ತಿಲ್ಲಪ್ಪ. ನೀನು ಜತೆಯಲ್ಲಿ ಇರುತ್ತಿದ್ದವನು ನೀನು ಹೇಳಬೇಕು.'

'ಭೋಜ ಕಾಲಿದಾಸ ನಾಟಕದಲ್ಲಿ ಕುರುಬನಿಗೆ ಮದುವೆಯಾದ ಮೇಲೆ ಹೆಂಡತಿಯ ಪ್ರಶ್ನೆಗಳಿಗೆ ಅವನು ಏನು ಉತ್ತರ ಕೊಡುತ್ತಿದ್ದ? ನೀನು ಹೇಳು ಸರೋಜ.'

'ಕೇಳುವುದಕ್ಕೂ ಹೇಳುವುದಕ್ಕೂ ಇದು ಸಮಯವಲ್ಲ—ಎಂದು ಉತ್ತರ ಹೇಳುತ್ತಿದ್ದನಪ್ಪ!' ಎಂದು ಸರೋಜ ಹೇಳಿದಳು.

'ಹಾಗೆಯೇ ನೋಡು, ನಮ್ಮ ಲೆಕ್ಚರರು! ಯಾರಾದರೂ ಎದುರು ಬಿದ್ದು ಏನಾದರೂ ಮಾತಿಗೆ ಪ್ರಾರಂಭಿಸಿದರೆ ಮೂರು ನಾಲ್ಕು ಉತ್ತರ ಗಳನ್ನು ಒಂದೇ ರೀತಿ ಕೊಡುತ್ತಿದ್ದರು. ಒಂದು ದಿನ, ಅವರ ತಂದೆಯ ಸ್ನೇಹಿತರು ಮುದುಕರೊಬ್ಬರು ಪೇಟೆಯಲ್ಲಿ ಎದುರುಬಿದ್ದರು. ಮಾತಿಗೆ ಪ್ರಾರಂಭವಾಯಿತು. ಅವರು, ಏನಪ್ಪ! ಈಗ ನೀನು ಶಿವಮೊಗ್ಗ ದಲ್ಲೇ ಕೆಲಸಕ್ಕಿದ್ದೀಯಾ? ಎಲ್ಲಿದ್ದೀಯೆ? ಎಂದು ಕೇಳಿದರು. ನಮ್ಮ ಲೆಕ್ಚರರು,—ನನಗೆ ಗೊತ್ತಿಲ್ಲ ಸಾರ್! ಎಂದು ಉತ್ತರ ಕೊಟ್ಟರು.'

ಎಲ್ಲರಿಗೂ ನಗು ಬಂತು. ಸ್ವಾಮಿ ಮುಂದುವರಿಸಿ, 'ಆ ಮುದುಕರು ಶಕ್ತ್ಯಾಚಿಕ್ಕಿಯಾಗಿ, ನೀನು ಶಿವರಾಮಯ್ಯನವರ ಮಗ ನಲ್ಲವೇ? ಎಂದು ತಂದೆಯ ಹೆಸರುಹಿಡಿದು ಕೇಳಿದರು. ನಮ್ಮ ಮೇಷ್ಟ್ರು, ಒಂದು ನಿಮಿಷ ಯೋಚನೆ ಮಾಡುತ್ತಿದ್ದಹಾಗೆ ಮೌನ ವಾಗಿದ್ದು,—ಹೌದೋ ಏನೋ? ಗೊತ್ತಿಲ್ಲ ಸಾರ್! ಎಂದು ಉತ್ತರ ಕೊಟ್ಟರು' ಎಂದು ಹೇಳಿದನು.

ಸರೋಜಳೂ ತುಳಸಾಬಾಯಿಯೂ ಬಿದ್ದುಬಿದ್ದು ನಗುವುದಕ್ಕೆ ತೊಡಗಿದರು. 'ಚೆನ್ನಾಗಿದೆಯಪ್ಪ ನಿನ್ನ ಕಿವುಡ ಲೆಕ್ಚರರ ಕಥೆ' ಎಂದು ತುಳಸಾಬಾಯಿ ನಗುತ್ತ ಹೇಳಿದಳು.

'ಆಮೇಲೆ ನಾನು ಮುದುಕರಿಗೆ,—ಸ್ವಲ್ಪ ಗಟ್ಟಿಯಾಗಿ ಮಾತ ನಾಡಿ, ಅವರಿಗೆ ಕಿವಿ ಸ್ವಲ್ಪ ಮಂದ ಎಂದು ಹೇಳಿದೆ. ಆಗ ಮುದು ಕರಿಗೆ ಅರ್ಥವಾಯಿತು. ಓಹೋ! ಸರಿ ಎಂದುಕೊಂಡು,—ನಿನ್ನ ತಂದೆ ಆರೋಗ್ಯವಾಗಿದ್ದಾರೆಯೆ? ಎಂದು ನಮ್ಮ ಮೇಷ್ಟರನ್ನು ಗಟ್ಟಿಯಾಗಿ ಕೇಳಿದರು. ನಮ್ಮ ಮೇಷ್ಟ್ರು,—ವಿಚಾರಿಸಬೇಕು, ಗೊತ್ತಿಲ್ಲ ಸಾರ್! ಎಂದು ಉತ್ತರ ಹೇಳಿದರು. ನಾನು ನಮ್ಮ ಮೇಷ್ಟರಿಗೆ ಕಿವಿಯಲ್ಲಿ ಗಟ್ಟಿಯಾಗಿ ಮುದುಕರ ಪ್ರಶ್ನೆಯನ್ನು ವಿವರಿಸಿದೆ. ಆಗ ಮೇಷ್ಟ್ರು,— ಹಾಗೋ, ಸರಿ. ನನ್ನ ತಂದೆ ತೀರಿಹೋಗಿ ನಾಲ್ಕು ವರ್ಷ ಆಗಿ ಹೋಯಿತು ಸಾರ್! ಎಂದು ಉತ್ತರ ಹೇಳಿದರು. ಮುದುಕರು,

ನಿನಗೆ ಎಷ್ಟು ಜನ ಮಕ್ಕಳಪ್ಪ? ಎಂದು ಗಟ್ಟಿಯಾಗಿಯೇ ಕೇಳಿದರು. ನಮ್ಮ ಮೇಷ್ಟರು, ನೂರೈವತ್ತು ಸಾರ್!– ಎಂದು ಉತ್ತರ ಹೇಳಿದರು.

ತುಳಸಾಬಾಯಿ, 'ಅಯ್ಯೋ ಅಪ್ಪ! ನಕ್ಕೂ ನಕ್ಕೂ ನನ್ನ ಹೊಟ್ಟೆ ಹುಣ್ಣಾಗಿ ಹೋಯಿತಪ್ಪ. ಇನ್ನು ನಗಲಾರೆ ಸ್ವಾಮಿ!' ಎಂದು ಬಹಳ ನಾಗಿ ಮೆಚ್ಚಿಕೊಂಡು ಹೇಳಿದಳು. ಸರೋಜಳೂ ನಗುತ್ತ, 'ನಿಮ್ಮ ಲೆಕ್ಚರರು ತಮ್ಮ ಸಂಬಳ ಕೇಳಿದರೆಂದು ತಿಳಿದುಕೊಂಡು ಉತ್ತರ ಹೇಳಿದಂತೆ ಕಾಣುತ್ತದೆ' ಎಂದು ಹೇಳಿದಳು.

'ಹೌದು. ನಾನು ನಮ್ಮ ಮೇಷ್ಟರಿಗೆ ಮುದುಕರ ಪ್ರಶ್ನೆಯನ್ನು ವಿವರಿಸಿದೆ. ಆಗ ಅವರು,– ಸರಿ, ಸರಿ. ನನಗೆ ಇಬ್ಬರು ಮಕ್ಕಳಿದ್ದಾರೆ ಸಾರ್! ಎಂದು ಉತ್ತರ ಹೇಳಿ ಮುಂದಕ್ಕೆ ಹೆಜ್ಜೆ ಇಟ್ಟರು. ಆ ಮುದುಕರು ಇನ್ನು ಮಾತನಾಡಿ ಪ್ರಯೋಜನವಿಲ್ಲ ಎಂದುಕೊಂಡು ಅವರೂ ಅತ್ತಕಡೆ ಹೊರಟುಹೋದರು.'

'ಈಗಲೂ ಅವರು ಶಿವಮೊಗ್ಗದಲ್ಲಿದ್ದಾರೆಯೆ?' ಎಂದು ಸರೋಜ ಕೇಳಿದಳು.

'ಅವರು ಶಿವಮೊಗ್ಗದಲ್ಲಿಲ್ಲ. ಅವರಿಗೆ ಮೈಸೂರಿಗೆ ವರ್ಗವಾಗಿ ಹೋಯಿತು. ಒಂದು ದಿನ ನಮ್ಮ ಕೌನ್ಸಿಲರ್ ಸಾಹೇಬರು ಕಾಲೇಜಿನ ಇನ್‌ಸ್ಪೆಕ್‌ಷನ್ನಿಗೆ ಬಂದಿದ್ದರು. ನಮ್ಮ ಲೆಕ್ಚರರಿಗೆ ಕಿವಿ ಮಂದ ಎಂದು ಯಾರೋ ಅವರಿಗೆ ಚಾಡಿ ಹೇಳಿದ್ದರು. ಕೌನ್ಸಿಲರು ಅವರನ್ನು ಕರಸಿಕೊಂಡರು. ಅವರು ಹೋದಾಗ ಇಂಗ್ಲಿಷಿನಲ್ಲಿ – Sit down (ಕುಳಿತುಕೊಳ್ಳಿ) ಎಂದು ಹೇಳಿ ಕುರ್ಚಿ ತೋರಿಸಿದರು. ಕುರ್ಚಿ ತೋರಿಸಿದ್ದರಿಂದ ಅದರರ್ಥ ನಮ್ಮ ಮೇಷ್ಟರಿಗಾಯಿತು. ಕುರ್ಚಿಯಲ್ಲಿ ಕುಳಿತುಕೊಂಡರು. ಕೌನ್ಸಿಲರು ಇಂಗ್ಲಿಷಿನಲ್ಲಿ ಕೇಳಿದರಂತೆ: How do you manage the class? (ತರಗತಿಯನ್ನು ಹೇಗೆ ನಿಭಾಯಿಸುತ್ತೀರಿ?) Quite well (ಬಹಳ ಚೆನ್ನಾಗಿ) ಎಂದು ನಮ್ಮ ಮೇಷ್ಟ್ರು ಉತ್ತರ ಕೊಟ್ಟರು.

Do you hear what I am saying? (ನಾನು ಹೇಳುತ್ತಿರುವುದು ನಿಮಗೆ ಕೇಳಿಸುತ್ತದೆಯೆ?) ಎಂದು ಕೌನ್ಸಿಲರು ಮತ್ತೆ ಕೇಳಿದರು.

Quite well ಎಂದು ನಮ್ಮ ಮೇಷ್ಟ್ರು ಉತ್ತರಕೊಟ್ಟರು. ಕೌನ್ಸಿಲರಿಗೆ ತೃಪ್ತಿಯಾಯಿತು. ಆಮೇಲೆ ಮತ್ತೊಂದು ಪ್ರಶ್ನೆ ಕೇಳಿದರಂತೆ: Are you satisfied with your present pay? (ಈಗಿನ ನಿಮ್ಮ ಸಂಬಳದಿಂದ ನಿಮಗೆ ತೃಪ್ತಿ ಆಗಿದೆಯೇ?) 'Yes sir' ಎಂದು ಮೇಷ್ಟ್ರು ಉತ್ತರಕೊಟ್ಟರು. ಕೌನ್ಸಿಲರು ಸಂತೋಷಪಟ್ಟುಕೊಂಡು ಅವರ ಕೈಕುಲುಕಿ ಕಳುಹಿಸಿಬಿಟ್ಟರು! ಎಲ್ಲ ಆಯಿತು. ಕೌನ್ಸಿಲರು ಹೊರಟುಹೋದರು. ನಮ್ಮ ಸೂಪರಿಂಟೆಂಡೆಂಟರು ನಮ್ಮ ಮೇಷ್ಟ್ರನ್ನ ಕೌನ್ಸಿಲರು ನಿಮ್ಮನ್ನು ಏನು ಕೇಳಿದರು, ಗೊತ್ತೇ? ಎಂದು ಕೇಳಿದರಂತೆ. ಆಗ ಅವರು,—ಕೌನ್ಸಿಲರು ಏನು ಕೇಳಿದರೋ ಗೊತ್ತಿಲ್ಲ ಸಾರ್! ನಾನಂತೂ ಎರಡು ಸಾರಿ Quite well ಎಂದು ಉತ್ತರಕೊಟ್ಟೆ, ಕಡೆಯಲ್ಲಿ yes sir ಎಂದು ಹೇಳಿದೆ. ಎಲ್ಲವನ್ನೂ ನೀವೇ ನೋಡಿದಿರಲ್ಲ! ಎಂದು ಮೇಷ್ಟ್ರು ಹೇಳಿದರು. ಹೇಗಿದೆ ಈ ಕಥೆ?'

ಹೀಗೆ ಸ್ವಾಮಿ ದಿನಕ್ಕೆ ಎರಡು ಮೂರು ವಿನೋದ ಕಥೆಗಳನ್ನು ಹೇಳುತ್ತಿದ್ದನು. ತುಳಸಾಬಾಯಿಯೂ ಸರೋಜಳೂ ತಂತಮ್ಮ ದುಃಖಗಳನ್ನು ಮರೆಯುತ್ತ ಬಂದರು. ತರೀಕೆರೆಯ ವಾತಾವರಣ ಸಂತೋಷಕರವಾಗಿಯೂ ಸುಖಕರವಾಗಿಯೂ ಇದ್ದುದರಿಂದ ಸರೋಜಳ ಆರೋಗ್ಯವೂ ಉತ್ತಮವಾಗುತ್ತ ಬಂತು. ಮಧ್ಯದಲ್ಲಿ ಎರಡು ಬಾರಿ ಕೃಷ್ಣರಾಯರು ತರೀಕೆರೆಗೆ ಬಂದು ಹೆಂಡತಿಯನ್ನೂ ಮಗಳನ್ನೂ ನೋಡಿಕೊಂಡು ಹೋದರು. ಅವರು ಸುಖವಾಗಿರುವುದನ್ನು ನೋಡಿ ಅವರಿಗೆ ತೃಪ್ತಿಯಾಯಿತು.

ಸ್ವಾಮಿ ತಾನು ಮಾಡುತ್ತಿದ್ದ ಉಪಚಾರಗಳಿಂದಲೂ, ತಾನು ಹೇಳುತ್ತಿದ್ದ ಕಥೆಗಳಿಂದಲೂ ತುಳಸಾಬಾಯಿಗೆ ಬಹಳ ಪ್ರಿಯನಾಗುತ್ತ ಬಂದನು. ಆಕೆಯೂ ಸರೋಜಳೂ ಅವನ ಶೀಲಸ್ವಭಾವಗಳನ್ನು ಚೆನ್ನಾಗಿ ಪರೀಕ್ಷೆ ಮಾಡುವುದಕ್ಕೂ ಒಳ್ಳೆಯ ಅವಕಾಶಗಳಿದ್ದುವು. ಒಂದು ದಿನ ಸರೋಜ, 'ಅಮ್ಮ! ಸುಕನ್ಯೆಗೆ ಅಲ್ಲಿ ಇಲ್ಲಿ ವರನನ್ನು ಹುಡುಕುವುದಕ್ಕೆ ಏತಕ್ಕೆ ಹೋಗಬೇಕು? ಸ್ವಾಮಿಗೇನೆ ಏತಕ್ಕೆ ಕೊಟ್ಟು ಮದುವೆ ಮಾಡಬಾರದು?' ಎಂದು ಕೇಳಿದಳು. ತುಳಸಾಬಾಯಿ,

'ನನಗೂ ಅದೇ ಆಲೋಚನೆ ಬಂತು ಸರೋಜ! ಹುಡುಗ ಬುದ್ಧಿವಂತ, ಸಿಡುಕು ಗಿಡುಕು ಏನೂ ಇಲ್ಲ. ನಗುನಗುತಾ ಹಾಸ್ಯಮಾಡಿಕೊಂಡು ಇರುವ ಸ್ವಭಾವ ಅವನದು!' ಎಂದಳು.

'ಅತ್ತೆ ಒಳ್ಳೆಯವಳು; ಮಾವ ಒಳ್ಳೆಯವನು. ಮನೆ ಇದೆ, ಜಮೀನಿದೆ, ತೋಟ ಇದೆ. ಕಂಟ್ರಾಕ್ಟ್ ಮಾಡಿ ದುಡ್ಡನ್ನೂ ಮಾವ ಸಂಪಾದಿಸುತ್ತಿದ್ದಾನೆ. ನನಗೇನೋ ಸುಕನ್ಯೆಯನ್ನು ಸ್ವಾಮಿಗೇನೇ ಕೊಟ್ಟುಬಿಡೋಣ ಎಂದು ಮನಸ್ಸಿದೆಯಮ್ಮ. ಅವನೂ ಬಿ.ಎಸ್‌ಸಿ. ಪ್ಯಾಸ್ ಮಾಡಿದ್ದಾನೆ.'

'ಆಗಲಿ ಸರೋಜ! ನಿನ್ನ ತಂದೆಯೊಡನೆ ಆಲೋಚನೆ ಮಾಡುತ್ತೇನೆ.'

ತಾಯಿ ಮತ್ತು ಮಗಳ ಆಲೋಚನೆಗಳಲ್ಲಿ ಹೆಚ್ಚು ಕಡಮೆ ಸುಕನ್ಯೆ ಸ್ವಾಮಿಯವರ ಮದುವೆಯ ನಿಷ್ಕರ್ಷೆ ನಡೆದ ಹಾಗಾಯಿತು. ಜತೆಗೆ ತುಳಸಾಬಾಯಿಗೆ ಮನಸ್ಸಿನಲ್ಲಿ ತನ್ನ ಹಿಂದಿನ ಜಂಬದ ನಡತೆಗೂ, ತನ್ನ ನಾದಿನಿಯನ್ನು ನಿಕೃಷ್ಟವಾಗಿ ಕಾಣುತ್ತಿದ್ದುದಕ್ಕೂ ಪಶ್ಚಾತ್ತಾಪ ಹುಟ್ಟಿತು. ತನ್ನ ಮನೆಯಲ್ಲಿ ಆ ನಾದಿನಿಯನ್ನು ಒಂದು ದಿನವೂ ಹೀಗೆ ಉಪಚರಿಸಿರಲಿಲ್ಲ. ಆದರೆ ಕಷ್ಟಕಾಲದಲ್ಲಿ ಆ ನಾದಿನಿ ಹೇಗೆ ಅನುಕಂಪ ತೋರಿ, ತನ್ನ ಮನೆಗೆ ಕರೆದುಕೊಂಡು ಬಂದು ಉಪಚರಿಸಿದಳು–ಎಂಬ ಹೋಲಿಕೆಯಿಂದ ಆಕೆಯ ಮನಸ್ಸು ಇರಿಯಿತು.

ಹೀಗಿರುವಾಗ ಒಂದು ದಿನ ಸ್ವಾಮಿ ಊಟವಾದ ಮೇಲೆ ತಮಾಷೆ ಮಾಡುತ್ತ, 'ಅತ್ತೆ! ನಿನಗೊಂದು ಪುರಾಣದ ಕಥೆ ಹೇಳಲೇ?' ಎಂದು ಕೇಳಿದನು. ಆಕೆ, 'ಆಗಲಪ್ಪ, ಪುರಾಣದ ಕಥೆಯನ್ನೇ ಹೇಳು. ನೀನು ಕಥೆಗಳನ್ನು ಚೆನ್ನಾಗಿ ಹೇಳುತ್ತೀಯೆ' ಎಂದಳು.

'ಸರೋಜ! ನಿನಗೆ ಸುಕನ್ಯಾಚರಿತೆ ಗೊತ್ತೇ?' ಎಂದು ಸ್ವಾಮಿ ಕೇಳಿದ.

ಸರೋಜ ನಕ್ಕುಬಿಟ್ಟಳು. 'ನಿನ್ನತ್ತೆಯನ್ನು ಕೇಳಪ್ಪ ಸ್ವಾಮಿ!' ಎಂದು ಅವಳು ಹೇಳಿದಳು.

ತುಳಸಾಬಾಯಿ, 'ಇನ್ನೇನು! ಗೊತ್ತಾದ ಹಾಗೇ ಆಯಿತಲ್ಲಪ್ಪ!

ನಿನಗೆ ಸುಕನ್ಯೆಮೇಲೆ ಮನಸ್ಸಿದೆ ಎಂದು ತಿಳಿದಹಾಗಾಯಿತು. ಸಂತೋಷವಪ್ಪ!' ಎಂದು ನಗುತ್ತ ಹೇಳಿದಳು.

'ಅಲ್ಲ ಅತ್ತೆ! ನಾನು ಕೇಳಿದ್ದು ಪುರಾಣದಲ್ಲಿನ ಸುಕನ್ಯೆಯ ವಿಷಯ, ಚ್ಯವನ ಋಷಿಯ ಹೆಂಡತಿಯ ಕಥೆ; ಒಳ್ಳೆಯ ರೂಪವತಿ, ಒಳ್ಳೆಯ ಪತಿವ್ರತೆ, ಒಳ್ಳೆಯ ಗುಣವತಿ. ದುಂಡನೆಯ ಮುಖ, ಅಗಲವಾದ ಕಣ್ಣುಗಳು, ಬಳುಕುವ ದೇಹ, ಎರಡು ಇಳಿ ಜಡೆಯವಳು! ತುಂಗಾ ನದೀತೀರದಲ್ಲಿಯೇ ಅವರ ಆಶ್ರಮ!'

'ಹೌದಪ್ಪ ಸ್ವಾಮಿ! ಚ್ಯವನ ಮಹರ್ಷಿ ಕ್ರಾಪ್ ಬಿಟ್ಟವನು, ಒಳ್ಳೆಯ ವೈಕಟ್ಟು, ಬಿ.ಎಸ್‌ಸಿ. ಈಚೆಗೆ ಪ್ಯಾಸ್ ಮಾಡಿದವನು!' ಎಂದು ಸರೋಜ ನಗುತ್ತ ಹೇಳಿದಳು.

ಈ ನಗುವಿನ ಕೋಲಾಹಲ ಮನೆಯಲ್ಲೆಲ್ಲ ವ್ಯಾಪಿಸಿ ಎಲ್ಲರೂ ನಗುತ್ತಿದ್ದಾಗ ಇದ್ದಕ್ಕಿದ್ದಹಾಗೆ ಕೃಷ್ಣರಾಯರ ಮೋಟಾರು ಮನೆಯ ಮುಂದೆ ನಿಂತಿತು. ಗಾಡಿಯಿಳಿದು ಕೃಷ್ಣರಾಯರು ಒಳಕ್ಕೆ ಬಂದರು. ಅವರ ಮುಖಭಾವ ನೋಡಿದರೆ ಏನೋ ದೊಡ್ಡ ಅನಾಹುತ ನಡೆದುಹೋದಂತೆ ನಿಸ್ತೇಜವಾಗಿ ದುಗುಡದಿಂದ ತುಂಬಿ ಕಾಣುತ್ತಿತ್ತು. ನಗುವಿನ ವಾತಾವರಣ ಕ್ಷಣದಲ್ಲಿ ಗಂಭೀರಕ್ಕೆ ತಿರುಗಿತು. ಅವರು ಬಂದವರೇ ತಮ್ಮ ಹೆಂಡತಿಯನ್ನು ಕೊಟಡಿಗೆ ಕರೆದು, 'ಈ ಕ್ಷಣ ಶಿವಮೊಗ್ಗಕ್ಕೆ ವಾಪಸು ಹೊರಡಬೇಕು. ಗಂಟು ಮೂಟೆ ಕಟ್ಟು, ಸರೋಜಳನ್ನು ಕರೆದುಕೋ' ಎಂದು ಹೇಳಿದರು.

'ಇದೇನು! ಇದ್ದಕಿದ್ದ ಹಾಗೆ ಹೀಗೆ ಹೇಳುತ್ತೀರಲ್ಲ. ಶಿವಮೊಗ್ಗದಲ್ಲಿ ಎಲ್ಲರೂ ನೆಮ್ಮದಿಯಾಗಿದ್ದಾರೋ ಇಲ್ಲವೋ?'

'ಶಿವಮೊಗ್ಗದಲ್ಲಿ ಎಲ್ಲರೂ ನೆಮ್ಮದಿಯಾಗಿದ್ದಾರೆ. ಈಗ ಮತ್ತೇ ನನ್ನೂ ಕೇಳಬೇಡ. ಶಿವಮೊಗ್ಗವನ್ನು ಸೇರಿದಮೇಲೆ ಉಳಿದ ವಿಷಯಗಳು' ಎಂದು ಮಾತನ್ನು ಮೊಟಕುಮಾಡಿ ಕೃಷ್ಣರಾಯರು ಕೊಟಡಿಯಿಂದ ಹೊರಕ್ಕೆ ಬಂದರು. ತಮ್ಮ ತಂಗಿಗೆ, ತಮ್ಮ ಹೆಂಡತಿಯ ಮತ್ತು ಮಗಳ ಪ್ರಯಾಣ ಕೂಡಲೇ ಆಗಬೇಕಾಗಿದೆ ಎಂದು ತಿಳಿಸಿದರು. ಆಕೆ,

'ಕಿಟ್ಟಣ್ಣ! ಅತ್ತಿಗೆಗೆ ಸರೋಜಾಗೆ ಔತಣವನ್ನೇ ಮಾಡಿಲ್ಲ. ಹೀಗೆ ಆತುರ ಮಾಡಿದರೆ ಹೇಗಪ್ಪ? ಸಾಯಂಕಾಲ ಬೇಗ ಅಡಿಗೆ ಮಾಡುತ್ತೇನೆ. ಊಟಮಾಡಿಕೊಂಡು ಎಲ್ಲರೂ ವಾಪಸುಹೋಗಿ' ಎಂದು ಹೇಳಿದಳು. ತುಳಸಾಬಾಯಿ, 'ನಿತ್ಯವೂ ಔತಣ ಮಾಡುತ್ತಿದ್ದೀಯಲ್ಲ. ಇನ್ನು ಹೆಚ್ಚುಗಟ್ಟಲೆ ಏಕಮ್ಮ?' ಎಂದು ಕೇಳಿದಳು. ಆದರೂ ಆ ನಾದಿನಿ ತನ್ನ ಅಣ್ಣನಿಗೆ ಸಮಾಧಾನ ಹೇಳಿ ರಾತ್ರಿಯವರೆಗೂ ಅವರನ್ನೆಲ್ಲ ತಡೆದಿಟ್ಟಳು.

ಸರೋಜ ಮತ್ತು ತುಳಸಾಬಾಯಿ ಕೃಷ್ಣರಾಯರನ್ನು ಕೊಟಡಿಗೆ ಕರೆದುಕೊಂಡುಹೋದರು.

'ಏನು ಸಮಾಚಾರ ನಡದಿದೆ? ನನಗೆ ಸ್ವಲ್ಪ ತಿಳಿಸಿ' ಎಂದು ತುಳಸಾಬಾಯಿ ಕೇಳಿದಳು.

'ತುಮಕೂರಿನಿಂದ ಕಾಗದವೇನಾದರೂ ಬಂತೇನಪ್ಪ?' ಎಂದು ಸರೋಜ ಕೇಳಿದಳು.

'ಯಾವ ಮಾತನ್ನೂ ಈಗ ಆಡಬೇಡಿ. ನನ್ನನ್ನು ಏನೂ ಕೇಳಬೇಡಿ. ಎಲ್ಲರೂ ಆರೋಗ್ಯವಾಗಿದ್ದಾರೆ' ಎಂದು ಕೃಷ್ಣರಾಯರು ಹೇಳಿಬಿಟ್ಟರು. ಮತ್ತೆ ಬಲಾತ್ಕಾರಮಾಡಿ ಪ್ರಯೋಜನವಿಲ್ಲವೆಂದು ತಿಳಿದುಕೊಂಡು ತಾಯಿ ಮತ್ತು ಮಗಳು ಸುಮ್ಮನಾದರು. ಸಾಯಂಕಾಲ ಅಡಿಗೆಯೆನೋ ಬೇಗನೆಯೇ ಆಯಿತು. ಔತಣದ ಅಡಿಗೆಯನ್ನೇ ಕೃಷ್ಣರಾಯರ ತಂಗಿ ಮಾಡಿದಳು. ತನ್ನ ಯಜಮಾನರನ್ನು ಪೇಟೆಗೆ ಕಳಿಸಿ ಒಳ್ಳೆಯ ಎರಡು ಸೀರೆಗಳನ್ನೂ ಕುಪಸದ ಕಣಗಳನ್ನೂ ತರಿಸಿಟ್ಟುಕೊಂಡಳು. ಊಟವಾದ ಮೇಲೆ ತುಳಸಾಬಾಯಿಗೂ ಸರೋಜಳಿಗೂ, ಕುಂಕುಮ ಹಚ್ಚಿ, ಫಲತಾಂಬೂಲಗಳನ್ನೂ ಉಡುಗೊರೆಗಳನ್ನೂ ಕೊಟ್ಟು, 'ಅತ್ತಿಗೆ! ನೀನು ನಮ್ಮ ಮನೆಗೆ ಬಂದದ್ದು ಬಹಳ ಸಂತೋಷ ಆಯಿತಮ್ಮ. ಸರೋಜ ಬಂದದ್ದೂ ಹೆಚ್ಚಿನ ಸಂತೋಷ. ಈಗ ಕಿಟ್ಟಣ್ಣ ಏನೋ ಆತುರವಾಗಿ ಕರೆದುಕೊಂಡು ಹೋಗುತ್ತಿದಾನೆ. ಹೋಗಿಬಿಟ್ಟು ಬನ್ನಿ. ಮತ್ತೊಮ್ಮೆ ಎಲ್ಲರೂ ಬನ್ನಿ. ಹುಡುಗರನ್ನೆಲ್ಲ ಕರೆದುಕೊಂಡು ಬನ್ನಿ' ಎಂದು ಹೇಳಿದಳು.

ಸ್ವಾಮಿ, 'ಅತ್ತೆ! ನೀನೂ ಸರೋಜ ಇಲ್ಲಿದ್ದುದು ಎಷ್ಟೋ ಸಂತೋಷವಾಗಿತ್ತು. ಈ ಒಂದು ತಿಂಗಳು ಒಂದು ದಿನದಂತೆ ಕಳೆದು ಹೋಯಿತು. ನೀವಿಬ್ಬರೂ ಹೊರಟುಹೋದಮೇಲೆ ನನಗೆ ಬಹಳ ಬೇಜಾರಾಗುತ್ತದೆ ಅತ್ತೆ!' ಎಂದು ದುಃಖದಿಂದ ಹೇಳಿದನು.

ತುಳಸಾಬಾಯಿ, 'ಹೌದಪ್ಪ! ನಮಗೂ ಒಂದು ತಿಂಗಳು ಒಂದು ದಿನದಂತೆ ಕಳೆದುಹೋಯಿತು. ನೀನು ಮಾಡುತ್ತಿದ್ದ ಉಪಚಾರ ನೀನು ಹೇಳುತ್ತಿದ್ದ ಕಥೆಗಳು– ಅವನ್ನೆಲ್ಲ ಮರೆಯುವುದಕ್ಕೇ ಆಗುವುದಿಲ್ಲ. ಶಿವಮೊಗ್ಗಕ್ಕೆ ಬಂದಾಗ ನಮ್ಮ ಮನೆಗೆ ಬಾರಪ್ಪ' ಎಂದು ಅಕ್ಕರೆಯಿಂದ ಹೇಳಿದಳು.

ಹೀಗೆ ಬೀಳ್ಕೊಡುವ ಮಾತುಗಳೂ ಅಗಲುವಿಕೆಯ ನೋವುಗಳೂ ಮುಗಿಯುತ್ತ ಬಂದು, ಕೃಷ್ಣರಾಯರು ತಮ್ಮ ಹೆಂಡತಿ ಮತ್ತು ಮಗಳೊಡನೆ ಮೋಟಾರನ್ನು ಹತ್ತಿದರು. ರಾತ್ರಿ ಸುಮಾರು ಒಂಬತ್ತು ಗಂಟೆಯ ಹೊತ್ತಿಗೆ ಮೋಟಾರು ಶಿವಮೊಗ್ಗವನ್ನು ತಲುಪಿತು. ದಾರಿಯಲ್ಲಿ ತುಳಸಾಬಾಯಿ ಆ ಮಾತು ಈ ಮಾತು ಎತ್ತಿ ಕೃಷ್ಣರಾಯರಿಂದ ರಹಸ್ಯವನ್ನು ತಿಳಿಯಲು ಪ್ರಯತ್ನಪಟ್ಟಳು. ಆದರೆ ಅವರು ಯಾವುದಕ್ಕೂ ಸರಿಯಾಗಿ ಉತ್ತರ ಕೊಡದೆ ಮಾತನ್ನು ಬದಲಾಯಿಸಿ ಬಿಡುತ್ತಿದ್ದರು.

ಮನೆಯನ್ನು ಸೇರಿದಮೇಲೆ, ಸರೋಜ, 'ಏನಪ್ಪ– ಏನಾದರೂ ತುಮಕೂರಿನ ಸಮಾಚಾರ ಇದ್ದರೆ ತಿಳಿಸು. ಈಗ ಮನೆಯನ್ನು ಸೇರಿದೆವಲ್ಲ' ಎಂದು ಕೇಳಿದಳು. ಅದಕ್ಕೆ ಕೃಷ್ಣರಾಯರು, 'ಏನೊಂದು ಸಮಾಚಾರವೂ ಇಲ್ಲಮ್ಮ. ನೀನು ಸ್ವಸ್ಥವಾಗಿ ಮಲಗಿಕೋ. ಬೇಕಾದರೆ ಈ ಕೊಟಡಿಯಲ್ಲೇ ಹಾಸಿಗೆ ಹಾಕಿಕೊಂಡು ಮಲಗಮ್ಮ' ಎಂದು ಹೇಳಿದರು.

ಸರೋಜಳಿಗೆ ತಾನು ಮನೆಯನ್ನು ಸೇರುತ್ತಲೂ ತನ್ನ ಮಗುವಿನ ಜ್ಞಾಪಕಬಂತು. ಆದರೆ ಮೊದಲಿನ ದುಃಖಾವೇಗವಿರಲಿಲ್ಲ. ಕಣ್ಣುಗಳು ಹನಿಗೂಡಿದುವು. ಅದನ್ನು ಒರಸಿಕೊಳ್ಳುತ್ತ, 'ನಾನು ಸುಕನ್ಯೆಯ ಪಕ್ಕದಲ್ಲಿಯೇ ಮಲಗುತ್ತೇನೆ' ಎಂದು ಹೇಳಿ ಕೊಟಡಿಯಿಂದ ಹೊರಟುಹೋದಳು.

## ೧೮ ಅವರ ಸಂತೋಷವಷ್ಟು!

ಹುಡುಗರೆಲ್ಲರೂ ಮಲಗಿ ಆದಮೇಲೆ ಸುಮಾರು ಹತ್ತುಗಂಟೆಗೆ ಕೃಷ್ಣರಾಯರು ತಮ್ಮ ಹೆಂಡತಿಗೆ, 'ಈಗ ಒಂದು ಸಮಾಚಾರ ತಿಳಿಸುತ್ತೇನೆ. ಹೆಚ್ಚು ಸಂಕಟಪಟ್ಟುಕೊಳ್ಳಬೇಡ. ಸೀತಾರಾಮು ಎರಡನೆಯ ಮದುವೆ ಮಾಡಿಕೊಂಡಿದ್ದಾನೆ . . . .'

'ಅಯ್ಯೋ! ಇನ್ನೇನು ಗತಿ? ಸರೋಜಳ ಸಂಸಾರ ಮುರಿಯಿತಲ್ಲ! ಅಯ್ಯೋ! ಆ ಲಂಕಿಣಿ . . .'

'ಗಟ್ಟಿಯಾಗಿ ಕೂಗಾಡಬೇಡ. ಮೆಲ್ಲಗೆ ಮಾತನಾಡು. ಈ ರಗಳೆಯ ಪ್ರಕರಣಗಳೆಲ್ಲ ತರೀಕೆರೆಯಲ್ಲಿ ಬೇಡವೆಂದೇ ನಾನು ಅಲ್ಲಿ ಈ ಸಂಗತಿಯನ್ನು ತಿಳಿಸಲಿಲ್ಲ.'

'ಅಯ್ಯೋ! ಆ ಲಂಕಿಣಿ ಕಾವೇರಿ ತನ್ನ ಹಟವನ್ನೇ ಸಾಧಿಸಿಬಿಟ್ಟಳಲ್ಲ! ಹುಡುಗ ಯೋಗ್ಯ ಹುಡುಗ ಯೋಗ್ಯ ಎಂದು ಆ ನೀಚನನ್ನು ಹೊಗಳುತ್ತಿದ್ದಿರಿ! ಕಡೆಗೆ ಅವನು ಮಾಡಿದ್ದು ನೋಡಿ!'

'ಆಯಿತು. ನಾವು ಕಷ್ಟವನ್ನನುಭವಿಸಬೇಕು.'

'ಎಲ್ಲಾಯಿತು ಮದುವೆ? ಆ ಹುಡುಗಿ ಯಾರು? ನಿಮಗೆ ವರ್ತಮಾನ ಹೇಗೆ ತಿಳಿಯಿತು?'

'ಮದುವೆ ಬೆಟ್ಟಹಲಸೂರಿನಲ್ಲಿ ಆಯಿತು. ಅದೊಂದು ಹಳ್ಳಿ; ಬೆಂಗಳೂರಿಗೆ ಹದಿನೈದು ಮೈಲಿ ದೂರದಲ್ಲಿದೆ. ಹುಡುಗಿ ಆ ಹಳ್ಳಿಯವಳು. ರಾಮಣ್ಣ ಕಾಗದ ಬರೆದು ತಿಳಿಸಿದ್ದಾನೆ. ಈಗ ಸೀತಾರಾಮು, ಕಾವೇರಮ್ಮ ತುಮಕೂರಿನಲ್ಲಿಲ್ಲ. ಅವನಿಗೆ ತಾಲ್ಲೂಕು ಶಿರಸ್ತೇ ಕೆಲಸಕ್ಕೆ ಪ್ರಮೋಷನ್ ಆಗಿ ಕೋಲಾರ ಡಿಸ್ಟ್ರಿಕ್ಟಿನ ಶ್ರೀನಿವಾಸಪುರಕ್ಕೆ ವರ್ಗವಾಗಿದೆ. ಅವರೆಲ್ಲ ತುಮಕೂರು ಬಿಟ್ಟುಹೋಗಿ ನಾಲ್ಕು ದಿನಗಳಾದುವು.'

'ಅವನು ಹಾಳಾಗಿ ಹೋಗಲಿ! ಅವನನ್ನ ಅವನ ತಾಯಿಯನ್ನ ಪ್ಲೇಗ್‌ಮಾರಿ ಕೊಂಡುಹೋಗಲಿ! ನನ್ನ ಹೊಟ್ಟೆ ಸುಣ್ಣಕಲ್ಲು

ಸುರಿದಂತೆ ಕುದಿಯುತ್ತಿದೆಯಲ್ಲ! ಎಲ್ಲವನ್ನೂ ಶಾಂತರಾಗಿ ಮಿಣ್ಣನೆ ಹೇಳುತ್ತಿದ್ದೀರಲ್ಲ!'

'ಆರ್ಭಟ ಮಾಡಬೇಡ! ಅದರಿಂದ ಪ್ರಯೋಜನವಿಲ್ಲ. ನಡೆದ ಸಂಗತಿ ಹೇಳಿದ್ದೇನೆ. ಈ ವರ್ತಮಾನವನ್ನು ಸರೋಜಳಿಗೆ ಹೇಗೆ ತಿಳಿಸುವುದೋ ಗೊತ್ತಾಗುವುದಿಲ್ಲ. ತಿಳಿಸಿದರೆ ಏನು ಪರಿಣಾಮ ಆಗುತ್ತದೋ ಎಂದು ಹೆದರಿಕೆ ನನಗೆ ತುಂಬಿದೆ. ಬೆಳಗಾಗುತ್ತಲೂ ಅವಳು ತುಮಕೂರಿನ ಪ್ರಯಾಣಕ್ಕೆ ಸಿದ್ಧಮಾಡಿಕೊಳ್ಳುತ್ತಾಳೆ. ಏನು ಮಾಡಬೇಕು?'

'ಏನು ಮಾಡಬೇಕು ಎಂದು ನನ್ನನ್ನೇಕೆ ಕೇಳುತ್ತೀರಿ? ನಿಮ್ಮ ಸ್ನೇಹಿತರ ಹೆಂಡತಿ– ಆ ಲಂಕಿಣಿಯ ಕಾಲುಕಟ್ಟಿಕೊಂಡು ಅಳಿರಿ! ಸರೋಜಳನ್ನು ನೀವೇ ಮುಳುಗಿಸಿಬಿಟ್ಟಿರಿ!'

'ಈಗ ನನಗೂ ಸಂಕಟ. ಚುಚ್ಚಿ ಆಡಬೇಡ. ಈಗ ಸಂಗತಿ ನಿನಗೆ ತಿಳಿಸಿದ್ದೇನೆ. ಇನ್ನು ನನಗೂ ನಿನಗೂ ಜಗಳ ಬೇಡ. ಬೆಳಗಾಗುವ ವರೆಗೂ ಯಾವ ಮಾತೂ ಬೇಡ. ಸುಮ್ಮನೆ ಮಲಗಿಕೋ.'

'ಚೆನ್ನಾಗಿ ಹೇಳುತ್ತಿದ್ದೀರಿ! ಈ ಸಂಕಟದಲ್ಲಿ ಮಲಗಿಕೊಳ್ಳುವುದಕ್ಕೆ ಆಗುತ್ತದೆಯೇ? ನಿದ್ದೆ ಬರುತ್ತದೆಯೇ?'

ಎಂದು ಹೇಳುತ್ತ ನೆಟಿಕೆಗಳನ್ನು ಮುರಿಯುತ್ತ ಸೀತಾರಾಮುವಿಗೂ ಕಾವೇರಮ್ಮನಿಗೂ ನೂರಾರು ಶಾಪಗಳನ್ನು ಕೊಡುತ್ತ, ತುಳಸಾಬಾಯಿ ಕಣ್ಣೀರು ಹರಿಸುತ್ತಿದ್ದಳು. ಸುಮಾರು ಅರ್ಧಗಂಟೆಯ ವರೆಗೂ ಆಕೆಯ ಯಾವ ಮಾತಿಗೂ ಕೃಷ್ಣರಾಯರು ಉತ್ತರಗಳನ್ನು ಕೊಡಲಿಲ್ಲ. ಕಡೆಗೆ ಆಕೆ ಸುಮ್ಮನಾದಳು. ಕೃಷ್ಣರಾಯರು ಮೌನವಾಗಿ ಸಂಕಟವನ್ನನುಭವಿಸುತ್ತಿದ್ದರು; ತುಳಸಾಬಾಯಿ ಮಧ್ಯೆಮಧ್ಯೆ ಎದ್ದು ಕುಳಿತು, ಸ್ವಲ್ಪ ಅಳುತ್ತ ಸಂಕಟವನ್ನು ಹೊರಸೂಸುತ್ತಿದ್ದಳು. ಆ ರಾತ್ರಿ ಗಂಡ ಹೆಂಡರಿಗೆ ನಿದ್ದೆ ಬರಲಿಲ್ಲ. ಬೆಳಗಾದಮೇಲೆ ಏನು ಮಾಡಬೇಕು? ಎಂಬ ಸಮಸ್ಯೆ ಇಬ್ಬರ ಮುಂದೆಯೂ ಇತ್ತು.

ಈ ಸಂಕಟದ ದಂಪತಿಗಳಿಗೆ ನಿದ್ದೆ ಬಾರದಿದ್ದರೆ ಸೂರ್ಯನು ಪೂರ್ವದಿಕ್ಕಿಗೆ ಬಾರದೆ ಹೋಗುತ್ತಾನೆಯೆ? ಯಥಾಪ್ರಕಾರ ಮೂಡಲಲ್ಲಿ

ಕೆಂಪುದೋರಿ, ಸೂರ್ಯೋದಯವಾಗಿ ಎಳಬಿಸಿಲು ಶಿವಮೊಗ್ಗದ ಮೇಲೆ ಸುವರ್ಣಾಲಂಕಾರದ ಮೋಡಿಯನ್ನು ಹರಡಿತ್ತು; ತುಂಗಾನದಿ ರುಕ್ಮರುಚಿಪ್ರವಾಹವಾಗಿ ಥಳಥಳಿಸುತ್ತಿತ್ತು. ಪಾತ್ರೆಗಳನ್ನು ಬೆಳಗುವವರು, ಬಟ್ಟೆಗಳನ್ನು ತೊಳೆಯುವವರು, ಸ್ನಾನಮಾಡುವವರು, ಮೀನು ಹಿಡಿಯುವವರು ಅದರ ತೀರದಲ್ಲಿ ಸೇರುತ್ತಿದ್ದರು. ಪೇಟೆಯಲ್ಲಿ ಕಾಫಿ ಕ್ಲಬ್ಬುಗಳು ಹೊರತು ಉಳಿದ ಅಂಗಡಿಗಳು ಇನ್ನೂ ತೆರೆದಿರಲಿಲ್ಲ. ದುರ್ಗಿಗುಡಿಯ ಬೀದಿಗಳಲ್ಲಿ ಜನಸಂಚಾರ ಹೆಚ್ಚಾಗಿರಲಿಲ್ಲ. ಬಂಗಲೆಯ ವಾಸಿಗಳು ಒಬ್ಬಿಬ್ಬರು ಹೊರಬಾಗಿಲುಗಳಲ್ಲಿ ತಲೆಹಾಕುತ್ತಿದ್ದರು. ಕೃಷ್ಣರಾಯರ ಮನೆಯಲ್ಲಿ ನಾರಣಾಚಾರಿ ಆಗಲೇ ಕಾಫಿ ವಿತರಣೆಯನ್ನು ಮುಗಿಸಿದ್ದನು.

ನಾಗರಾಜ ಸ್ನಾನಮಾಡಿಕೊಂಡು ನೀರಮನೆಯಿಂದ ತನ್ನ ಕೊಟಡಿಗೆ ಹೋಗುತ್ತಿದ್ದಾಗ ಕೃಷ್ಣರಾಯರು, 'ಬಟ್ಟೆಹಾಕಿಕೊಂಡು ಇಲ್ಲಿ ಸ್ವಲ್ಪ ಬಾರಪ್ಪ!' ಎಂದು ಅವನನ್ನು ತಮ್ಮ ಕೊಟಡಿಗೆ ಕರೆದರು. ಅವನು ಸ್ವಲ್ಪ ಹೊತ್ತಿಗೆಲ್ಲ ಒಗೆದ ಪಂಚೆ ಮತ್ತು ಷರ್ಟುಗಳನ್ನು ಧರಿಸಿಕೊಂಡು ಕ್ರಾಪು ಬಾಚಿಕೊಂಡು ಅವರ ಕೊಟಡಿಗೆ ಹೋದನು. ಕೃಷ್ಣರಾಯರು ಕೊಟಡಿಯ ಬಾಗಿಲನ್ನು ಮುಚ್ಚಿದರು. ತುಳಸಾಬಾಯಿ ಮಂಚದ ಮೇಲೆಯೇ ಮಲಗಿದ್ದಳು. ತನ್ನ ತಾಯಿಗೆ ಮೈ ಸ್ವಸ್ಥವಿಲ್ಲವೋ ಏನೋ ಎಂದು ನಾಗರಾಜನಿಗೆ ಭಯವಾಯಿತು.

'ನಿನ್ನ ತಾಯಿ ನೆಮ್ಮದಿಯಾಗಿದ್ದಾಳಪ್ಪ! ನೀನು ಈ ಕುರ್ಚಿಯಲ್ಲಿ ಕುಳಿತುಕೊ. ನಿನಗೆ ಒಂದು ಸಮಾಚಾರ ತಿಳಿಸಬೇಕು' ಎಂದು ಕೃಷ್ಣರಾಯರು ಹೇಳಿದರು. ನಾಗರಾಜ ಕುರ್ಚಿಯಲ್ಲಿ ಕುಳಿತದ್ದಾಯಿತು. ಕೃಷ್ಣರಾಯರೂ ಪಕ್ಕದ ಕುರ್ಚಿಯಲ್ಲಿ ಕುಳಿತದ್ದಾಯಿತು. ಒಂದು ನಿಮಿಷ ಮೌನ. ಯಾರೂ ಮಾತನಾಡಲಿಲ್ಲ. ಆಮೇಲೆ ಕೃಷ್ಣರಾಯರು, 'ಅಪ್ಪ! ತುಮಕೂರಿನಿಂದ ರಾಮಣ್ಣ ಕಾಗದ ಬರೆದಿದ್ದಾನೆ. ನಿನ್ನ ಭಾವ ಸೀತಾರಾಮು ಈಗ ಬೇರೆ ಮದುವೆ ಮಾಡಿಕೊಂಡಿದ್ದಾನೆ' ಎಂದು ಗದ್ಗದ ಸ್ವರದಿಂದ ಹೇಳಿದರು.

ನಾಗರಾಜ ಮಾತನಾಡಲಿಲ್ಲ. ಅವನ ಕಣ್ಣುಗಳಿಂದ ನೀರು

ಹನಿಹನಿಯಾಗಿ ಇಳಿಯುತ್ತಿತ್ತು. ಅದನ್ನು ಒರಸಿಕೊಳ್ಳುವ ಪ್ರಯತ್ನ ವನ್ನು ಅವನು ಮಾಡಲಿಲ್ಲ. ಕೃಷ್ಣರಾಯರು ಮಾತನ್ನು ಮುಂದುವರಿಸಿ, 'ಈಗ ನಮಗೆ ಈ ಸಂಕಟ ಒಂದು ಕಡೆ. ಸರೋಜಳಿಗೆ ಸುದ್ದಿ ತಿಳಿಸು ವುದು ಹೇಗೆ ? ಎಂಬ ಸಂಕಟ ಮತ್ತೊಂದು ಕಡೆ. ತಿಳಿಸಿದನಂತರ ಅವಳು ಏನಾಗುತ್ತಾಳೋ ಎಂಬ ಸಂಕಟ ಬೇರೊಂದು ಕಡೆ. ಈ ದಿವಸ ನೀನು ರಜ ತೆಗೆದುಕೊಂಡು ಮನೆಯಲ್ಲೇ ಇರಬೇಕಪ್ಪ' ಎಂದು ಹೇಳಿದರು.

'ನಾನು ಹಿಂದೆ ಅವಿವೇಕ ಮಾಡಿಬಿಟ್ಟೆ....' ಎಂದು ಹೇಳುತ್ತ ನಾಗರಾಜ ಮುಖವನ್ನು ತಗ್ಗಿಸಿಕೊಂಡನು.

'ನೀನು ಮಾಡಿದ ಅವಿವೇಕದ ಫಲ ಇದಲ್ಲ. ನೀನು ಸಮಾ ಧಾನ ಮಾಡಿಕೋ. ಇದು ನಮ್ಮ ಬೀಗಿತ್ತಿ ಕಾವೇರಮ್ಮನ ಹಟಸಾಧನೆ. ಹೇಗೂ ಅವಳು ಸರೋಜಳ ಸಂಸಾರವನ್ನು ಮುರಿಯುತ್ತಿದ್ದಳು, ಅವನಿಗೆ ಬೇರೆ ಮದುವೆ ಮಾಡಿಸುತ್ತಿದ್ದಳು. ಆದ್ದರಿಂದ ನಿನ್ನ ಅವಿವೇಕ ಇದಕ್ಕೇನೂ ಕಾರಣವಲ್ಲ.'

'ನಿಮ್ಮ ಅವಿವೇಕವೇ ಇಷ್ಟಕ್ಕೆಲ್ಲ ಕಾರಣ!' ಎಂದು ಅಳುತ್ತಾ ತುಳಸಾಬಾಯಿ ಮಂಚದಿಂದ ಇಳಿದು ಬಂದಳು.

'ಅಪ್ಪಾ ನಾಗರಾಜ! ನಿನ್ನ ತಂದೆಯೇ ಸರೋಜಳ ತಲೆಯ ಮೇಲೆ ಕಲ್ಲುಹಾಕಿದರಪ್ಪ! ಆ ದಿವಸ ನಿನ್ನನ್ನ ಸುಮ್ಮಸುಮ್ಮನೆ ದಂಡಿಸಿದರು– ನಿನ್ನ ಮದುವೆ ಆಗದಂತೆಯೂ ಮಾಡಿಬಿಟ್ಟರು. ಇವರ ಸ್ನೇಹಿತರ ಹೆಂಡತಿ– ಆ ಲಂಕಿಣಿ, ಆ ಮಾರಿ ಹಿಂದೆಯೇ ಹಟ ಮಾಡಿದ್ದಳು. ಈಗ ತನ್ನ ಮಗನಿಗೆ ಬೇರೆ ಮದುವೇನೂ ಮಾಡಿ ಸಿದಳು. ಈಗ ನಾವೇನು ಮಾಡಬೇಕು? ಹೇಳಪ್ಪ ನಾಗರಾಜ!'

'ಅಮ್ಮ! ನಾನು ಹಿಂದೆ ಆಡಿದ್ದು ಮಾಡಿದ್ದು ಎಲ್ಲ ಪ್ರಮಾದ ಕ್ಕೇನೆ ತಿರುಗಿತು. ಈಗ ನಾನೇನು ಹೇಳಲಿ? ನನಗೆ ರೋಷ ಒಂದು ಕಡೆ ಏರುತ್ತದೆ; ಮತ್ತೆ ನಾವೇನೂ ಮಾಡಲಾರೆವಲ್ಲ ಎಂದು ಸಂಕಟವೂ ಹೆಚ್ಚುತ್ತದೆ. ಈಗ ಸೀತಾರಾಮು ಬೇರೆ ಮದುವೆ ಮಾಡಿಕೊಂಡ ಎಂದು ನನಗೆ ಸುತರಾಂ ವ್ಯಥೆಯಿಲ್ಲ. ಸರೋಜಳಿಗೆ, ಅವಳು ಇಷ್ಟ

ಪಟ್ಟರೆ, ಬೇರೆ ಮದುವೆ ನಾವೂ ಮಾಡಿಬಿಡೋಣ ಎಂದು ಹಟ ಹುಟ್ಟಿದೆ. ನಮ್ಮ ಸಮಾಜ, ಹಾಳು ಹಿಂದು ಸಮಾಜ ಯಾವಾಗ ಸುಧಾರಿಸೀತೋ ! ಯಾವಾಗ ಒಬ್ಬ ಮಹಾತ್ಮ ಬಂದು ದಾಂಪತ್ಯ ವಿಚ್ಛೇದನಕ್ಕೆ ಸೌಲಭ್ಯ ಕಲ್ಪಿಸಿ ಹೆಂಗಸರಿಗೆ ಎರಡನೆಯ ಮದುವೆಗಳ ಅವಕಾಶ ಮಾಡಿಕೊಡುತ್ತಾನೋ ! ಯಾವಾಗ ಸುಧಾರಕರು ಮುಂದೆ ಬಂದು ಇಂಥ ಮದುವೆಗಳನ್ನು ಮಾಡಿಕೊಂಡಾರೋ ! ಎಂದು ಮನಸ್ಸು ಹಾತೊರೆಯುತ್ತಿದೆ. ಅಪ್ಪ ಏನೋ ಧರ್ಮಶಾಸ್ತ್ರ, ನ್ಯಾಯ ಶಾಸ್ತ್ರ ಎಲ್ಲವನ್ನೂ ಹೇಳುತ್ತಾನೆ. ಯಾವ ಧರ್ಮಶಾಸ್ತ್ರ, ಯಾವ ನ್ಯಾಯಶಾಸ್ತ್ರ ಈಗ ಸರೋಜಳಿಗೆ ಸೌಖ್ಯವನ್ನು ತಂದುಕೊಟ್ಟೀತು ? ಆ ಸೀತಾರಾಮುಗೆ ಪ್ರತೀಕಾರ ಮಾಡೀತು ? '

'ಆಗಲಪ್ಪ ! ಉಳಿದ ಮಾತುಗಳನ್ನು ಆಮೇಲೆ ಆಡೋಣ. ಈಗ ನಿನಗೆ ಸಮಾಚಾರ ತಿಳಿಯಿತಲ್ಲ. ಅಷ್ಟು ಸಾಕು' ಎಂದು ಕೃಷ್ಣರಾಯರು ಹೇಳಿ, ಕೊಟಡಿಯ ಬಾಗಿಲನ್ನು ತೆರೆದರು.

ತಂದೆ ಮತ್ತು ಮಗ ಹಾಲಿನೊಳಕ್ಕೆ ಬಂದರು. ಅಲ್ಲಿ ಸರೋಜ ಇರಲಿಲ್ಲ. ಅವಳು ಸ್ನಾನವನ್ನು ತೀರಿಸಿಕೊಂಡು ಮಹಡಿಯ ಮೇಲಕ್ಕೆ ಹೋಗಿದ್ದಳು. ಅಲ್ಲಿ ಸುಕನ್ಯೆ ಅವಳಿಗೆ ಹೆರಳು ಹಾಕುತ್ತಿದ್ದಳು. ಸರೋಜ ತರೀಕೆರೆಯಲ್ಲಿ ನಡೆದ ಆದರಾತಿಥ್ಯಗಳು, ಸ್ವಾಮಿ ಹೇಳುತ್ತಿದ್ದ ಕಥೆಗಳು ಎಲ್ಲವನ್ನೂ ಸುಕನ್ಯೆಗೆ ವಿವರಿಸುತ್ತ, 'ನಿನ್ನ ಮದುವೆ ಬೇಗ ಆಗುವಹಾಗೆ ಕಾಣುತ್ತೆ' ಎಂದು ಅವಳಿಗೆ ನಗುತ್ತ ಹೇಳುತ್ತಿದ್ದಳು.

'ನನಗೆ ಗಂಡನ್ನ ಎಲ್ಲಿ ನೋಡಿಟ್ಟಿದ್ದಾರೆ ?' ಎಂದು ಸುಕನ್ಯೆ ಕೇಳಿದಳು.

'ಎಲ್ಲಿ ಎಂದರೆ– ಎಲ್ಲ ಹತ್ತಿರದ ಸಂಬಂಧವೇ ! ತರೀಕೆರೆಯಲ್ಲಿದ್ದಾನೆ ನಿನ್ನ ಗಂಡ !'

'ಯಾರು ? ಸ್ವಾಮಿ . . . '

'ಹೌದು. ನಿನ್ನ ಸ್ವಾಮಿ !'

'ಅಮ್ಮ ಒಪ್ಪುತ್ತಾಳೆಯೆ ? ಅವಳಿಗೆ ಬಹಳ ಜಂಬ ಇದೆಯಲ್ಲ.

ಅಪ್ಪನಿಗೇನೋ ಒಪ್ಪಿಕೆಯೇ. ತಂಗಿಯ ಮಗ ಎಂದರೆ ಅಪ್ಪನಿಗೆ ಬಹಳ ಪ್ರೇಮ!'

'ನಿನ್ನ ಒಪ್ಪಿಕೆ ಹೇಗೆ ಸುಕನ್ಯೆ ?'

'ನೀನು ಒಪ್ಪಿದ್ದು ನನಗೂ ಒಪ್ಪಿಕೆಯೆ. ಹೋದ ತಿಂಗಳು ಅತ್ತೆಯ ಮಗ ಅತ್ತೆಯ ಜತೆಯಲ್ಲಿ ಬಂದದ್ದು ಏಕೆ ಎಂದು ತಿಳಿದು ಕೊಂಡೆ ?'

'ಏನೋ ಅಮ್ಮನ ಜತೆಯಲ್ಲಿ ಮಗ ಸುಮ್ಮನೆ ಬಂದಿದ್ದ ಎಂದು ತಿಳಿದುಕೊಂಡೆ.'

'ನನ್ನನ್ನ ನೋಡೋದಕ್ಕೆ ಬಂದದ್ದು!'

'ಸರಿ. ಎಲ್ಲ ತಿಳಿಯಿತು, ಬಿಡು. ಈಗ ನಾನು ತುಮಕೂರಿಗೆ ಹೋದರೆ ಮತ್ತೆ ನಿನ್ನ ಮದುವೆಗೆ ಬೇಗನೆ ಬರಬೇಕಲ್ಲ.'

'ನೀನು ಈಗ ತುಮಕೂರಿಗೆ ಹೋಗಲೇಬೇಡ!'

ಈ ಮಾತು ಮುಗಿಯುವ ಹೊತ್ತಿಗೆ ಕೃಷ್ಣರಾಯರು ಮಹಡಿಯ ಮೇಲಕ್ಕೆ ಬಂದು ತಮ್ಮ ಆ ಇಬ್ಬರು ಹೆಣ್ಣು ಮಕ್ಕಳನ್ನು ಪ್ರೇಮಾರ್ದ್ರ ದೃಷ್ಟಿಯಿಂದ ನೋಡಿದರು. 'ಏನಮ್ಮ! ಇಬ್ಬರೂ ಬಹಳ ರಹಸ್ಯ ವಾಗಿ ಮಾತನಾಡುತ್ತಿದ್ದೀರಿ. ನಾನು ಮಧ್ಯದಲ್ಲಿ ಬಂದುಬಿಟ್ಟೆನಲ್ಲ. ಕೆಳಕ್ಕೆ ಇಳಿದುಹೋಗಲೇ ?' ಎಂದು ಕೇಳಿದರು.

'ರಹಸ್ಯ ಏನೂ ಇಲ್ಲಪ್ಪ! ನನ್ನನ್ನು, ಈಗ ನೀನು ತುಮಕೂರಿಗೆ ಹೋಗಲೇಬೇಡ – ಎಂದು ಸುಕನ್ಯೆ ಹೇಳುತ್ತಿದಾಳೆ' ಎಂದು ಸರೋಜ ನಗುತ್ತ ತಿಳಿಸಿದಳು.

'ನನಗೂ ಹಾಗೆಯೇ ತೋರುತ್ತದಮ್ಮ! ಅದೇ ಮಾತನ್ನೇ ನಾನು ನಿನಗೆ ಹೇಳಬೇಕೆಂದಿದ್ದೆ. ಬಾ, ಕೆಳಕ್ಕೆ ಹೋಗೋಣ' ಎಂದು ಕೃಷ್ಣರಾಯರು ಕೆಳಕ್ಕಿಳಿದರು.

ಸುಕನ್ಯೆ, 'ಸರೋಜ! ಅಪ್ಪ ಅಮ್ಮ ಆಗಲೇ ನಿಷ್ಕರ್ಷೆಮಾಡಿ ಬಿಟ್ಟಹಾಗೆ ಕಾಣುತ್ತದೆ' ಎಂದು ನಗುತ್ತ ಹೇಳಿದಳು. ಎಲ್ಲರೂ ಕೆಳಕ್ಕಿಳಿದು ಬಂದರು.

ಕೃಷ್ಣರಾಯರು ಮೆಟ್ಟಿಲಿಳಿದು ಬರುತ್ತ ಸರೋಜಳಿಗೆ ಸಮಾಚಾರ

ತಿಳಿಸೋಣವೇ ಬೇಡವೇ ಎಂದು ಆಲೋಚಿಸುತ್ತ, ಆದಷ್ಟು ನಿಧಾನ ವಾಗಿ ತಿಳಿಸೋಣ, ಕ್ರಮಕ್ರಮವಾಗಿ ತಿಳಿಸೋಣ ಎಂದು ನಿರ್ಧರ ಮಾಡಿಕೊಂಡು ಸ್ನಾನಕ್ಕೆ ಹೊರಟುಹೋದರು. ಸರೋಜಳಿಗೆ ತನ್ನ ತಂದೆ, 'ಬಾ, ಕೆಳಕ್ಕೆ ಹೋಗೋಣ' ಎಂದು ಹೇಳಿದವನು ಏನೋ ಆಲೋಚಿಸುತ್ತ ನೀರಮನೆಗೆ ಹೊರಟುಹೋದನಲ್ಲ, ತನ್ನೊಡನೆ ಬೇರೆ ಏನನ್ನೂ ಮಾತನಾಡಲಿಲ್ಲವಲ್ಲ, ತಂದೆಯ ದುಗುಡಕ್ಕೆ ಕಾರಣವೇನು ? ಎಂಬ ಆಲೋಚನೆಗಳು ಮನಸ್ಸಿಗೆ ಬಂದುವು. ಎಲ್ಲಕ್ಕಿಂತ ಹೆಚ್ಚಾಗಿ ತಾಯಿಯ ಓಡಾಟ ಮನೆಯಲ್ಲಿ ಕಂಡುಬರಲಿಲ್ಲ. ಆಕೆ ಒಂದು ಕ್ಷಣವೂ ಸುಮ್ಮನೆ ಮನೆಯಲ್ಲಿ ಕುಳಿತುಕೊಳ್ಳುವವಳಲ್ಲ. ಆಳುಗಳಿಗೆ ಅಪ್ಪಣೆಮಾಡುವುದು, ಅವರ ಕೆಲಸಗಳಲ್ಲಿ ದೋಷಗಳನ್ನು ಎತ್ತಿಆಡು ವುದು, ನಾರಣಾಚಾರಿಗೆ ಹತ್ತಾರು ಕೆಲಸಗಳನ್ನು ಹೇಳುವುದು, ಅಲ್ಲಿಂದಿಲ್ಲಿಗೆ ಗಡಿಬಿಡಿಯಿಂದ ಓಡಾಡುವುದು – ಇವೆಲ್ಲ ಆಕೆಯ ದಿನಚರಿ ಗಳಾಗಿದ್ದುವು. ಸುಕನ್ಯೆಯ ಮದುವೆ ನಿಷ್ಕರ್ಷೆಆಗಿ ಶೀಘ್ರದಲ್ಲಿಯೇ ಮದುವೆ ನಡೆಯುವುದಾದರೆ ಮನೆಯಲ್ಲಿ ಸಂತೋಷ ಸಂಭ್ರಮಗಳು ತುಂಬಿ ತುಳಕಾಡಬೇಕಲ್ಲ. ತನ್ನ ತಾಯಿ ಎಲ್ಲರ ಹತ್ತಿರವೂ ಹೇಳುತ್ತ ಮುಂದಿನ ಯೋಜನೆಗಳನ್ನು ಹಾಕುತ್ತ ಇರಬೇಕಲ್ಲ. ಈಗ ತಾಯಿ ಎಲ್ಲಿದ್ದಾಳೆ ? ಎಂದು ಹುಡುಕುತ್ತಾ ಬಂದಾಗ ಆಕೆ ತಂದೆಯ ಕೊಟಡಿ ಯಲ್ಲಿ ಮಂಚದಮೇಲೆ ಮಲಗಿದ್ದುದು ಕಂಡುಬಂತು. ಏಕೆ ಮಲಗಿ ದ್ದಾಳೋ ? ಮೈಯಲ್ಲಿ ಸ್ವಸ್ಥವಿಲ್ಲವೋ ? ಎಂದು ಶಂಕಿಸುತ್ತ ಮಂಚದ ಹತ್ತಿರ ಹೋಗಿ, 'ಅಮ್ಮ ! ಇನ್ನೂ ಏಕೆ ಮಲಗಿದ್ದೀಯೆ ! ಏಳು. ಈಗ ನಾನು ತುಮಕೂರಿಗೆ ಹೋಗುವುದು ಬೇಡ ಎಂದು ಅಪ್ಪ ಹೇಳು ತ್ತಿದ್ದಾನಲ್ಲ' ಎಂದಳು.

ತುಳಸಾಬಾಯಿ ಎದ್ದುಕುಳಿತು, ಸರೋಜಳ ಕೊರಲನ್ನು ಕಟ್ಟಿ ಕೊಂಡು, 'ಅಮ್ಮ! ತುಮಕೂರಿನಲ್ಲಿ ನಿನಗೇನು ಭಾಗ್ಯ ಕೊಳ್ಳೆ ಹೋಗುತ್ತೆ ಎಂದು ಆತುರಪಡುತ್ತೀಯೆ ? ' ಎಂದು ಅಳುತ್ತ ಹೇಳಿದಳು.

'ಹಾಗಾದರೆ ನಾನು ತುಮಕೂರಿಗೆ ಹೋಗಬೇಡವೇ ? ನನ್ನ ಗಂಡನ ಮನೆಯನ್ನು ನಾನು ಸೇರಿಕೊಳ್ಳಬೇಡವೇ ? ನಾನು

ತುಮಕೂರಿಗೆ ಹೋಗಬೇಕು ಎಂದರೆ ನನ್ನ ಕೊರಲನ್ನು ಕಟ್ಟಿಕೊಂಡು ಏಕೆ ಅಳುತ್ತೀಯೆ? ನಾನು ಇಲ್ಲಿ ಇನ್ನೆಷ್ಟು ದಿನ ಇರಬೇಕು? ನಿನ್ನ ಅಳಿಯ ಏನು ಕಾರಣವೋ ಏನೋ ಒಂದು ಕಾಗದವನ್ನೂ ಬರೆಯಲಿಲ್ಲ. ಇಲ್ಲಿಗೂ ಬರಲಿಲ್ಲ. ಅವರ ಸಮಾಚಾರವೂ ತಿಳಿಯಲಿಲ್ಲ. ಇಲ್ಲಿ ನಾನು ಇರುವುದಿಲ್ಲಮ್ಮ! ಸುಕನ್ಯೆಯ ಮದುವೆ ನಿಷ್ಕರ್ಷೆ ಆಗಿದ್ದರೆ ಮದುವೆ ಹೊತ್ತಿಗೆ ನಾನೂ ಅವರೂ ಬರುತ್ತೇವೆ. ಅಪ್ಪನಿಗೆ ಹೇಳಮ್ಮ! ನೀನು ಅಳಬೇಡ' ಎಂದು ಕೊರಲನ್ನು ಸರೋಜ ಬಿಡಿಸಿಕೊಂಡಳು.

ಆ ಹೊತ್ತಿಗೆ ನಾಗರಾಜ ಕೊಟಡಿಯೊಳಕ್ಕೆ ಬಂದನು. ಅವನಿಗೆ ಸುಕನ್ಯೆ ಪರ್ಯಾಯವಾಗಿ ತನ್ನ ಮದುವೆ ನಿಷ್ಕರ್ಷೆಯಾಗಿರುವುದನ್ನು ಹೇಳಿ, 'ಸರೋಜಳನ್ನು ಮದುವೆಯವರೆಗೂ ಶಿವಮೊಗ್ಗದಲ್ಲೇ ನಿಲ್ಲಿಸಿಕೊಳ್ಳಣ್ಣ! ಅವಳು ಅಮ್ಮನ ಹತ್ತಿರ ಮಾತನಾಡುವುದಕ್ಕೆ ಹೋಗಿದ್ದಾಳೆ' ಎಂದು ತಿಳಿಸಿದ್ದರಿಂದ ಅವನು ಸ್ವಲ್ಪ ಭಯದಿಂದಲೇ ತಂದೆಯ ಕೊಟಡಿಗೆ ಬಂದನು. ತಾಯಿಯ ಕಣ್ಣೀರು ಅವನಿಗೆ ಕಂಡುಬಂತು. ಸರೋಜಳ ಮುಖ ಗಂಭೀರವಾಗಿದ್ದುದು ಕಂಡುಬಂತು. ಏನು ಮಾತು ನಡೆಯಿತು ಎಂಬುದು ಅವನಿಗೆ ತಿಳಿಯದು. ತಾನೇನಾದರೂ ಪದರಿಬಿಟ್ಟರೆ ಅವಿವೇಕ ಏನಾಗುವುದೋ ಎಂದು ಶಂಕಿಸಿ ಮಾತನ್ನೇನೂ ಆಡದೆ ಸರೋಜಳನ್ನು ಹತ್ತಿರದ ಕುರ್ಚಿಯೊಂದರಲ್ಲಿ ಕೂಡಿಸಿದನು. ಕೃಷ್ಣರಾಯರು ಸ್ನಾನವನ್ನು ಮುಗಿಸಿಕೊಂಡು ಕೊಟಡಿಗೆ ಬಂದರು. ಅಲ್ಲಿನ ಸನ್ನಿವೇಶ ನೋಡಿ ಅವರ ಎದೆ ಝುಗ್ ಎಂದಿತು. ಅವರು ಕೊಟಡಿಯ ಬಾಗಿಲನ್ನು ಮುಚ್ಚಿಬಿಟ್ಟರು.'

'ಏನು ಮಾತು ನಡೆಯುತ್ತಿತ್ತು? ಏತಕ್ಕೆ ಆರ್ಭಟಮಾಡುತ್ತಿದ್ದೀಯೆ?' ಎಂದು ಹೆಂಡತಿಯನ್ನು ಕೇಳಿದರು.

'ನನ್ನದೇನಿದೆ ಆರ್ಭಟ! ನನ್ನನ್ನೇಕೆ ಪಾತಾಳಕ್ಕೆ ತುಳಿಯುತ್ತೀರಿ? ನಿಮ್ಮ ಮಗಳು ತುಮಕೂರಿಗೆ ಹೋಗಬೇಕು ಎಂದು ಹೇಳುತ್ತಿದಾಳೆ. ಅವಳಿಗೆ ಏನು ಜವಾಬು ಹೇಳುತ್ತೀರೋ ಹೇಳಿ. ಹಾಳು ತುಮಕೂರಿಗೆ ಬೆಂಕಿ ಬಿದ್ದುಹೋಗಲಿ! ಆ ಸೀತಾರಾಮುವನ್ನು ಪ್ಲೇಗುಮಾರಿ ಕೊಂಡೊಯ್ಯಲಿ . . .'

'ಏನಮ್ಮ ನಿನ್ನ ಹಾಳು ಮಾತು! ಅಯ್ಯೋ! ಕಿವಿಯಲ್ಲಿ ಕೇಳಲಾರೆನಲ್ಲ!' ಎಂದು ಸರೋಜ ಸೆಡೆತು ನಿಂತುಬಿಟ್ಟಳು.

ನಾಗರಾಜ ಅವಳನ್ನು ಮೆಲ್ಲಗೆ ಕುರ್ಚಿಯಲ್ಲಿ ಕುಳ್ಳಿರಿಸಿ, ತಾನೂ ಪಕ್ಕದಲ್ಲಿ ಕುಳಿತುಕೊಂಡು,

'ಸರೋಜ! ಅಮ್ಮ ಏನೋ ತನ್ನ ದುಃಖಕ್ಕೆ ಸಂಕಟಕ್ಕೆ ಹಾಗೆ ಆಡುತ್ತಾಳೆ. ಮನಸ್ಸಿಗೆ ಹಚ್ಚಿಕೊಳ್ಳಬೇಡ. ಅವಳು ಬಯ್ದರೆ ಆಶೀರ್ವಾದ ಎಂದು ತಿಳಿದುಕೋ' ಎಂದು ಸಮಾಧಾನ ಮಾಡಿದನು.

ಕೃಷ್ಣರಾಯರು ಸರೋಜಳ ಇನ್ನೊಂದು ಪಕ್ಕದಲ್ಲಿ ಕುಳಿತುಕೊಂಡರು. ಎದುರಿಗೆ ತುಳಸಾಬಾಯಿ ಕಣ್ಣೀರು ಸುರಿಸುತ್ತ ಮಂಚದ ಮೇಲೆ ಕುಳಿತಿದ್ದಳು. ತನ್ನ ತಾಯಿ ಹಾಗೆ ತನ್ನ ಗಂಡನ ವಿಷಯದಲ್ಲಿ ಅನಿಷ್ಟವನ್ನಾಡಿದಳಲ್ಲ ಎಂದು ಸರೋಜ ದುಃಖದಿಂದ ಕಣ್ಣೀರು ಹಾಕುತ್ತಿದ್ದಳು.

'ಅವರು ಬಂದಾಗ ಏನಾದರೂ ಆಡಿ ರೇಗಿಸುವುದು, ಅವರ ಮರೆಯಲ್ಲಿ ಅವರನ್ನು ಬಾಯಿಗೆ ಬಂದಹಾಗೆ ಬಯ್ಯುವುದು. ಒಂದು ಸಲವಾದರೂ ಒಳ್ಳೆಯ ಮಾತಿಲ್ಲ, ಒಳ್ಳೆಯ ಆದರಣೆಯಿಲ್ಲ. ಹೀಗೆಯೇ ಆಗಿಹೋಯಿತು ಅಮ್ಮನ ನಡತೆ! ಇನ್ನು ನನಗೆ ಶಿವಮೊಗ್ಗ ಸಾಕಪ್ಪ! ನನ್ನನ್ನು ತುಮಕೂರಿಗೆ ಕರೆದುಕೊಂಡುಹೋಗಿ ಬಿಟ್ಟುಬಿಡು. ಬೇಡವೆಂದರೂ ನಾನು ಅವರ ಸ್ವತ್ತು! ಇಟ್ಟುಕೊಂಡು ಬಾಳುತ್ತಾರೋ, ಬೇಡವೆಂದು ನೂಕಿಬಿಡುತ್ತಾರೋ ಅದನ್ನಾದರೂ ನೋಡಿಬಿಡುತ್ತೇನೆ. ನನ್ನನ್ನ ಕಳಿಸಿಬಿಡಪ್ಪ, ನಾನು ಹೋಗುತ್ತೇನೆ' ಎಂದು ಅಳುತಳುತ ಸರೋಜ ಹೇಳಿದಳು.

'ಅಮ್ಮ! ಸರೋಜ! ಈಗ ನೀನು ತುಮಕೂರಿಗೆ ಹೋಗಬಾರದಮ್ಮ. ಹೋದರೂ ಪ್ರಯೋಜನವಿಲ್ಲ. ಸ್ವಲ್ಪ ನಿಧಾನಿಸು' ಎಂದು ಕೃಷ್ಣರಾಯರು ಹೇಳಿದರು.

ನಾಗರಾಜನ ಕಣ್ಣುಗಳಿಂದ ನೀರು ಹರಿಯುತ್ತಿತ್ತು. ತುಳಸಾಬಾಯಿಯ ಅಳು ಹೆಚ್ಚುತ್ತಿತ್ತು.

'ಏಕೆ ಪ್ರಯೋಜನ ಇಲ್ಲ? ಹೇಳಪ್ಪ. ನಾನೇಕೆ ನಿಧಾನಿಸ

ಬೇಕು ? ತಿಳಿಸಪ್ಪ. ಈಗ ನನಗೆ ಶಿವಮೊಗ್ಗ ಸ್ವಲ್ಪವೂ ಒಗ್ಗುವುದಿಲ್ಲ ವಲ್ಲ.'

'ಅಮ್ಮ! ನಾನು ನಿನ್ನೆ ತರೀಕೆರೆಗೆ ಹಠಾತ್ತಾಗಿ ಬಂದು ನಿಮ್ಮನ್ನು ಇಲ್ಲಿಗೆ ಕರೆದುಕೊಂಡು ಬಂದೆ. ಏಕೆ ಹಾಗೆ ಬಂದೆ ಎಂದು ತಿಳಿದಿದೆಯೆ ? '

'ನಾವು ಕೇಳಿದರೆ ನೀನು ಹೇಳಲಿಲ್ಲ.'

'ಏನೋ ಒಂದು ಕೆಟ್ಟ ಸುದ್ದಿ – ಮೊದಲೇ ನಿಮ್ಮ ಕಿವಿಗೆ ಬಿದ್ದರೆ, ಪರಿಣಾಮ ಏನಾದೀತೋ ಎಂದು ಹೆದರಿ ಮೊದಲು ನಿಮ್ಮನ್ನು ಇಲ್ಲಿಗೆ ಕರತಂದೆ. ಹೇಳುತ್ತೇನೆ ಕೇಳಮ್ಮ. ನಿನ್ನ ಗಂಡ ಬೇರೆ ಮದುವೆಮಾಡಿ ಕೊಂಡಿದ್ದಾನೆ ! '

'ಬೇರೆ . . . ಬೇರೆ ಮದುವೆ . . . ಮಾಡಿಕೊಂಡರೇ ? ಅವರ ಸಂತೋಷವಪ್ಪ ! ಅವರು ಎಲ್ಲಾದರೂ ಚೆನ್ನಾಗಿರಲಿ !'

ಸರೋಜ ಮುಖವನ್ನು ತಗ್ಗಿಸಿಬಿಟ್ಟಳು. ಒಂದೆರಡು ಬಾರಿ ಬಿಕ್ಕಿದ್ದು ಕೇಳಿಸಿತು, ಕಣ್ಣೀರು ಸುರಿಯುತ್ತಿದ್ದುದು ಕಂಡುಬಂತು. ಮಾತು ನಿಂತುಹೋಯಿತು. ಹಾಗೆಯೇ ಕುರ್ಚಿಯಿಂದ ಮುಂದಕ್ಕೆ ಜೋತು ಬೀಳುವುದರಲ್ಲಿದ್ದಳು. ಕೃಷ್ಣರಾಯರು ಹಿಡಿದುಕೊಂಡರು. ತುಳಸಾಬಾಯಿ ಒಮ್ಮೆಗೇ ಓಡಿಬಂದು ಮಗಳನ್ನು ಎತ್ತಿ ತೊಡೆಯಮೇಲೆ ಮಲಗಿಸಿಕೊಂಡು ಗಟ್ಟಿಯಾಗಿ, 'ಅಯ್ಯೋ ಸರೋಜ!' ಎಂದು ಕೂಗುತ್ತ ಅಳತೊಡಗಿದಳು. ನಾಗರಾಜ ಬಾಗಿಲು ತೆರೆದು ಓಡಿಹೋಗಿ ಚೆಂಬಿನಲ್ಲಿ ನೀರನ್ನು ತಂದನು. ಮನೆಯಲ್ಲಿ ಗಲಾಟೆ ಹರಡಿಹೋಯಿತು. ಸುಕನ್ಯೆ, ರಘು ಮತ್ತು ಹುಡುಗರೆಲ್ಲ ಕೊಟಡಿಯೊಳಕ್ಕೆ ಬಂದುಬಿಟ್ಟರು. ತಲೆಗೆ ನೀರನ್ನು ತಟ್ಟಿ, ಗಾಳಿಬೀಸಿ, ಮೂಗಿಗೆ ವಾಸನೆ ಉಪ್ಪನ್ನು ಹಿಡಿದು ಉಪಚರಿಸಿದ್ದಾಯಿತು. ಪ್ರಜ್ಞೆಬರಲಿಲ್ಲ. ಸರೋಜಳ ಬಾಯಿಂದ ನೊರೆ ಹೊರಸೂಸುವುದಕ್ಕೆ ಪ್ರಾರಂಭವಾಯಿತು. 'ಅಪ್ಪಾ ! ನಾಗರಾಜ ! ಆಗಿಹೋಯಿತಲ್ಲಪ್ಪ – ಅಯ್ಯೋ ಸರೋಜ – ನನ್ನಮ್ಮ ! ನನ್ನ ತಾಯಿ ! ' ಎಂದು ಮಗಳನ್ನು ತಬ್ಬಿಕೊಂಡು ತುಳಸಾಬಾಯಿ ಗಟ್ಟಿಯಾಗಿ ಅತ್ತಳು. ಕೃಷ್ಣರಾಯರಿಗೂ ಅಧೈರ್ಯವಾಯಿತು.

'ಅಪ್ಪ ರಘು! ಮೋಟಾರಿನಲ್ಲಿ ಹೋಗಿ ಯಾವ ಡಾಕ್ಟರನ್ನಾದರೂ ಕರೆದುಕೊಂಡುಬಾರಪ್ಪ!' ಎಂದು ಕಳಿಸಿಕೊಟ್ಟು ತಾವೂ ಹತ್ತಿರ ಕುಳಿತು ಸರೋಜಳ ನಾಡಿಯನ್ನು ಹಿಡಿದು ಪರೀಕ್ಷಿಸಿದರು. ನಾಡಿ ಮೆಲ್ಲಗೆ ಆಡುತ್ತಿತ್ತು, ಉಸಿರೂ ಮೆಲ್ಲಗೆ ಆಡುತ್ತಿತ್ತು.

ಸ್ವಲ್ಪ ಹೊತ್ತಿನೊಳಗಾಗಿ ಡಾಕ್ಟರೊಬ್ಬನು ಬಂದುನೋಡಿ ಎರಡು ಇಂಜೆಕ್‌ಷನ್ನುಗಳನ್ನು ಕೊಟ್ಟನು. ಆದರೂ ಪ್ರಜ್ಞೆಬರಲಿಲ್ಲ. 'ಸ್ವಲ್ಪ ಕಾಯಬೇಕು. ಇನ್ನೊಂದು ಗಂಟೆಯವರೆಗೂ ನೋಡೋಣ. ಹಾಸಿಗೆ ಯಲ್ಲಿ ಮಲಗಿಸಿ ಬೆಚ್ಚಗೆ ಹೊದ್ದಿಸಿರಿ. ಪುನಃ ಬಂದು ನೋಡುತ್ತೇನೆ' ಎಂದು ಹೇಳಿ ಆತನು ಹೊರಟು ಹೋದನು. ಅಲ್ಲಿಯೇ ಹಾಸಿಗೆಯೊಂ ದನ್ನು ಹಾಸಿದರು. ಆದರೆ ತುಳಸಾಬಾಯಿ ಸರೋಜಳನ್ನು ಬಿಟ್ಟು ಕೊಡದೆ, 'ನನ್ನ ತೊಡೆಯ ಮೇಲೆಯೇ ಪ್ರಾಣಬಿಡಲಿ; ನಾನು ಹಾಸಿಗೆಯಮೇಲೆ ಮಲಗಿಸುವುದಿಲ್ಲ. ಅತ್ತ ಪಾಪಿಷ್ಠ ಗಂಡನೂ ತೊರೆದುಬಿಟ್ಟು ಇತ್ತ ಹೆತ್ತಿದ್ದ ಮಗುವೂ ಹೋಗಿಬಿಟ್ಟು ನನ್ನ ಕಂದನಿಗೆ ಇಂಥ ಕಷ್ಟ ಬಂತಲ್ಲ!' ಎಂದು ಗೋಳಾಡುತ್ತಿದ್ದಳು.

ಕ್ರಮಕ್ರಮವಾಗಿ ಸುಕನ್ಯೆಗೂ ರಘುವಿಗೂ ಇತರರಿಗೂ ಸೀತಾ ರಾಮುವಿನ ಎರಡನೆಯ ಮದುವೆಯ ಸಮಾಚಾರ ತಿಳಿಯಿತು. ಎಲ್ಲ ರಿಗೂ ದುಃಖಬಂತು. ಅರ್ಧಗಂಟೆಯಾಯಿತು, ಮುಕ್ಕಾಲು ಗಂಟೆ ಯಾಯಿತು. ಸರೋಜಳಿಗೆ ಪ್ರಜ್ಞೆಬರಲಿಲ್ಲ. 'ಅಪ್ಪಾ ನಾಗರಾಜ! ದೊಡ್ಡ ಡಾಕ್ಟರನ್ನ ಕರೆದುಕೊಂಡು ಬಂದಿದ್ದರೆ ಆಗಿತ್ತಲ್ಲಪ್ಪ! ಹೋಗೋ ಪ್ರಾಣವೇನೋ ಹೋಗುತ್ತೆ. ಮನಸಾರ ಔಷಧೋಪಚಾರ ಆದರೂ ಮಾಡಿಬಿಡೋಣ. ನಾಳೆ ಕೊರಗಿರುವುದಿಲ್ಲ. ಹೋಗಿ ಬಾರಪ್ಪ!' ಎಂದು ತುಳಸಾಬಾಯಿ ಹೇಳಿದಳು. ರಘು, 'ನಾನೇ ಹೋಗಿ ಬರುತ್ತೇನಮ್ಮ' ಎಂದು ಹೇಳಿ ಹೊರಟನು. ಸ್ವಲ್ಪಹೊತ್ತಿಗೆಲ್ಲ ಮೊದಲು ಬಂದಿದ್ದ ಡಾಕ್ಟರನ್ನೇ ಕರೆದುಕೊಂಡು ಹಿಂದಕ್ಕೆ ಬಂದನು. ಆ ಸಮಯಕ್ಕೆ ಸರೋಜ ಸ್ವಲ್ಪ ನರಳುತ್ತ ಕಣ್ಣುಬಿಟ್ಟು ನೋಡಿದಳು. ಡಾಕ್ಟರು ಆಕೆಯ ಹೊಟ್ಟೆಗೆ ಔಷಧವನ್ನು ಕೊಟ್ಟು, 'ಈಕೆಗೆ ವಿಶ್ರಾಂತಿ ಕೊಡಿ. ಮನಸ್ಸಿಗೆ ಅಶಾಂತಿ ಬರದಂತೆ ನೋಡಿಕೊಳ್ಳಿ. ಈಗ

ಅಪಾಯದಿಂದ ಮುಕ್ತಳಾಗಿದ್ದಾಳೆ. ಆದರೆ ಮತ್ತೆ ಪ್ರಜ್ಞೆ ಹೋದರೂ ಹೋಗಬಹುದು. ನಾನು ಪುನಃ ಬಂದು ನೋಡುತ್ತೇನೆ. ಎಚ್ಚರಿಕೆಯಿಂದ ನೋಡಿಕೊಳ್ಳಿ' ಎಂದು ಹೇಳಿ ಹೊರಟುಹೋದನು. ಆತ ಹೊರಟುಹೋದಮೇಲೆ ರಘು, 'ದೊಡ್ಡ ಡಾಕ್ಟರು ಊರಲ್ಲಿರಲಿಲ್ಲ. ಆದ್ದರಿಂದ ಮೊದಲು ಬಂದಿದ್ದವರನ್ನೇ ಕರೆದುಕೊಂಡುಬಂದೆ' ಎಂದು ತಿಳಿಸಿದನು. ಆ ದಿವಸ ಕೃಷ್ಣರಾಯರೂ ನಾಗರಾಜನೂ ಕಚೇರಿಗೆ ಹೋಗಲಿಲ್ಲ.

ಟಪ್ಪಾಲಿನಲ್ಲಿ ಮದ್ರಾಸಿನಿಂದ ಒಂದು ಕಾಗದ ಬಂತು. ಕೃಷ್ಣರಾಯರು ಅದನ್ನು ಒಡೆದು ನೋಡಿಕೊಂಡು ನಾಗರಾಜನ ಕೈಗೆ ಕೊಟ್ಟರು. ತುಳಸಾಬಾಯಿ ಅದನ್ನು ನೋಡಿ, 'ಎಲ್ಲಿಯದು ಕಾಗದ? ತುಮಕೂರಿನದೇ? ಶ್ರೀನಿವಾಸಪುರದ್ದೇ?' ಎಂದು ಕೇಳಿದಳು. 'ಇದು ಮದ್ರಾಸಿನವರ ಕಾಗದವಮ್ಮ' ಎಂದು ನಾಗರಾಜ ಉತ್ತರ ಕೊಟ್ಟನು.

'ಈ ನಮ್ಮ ಸಂಭ್ರಮದಲ್ಲಿ ಅಲ್ಲಿಂದ ಕಾಗದ ಬಂತೇನಪ್ಪ! ಏನು ಬರೆದಿದ್ದಾರೆ? ಇನ್ನೂ ಇಲ್ಲಿಯ ಚಪಲ ಹಚ್ಚಿಕೊಂಡಿದ್ದಾರೆಯೆ? ಅಥವಾ ಆ ಹುಡುಗಿಗೆ ಬೇರೆ ಕಡೆ ಗೊತ್ತುಮಾಡಿಕೊಂಡಿದ್ದಾರೆಯೆ?' ಎಂದು ಕೇಳಿದಳು.

'ಇಲ್ಲಿಯ ಚಪಲವನ್ನೇ ಇಟ್ಟುಕೊಂಡಿದ್ದಾರಮ್ಮ. ಸುಕನ್ಯೆ ವಿವರಗಳನ್ನು ತಿಳಿಸುತ್ತಾಳೆ' ಎಂದು ಹೇಳಿ ಕಾಗದವನ್ನು ತನ್ನ ತಂಗಿಯ ಕೈಗೆ ನಾಗರಾಜ ಕೊಟ್ಟುಬಿಟ್ಟನು. ಅವಳು ಕಾಗದವನ್ನು ಎರಡು ಬಾರಿ ಓದಿಕೊಂಡು, 'ಅಮ್ಮ! ಆ ಮದ್ರಾಸಿನ ಹುಡುಗಿ ದೊಡ್ಡ ಹಟ ಮಾಡುತ್ತಿದ್ದಾಳಂತೆ. ಪುನಃ ಶಿವಮೊಗ್ಗಕ್ಕೆ ಹೋಗೋಣ, ಮತ್ತೆ ಮಾತನಾಡೋಣ. ನಾಗರಾಜರಾಯರು ಬೇರೆ ಹುಡುಗಿಯನ್ನು ಮದುವೆ ಮಾಡಿಕೊಂಡರೆ ನಾನು ಪ್ರಾಣಕಳೆದುಕೊಳ್ಳುವುದು ಖಂಡಿತ. ಅವರು ಮದುವೆಯಿಲ್ಲದೆ ಹಾಗೆಯೇ ಇದ್ದರೆ ನಾನೂ ಮದುವೆಯಿಲ್ಲದೆ ಹಾಗೆಯೇ ಇದ್ದುಬಿಡುತ್ತೇನೆ ಎಂದೆಲ್ಲ ಹಟಮಾಡುತ್ತಿದ್ದಾಳಂತೆ. ಆ ಹುಡುಗಿಯ ತಂದೆ—ದೊಡ್ಡ ಮನಸ್ಸುಮಾಡಿ, ನಮ್ಮ ಕೈಬಿಡಬೇಡಿ

ಎಂದು ಕಾಗದ ಬರೆದಿದ್ದಾನೆ' ಎಂದು ವಿವರಗಳನ್ನು ತಿಳಿಯ ಹೇಳಿದಳು.

'ನಮ್ಮ ಸಂಸಾರ ಅಧೋಗತಿಗೆ ಇಳಿಯಿತು! ನಗುತಾ ನಲೀತಾ ಮದುವೆಗಳು, ಶೋಭನಗಳು, ಹೆರಿಗೆಗಳು, ಮೊಮ್ಮಕ್ಕಳು—ಎಂದು ಸಂತೋಷಪಡುವ ಕಾಲ ಮುಗಿದುಹೋಯಿತು. ಒಬ್ಬ ಸೀತಾರಾಮುವಿನಿಂದ ನಮ್ಮ ಸಂಸಾರವೆಲ್ಲ ಅಲ್ಲಕಲ್ಲೋಲವಾಗಿ ಹೋಯಿತು' ಎಂದು ತುಳಸಾಬಾಯಿ ಪೇಚಾಡಿಕೊಂಡು ಹೇಳಿದಳು.

ಊಟದಹೊತ್ತಿಗೆ ಸರೋಜ ಹಾಸಿಗೆಯ ಮೇಲೆ ಎದ್ದು ಕುಳಿತಳು. ಅವಳ ಮುಖ ಮೊದಲೇ ಬಿಳುಪಾಗಿದ್ದುದು ಮತ್ತಷ್ಟು ಬಿಳಿಚಿಕೊಂಡು, ಕಣ್ಣುಗಳು ಗುಳಿಬಿದ್ದು ಹೆಣಮುಖವಾಗಿ ಹೋಗಿತ್ತು. ಕೃಷ್ಣರಾಯರು ಅವಳನ್ನು, 'ಮಲಗಿಕೊಳ್ಳಮ್ಮ! ಏಳಬೇಡ, ಆಯಾಸ ಮಾಡಿಕೊಳ್ಳಬೇಡ' ಎಂದು ಹೇಳಿ ಬಲಾತ್ಕಾರಮಾಡಿ ಮಲಗಿಸಿದರು. ಅವಳಿಗೆ ಊಟ ಕೃಷ್ಣರಾಯರ ಕೊಟಡಿಯಲ್ಲೇ ಆಯಿತು. ಆ ದಿನವೆಲ್ಲ ಅವಳ ಹತ್ತಿರ ತುಳಸಾಬಾಯಿಯೋ ಕೃಷ್ಣರಾಯರೋ, ನಾಗರಾಜನೋ—ಯಾರಾದರೊಬ್ಬರು ಇರುತ್ತಿದ್ದರು. ಸರೋಜ ಪುನಃ ಯಾವ ಹೆಚ್ಚಿನ ಮಾತುಗಳನ್ನೂ ಆಡಲಿಲ್ಲ. 'ಅವರಿಗೆ ನಾನು ಬೇಡವಾಯಿತು. ಬೇರೆ ಮದುವೆ ಮಾಡಿಕೊಂಡರು. ಅವರ ಸಂತೋಷ. ಅವರು ಎಲ್ಲಿಯಾದರೂ ಚೆನ್ನಾಗಿದ್ದರೆ ಸಾಕು'—ಎಂದಿಷ್ಟನ್ನು ಮಾತ್ರ ಎರಡು ಮೂರು ಬಾರಿ ಆಡಿದಳು. ಕೃಷ್ಣರಾಯರು ನಾಗರಾಜನಿಗೆ, 'ಅವಳನ್ನು ಒಂಟಿಯಾಗಿ ಬಿಡಲೇಬೇಡ. ಜತೆಯಲ್ಲೇ ಇರು. ಏನಾದರೂ ನೆಪಹೇಳಿ ಕಣ್ಮರೆಯಾಗಿ ಹೋದಾಳು, ಎಚ್ಚರಿಕೆ!' ಎಂದು ಗುಟ್ಟಾಗಿ ಹೇಳಿದರು.

ಒಂದು ವಾರ ಹೇಗೋ ಕಳೆಯಿತು. ಎಲ್ಲರ ಮನಸ್ಸುಗಳೂ ಸ್ತಿಮಿತಕ್ಕೆ ಬರುತ್ತಿದ್ದುವು. ಸರೋಜಳನ್ನು ಮಾತ್ರ ಒಂಟಿಯಾಗಿ ಬಿಡುತ್ತಿರಲಿಲ್ಲ. ಸೀತಾರಾಮುವಿನ ಎರಡನೆಯ ಮದುವೆಯ ಸಮಾಚಾರ ತರೀಕೆರೆಗೂ ತಲುಪಿತು. ಅಲ್ಲಿಯೂ ಎಲ್ಲರೂ ದುಃಖಪಟ್ಟರು.

**ಮುಂದೆ ಏನುಮಾಡಬೇಕು? ಸರೋಜಳ ಗತಿ ಏನಾಗಬೇಕು?**

ಎಂದು ತುಳಸಾಬಾಯಿ ಕೃಷ್ಣರಾಯರನ್ನು ಆಗಾಗ ಕೇಳುತ್ತಿದ್ದಳು. ಕೃಷ್ಣರಾಯರು, 'ಮುಂದೆ ಏನುಮಾಡಬೇಕು ? ಎಂಬುವ ಪ್ರಶ್ನೆ ಈಗ ಮುಖ್ಯವಲ್ಲ. ಸರೋಜ ತನ್ನ ದುಃಖವನ್ನು ಪ್ರಕಟಿಸುತ್ತಿಲ್ಲ. ಅವಳ ಸಂಕಟ ಅವಳನ್ನು ತಿನ್ನುತ್ತಿದೆ. ಅವಳು ತನ್ನ ಜೀವಕ್ಕೆ ಏನು ಅಪಾಯ ಮಾಡಿಕೊಳ್ಳುತ್ತಾಳೋ ಎಂದು ನನಗೆ ಬಹಳ ಭಯವಿದೆ. ಆದ್ದರಿಂದ ಅವಳನ್ನು ಜೋಪಾನವಾಗಿ ನೋಡಿಕೊ. ನಾನು ಆಗಾಗ ಊರಲ್ಲಿರುವುದಿಲ್ಲ. ನಾಗರಾಜ ಕಚೇರಿಗೆ ಹೋಗಿಬರಬೇಕಾಗುತ್ತೆ. ಇನ್ನು ನೀನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಹಿಂದಿನ ಮಾತುಗಳಾವುದನ್ನೂ ಆಡಬಾರದು. ಅವಳ ಮುಂದೆ ರಗಳೆಮಾಡ ಬಾರದು. ಅವಳನ್ನು ಒಂಟಿಯಾಗಿ ಬಿಡಬಾರದು. ಮುಂದಿನ ಮಾತ ನ್ನೆಲ್ಲ ಆಮೇಲೆ ಆಡೋಣ' ಎಂದು ತಮ್ಮ ಹೆಂಡತಿಗೆ ಹೇಳಿದರು.

ಸರೋಜ ಆತ್ಮಹತ್ಯೆ ಮಾಡಿಕೊಳ್ಳುವಳೆಂಬ ಭಯ ಕ್ರಮಕ್ರಮ ವಾಗಿ ದೂರವಾಯಿತು. ಅವಳು ದಿನವೂ ಬೆಳಗ್ಗೆ ಎದ್ದು ಸ್ನಾನಾದಿ ಗಳನ್ನು ತೀರಿಸಿಕೊಂಡು, ದೇವರಿಗೆ ಹತ್ತಾರು ನಮಸ್ಕಾರಗಳನ್ನು ಹಾಕಿ ತುಳಸೀಪೂಜೆ ಇತ್ಯಾದಿಗಳನ್ನು ಮಾಡುತ್ತ, ರಾಮಾಯಣವನ್ನೋ ಭಾರತವನ್ನೋ ಓದಿಕೊಳ್ಳುತ್ತಿದ್ದಳು. ಕಾಫಿ ಕುಡಿಯುವುದನ್ನು ಬಿಟ್ಟು ಬಿಟ್ಟಳು. ಎರಡು ಹೊತ್ತು ಊಟವನ್ನು ಮಾತ್ರ ಮಾಡುತ್ತಿದ್ದಳು. ಜಡೆಯನ್ನೇನೋ ಹಾಕಿಕೊಳ್ಳುತ್ತಿದ್ದಳು. ಆದರೆ ಹೂವನ್ನು ಮುಡಿದು ಕೊಳ್ಳುತ್ತಿರಲಿಲ್ಲ, ಅಲಂಕಾರಗಳನ್ನು ಮಾಡಿಕೊಳ್ಳುತ್ತಿರಲಿಲ್ಲ. ಹಗಲು ಹೊತ್ತು ಮಲಗುತ್ತಲೇ ಇರಲಿಲ್ಲ. ರಾತ್ರಿ ಒಂದು ಚಾಪೆಯನ್ನು ಮಾತ್ರ ಹಾಸಿಕೊಂಡು ಮಲಗುತ್ತಿದ್ದಳು. ಹಾಗೆ ಮಲಗಬೇಡವೆಂದು ತಂದೆ ತಾಯಿ, ಅಣ್ಣ—ಯಾರು ಏನು ಸಮಾಧಾನ ಹೇಳಿದರೂ ಕೇಳುತ್ತಿರ ಲಿಲ್ಲ. ಬೆಳಗ್ಗೆ ಇತರರಿಗಿಂತ ಬೇಗನೆಯೇ ಏಳುತ್ತಿದ್ದಳು. ದೇವತಾ ಪರವಾದ ಸ್ತೋತ್ರಗಳು, ದೇವರನಾಮಗಳು ಮೊದಲಾದುವನ್ನು ಬಾಯಿಗೆ ಗಟ್ಟಿಮಾಡುತ್ತಿದ್ದಳು. ತಂಬೂರಿಯನ್ನು ಶ್ರುತಿಮಾಡಿ ದಿನವೂ ಸಾಯಂಕಾಲ ದೇವರ ಮುಂದೆ ಕುಳಿತು ದೇವರನಾಮಗಳನ್ನು ಹಾಡು ತ್ತಿದ್ದಳು. ಮನೆಯ ಕೆಲಸಗಳಲ್ಲಿ ಹುಡುಗರ ಬಟ್ಟೆಬರೆ ನೋಡಿ

ಕೊಳ್ಳುವುದು, ಚಿಕ್ಕವರಿಗೆ ವೈತೊಳೆಸುವುದು. ತಂಗಿಯರಿಗೆ ತಾಯಿಗೆ ಜಡೆಹಾಕುವುದು, ಮುಖ್ಯವಾಗಿ ತಾಯಿತಂದೆಗಳ ಶುಶ್ರೂಷೆಯನ್ನು ಮಾಡುವುದು—ಇವುಗಳಿಗೆ ಗಮನಕೊಡುತ್ತಿದ್ದಳು.

ಹೀಗೆಯೇ ದಿನಗಳು ಕಳೆದುವು. ಮುಂದೆ ಏನುಮಾಡಬೇಕು? ಎಂಬ ಪ್ರಶ್ನೆಯನ್ನು ಕೃಷ್ಣರಾಯರೇ ಎತ್ತಿದರು. ತುಳಸಾಬಾಯಿ, 'ಏನು ಮಾಡುವುದು ? ಎಷ್ಟೋ ಜನ ಇಬ್ಬರು ಹೆಂಡತಿಯರನ್ನು ಇಟ್ಟು ಕೊಂಡು ಸಂಸಾರ ಮಾಡುತ್ತಿಲ್ಲವೇ ? ಹಾಗೆಯೇ ಇದು ಎಂದು ತಿಳಿದು ಕೊಂಡು ಸರೋಜಳನ್ನು ಅವಳ ಗಂಡನ ಮನೆ ಸೇರಿಸುವ ಹಾಗಿದ್ದರೆ ಸೇರಿಸಿ. ನಾನು ಏನು ಹೇಳಲಿ? ಆ ಕಾವೇರಿ ಏನು ಮಾಡುತ್ತಾಳೋ? ಆ ಸೀತಾರಾಮು ಏನು ಮಾಡುತ್ತಾನೋ ನನಗೆ ಗೊತ್ತಿಲ್ಲ' ಎಂದು ಹೇಳಿದಳು.

ಅದನ್ನು ಕೇಳುತ್ತಲೂ ನಾಗರಾಜ, 'ನಾನು ಬದುಕಿರಬೇಕು ಎಂಬ ಆಶೆ ನಿಮಗಿದ್ದರೆ ಆ ಮಾತನ್ನು ಆಡಬೇಡಿ. ಇದು ಖಂಡಿತ. ಸರೋಜ ಒಂದುವೇಳೆ ಒಪ್ಪಿದರೂ ನಾನು ಒಪ್ಪುವುದಿಲ್ಲ. ನಿಮಗೆ ಈ ಹಿರಿಯ ಮಗ, ನಾಗರಾಜ ಇಲ್ಲ ಎಂದು ತಿಳಿದುಕೊಳ್ಳಿ' ಎಂದು ಸ್ವಲ್ಪ ಬಿರುಸಾಗಿಯೇ ಹೇಳಿದನು.

'ಹಾಗಾದರೆ ನಿನ್ನ ಅಭಿಪ್ರಾಯವೇನು ?' ಎಂದು ಕೃಷ್ಣರಾಯರು ಕೇಳಿದರು.

'ನನ್ನ ಅಭಿಪ್ರಾಯ ಹೇಳುತ್ತೇನೆ. ಅವಳನ್ನು ಮುಂದಕ್ಕೆ ಓದಿಸುತ್ತೇನೆ; ಬಿ.ಎ., ಬಿ.ಎಸ್‌ಸಿ, ಎಂ ಎ., ಎಂ.ಎಸ್‌ಸಿ—ಎಲ್ಲಿಯ ವರೆಗೆ ಓದುವುದಕ್ಕೆ ಇಷ್ಟಪಡುತ್ತಾಳೋ ಅಲ್ಲಿಯವರೆಗೂ ಓದಿಸುತ್ತೇನೆ. ಬೇಕಾದರೆ ಮೆಡಿಕಲ್ ಕಾಲೇಜಿಗೆ ಸೇರಿಸೋಣ; ಎಂ.ಬಿ.,ಬಿ.ಎಸ್., ಆಗಿ ಡಾಕ್ಟರಾಗಿ ಬರಲಿ. ಸ್ವತಂತ್ರವಾಗಿ ಸಂಪಾದನೆ ಮಾಡುವ ಶಕ್ತಿ ಬರಲಿ. ತಿಂಗಳಿಗೆ ನೂರಾರು ರುಪಾಯಿ ಸಂಪಾದನೆ ಮಾಡಲಿ. ಯಾರ ಹಂಗಿನಲ್ಲೂ ಅವಳಿರುವುದು ಬೇಡ. ಅವಳ ಆಶ್ರಯದಲ್ಲಿ ಇತರರು ಬಾಳುವಂತಾಗಲಿ. ಎಷ್ಟುಹಣ ಖರ್ಚಾದರೂ ಸರಿಯೆ. ಅದನ್ನು ನಾನು ವಹಿಸಿಕೊಳ್ಳುತ್ತೇನೆ. ಜೀವವಿಮೆಮಾಡಿ ಅವಳ

ಹೆಸರಿಗೆ ನಾಮಕರಣಮಾಡಿ ಕೊಡುತ್ತೇನೆ. ಆ ಗಂಡ ಎಂಬುವನು ಇಟ್ಟುಕೊಂಡು ಬಾಳದಿದ್ದರೆ ಏನು ನಷ್ಟ? ಈಗಿನ ಕಾಲದಲ್ಲಿ ಪೂರ್ವಾಚಾರದ ದರ್ಪವನ್ನು ಯಾರು ಸಹಿಸುತ್ತಾರೆ? ನನ್ನ ಅಭಿಪ್ರಾಯ ಹೇಳಿದ್ದೇನಪ್ಪ. ನೀನು ಆಲೋಚಿಸು.'

'ನಿನ್ನ ಸಲಹೆ ಚೆನ್ನಾಗಿಯೇ ಇದೆಯಪ್ಪ. ನಿನ್ನ ಔದಾರ್ಯ ನಿನ್ನ ತಂಗಿಯ ಮೇಲಿನ ಪ್ರೇಮ—ಎರಡಕ್ಕೂ ಅನುಗುಣವಾಗಿಯೇ ಮಾತನಾಡಿದ್ದೀಯೆ. ನನಗೆ ಸಂತೋಷ ಆಯಿತು, ನಾಗರಾಜ!' ಎಂದು ಹೇಳಿ ಮಗನನ್ನು ಕೃಷ್ಣರಾಯರು ಆಲಿಂಗಿಸಿಕೊಂಡರು.

'ನಾಗರಾಜ ಹೇಳಿದ್ದನ್ನು ನಾನೂ ಒಪ್ಪುತ್ತೇನೆ. ಸರೋಜಳ ಅಭಿಪ್ರಾಯ ತಿಳಿದುಕೊಂಡು ನಿಷ್ಕರ್ಷೆ ಮಾಡಿಬಿಡೋಣ' ಎಂದು ತುಳಸಾಬಾಯಿ ಹೇಳಿದಳು.

ಸರೋಜಳನ್ನು ಕೊಟಡಿಗೆ ಕರಸಿಕೊಂಡು ಆ ಮಾತು ಈ ಮಾತು ಆಡುತ್ತ, ಅವಳೇನಾದರೂ ಗಂಡನ ಮನೆಗೆ ಹೋಗಲು ಇಷ್ಟಪಡುತ್ತಾಳೆಯೆ? ಎಂದು ಸೂಕ್ಷ್ಮವಾಗಿ ತಾಯಿ ತಂದೆ ಕೇಳಿದರು. ಅದಕ್ಕೆ ಅವಳು,

'ನನಗೆ ನನ್ನ ಗಂಡನ ಮೇಲೆ ಯಾವ ಕೋಪವೂ ಇಲ್ಲ. ನಾನೇನೋ ಈಗ ನನ್ನ ಪಾಡಿಗೆ ಪೂಜೆಗಳಲ್ಲಿ, ದೇವರ ಸಂಕೀರ್ತನೆಗಳಲ್ಲಿ ರಾಮಾಯಣ ಭಾರತಗಳ ಓದಿನಲ್ಲಿ ಕಾಲಕಳೆಯುತ್ತಿದೇನೆ. ಮನಸ್ಸಿಗೂ ಶಾಂತಿ ಇದೆ. ಆದರೆ ಎಷ್ಟು ದಿವಸ ನಿಮಗೆ ಭಾರವಾಗಿ ನಾನಿರಬಹುದು? ನಾಳೆ ನನ್ನ ಗತಿ ಏನಾಗಬೇಕು? ಎಂಬುದನ್ನೂ ಆಲೋಚನೆ ಮಾಡಿದ್ದೇನೆ. ನಾನಾಗಿ ಅವರ ಆಶ್ರಯಕ್ಕೆ ಹೋಗುವುದಿಲ್ಲ. ಅವರೇನಾದರೂ ಸಮಾಧಾನವಾಗಿ ಬಂದು ಕರೆದುಕೊಂಡು ಹೋದರೆ ಒಲ್ಲೆ ಎನ್ನುವುದಿಲ್ಲ, ಹೋಗುತ್ತೇನೆ. ಅವರ ಮತ್ತು ಆ ಹುಡುಗಿಯ ಸೇವೆಯನ್ನು ನಿರ್ವಂಚನೆಯಾಗಿ ಮಾಡುತ್ತೇನೆ. ಆದರೆ ಮತ್ತೆ ಅವರೊಡನೆ ಹೆಂಡತಿಯಾಗಿ ಮಾತ್ರ ಬಾಳುವುದಿಲ್ಲ. ನಾನು ಅವರ ಹೆಂಡತಿಯಾಗಿ ಬಾಳಿದ್ದು ಮುಗಿದುಹೋಯಿತು. ಏನಿದ್ದರೂ ಅವರ ಸೇವಕಿ, ತೊತ್ತು ನಾನು. ಅದನ್ನು ಅವರಿಗೆ ಸ್ಪಷ್ಟವಾಗಿ ತಿಳಿಸಿಬಿಡು

ತ್ತೇನೆ ' ಎಂದು ಹೇಳಿದಳು. ತಮ್ಮ ಮಗಳ ಮಾತುಗಳನ್ನು ಕೇಳುತ್ತ ಕೃಷ್ಣರಾಯರ ಕಣ್ಣುಗಳಿಂದ ಪಳಪಳನೆ ನೀರು ಸುರಿಯತೊಡಗಿತು.

'ಒಂದುವೇಳೆ ಅವರು ಬಂದು ಕರೆಯಲಿಲ್ಲ ಎಂದಿಟ್ಟುಕೋ. ಎಂತಿದ್ದರೂ ಇಂಟರ್‌ಮೀಡಿಯೇಟ್ ಪ್ಯಾಸ್‌ಮಾಡಿದ್ದೇನೆ. ಹತ್ತು ಜನ ಮಕ್ಕಳನ್ನು ಸೇರಿಸಿಕೊಂಡು ಶಿಶುವಿಹಾರವನ್ನು ನಡಸಿದರೆ ನನ್ನ ಜೀವನ ಹೇಗೋ ಸಾಗುತ್ತದೆ. ನನ್ನ ಕೈಯಲ್ಲಾದ ಸೇವೆ—ಹೆಂಗಸರ ಮತ್ತು ಮಕ್ಕಳ ಸೇವೆ ಮಾಡುತ್ತೇನೆ. ಒಂದು ಮಹಿಳಾಶ್ರಮವನ್ನೂ ನಡಸುತ್ತೇನೆ. ಅಣ್ಣ ಇದ್ದಾನೆ, ತಮ್ಮಂದಿರಿದ್ದಾರೆ, ತಂಗಿಯರಿದ್ದಾರೆ. ಯಾರಾದರೂ ಒಂದು ದಿಕ್ಕಾಗಿ ನೋಡಿಕೊಳ್ಳುತ್ತಾರೆ. ನನ್ನ ಕೈಬಿಡು ತ್ತಾರೆಯೇ ? ನನ್ನ ಕೊರಗನ್ನು ನೀನು ಹಚ್ಚಿಸಿಕೊಳ್ಳಬೇಡ, ಅಮ್ಮನೂ ಹಚ್ಚಿಸಿಕೊಳ್ಳುವುದು ಬೇಡ.'

'ನೀನು ಹೇಳುವುದು ಸರಿಯಮ್ಮ ಸರೋಜ ! ನನ್ನ ಹೊಟ್ಟೆ ಯಲ್ಲಿ ಹುಟ್ಟಿದ ಮಗಳು ಬೇರೆ ಏನನ್ನು ಹೇಳಿಯಾಳು' ಎಂದು ಕೃಷ್ಣರಾಯರು ತಮ್ಮ ಕಣ್ಣೀರನ್ನೊರಸಿಕೊಂಡರು. 'ನಾಗರಾಜ, ಒಂದು ಮಾತನ್ನು ಹೇಳುತ್ತಾನಮ್ಮ. ಅದನ್ನು ಕೇಳಿಕೋ. ನಿನ್ನ ಅಭಿಪ್ರಾಯ ತಿಳಿಸು.'

'ಅಣ್ಣ ಹೇಳುವ ಮಾತನ್ನು ನಾನು ಒಪ್ಪುವುದಿಲ್ಲಪ್ಪ!'

'ಯಾವ ಮಾತನ್ನು ನೀನು ಒಪ್ಪುವುದಿಲ್ಲ? ಅವನು ಹೇಳುವು ದನ್ನು ಕೇಳು.'

'ನಾನು ಬೇರೆ ಮದುವೆ ಮಾಡಿಕೊಳ್ಳಬೇಕು ಎಂದು ಅಣ್ಣ ಹೇಳುತ್ತಾನೆ. ನಾನು ಅದಕ್ಕೆ ಒಪ್ಪುವುದಿಲ್ಲಪ್ಪ.'

'ಆ ಮಾತನ್ನು ಅವನು ಹೇಳುವುದಿಲ್ಲ. ಧೈರ್ಯವಾಗಿರಮ್ಮ. ಬೇರೆಮಾತು ಹೇಳುತ್ತಾನೆ ; ಕೇಳು.'

'ಹಾಗಾದರೆ ಕೇಳುತ್ತೇನಪ್ಪ. ಏನಣ್ಣ ! ಏನು ಹೇಳುತ್ತೀಯೋ ಹೇಳು ' ಎಂದು ಸರೋಜ ಎಂದಳು.

ನಾಗರಾಜ ತಾನು ಹಿಂದೆ ತನ್ನ ತಾಯಿ ತಂದೆಗಳಿಗೆ ಹೇಳಿದ ಮಾತನ್ನೇ ಹೇಳಿದನು. ಸರೋಜ ಅದನ್ನು ಕೇಳಿಕೊಂಡು, 'ಅಣ್ಣ !

ಈ ಸಂಸಾರ ದೊಡ್ಡದು. ಖರ್ಚುಗಳು ಹೆಚ್ಚು. ಇದನ್ನು ನಿರ್ವಹಿಸೋದೇ ಕಷ್ಟ. ಓದುವ ಹುಡುಗರು ಮದುವೆಯಾಗುವ ಹುಡುಗಿಯರು ಇದ್ದಾರೆ. ಈ ಮಧ್ಯದಲ್ಲಿ ನನಗಾಗಿ ಸಾವಿರಾರು ರುಪಾಯಿಗಳನ್ನು ಖರ್ಚುಮಾಡುವುದು ಹೇಗೆ? ಅದು ಸರಿಯಲ್ಲ. ನಾನು ಮಾಡಬೇಕೆಂದಿರುವ ಸೇವೆಗೆ ನಾನು ಓದಿರುವುದು ಸಾಕು. ಹೆಚ್ಚಿಗೆ ಓದು ಏತಕ್ಕೆ ?'

'ಹಾಗಲ್ಲ ಸರೋಜ! ನನಗೇನೂ ಕಷ್ಟವಿಲ್ಲ. ನೀನು ಓದು; ನಾನು ಓದಿಸುತ್ತೇನೆ. ಇನ್ನು ಮೂರುನಾಲ್ಕು ವರ್ಷಗಳ ಕಾಲ ಅಪ್ಪನ ಸಂಪಾದನೆ ನನ್ನ ಸಂಪಾದನೆ ಎರಡೂ ಇರುತ್ತೆ. ನೀನು ಸ್ವಲ್ಪವೂ ಆಲೋಚಿಸಬೇಡ.' ಎಂದು ನಾಗರಾಜ ಹೇಳಿದನು.

'ಅಣ್ಣ! ನೀನು ಓದಿಸುವಹಾಗಿದ್ದರೆ ಮೆಡಿಕಲ್ ಕಾಲೇಜಿಗೆ ಸೇರಿಸು. ನನ್ನ ಮಗು ಹೋಗಿ ಬಿಟ್ಟಿತು ನೋಡು! ಅದು ನನಗೆ ದೊಡ್ಡ ಕೊರಗು. ನಾನು ಡಾಕ್ಟರಾಗಿ ಬಂದು ನನ್ನ ಕೈಯಲ್ಲಾದಷ್ಟು ಮಕ್ಕಳನ್ನು ಬದುಕಿಸಲು ಪ್ರಯತ್ನಿಸುತ್ತೇನೆ. ಮಕ್ಕಳ ಚಿಕಿತ್ಸೆಯನ್ನೆಲ್ಲ ಉಚಿತವಾಗಿ ಮಾಡುತ್ತೇನೆ.'

'ಹಾಗೆಯೇ ಆಗಲಿ ಸರೋಜ! ನನ್ನ ಮನಸ್ಸಿನಲ್ಲೂ ಅದೇ ಇತ್ತು. ಮೈಸೂರಲ್ಲಿ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ, ಚಿಕ್ಕಪ್ಪ ಡಾಕ್ಟರಾಗಿದ್ದಾನೆ. ಅವನ ಮನೆಯಲ್ಲೋ ಹಾಸ್ಟಲ್ಲಿನಲ್ಲೋ ನೀನು ಇರಬಹುದು. ನೀನು ಡಾಕ್ಟರಾಗಿ ಬಂದು ಮೋಟಾರಿಟ್ಟುಕೊಂಡು, ದೊಡ್ಡ ಬಂಗಲೆಯಲ್ಲಿ ವಾಸಮಾಡುತ್ತ ಹಣವನ್ನೂ ಕೀರ್ತಿಯನ್ನೂ ಸಂಪಾದಿಸಬೇಕು ಎನ್ನುವುದೇ ನನ್ನ ಇಷ್ಟ.'

ತಮ್ಮ ಆ ಇಬ್ಬರು ಮಕ್ಕಳ ಸಂಭಾಷಣೆಯನ್ನು ತಂದೆ ತಾಯಿಗಳು ಕೇಳಿ ತಮ್ಮ ದುಃಖಗಳನ್ನೆಲ್ಲಾ ಮರೆತು ಹೇಗೆ ಆನಂದಪಟ್ಟರೆಂಬುದನ್ನು ವರ್ಣಿಸಲು ಸಾಧ್ಯವಿಲ್ಲ. ತುಳಸಾಬಾಯಿ, 'ದೇವರು ನಿಮ್ಮಿಬ್ಬರನ್ನೂ ಸುಖವಾಗಿಟ್ಟಿರಲಪ್ಪ! ನಮಗೆ ಈಗ ಮನಸ್ಸು ನೆಮ್ಮದಿಯಾಯಿತು' ಎಂದು ಹೇಳಿ ಇಬ್ಬರನ್ನೂ ತಬ್ಬಿಕೊಂಡಳು.

## ೧೯. ಎರಡನೆಯ ಮದುವೆಯ ಸಂಕಟ

ಸೀತಾರಾಮುವಿಗೆ ಎರಡನೆಯ ಮದುವೆಯ ಮುಹೂರ್ತ ನಿಷ್ಕರ್ಷೆಯಾಗಿ ಲಗ್ನಪತ್ರಿಕೆ ಬರೆಯುವ ವೇಳೆಗೆ ಅವನಿಗೆ ಶ್ರೀನಿವಾಸಪುರ ತಾಲ್ಲೂಕಿನ ಶಿರಸ್ತೇ ಕೆಲಸಕ್ಕೆ ಪ್ರಮೋಷನ್ ಆಗಿ ವರ್ಗವಾಗಿರುವ ಆರ್ಡರು ಕೈಗೆಬಂತು. ಅದೇನು ಕಾಕತಾಳ ನ್ಯಾಯವೋ! ಅಂತೂ ಕಾವೇರಮ್ಮನಿಗೆ ತಾನು ಹೇಳುತ್ತಿದ್ದ ಕಾಲಜ್ಞಾನ ನಿಜವಾಯಿತಲ್ಲ ಎಂದು ಇಮ್ಮಡಿ ಸಂತೋಷ. ಸೀತಾರಾಮುವಿಗೆ ದುಃಖದಲ್ಲಿ ಒಂದು ಸಮಾಧಾನ. ಮದುವೆಯಲ್ಲಿ ಸೀತಾರಾಮುವಿನ ಮನಸ್ಸಿಗೆ ಲೇಶವೂ ಸಂತೋಷವಿರಲಿಲ್ಲ. ಆ ಎರಡನೆಯ ಹೆಂಡತಿಯ ಕೊರಲಿಗೆ ಮಾಂಗಲ್ಯವನ್ನು ಕಟ್ಟುವಾಗ ಹಿಂದೆ ತಾನು ಸರೋಜಳಿಗೆ ಹಾಗೆಯೇ ಕಟ್ಟಿದ್ದು—ಆಗ ಮಹೋತ್ಸಾಹದಿಂದ ಸಂತೋಷಾಧಿಕ್ಯದಿಂದ ಕಟ್ಟಿದ್ದು—ಜ್ಞಾಪಕಕ್ಕೆ ಬಂದು ಅವನ ಕೈಗಳಮೇಲೆ ಕಣ್ಣೀರು ತೊಟ್ಟಿಕ್ಕಿತು.

ಮದುವೆಯಾದ ಮೇಲೆ ಆ ಹೊಸ ಸೊಸೆಯನ್ನು ಜೊತೆಯಲ್ಲೇ ಕರೆದುಕೊಂಡು ಹೋಗಬೇಕೆಂಬುದು ಕಾವೇರಮ್ಮನ ಇಷ್ಟವಾಗಿತ್ತು. ಆದರೆ ಸೀತಾರಾಮು ಅದಕ್ಕವಕಾಶಕೊಡಲಿಲ್ಲ. 'ಅಮ್ಮ! ಇದುವರೆಗೂ ನಿನ್ನ ಮಾತಿನಂತೆ ನಾನು ನಡದೆ. ಎರಡನೆಯ ಮದುವೆ ಮಾಡಿಕೊಳ್ಳಬೇಕು ಎಂದು ನೀನು ನಿರ್ಬಂಧಿಸಿದೆ. ನ್ಯಾಯವೋ ಅನ್ಯಾಯವೋ ಧರ್ಮವೋ ಅಧರ್ಮವೋ ನಿನ್ನ ಶಂಕೆ ಕಳೆಯಲಿ ಎಂದು ನಾನು ಮನಸ್ಸಿಲ್ಲದಿದ್ದರೂ ಒಪ್ಪಿಕೊಂಡೆ. ಈಗ ನನ್ನ ಮಾತಿಗೆ ಬರಬೇಡ. ಇನ್ನು ಎರಡು ವರ್ಷಗಳವರೆಗೂ ಆ ಹುಡುಗಿ ಹಳ್ಳಿಯಲ್ಲೇ ಇರಲಿ. ಶೋಭನದ ಮಾತು ಆಡಬೇಡ. ಮುಂದೆ ಋಣಾನುಬಂಧಗಳು ಇದ್ದ ಹಾಗೆ ನಡೆಯುತ್ತೆ' ಎಂದು ಖಂಡಿತವಾಗಿ ಅವನು ಹೇಳಿಬಿಟ್ಟನು. ಕಾವೇರಮ್ಮ ತನ್ನ ಹಟವನ್ನು ಬಿಡಬೇಕಾಯಿತು.

ಸೀತಾರಾಮುವಿನ ತಮ್ಮನಿಗೆ ಎಸ್.ಎಸ್.ಎಲ್.ಸಿ., ಪರೀಕ್ಷೆಯಲ್ಲಿ ತೇರ್ಗಡೆಯಾಯಿತು. ಅವನನ್ನು ಕೆಲಸಕ್ಕೆ ಸೇರಿಸಬೇಕೆಂದು

ಹಿಂದೆಯೇ ಕಾವೇರಮ್ಮ ಹೇಳಿದ್ದಳಷ್ಟೆ. ಈಗ ಸೀತಾರಾಮು ಶ್ರೀನಿವಾಸಪುರಕ್ಕೆ ಹೋದರೆ ಅಲ್ಲಿ ಸಂಸಾರ ನೋಡಿಕೊಳ್ಳುವವರಾರು ? ಪ್ಯಾಸಾದ ಹುಡುಗನನ್ನು ಎಲ್ಲಿ ಕೆಲಸಕ್ಕೆ ಸೇರಿಸಬೇಕು? ಎಂಬ ಸಮಸ್ಯೆಗಳೆಲ್ಲ ಉದ್ಭವಿಸಿದವು ಇವುಗಳನ್ನೆಲ್ಲ ಆಲೋಚನೆ ಮಾಡಿಯೇ ಕಾವೇರಮ್ಮ ಆ ಹುಡುಗಿಗೆ ಶೋಭನಕ್ಕೆ ಏರ್ಪಾಟುಮಾಡಿಸಿ ಸೀತಾ ರಾಮುವಿನ ಸಂಸಾರವನ್ನು ಶ್ರೀನಿವಾಸಪುರದಲ್ಲಿ ನಿಲ್ಲಿಸಬೇಕೆಂದೂ, ತಾನು ಎರಡನೆಯ ಮಗನೊಂದಿಗೆ ತುಮಕೂರಿನಲ್ಲಿ ನಿಲ್ಲಬೇಕೆಂದೂ ನಿಷ್ಕರ್ಷೆ ಮಾಡಿಕೊಂಡಿದ್ದಳು. ಆದರೆ ಈಗ ತನ್ನ ಹಂಚಿಕೆಗಳಿಗೆಲ್ಲ ಭಂಗವುಂಟಾಯಿತು. ಆದರಮೇಲೆ ತುಮಕೂರಿನ ಮನೆಯನ್ನು ಬಾಡಿಗೆಗೆ ಕೊಟ್ಟುಬಿಟ್ಟು ಎಲ್ಲರೂ ಶ್ರೀನಿವಾಸಪುರಕ್ಕೇನೆ ಹೊರಟು ಹೋಗುವುದೆಂದು ತೀರ್ಮಾನವಾಯಿತು. ಎರಡನೆಯ ಮಗನನ್ನು ಅಲ್ಲಿಯೇ ಎಲ್ಲಿಯಾದರೂ ಕೆಲಸಕ್ಕೆ ಸೇರಿಸಿದರಾಯಿತು ಎಂದು ಸಮಾಧಾನ ತಂದುಕೊಂಡದ್ದಾಯಿತು.

ಸೀತಾರಾಮು ತುಮಕೂರನ್ನು ಬಿಟ್ಟು ಬರುವಾಗ್ಗೆ ರಾಮಣ್ಣ ಊರಲ್ಲಿರಲಿಲ್ಲ. ಅವನು ಒಂದು ವಾರ ರಜ ತೆಗೆದುಕೊಂಡು ಕಾರ್ಯಾಂತರವಾಗಿ ಹಾಸನಕ್ಕೆ ಹೋಗಿದ್ದನು. ಆದ್ದರಿಂದ ಆ ಇಬ್ಬರ ಸ್ನೇಹಿತರ ಭೇಟಿ ಆ ಮದುವೆಯ ತರುವಾಯ ಆಗಲಿಲ್ಲ. ಹಿಂದೆ ರಾಮಣ್ಣ ಡಿಸ್ಟ್ರಿಕ್ಟ್ ಕಚೇರಿಯಲ್ಲಿ ಗುಮಾಸ್ತೆಯಾಗಿದ್ದನು ಎಂದು ನಾವು ಹೇಳಿದ್ದೇವಷ್ಟೆ. ಈಗ ಸೀತಾರಾಮುವಿಗೆ ವರ್ಗವಾದ ಮೇಲೆ ರಾಮಣ್ಣ ನಿಗೆ ಅವನ ಸ್ಥಾನದಲ್ಲಿ ಸಬ್‌ಡಿವಿಜನ್ ಕಚೇರಿಗೆ ವರ್ಗವಾಯಿತು. ಹೀಗೆ ವರ್ಗವಾದ ಸಮಾಚಾರ ಮೊದಲು ಸೀತಾರಾಮುವಿಗೆ ತಿಳಿದಿರಲಿಲ್ಲ. ರಾಮಣ್ಣ ರಜದಿಂದ ಹಿಂದಿರುಗಿ ಬಂದು ಹೊಸಹುದ್ದೆಯಲ್ಲಿ ನಿಂತ ಮೇಲೆ ಸೀತಾರಾಮುವಿಗೆ ಅವನು ಒಂದು ಪತ್ರವನ್ನು ಬರೆದು ಅದನ್ನು ತಿಳಿಸಿದನು. ಹೆಚ್ಚು ಸಮಾಚಾರಗಳನ್ನು ಅವನು ತನ್ನ ಪತ್ರದಲ್ಲಿ ಪ್ರಸ್ತಾವಿಸಿರಲಿಲ್ಲ. ಆ ಎರಡನೆಯ ಮದುವೆಯ ವಿಚಾರದಲ್ಲಿ ರಾಮಣ್ಣ ನಿಗೆ ಬಹಳ ಅಸಮಾಧಾನವಿತ್ತು.

ಶ್ರೀನಿವಾಸಪುರದಲ್ಲಿ ಬೇರೂರಿದ ಎರಡು ತಿಂಗಳ ಮೇಲೆ

ಕಾವೇರಮ್ಮ ಮಗನ ಮನಸ್ಸನ್ನು ತಿರುಗಿಸಬೇಕೆಂದೂ ಶೋಭನಕ್ಕೆ ಅವನನ್ನು ಒಪ್ಪಿಸಬೇಕೆಂದೂ ಪ್ರಯತ್ನಪಟ್ಟಳು. ಆದರೆ ಪ್ರಯತ್ನ ಸಫಲವಾಗಲಿಲ್ಲ. ಸೀತಾರಾಮುವಿನ ಜೀವನ ಕ್ರಮವೇ ಬದಲಾಯಿಸಿ ಹೋಗಿ ಅವನು ಬಹಳವಾಗಿ ದೇಹವನ್ನು ದಂಡಿಸುತ್ತಿದ್ದುದು ಆಕೆಗೆ ಕಂಡುಬಂತು. ಅವನು ಹಾಸಿಗೆಯನ್ನು ವರ್ಜಿಸಿಬಿಟ್ಟನು; ಬಿಸಿನೀರಿನ ಸ್ನಾನವನ್ನು ಕೈಬಿಟ್ಟನು; ಅಭ್ಯಂಜನವನ್ನು ಮಾಡಿಕೊಳ್ಳುತ್ತಿರಲಿಲ್ಲ. ಊಟ ಒಪ್ಪೊತ್ತುಮಾತ್ರ. ಎಲೆಯಡಕೆಯನ್ನು ಹಾಕಿಕೊಳ್ಳುತ್ತಿರ ಲಿಲ್ಲ. ಹಿಂದೆಯೆಲ್ಲ ಕಾಫಿಕ್ಲಬ್ಬು ಸಿನೀಮಾಗಳಿಗೆ ಹೋಗುತ್ತಿದ್ದನಷ್ಟೆ. ಶ್ರೀನಿವಾಸಪುರದಲ್ಲಿ ಅವುಗಳಿಗೆಲ್ಲ ಅವಕಾಶ ತಪ್ಪಿದ್ದು ಅವನಿಗೆ ಸಂತೋಷವಾಯಿತು. ತಾಯಿಗೆ ಮಾಡಬೇಕಾದ ಉಪಚಾರಗಳನ್ನು ತಪ್ಪದೆ ಮಾಡುತ್ತಿದ್ದನು. ದಿನವೂ ಆಕೆಗೆ ಬೆಳಗ್ಗೆ ಮತ್ತು ಸಾಯಂಕಾಲ ನಮಸ್ಕಾರ ಮಾಡುತ್ತಿದ್ದನು. ಸಂಸಾರದ ವಿಷಯದಲ್ಲಿ ಯಾವ ಯಾಜಮಾನ್ಯವನ್ನೂ ವಹಿಸಿಕೊಳ್ಳುತ್ತಿರಲಿಲ್ಲ. ತನ್ನ ತಾಯಿಗೇನೆ ಎಲ್ಲವನ್ನೂ ವಹಿಸಿಬಿಟ್ಟನು. ತನ್ನ ಸಂಬಳದಲ್ಲಿ ಐದು ರೂಪಾಯಿಗಳನ್ನು ಮಾತ್ರ ಉಳಿಸಿಕೊಳ್ಳುತ್ತಿದ್ದನು. ಅದನ್ನು ತನಗಾಗಿ ಖರ್ಚುಮಾಡುತ್ತಿರಲಿಲ್ಲ. ಮಿಡಲ್ ಸ್ಕೂಲಿನ ಹುಡುಗಿಯರಲ್ಲಿ ಸರೋಜ ಎಂಬ ಹೆಸರಿನ ಹುಡುಗಿಗೆ ಪ್ರತಿ ತಿಂಗಳಲ್ಲೂ ಅದನ್ನು ವಿದ್ಯಾರ್ಥಿವೇತನವಾಗಿ ಕೊಡುತ್ತಿದ್ದನು.

ಹೀಗಿರುತ್ತಿರುವಾಗ ಒಂದು ದಿನ ತುಮಕೂರಿನಿಂದ ಸೀತಾರಾಮುವಿಗೆ ಕಾಗದ ಬಂತು. ಅದು ರಾಮಣ್ಣ ಬರೆದಿದ್ದ ಕಾಗದ. ಸ್ವಲ್ಪ ದೊಡ್ಡದಾಗಿಯೇ ಇತ್ತು. 'ಹಿಂದೆ ನಾಮಕರಣಕ್ಕೆ ಬರಬೇಕೆಂದು ನಾವು ಖುದ್ದಾಗಿ ಬಂದು ಕರೆದರೂ ಶಿವಮೊಗ್ಗಕ್ಕೆ ಬಾರದೆ ಇದ್ದುದು, ಮಗು ಸತ್ತಿತು ಎಂದು ಕಾಗದ ಬರೆದು ತಿಳಿಸಿದರೂ, ಆ ಹೆಂಡತಿಯನ್ನು ಸಮಾಧಾನಪಡಿಸೋಣವೆಂದಾದರೂ ಶಿವಮೊಗ್ಗಕ್ಕೆ ಬಾರದೆ ಇದ್ದುದು— ಇವುಗಳಿಂದ ಬಹಳ ನಿರಾಶರಾಗಿ ಹೀಗೆ ಅಳಿಯ ತಾಯಿಯ ಮಾತು ಕೇಳಿಕೊಂಡು ದ್ವೇಷವನ್ನು ಸಾಧಿಸುತ್ತಿದಾನಲ್ಲ ಎಂದು ನಾವು ಪೇಚಾಡುತ್ತಿದ್ದೆವು. ಆ ಮಾತು ಹೋಗಲಿ. ಬಾಣಂತಿತನ ಮುಗಿದಮೇಲೆ ಅವನ ಹೆಂಡತಿಯನ್ನು ಅವನು ಮನೆಗೆ ಸೇರಿಸಿಬಿಡೋಣ ಎಂದು

ನಿರ್ಧರಮಾಡಿಕೊಳ್ಳುವ ವೇಳೆಗೆ ಮೊದಲಿನ ಸಂಬಂಧವೇ ಬೇಡ ಎಂದು ಅವನು ಎರಡನೆಯ ಮದುವೆ ಮಾಡಿಕೊಂಡಮೇಲೆ ಅವನ ಆಶೆಯನ್ನು ಸಂಪೂರ್ಣವಾಗಿ ತ್ಯಜಿಸಿದೆವು. ಮುಂದೆ ಸರೋಜಳ ಜೀವನ ಹೇಗೆ ನಡೆಯಬೇಕೋ ಅದಕ್ಕೆ ತಕ್ಕ ಏರ್ಪಾಟನ್ನು ಮಾಡಬೇಕಾದ್ದು ತಂದೆ ತಾಯಿಗಳ ಕರ್ತವ್ಯ. ಈಗ ಸರೋಜಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸಿ ಆಗಿದೆ. ಸೀತಾರಾಮು ಮಹರಾಯನಾಗಿ ಎರಡನೆಯ ಹೆಂಡತಿ ಯನ್ನಿಟ್ಟುಕೊಂಡು ಸುಖಪಡಲಿ. ನಮ್ಮ ಮಗಳನ್ನು ತೊರೆದು ಬಿಟ್ಟ ಹಾಗೆ ಸದ್ಯಃ ಆ ಹುಡುಗಿಯನ್ನು ತೊರೆಯದಿರಲಿ, ಅವನಿಗೆ ಒಳ್ಳೆಯ ಬುದ್ಧಿಯನ್ನು ದೇವರು ಕೊಡಲಿ ಎಂದು ನಾವು ಹಾರೈಸುತ್ತೇವೆ '— ಎಂಬುವ ಅಭಿಪ್ರಾಯಕ್ಕೆ ಶಿವಮೊಗ್ಗದಿಂದ ಬಂದಿದ್ದ ಕಾಗದದ ಸಾರಾಂಶವನ್ನು ರಾಮಣ್ಣ ತಿಳಿಸಿದ್ದನು.

ಅದರ ಜತೆಗೆ ರಾಮಣ್ಣ ತಾನು ಬರೆಯಬೇಕಾದ್ದನ್ನೂ ಸೇರಿಸಿದ್ದನು. 'ನಾನು ಎಲ್ಲಿ ಅಡ್ಡಬರುತ್ತೇನೋ ಎಂದು ಆಲೋಚಿಸಿ ನೀನು ಈ ಎರಡನೆಯ ಮದುವೆಯ ಪ್ರಸ್ತಾಪವನ್ನೇ ನನ್ನೊಡನೆ ಮಾಡಲಿಲ್ಲ. ಕಡೆಗೆ ನನ್ನ ಮನೆಗೆ ಬರುವುದನ್ನು ಕೂಡ ಕಡಮೆಮಾಡುತ್ತ ಬಂದೆ. ನನಗೆ ನಿನ್ನಮೇಲೆ ಕೋಪವೇನೂ ಇಲ್ಲ. ನನ್ನ ಪರಮಪ್ರಿಯ ಸ್ನೇಹಿತ ನೊಬ್ಬನು ತಪ್ಪುದಾರಿಯಲ್ಲಿ ನಡೆಯುತ್ತಿದಾನಲ್ಲ ಎಂಬುದು ದೊಡ್ಡ ವ್ಯಥೆ. ಸಾಮಾನ್ಯವಾಗಿ ಸಂಸಾರಗಳಲ್ಲಿ ತಾಯಿಯ ಮೂರ್ಖತನ ದಿಂದ, ಹೆಂಡತಿಯ ಮೂರ್ಖತನದಿಂದ ಗಂಡಸಿಗೆ ಸುಖವಿರುವುದಿಲ್ಲ, ಮನಸ್ಸಿಗೆ ಶಾಂತಿಯಿರುವುದಿಲ್ಲ. ಅನೇಕ ಸಂದರ್ಭಗಳಲ್ಲಿ ನಮ್ಮ ಪ್ರೇಮವನ್ನೋ ನಮ್ಮ ಭಕ್ತಿಯನ್ನೋ ಒತ್ತಟ್ಟಿಗೆ ನೂಕಿಬಿಟ್ಟು ನಾವು ಗಡುಸಾಗಿ ವರ್ತಿಸಬೇಕಾಗುತ್ತೆ. ಹಾಗೆ ಮಾಡಿದರೆ ಸ್ವಲ್ಪ ಕಾಲ ವಾದರೂ ಸಂಸಾರದಲ್ಲಿ ನೆಮ್ಮದಿಯಿರುತ್ತೆ. ಪುರಾಣಗಳಲ್ಲಿ ಹೇಳಿರುವ ಅವತಾರ ಪುರುಷರಂತೆ ನಾವು ಈ ಪ್ರಪಂಚದಲ್ಲಿ ನಡೆಯುವುದು ದುಸ್ಸಾಧ್ಯವೆಂದೇ ನನ್ನ ನಂಬಿಕೆ. ರತ್ನದಂಥ ಮೊದಲನೆಯ ಹೆಂಡತಿ ಯನ್ನು ಮೂರ್ಖಳಾದ ತಾಯಿಯ ಮಾತನ್ನು ಕೇಳಿಕೊಂಡು ನೀನು ತೊರೆದುಬಿಟ್ಟೆ. ನಿನ್ನ ಸುಖಕ್ಕೆ, ನಿನ್ನ ಸಂತೋಷಕ್ಕೆ ನಾನೇಕೆ ಅಡ್ಡ

ಬರಲಿ? ಸೀತಾರಾಮು! ಹಿಂದೆ ನೀನು ಮುಂಗೋಪಿಯಾಗಿ ಒರಟೊರಟಾಗಿ ವರ್ತಿಸಿದೆ. ಈಗ ಅವಿವೇಕವನ್ನೂ ಮಾಡಿದೆ. ನಿನ್ನನ್ನು ನಾನು ಚೆನ್ನಾಗಿ ಬಲ್ಲೆನಾದ್ದರಿಂದ ನಿನಗೆ ಪಶ್ಚಾತ್ತಾಪ ಹುಟ್ಟದೇ ಹೋಗುವುದಿಲ್ಲ ಎಂದು ನಾನು ತಿಳಿದಿದ್ದೇನೆ'—ಎಂಬುದು ಮುಂದಿನ ಒಕ್ಕಣೆಯಾಗಿತ್ತು.

ಸೀತಾರಾಮು ಕಾಗದವನ್ನು ಓದಿಕೊಂಡು ಎರಡೇ ಪಂಕ್ತಿ ಒಂದು ಜವಾಬನ್ನು ಬರೆದು ಕವರಿನಲ್ಲಿಟ್ಟು ಟಪ್ಪಾಲಿಗೆ ಹಾಕಿದನು. ಅದರ ಒಕ್ಕಣೆ ಇಷ್ಟೇ: ರಾಮಣ್ಣ! ನನ್ನ ಸಂಕಟವನ್ನು, ನನ್ನ ಮೊರೆಯನ್ನು ಕೇಳುವುದಕ್ಕೆ ನನ್ನ ಪಾಲಿಗೆ ದೇವರು ಸಹ ಇಲ್ಲ! ಒಂದು ಸಾರಿ ಶ್ರೀನಿವಾಸಪುರಕ್ಕೆ ಬಂದು ಹೋಗು. ನೀನೇ ನನ್ನ ಪಾಲಿಗೆ ದೇವರಾಗು!

ರಾಮಣ್ಣನ ಕಾಗದದಿಂದ ಶಿವಮೊಗ್ಗದವರ ಸುದ್ದಿಯನ್ನು ಸೀತಾರಾಮು ತಿಳಿದುಕೊಂಡಹಾಗಾಯಿತು. ತನ್ನ ಎರಡನೆಯ ಮದುವೆಯ ಪ್ರತಿಕ್ರಿಯೆ ಸರೋಜಳಮೇಲೆ ಬಹಳ ತೀವ್ರವಾಗಿಯೇ ಆಗಬಹುದೆಂದೂ ಬಹುಶಃ ಅವಳು ವಿಷಪಾನಮಾಡಿಯೋ ಹೇಗೋ ಪ್ರಾಣವನ್ನು ಕಳೆದುಕೊಂಡು ಬಿಡುವಳೆಂದೂ ಅವನು ನಂಬಿದ್ದನು. ಆದರೆ ಅವಳು ಬದುಕಿದ್ದಾಳೆ. ಬದುಕಿದ್ದಾಳೆ ಎಂಬುದೊಂದು ಸಂತೋಷವೇ ಹೊರತು ತನ್ನ ಪಾಲಿಗೆ ಅವಳು ಸತ್ತಂತೆಯೇ. ಬಡವರ ಮನೆಯ ಹುಡುಗಿಯಾಗಿದ್ದರೆ ತಂದೆ ತಾಯಿಗಳು ಬಹುಶಃ ರಾಜಿಗೆ ಬಂದು ಈಗಲೂ ತನ್ನ ಮನೆಯಲ್ಲಿ ಬಿಟ್ಟುಹೋಗುತ್ತಿದ್ದರು. ಅವಳು ಶ್ರೀಮಂತರ ಮನೆಯ ಹುಡುಗಿ; ತಂದೆ ದೊಡ್ಡ ಉದ್ಯೋಗದಲ್ಲಿದ್ದಾನೆ, ಅಣ್ಣ ದೊಡ್ಡ ಉದ್ಯೋಗದಲ್ಲಿದ್ದಾನೆ. ಇಬ್ಬರೂ ಕೈತುಂಬ ಸಂಪಾದನೆ ಮಾಡುತ್ತಿದಾರೆ. ಸರೋಜ ಅವರಿಗೇನೂ ಭಾರವಲ್ಲ. ಅಲ್ಪಸಂಬಳದ ತನ್ನನ್ನೇಕೆ ಅವರು ಬೇಡಿಕೊಳ್ಳುತ್ತಾರೆ. ಎರಡನೆಯ ಮದುವೆ ಆಗದೇ ಇದ್ದಿದ್ದರೆ ವಿಚಾರ ಬೇರೆಯಾಗಿತ್ತು. ಈಗ ಸಮಾಧಾನಕ್ಕೆ ಮಾರ್ಗವೇ ಇಲ್ಲದಂತಾಯಿತು. ಸರೋಜ ನಾಳೆ ಡಾಕ್ಟರಾಗಿ ಬಂದರೆ ಕೈತುಂಬ ಸಂಪಾದನೆ ಮಾಡಿಯೇ ಮಾಡುತ್ತಾಳೆ. ತನ್ನ ಹಂಗಿನಲ್ಲಿ ಅವಳೇನೂ

ಜೀವನ ನಡಸಬೇಕಾಗಿಲ್ಲ. ನನ್ನ ಗಂಡನತನ ಅವಳಿಗೇನು ಬೇಕಾಗಿದೆ? ಹಿಂದೆ ನನ್ನ ಹೆಂಡತಿಯಾಗಿ ಅವಳು ಸುಖಪಟ್ಟದ್ದು ತಾನೇ ಏನಿದೆ? ಅವಳು ಬಸಿರಿಯಾಗಿದ್ದಾಗ ನಾನು ಅವಳ ಹೊಟ್ಟೆಯುರಿಸಿದೆ, ಬಾಣಂತಿಯಾಗಿದ್ದಾಗ ಅವಳ ಹೊಟ್ಟೆಯನ್ನುರಿಸಿದೆ. ಕಡೆಗೆ ಎರಡನೆಯ ಮದುವೆಯನ್ನು ಮಾಡಿಕೊಂಡೆ. ನನ್ನ ವಿಚಾರದಲ್ಲಿ ಡಾಕ್ಟರಾಗಿ ಬರುವ ಆ ಶ್ರೀಮಂತ ಹೆಂಗಸಿಗೆ ಅನುಕಂಪ, ಪ್ರೇಮ ಏಕೆ ಹುಟ್ಟುತ್ತದೆ? ಸವತಿಯೊಡನೆ ಸಂಸಾರ ಮಾಡುವುದಕ್ಕೆ ಅವಳೇಕೆ ಬರುತ್ತಾಳೆ? ಇನ್ನೆರಡು ವರ್ಷ ಕಳೆದಮೇಲೆ ತನ್ನ ಸಹಪಾಠಿಯೊಬ್ಬನನ್ನು ಸರೋಜ ಮದುವೆಯಾಗುವುದನ್ನು ಪತ್ರಿಕೆಗಳಲ್ಲಿ ನಾನೇ ಓದುವೆನೋ ಏನೋ! ಈಗ ನನ್ನ ಹಣೆಯುಬರಹ ಆ ಹಳ್ಳಿಹುಡುಗಿಯೊಡನೆ ನೂತನ ಸಂಸಾರ! ಆ ಹುಡುಗಿಯಮೇಲೆ ಪ್ರೇಮವೇ ಹುಟ್ಟದಲ್ಲ! ಇದಕ್ಕೆ ನಾನೇನು ಮಾಡಲಿ? ಆ ಅರಿಯದ ಹುಡುಗಿ ನನ್ನನ್ನ ಮದುವೆಯಾಗಿ ಏನು ಸುಖಪಟ್ಟಾಳು? ಅವಳನ್ನು ಆದರಿಸದೇ ಹೋಗುವುದು—ಅದೂ ಪಾಪವೇ ಅಲ್ಲವೇ? ತಾಯಿ ಆ ಹುಡುಗಿಯನ್ನು ಬೇಗ ಕರಸಿಕೊಳ್ಳಬೇಕು; ಬೇಗ ಶೋಭನಕ್ಕೆ ಏರ್ಪಾಟು ಮಾಡಬೇಕು ಎಂದು ಪದೇಪದೇ ಆಡುತ್ತಲೇ ಇದ್ದಾಳೆ. ಎಷ್ಟು ದಿನ ನಾನು ಕಾಲತಳ್ಳಬಹುದು? ಈ ಹುಡುಗಿಯನ್ನು ಸಂಕಟಕ್ಕೆ ಈಡು ಮಾಡುವುದು ಯಾವ ಧರ್ಮ? ಈಗ ನಾನೇನು ಮಾಡಲಿ? ಎಂಬ ಮುಂತಾದ ಆಲೋಚನೆಗಳು ಸೀತಾರಾಮುವಿನ ಮನಸ್ಸಿನಲ್ಲಿ ಹರಿದಾಡುತ್ತಿದ್ದುವು.

ರಾಮಣ್ಣ ಶ್ರೀನಿವಾಸಪುರಕ್ಕೆ ಬಂದುಹೋಗಲಿಲ್ಲ. 'ಅಲ್ಲಿಗೆ ಬರುವುದಕ್ಕೆ ಇಷ್ಟವಿಲ್ಲ. ನಿನ್ನ ತಾಯಿಯನ್ನು ನೋಡುವುದಕ್ಕೆ ಮನಸ್ಸು ಬರುವುದಿಲ್ಲ. ನಿನಗೆ ದುರ್ಬೋಧನೆ ಮಾಡುವುದಕ್ಕೆ ನಾನು ಬಂದಿದ್ದೇನೆ ಎಂದು ತಿಳಿದುಕೊಂಡು ಆಕೆ ನನ್ನೊಡನೆ ಜಗಳವಾಡುವಳು. ಆಗಲಿ, ಮುಂದೆ ಯಾವಾಗಲಾದರೂ ಬರುತ್ತೇನೆ' ಎಂಬುದಾಗಿ ಅವನು ಉತ್ತರವನ್ನು ಬರೆದುಹಾಕಿದ್ದನು. ಅತ್ತ ರಾಮಣ್ಣನಿಗೆ ಶಿವಮೊಗ್ಗದಿಂದ ಮತ್ತೆ ಯಾವ ಕಾಗದಗಳೂ ಬರಲಿಲ್ಲ. ಸೀತಾರಾಮುವಿನ ಸಂಬಂಧ ಕಡಿದುಹೋದಮೇಲೆ ಇನ್ನು ಮಧ್ಯಸ್ಥಿಕೆ ಏಕೆ ಬೇಕಾಗಿದೆ?

ತಿದ್ದರಿಂದ ಅಲ್ಲಿಯ ಸಮಾಚಾರಗಳು ಯಾವುವೂ ಮೊದಲಿನಂತೆ ತಿಳಿದು ಬರುತ್ತಿರಲಿಲ್ಲ.

ಕಾಲಚಕ್ರ ಉರುಳದೆ ನಿಲ್ಲುವುದಿಲ್ಲ. ಅದರ ಗತಿಯೇ ವಿಚಿತ್ರ ವಾದದ್ದು. ಹಿಂದೆ ಇದ್ದು ದೃಗ್ಗೋಚರವಾಗದೇ ಇರುವುದೇ ಭವಿಷ್ಯ ನಾಗುತ್ತದೆ; ಎದುರಿಗೆ ಬಂದದ್ದು ವರ್ತಮಾನವಾಗುತ್ತದೆ; ಮುಂದೆ ತಿರುಗಿ ಅದೃಶ್ಯವಾದದ್ದು ಭೂತವಾಗುತ್ತದೆ. ಅದರ ಗತಿಯೇನೋ ಒಂದೇ ವೇಗದಿಂದ ನಡೆಯುತ್ತದೆ. ಆದರೆ ಕೆಲವರಿಗೆ ವೇಗವಾಗಿ ತಿರುಗುತ್ತಿರುವಂತೆ ಕಾಣುತ್ತದೆ, ಕೆಲವರಿಗೆ ನಿಧಾನವಾಗಿ ತಿರುಗುತ್ತಿರು ವಂತೆ ಕಾಣುತ್ತದೆ. ನವದಂಪತಿಗಳಿಗೆ ಒಂದಿರುಳು ಒಂದು ಕ್ಷಣವಾಗು ತ್ತದೆ; ನಿದ್ದೆ ಬಾರದ ರೋಗಿಗೆ ಒಂದಿರುಳು ಒಂದು ಯುಗವಾಗುತ್ತದೆ. ವಿನೋದದಲ್ಲಿ ಅದು ಹ್ರಸ್ವವಾಗುತ್ತದೆ; ದುಃಖದಲ್ಲಿ ಅದು ದೀರ್ಘ ವಾಗುತ್ತದೆ. ಸೃಷ್ಟಿ ಸ್ಥಿತಿ ಸಂಹಾರ ರೂಪದಲ್ಲಿ ತನ್ನ ಲೀಲೆಯನ್ನು ನಡಸುತ್ತ ವಿಶ್ವದ ಮೇಲೆ ಅದು ಪ್ರಭುತ್ವಮಾಡುತ್ತದೆ.

ಎರಡನೆಯ ಮದುವೆಯಾಗಿ ಎರಡು ವರ್ಷಗಳಾಗಿಹೋದವು. ಸೀತಾರಾಮು ತನ್ನ ಕಠಿನವ್ರತವನ್ನು ನಡಸುತ್ತಲೇ ಇದ್ದನು. ತಿಂಗಳು ಸಂಬಳ ಕೈಗೆ ಬಂದ ದಿನವೋ ಮಾರನೆಯ ದಿನವೋ ಮಿಡಲ್ ಸ್ಕೂಲಿಗೆ ತಪ್ಪದೆ ಹೋಗುತ್ತಿದ್ದನು. ಸರೋಜ ಎಂಬ ಹೆಸರಿನ ಹುಡುಗಿಯನ್ನು ಕರೆದು ಐದು ನಿಮಿಷ ಮಾತನಾಡಿಸಿ ಐದು ರೂಪಾಯಿಗಳನ್ನು ಕೊಟ್ಟು ಬರುತ್ತಿದ್ದನು. ಆ ದಿನ ಮಾತ್ರ ಅವನ ಮನಸ್ಸಿಗೆ ಏನೋ ಒಂದು ಸಂತೋಷ ಕಂಡುಬರುತ್ತಿತ್ತು.

ಕಾವೇರಮ್ಮ ತನ್ನ ಮಗ ಹೇಳಿದ್ದ ಗಡು ಮುಗಿದುದನ್ನು ನೋಡಿ, ಒಂದು ದಿನ ಅವನೊಡನೆ ಮತ್ತೆ ಶೋಭನದ ಮಾತನ್ನು ಎತ್ತಿದಳು.

'ಅಪ್ಪ ಸೀತಾರಾಮು! ಬೆಳೆದ ಹುಡುಗಿಯನ್ನು ಹಾಗೆಲ್ಲ ಹಳ್ಳಿ ಯಲ್ಲಿ ಬಿಟ್ಟಿರಬಾರದಪ್ಪ! ಈಗ ಎರಡು ವರ್ಷ ಆಗಿಹೋಯಿತು. ಒಂದು ಒಳ್ಳೆಯ ದಿನ ನೋಡೋಣ. ಯಾರನ್ನೂ ಕರೆಯುವುದು ಬೇಡ. ಹೋಳಿಗೆ ಪಾಯಸದ ಒಂದು ಹಬ್ಬ ಮಾಡಿ, ಆಯಿತು ಶೋಭನ ಎಂದು ಶಾಸ್ತ್ರ ಮುಗಿದರೆ ಸಾಕು. ನೀನು ತಾನೆ ಎಷ್ಟು ದಿನ ಹೀಗೆ

ಸಂನ್ಯಾಸಿ ಜೀವನ ನಡಸುತ್ತೀಯೆ? ಆಗಲೇ ನೀನು ಕೃಶವಾಗಿ ಹೋಗಿದ್ದೀಯೆ. ನೀನು ಆರೋಗ್ಯವಾಗಿ ಗಟ್ಟಿಮುಟ್ಟಾಗಿದ್ದರೆ ತಾನೆ ಈ ಸಂಸಾರ ನಡೆಯೋದು, ಮುಂದೆ ಆಗಬೇಕಾದ ಕಾರ್ಯಗಳು ನಡೆಯೋದು. ನನ್ನ ಮಾತನ್ನು ಕೇಳಪ್ಪ. ಆ ಹುಡುಗಿಯನ್ನು ಅನಾದರಿಸಬೇಡ. ಶೀನಪ್ಪನಿಗೆ ಕಾಗದ ಬರೆದು ಹಾಕು' ಎಂದು ಹೇಳಿದಳು.

'ಆಗಲಮ್ಮ! ನಿನ್ನಿಷ್ಟದಂತೆಯೇ ಆಗಲಿ. ಕಾಗದ ಬರೆದುಹಾಕುತ್ತೇನೆ. ಇನ್ನೇನಾಗಬೇಕು ನಿನಗೆ?'

'ಇನ್ನೇನೂ ಇಲ್ಲಪ್ಪ! ನಿನ್ನ ತಂಗಿಯರು ಬೆಳೆದು ನಿಂತಿದ್ದಾರೆ. ಅವರಿಗೆ ವರಗಳನ್ನು ನೋಡು. ಇಬ್ಬರ ಮದುವೆಗಳನ್ನೂ ಒಟ್ಟಿಗೆ ಮಾಡಿದರೆ ನಮಗೆ ಕೂಡಿಬರುತ್ತದೆ. ನಿನ್ನ ತಂದೆಯ ಇನ್ಷ್ಯೂರೆನ್ಸ್ ಹಣ, ಆಗ ಬ್ಯಾಂಕಿನಲ್ಲಿ ಹಾಕಿಟ್ಟದ್ದು, ಅದೆಷ್ಟಿದೆಯೋ ನೋಡಪ್ಪ! ಅದರಲ್ಲಿ ಅರ್ಧ ಹಣ ಕೊಡುತ್ತೇನೆ. ಮದುವೆಗಳು ನಡೆದುಹೋಗಲಿ.'

'ಆಗಲಮ್ಮ! ರಾಮಣ್ಣನಿಂದ ಕಾಗದ ನಿರೀಕ್ಷಿಸುತ್ತಿದೇನೆ. ಬ್ಯಾಂಕಿನಲ್ಲಿರುವ ಹಣವನ್ನು ನಾನು ಯಾರಿಗೂ ಕೊಡುವುದಿಲ್ಲ, ಅದು ನನಗೆ ಬೇಕು ಎಂದು ಹೇಳುತ್ತಿದ್ದೆಯಲ್ಲ. ಈಗೇತಕ್ಕೆ ಮನಸ್ಸು ಬದಲಾಯಿಸಿಬಿಟ್ಟೆ?'

'ಆ ಹಣ ಕಟ್ಟಿಕೊಂಡು ನಾನೇನು ಮಾಡುತ್ತೇನಪ್ಪ? ಅಪ್ಪನ ದುಡ್ಡು ಮಕ್ಕಳಿಗೆ ತಾನೇ. ನಾನದನ್ನು ತಲೆಗೆ ಕಟ್ಟಿಕೊಂಡು ಪರಲೋಕಕ್ಕೆ ಹೋಗುತ್ತೇನೆಯೆ? ಯಾವುದಾದರೂ ಆಪತ್ತಿಗೋ, ಮದುವೆಯಂಥ ದೊಡ್ಡ ಖರ್ಚಿಗೋ ಇರಲಿ; ಹುಡುಗರು ನೀವು ನಿತ್ಯಗಟ್ಟಳೆಗೆ ಖರ್ಚುಮಾಡಿಬಿಟ್ಟೀರಿ ಎಂದು ಹಾಗೆ ಹೇಳಿದೆನಪ್ಪ. ಈಗ ನೀನು ಮದುವೆಗಳಿಗೆ ಹಣ ಎಲ್ಲಿಂದ ತಂದೀಯೆ? ನಿನ್ನ ಆಡಳಿತ ಎಲ್ಲ ನಾನೇ ನೋಡುತ್ತಿದೇನಲ್ಲ. ಶಿರಸ್ತೇ ಕೆಲಸ ಮಾಡುತ್ತಾ ಇದ್ದೀಯೆ! ನೀನು ಸಾಲ ಯಾರನ್ನೂ ಕೇಳಬಾರದಪ್ಪ. ನಿನ್ನ ಗೌರವಕ್ಕೆ ಹಾನಿ.'

'ಆಗಲಮ್ಮ! ಇನ್ನೇನಾಗಬೇಕು? ಹೇಳು, ಕೇಳೋಣ.'

'ಏನೂ ಇಲ್ಲ ಸೀತಾರಾಮು! ನನ್ನ ಮನಸ್ಸಿಗೆ ದೊಡ್ಡ ಕೊರಗು. ನಾನೂ ಹೆಣ್ಣುಮಕ್ಕಳನ್ನು ಹೆತ್ತವಳೇ! ನಾನೇನೂ ಗೊಡ್ಡಲ್ಲ. ನಿನ್ನ

ಮೊದಲನೆಯ ಹೆಂಡತಿ ಸರೋಜಳ ಸುದ್ದಿ ಏನಪ್ಪ? ಈಗ ಅವರೆಲ್ಲ ಎಲ್ಲಿದ್ದಾರೆ? ಸಮಾಚಾರ ಏನಾದರೂ ಗೊತ್ತೇ? ಕೃಷ್ಣರಾಯರು ದೊಡ್ಡಮನುಷ್ಯರು, ಬಹಳ ಒಳ್ಳೆಯವರು, ನಿನ್ನ ತಂದೆಯ ಆಪ್ತ ಸ್ನೇಹಿತರಾಗಿದ್ದರಪ್ಪ! ನನಗೆ ಅವರ ಸಮಾಚಾರ ತಿಳಿಯಬೇಕಲ್ಲ!'

ಸೀತಾರಾಮುವಿನ ಮುಖ ಗಂಭೀರವಾಯಿತು. ಅವನು ಉತ್ತರವನ್ನೇನೂ ಕೊಡಲಿಲ್ಲ.

'ಏಕಪ್ಪ ಸುಮ್ಮನಿದ್ದೀಯೇ? ರಾಮಣ್ಣನ ಮೂಲಕ ಯಾವ ಸುದ್ದಿಯೂ ಬರಲಿಲ್ಲವೇ? ನೀನು ವಿಚಾರಿಸಲಿಲ್ಲವೇ?'

'ಆ ಮಾತುಗಳನ್ನು ಕೇಳಬೇಡಮ್ಮ. ಅವರ ಸಂಬಂಧ ಕಡಿದು ಹೋದಮೇಲೆ ಅವರ ಯೋಗಕ್ಷೇಮ ಕಟ್ಟಿಕೊಂಡು ಫಲವೇನು? ನನ್ನ ಮನಸ್ಸಿಗೆ ಬೇಜಾರು ಮಾಡಬೇಡ.'

'ಸಂಬಂಧ ಹೇಗೆ ಕಡಿದುಹೋಗುತ್ತದಪ್ಪ? ಸರೋಜ ನಿನ್ನ ಹೆಂಡತಿ ಅಲ್ಲವೇ? ಅವಳು ನನ್ನ ಸೊಸೆ ಅಲ್ಲವೇ?'

'ಪುನಃ ನನಗೆ ಆ ಸಂಕಟ ತಂದಿಡುತ್ತೀಯೆ. ಹೆಂಡತಿಯಾಗಿ ಅವಳನ್ನು ನಾನು ಆದರಿಸಿದ್ದಿದ್ದರೆ ನಿನ್ನ ಮಾತು ಸರಿ, ಸೊಸೆಯಾಗಿ ನೀನು ಆದರಿಸಿದ್ದಿದ್ದರೆ ನಿನ್ನ ಮಾತು ನ್ಯಾಯ. ಈಗ ಅವಳ ಮಾತನ್ನೇ ಎತ್ತಬೇಡ. ನಿನಗೆ ಸುದ್ದಿ ಬೇಕು ಎಂದೆ, ಕೇಳು: ಅವಳು ಈಗ ಮೈಸೂರಲ್ಲಿ ದೊಡ್ಡ ಡಾಕ್ಟರ್ ಪರೀಕ್ಷೆಗೆ ಓದುತ್ತಿದಾಳೆ. ಕೃಷ್ಣರಾಯರಿಗೆ ಮೈಸೂರಿಗೇನೆ ವರ್ಗವಾಗಿದೆ. ಅವರು ಅಲ್ಲಿದ್ದಾರೆ. ನಾಗರಾಜ ಶಿವಮೊಗ್ಗದಲ್ಲಿಯೇ ಇದ್ದಾನೆ. ಸುಕನ್ಯೆಯ ಮದುವೆ ಆಯಿತು.'

'ಆ ಮದುವೆಗೆ ಲಗ್ನಪತ್ರಿಕೆ ನಿನಗೆ ಬಂದಿತ್ತೇನಪ್ಪ?'

'ಕೃಷ್ಣರಾಯರು ಕಳಿಸಿಕೊಟ್ಟಿದ್ದರಮ್ಮ!'

'ನೀನದನ್ನು ನನಗೆ ಹೇಳಬೇಕಾಗಿತ್ತಪ್ಪ. ಏತಕ್ಕೆ ಹೇಳಲಿಲ್ಲ? ಇರಲಿ ಬಿಡು. ಸರೋಜ ಡಾಕ್ಟರ್ ಪರೀಕ್ಷೆಗೆ ಓದುತ್ತಿದಾಳೆಯೇ?'

'ಹೌದಮ್ಮ! ನಾಳೆ ದೊಡ್ಡ ಡಾಕ್ಟರಾಗಿ ಬರುತ್ತಾಳೆ. ಮೋಟಾರಿನಲ್ಲಿ ಓಡಾಡುತ್ತಾಳೆ; ದೊಡ್ಡ ಬಂಗಲೆಯಲ್ಲಿ ವಾಸಮಾಡುತ್ತಾಳೆ; ಕೈ ತುಂಬ ಹಣ ಸಂಪಾದನೆ ಮಾಡುತ್ತಾಳೆ, ಸುಖವಾಗಿರುತ್ತಾಳೆ.'

' ಸಂತೋಷವಪ್ಪ!'

ಕಾವೇರಮ್ಮ ಮಾತನ್ನು ಮುಂದುವರಿಸಲಿಲ್ಲ. ಸೀತಾರಾಮು ನಡೆಸುತ್ತಿದ್ದ ಕಠಿನವ್ರತವನ್ನೂ ಅವನು ಶೋಭನದ ವಿಚಾರದಲ್ಲಿ ಅಷ್ಟು ಸುಲಭವಾಗಿ ಒಪ್ಪಿದ್ದನ್ನೂ ತೂಕ ಮಾಡುತ್ತ ತಾನು ಮಗನಿಗೆ ಎರಡನೆಯ ಮದುವೆ ಮಾಡಿಸಿ ಆ ಹಳ್ಳಿಯ ಹುಡುಗಿ ಪದ್ಮಳ ದುಃಖಕ್ಕೂ ಕಾರಣಳಾದೆನಲ್ಲ ಎಂದು ಆಕೆ ಪಶ್ಚಾತ್ತಾಪ ಪಡುತ್ತಿದ್ದಳು. ಪದ್ಮಳನ್ನು ಮನೆಗೆ ಕರೆಸಿಕೊಂಡರೂ ಅವಳನ್ನು ಹೆಂಡತಿಯಂತೆ ಸೀತಾರಾಮು ಆದರಿಸುವುದಿಲ್ಲ; ಅದನ್ನು ನಿರ್ಧರಿಸಿಕೊಂಡೇ ತನಗೆ ಆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಆಕೆ ಊಹೆ ಮಾಡಿದಳು.

ಸೀತಾರಾಮುವಿಗೆ ಮನಸ್ಸು ಕದಡಿಹೋಯಿತು. ತನ್ನ ತಾಯಿ ಏನು ಕಾರಣದಿಂದಲೋ ಏನೋ ಸರೋಜಳ ಮತ್ತು ಕೃಷ್ಣರಾಯರ ಪ್ರಸ್ತಾಪ ಮಾಡಿದ್ದರಿಂದ ಹಿಂದಿನ ಪ್ರಕರಣಗಳೆಲ್ಲ ನಿನ್ನೆ ನಡೆದಂತೆ ತೀವ್ರವಾಗಿ ಜ್ಞಾಪಕಕ್ಕೆ ಬಂದು ಮನಸ್ಸಿಗೆ ಬಹಳ ಸಂಕಟವಾಯಿತು. ತನ್ನ ಅತ್ತೆಯ ಜ್ಞಾಪಕ ಬಂದು, ಅವನಿಗೆ ಭಯವಾಯಿತು. ಆಕೆಯ ಕಣ್ಣೆದುರಿಗೆ ತಾನು ಸಿಕ್ಕಿದರೆ ಆಕೆ ಏನು ಮಾಡಿಬಿಡುವಳೋ? ಹೇಳುವುದಕ್ಕೆ ಸಾಧ್ಯವಿಲ್ಲ ಎನ್ನಿಸಿತು. ಕೃಷ್ಣರಾಯರ ಜ್ಞಾಪಕ ಬಂದು, ಕಣ್ಣೀರು ಹರಿಯಿತು. ತನ್ನ ತಂದೆಯ ಪರಮ ಮಿತ್ರರು ಅವರು. ಅವರಿಗೆ ನಾನು ಎಂಥ ದ್ರೋಹವನ್ನು ಮಾಡಿದ್ದೇನೆ. ನನ್ನನ್ನು ಯೋಗ್ಯ, ಒಳ್ಳೆಯ ಹುಡುಗ, ನಿಧಾನಿ, ಸಾಧು—ಎಂದು ಮುಂತಾಗಿ ಅವರು ತಮ್ಮ ಹೆಂಡತಿಯ ಮುಂದೆ ಹೊಗಳುತ್ತಿದ್ದರು. ಈಗ ಅವುಗಳೆಲ್ಲ ಸುಳ್ಳಾದುವು. ಸರೋಜಳ ಮನಸ್ಸನ್ನು ನೋಯಿಸಿದ್ದಕ್ಕಿಂತ ಹೆಚ್ಚಾಗಿ ಕೃಷ್ಣರಾಯರ ಮನಸ್ಸನ್ನು ನೋಯಿಸಿದ್ದು ನನ್ನ ಮನಸ್ಸನ್ನು ಕೊರೆಯುತ್ತಿದೆ. ನಾನೇನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕು? ಎಂದು ಹೇಳಿಕೊಳ್ಳುತ್ತ ಸಂಕಟಪಡುತ್ತಿದ್ದನು.

## ೨೦. ಪದ್ಮ ಮನೆಗೆ ಬಂದದ್ದು

ಸೀತಾರಾಮುವಿನಿಂದ ಬೆಟ್ಟಹಲಸೂರಿಗೆ ಕಾಗದ ಹೋಯಿತು. ನಿಷೇಕಪ್ರಸ್ತಕ್ಕೆ ಲಗ್ನವನ್ನು ತಿಳಿಸಿ, ಅದನ್ನು ಶ್ರೀನಿವಾಸಪುರದಲ್ಲಿಯೇ ಏರ್ಪಾಟು ಮಾಡಿರುವುದಾಗಿಯೂ ಹುಡುಗಿಯನ್ನೂ ಅವಳ ತಾಯಿಯನ್ನೂ ಕರೆದುಕೊಂಡು ಬರಬೇಕೆಂದೂ ಶೀನಪ್ಪನವರಿಗೆ ಸೀತಾರಾಮು ಬರೆದಿದ್ದನು. ಕಾಗದವನ್ನು ಓದಿಸಿ ಕೇಳಿದಾಗ ಹುಡುಗಿಯ ತಾಯಿಗೆ ಒಂದು ಕಡೆ ಸಂತೋಷವಾಯಿತು. ಸದ್ಯಃ ಮಗಳು ತನ್ನ ಗಂಡನ ಮನೆ ಸೇರುವಂತಾಯಿತು, ಇನ್ನು ತನ್ನ ಜವಾಬ್ದಾರಿ ಹಗುರವಾಯಿತು, ಮುಂದಿನ ವರ್ಷದ ಹೊತ್ತಿಗೆ ಮೊಮ್ಮಗನನ್ನೋ ಮೊಮ್ಮಗಳನ್ನೋ ಕೈಗೆತ್ತಿಕೊಳ್ಳಬಹುದು ಎಂಬ ಭಾವನೆಗಳೆಲ್ಲ ಸಂತೋಷಕ್ಕೆ ಕಾರಣವಾಗಿದ್ದುವು. ಆದರೆ ಸಂತೋಷದ ಜತೆಗೆ ವ್ಯಸನವೂ ಸೇರಿತ್ತು. ಆ ತಂದೆಯಿಲ್ಲದ ಹುಡುಗಿಯನ್ನು ಹೇಗೋ ಕಷ್ಟಪಟ್ಟು ಬೆಳೆಸಿದ್ದಾಯಿತು; ಈಗ ಅವಳು ಹೊರಟುಹೋದರೆ ಮನೆಯೆಲ್ಲ ಖಾಲಿಯಾದಹಾಗೆ ಕಾಣುತ್ತದೆ; ಇರುವ ಒಬ್ಬಳೇ ಮಗಳನ್ನು ಬಿಟ್ಟು ತಾನು ಹೇಗಿರುವುದು? ಹಿಂದೆ ಮುಂದೆ ಸುತ್ತಾಡಿಕೊಂಡು ಸಣ್ಣ ಪುಟ್ಟ ಹಟಗಳನ್ನು ಮಾಡಿಕೊಂಡು ತಾಯಿಯೆಂಬ ಸಲಿಗೆಯಿಂದ ನಿರ್ಭಯಳಾಗಿದ್ದ, ಏನೂ ಅರಿಯದ ತನ್ನ ಮಗಳನ್ನು ಆ ಅಳಿಯ ಆದರಿಸುತ್ತಾನೆಯೋ ಇಲ್ಲವೋ, ಆ ಅತ್ತೆ ನೆತ್ತಿ ಹೊಟ್ಟೆ ನೋಡಿ ಸಲಹುತ್ತಾಳೋ ಇಲ್ಲವೋ ಎಂಬ ಶಂಕೆಯಿಂದ ದುಃಖ ಉಕ್ಕುಕ್ಕಿ ಬರುತ್ತಿತ್ತು. ಎಷ್ಟಾದರೂ ಹೆಣ್ಣುಮಕ್ಕಳು ಪರರೊಡವೆ, ತವರುಮನೆಯನ್ನು ಬಿಟ್ಟುಹೋಗತಕ್ಕವರೇ — ಎಂದು ಸಮಾಧಾನ ತಂದುಕೊಂಡು ಶ್ರೀನಿವಾಸಪುರಕ್ಕೆ ಪ್ರಯಾಣ ನಿಶ್ಚಯ ಮಾಡಿದ್ದಾಯಿತು. ಶೀನಪ್ಪ, ಅವನ ಹೆಂಡತಿ, ಹುಡುಗಿ ಮತ್ತು ಅವಳ ತಾಯಿ — ಇಷ್ಟು ಜನ ಶ್ರೀನಿವಾಸಪುರವನ್ನು ಬಂದು ಸೇರಿದರು.

ಏರ್ಪಾಟು ಮನೆಮಟ್ಟಿಗೆ ಹಬ್ಬದಂತೆ ನಡೆಯಿತು; ಯಾವ ಗಲಭೆಯೂ ಇರಲಿಲ್ಲ, ಯಾರನ್ನೂ ಕರೆಯಲಿಲ್ಲ. ಸೀತಾರಾಮು ಆ ವಿಚಾರದಲ್ಲಿ ತಾಯಿಗೆ ಖಂಡಿತವಾಗಿ ತಿಳಿಸಿದ್ದನು. ಕಾವೇರಮ್ಮನಿಗೆ

ಅಸಮಾಧಾನವೇನೂ ಆಗಲಿಲ್ಲ. ಮಗನನ್ನೂ ಸೊಸೆಯನ್ನೂ ಒಂದು ಕೋಣೆಯಲ್ಲಿ ಸೇರಿಸಿದರೆ ಸಾಕು, ಧನ್ಯಳಾದೇನು ಎಂಬುವ ಯೋಚನೆಯೇ ಆಕೆಗೆ ದೊಡ್ಡದಾಗಿತ್ತು. ಆಕೆಗೆ ಯಾವ ಗಲಾಟೆಗಳೂ ಸಂಭ್ರಮಗಳೂ ಬೇಕಾಗಿರಲಿಲ್ಲ.

ಮಾರನೆಯ ಬೆಳಗ್ಗೆ ಒಳಗೊಳಗೆ ಗುಜುಗುಂಪಲಿಗೆ ಪ್ರಾರಂಭವಾಯಿತು. ತಾಯಿ ಮತ್ತು ಮಗಳು ಒಂದು ಕಡೆ ರಹಸ್ಯವಾಗಿ ಮಾತನಾಡುತ್ತಿದ್ದರು; ಅಣ್ಣ ಮತ್ತು ತಂಗಿ ಆಮೇಲೆ ಸೇರಿ ಮಾತನಾಡುತ್ತಿದ್ದರು; ಅತ್ತಿಗೆ ಮತ್ತು ನಾದಿನಿಯರು ಆ ತರುವಾಯ ಕೊಟಡಿಯಲ್ಲಿ ಮಾತನಾಡುತ್ತಿದ್ದರು. ಕಾವೇರಮ್ಮನಿಗೆ ವಿಷಯ ಏನೂ ತಿಳಿಯದು. ಆಕೆ ತನ್ನ ಯೋಜನೆ ಕೈಗೂಡಿತಲ್ಲ ಎಂಬ ಸಂತೋಷದಲ್ಲಿದ್ದುಬಿಟ್ಟಳು. ಊಟವಾದಮೇಲೆ ಸೀತಾರಾಮು ಎಂದಿನಂತೆ ಕಚೇರಿಗೆ ಹೊರಟು ಹೋದನು. ಹೀಗೆಯೇ ಇನ್ನೆರಡು ದಿನಗಳೂ ನಡೆದುವು. ಇದೇನೋ ಮಾತು ಕಥೆಗಳಾಗುತ್ತಿವೆಯಲ್ಲ, ಈ ಗುಸುಗಾಟಗಳೇಕೆ? ಬೀಗರ ಅಸಮಾಧಾನಕ್ಕೆ ಕಾರಣವೇನು? ತಾನು ಮಾಡಬೇಕಾದ ಎಲ್ಲ ಉಪಚಾರಗಳನ್ನೂ ಮಾಡುತ್ತಿದ್ದೇನಲ್ಲ—ಎಂಬ ಆಲೋಚನೆಗಳಿಂದ ಆಕೆ ಶೀನಪ್ಪನನ್ನು ಕಂಡು ವಿಷಯ ತಿಳಿದುಕೊಳ್ಳೋಣವೆಂದು ಕೊಟಡಿಯ ಹತ್ತಿರಕ್ಕೆ ಹೋದಳು. ಒಳಗೆ ಶೀನಪ್ಪ, ಆತನ ತಂಗಿ ಮತ್ತು ಹೆಂಡತಿ ಮಾತನಾಡುತ್ತಿದ್ದರು. ಪದ್ಮ ತನ್ನ ನಾದಿನಿಯರೊಡನೆ ಬೇರೆ ಕೊಟಡಿಯಲ್ಲಿದ್ದಳು. ಕಾವೇರಮ್ಮನನ್ನು ನೋಡುತ್ತಲೂ ಶೀನಪ್ಪ, 'ಬನ್ನಿ, ಒಳಕ್ಕೆ ಬನ್ನಿ. ನಿಮಗೊಂದು ವಿಷಯ ತಿಳಿಸಬೇಕು' ಎಂದು ಕರೆದನು. ಬಳಿಕ ಪದ್ಮಳನ್ನು ಆ ಕೊಟಡಿಗೆ ಕರೆದುಕೊಂಡು ಬಂದನು. ಬಾಗಿಲನ್ನು ಮುಚ್ಚಿ,

'ನಿಮಗೆ ವಿಷಯ ಗೊತ್ತೋ?' ಎಂದು ಕೇಳಿದನು.

'ಯಾವ ವಿಷಯವಪ್ಪ ನೀವು ಕೇಳುವುದು? ನನಗೇನೂ ಗೊತ್ತಿಲ್ಲವಲ್ಲ' ಎಂದು ಕಾವೇರಮ್ಮ ಹೇಳಿದಳು.

ಪದ್ಮಳ ತಾಯಿ, 'ಅಮ್ಮ! ನಿಮ್ಮ ಮಗ ಈ ಮೂರು ರಾತ್ರಿಯೂ ತಮ್ಮ ಹೆಂಡತಿಯನ್ನು ಮಾತನಾಡಿಸಲಿಲ್ಲ, ಕಣ್ಣೆತ್ತಿ ನೋಡಲಿಲ್ಲ.

ತಾನು ನೆಲದ ಮೇಲೆ ಒಬ್ಬರೇ ಮಲಗಿ, ನೀನು ಮಂಚದ ಮೇಲೆಯೇ ಮಲಗಿಕೋ ಹೋಗು—ಎಂದು ಕಳಿಸಿಬಿಟ್ಟರು. ನನ್ನ ಮಗಳು ಏನು ಮಾಡಬೇಕು? ಗಂಡ ನೆಲದ ಮೇಲೆ ಮಲಗಿದ್ದರೆ ಹೆಂಡತಿಯಾದ ತಾನು ಮಂಚದ ಮೇಲೆ ಮಲಗಿರುವುದಕ್ಕಾಗುತ್ತದೆಯೆ? ಹುಡುಗಿ ಭಯಸ್ಥಳು, ತೀರ ಹೊಸಬಳು; ಅವಳ ಗತಿ ಮುಂದೆ ಏನಾಗಬೇಕು? ಮೂರು ರಾತ್ರಿಯೂ ಮೂಲೆಯಲ್ಲಿ ಮುದುರಿಕೊಂಡಿದ್ದು ಬೆಳಗ್ಗೆ ಹೊರಕ್ಕೆ ಬಂದಳು' ಎಂದು ಕಣ್ಣೀರು ಹರಿಸುತ್ತ ಹೇಳಿದಳು.

ಕಾವೇರಮ್ಮನ ಮುಖ ಗಂಭೀರವಾಯಿತು. ತಾನು ಭಯಪಟ್ಟಿದ್ದಂತೆಯೇ ಆಯಿತಲ್ಲ ಎಂದು ಒಂದು ಕಡೆ ವ್ಯಸನ; ಬೀಗರ ಕೈಯಲ್ಲಿ ಮಾತು ತಿನ್ನುವಂತಾಯಿತಲ್ಲ ಎಂದು ಪೇಚಾಟ. ಸಾಲದ್ದಕ್ಕೆ ಇದು ಎರಡನೆಯ ಮದುವೆ; ಸುಮ್ಮನೆ ತೊಳೆದ ಕಾಲನ್ನು ತೊಳೆದ ಪ್ರಕರಣವಲ್ಲ. ಮೊದಲನೆಯ ಹೆಂಡತಿ ಜೀವಂತಳಾಗಿದ್ದು, ಅವಳನ್ನು ತೊರೆದು ನಡೆಸಿದ ಎರಡನೆಯ ಮದುವೆ. ಮಗ ಇಷ್ಟಪಟ್ಟು ಮಾಡಿಕೊಂಡಿದ್ದಲ್ಲ; ಮಗನ ಇಷ್ಟಕ್ಕೆ ವಿರುದ್ಧವಾಗಿ ತಾಯಿ ಮಾಡಿಸಿದ ಎರಡನೆಯ ಮದುವೆ. ಎರಡು ನಿಮಿಷ ಕಾವೇರಮ್ಮ ಮೌನವಾಗಿದ್ದಳು. ಆಮೇಲೆ, 'ಒಳ್ಳೆಯದಮ್ಮ! ಇನ್ನೆರಡು ದಿನಕ್ಕೆ ಎಲ್ಲವೂ ಸರಿಹೋಗುತ್ತದೆ. ನನ್ನ ಮಗನಿಗೆ ಬುದ್ಧಿ ಹೇಳುತ್ತೇನೆ. ಹುಡುಗಿ ಧೈರ್ಯಮಾಡಿ ಮಾತನಾಡಿಸಬೇಕು, ಹತ್ತಿರ ಹೋಗಬೇಕು' ಎಂದು ಬೀಗಿತ್ತಿಗೆ ಉತ್ತರ ಹೇಳಿ, 'ಪದ್ಮ! ಅದೇಕೆ ನೀನು ಗಂಡನನ್ನ ಮಾತನಾಡಿಸಲಿಲ್ಲ' ಎಂದು ಹುಡುಗಿಯನ್ನು ಕೇಳಿದಳು. ಹುಡುಗಿ,

'ಅವರನ್ನ ಕಂಡರೆ ನನಗೆ ಭಯ ಅತ್ತೆ! ಏನು ಮಾತನಾಡಿಸಬೇಕೋ ಅದೂ ನನಗೆ ಗೊತ್ತಿಲ್ಲ' ಎಂದಳು.

'ಎಲೆಯಡಿಕೆ ನೀನು ಮಡಿಸಿಕೊಡಲಿಲ್ಲವೆ?'

'ನಾನು ಎಲೆಯಡಿಕೆ ಹಾಕಿಕೊಳ್ಳುವುದಿಲ್ಲ — ಎಂದು ಅವರೇ ಹೇಳಿಬಿಟ್ಟರು.'

'ಕೂಜದಲ್ಲಿ ಹಾಲಿತ್ತಲ್ಲ, ಅದನ್ನೇನು ಮಾಡಿದಿರಿ?'

'ಅವರು ಒಂದು ಲೋಟ ಹಾಲನ್ನು ಬಗ್ಗಿಸಿಕೊಂಡು ಕುಡಿದರು.

ಆಮೇಲೆ ಇನ್ನೊಂದು ಲೋಟ ನನಗೆ ಹಾಕಿ—ಹಾಲನ್ನು ಕುಡಿ ಎಂದರು. ನಾನು ಕುಡಿದೆ. ತಟ್ಟೆಯಲ್ಲಿ ತಿಂಡಿ ಇಟ್ಟಿದ್ದಾರೆ, ಬೇಕಾದರೆ ತಿನ್ನು— ಎಂದು ಹೇಳಿದರು. ನಾನು ಲಾಡು ಉಂಡೆಯನ್ನು ಅರ್ಧ ಮುರಿದು ಅವರ ಕೈಗೆ ಕೊಡುವುದಕ್ಕೆ ಹೋದೆ. ಅವರು—ನಾನು ತಿನ್ನುವುದಿಲ್ಲ, ನೀನು ತಿನ್ನು. ನಾನು ನೆಲದಮೇಲೆ ಮಲಗತಕ್ಕವನು, ನೀನು ಮಂಚದ ಮೇಲೆ ಮಲಗಿಕೊಂಡು ನಿದ್ದೆಮಾಡು — ಎಂದು ಹೇಳಿಬಿಟ್ಟರು.'

ಕಾವೇರಮ್ಮ ಬೀಗರಿಗೆ ಮತ್ತೆ ಸಮಾಧಾನವನ್ನು ಹೇಳಿದಳು. ಬಂದ ನೆಂಟರು ಇನ್ನೆರಡು ದಿನವಿದ್ದು ತಮ್ಮ ಊರಿಗೆ ಹಿಂದಿರುಗಿದರು. ಅವರಿಗೆ ಹುಡುಗಿಯನ್ನು ಬಿಟ್ಟು ಹೋಗುವ ದುಃಖ ಒಂದು ಕಡೆ; ಆ ಹುಡುಗಿಯ ಗತಿ ಮುಂದೆ ಏನಾಗುತ್ತದೆಯೋ ಎಂಬ ಸಂಕಟ ಮತ್ತೊಂದು ಕಡೆ. ದಾರಿಯಲ್ಲಿ ಶೀನಪ್ಪನನ್ನು ಅವನ ಹೆಂಡತಿಯೂ ತಂಗಿಯೂ ಆಕ್ಷೇಪಿಸತೊಡಗಿದರು. ಅವನು, 'ಆಗಲಿ, ಮುಂದೆ ಎಲ್ಲ ಸರಿಹೋಗುತ್ತದೆ. ಗಂಡಸು ಎಷ್ಟು ದಿನ ಹಾಗಿದ್ದಾನು? ಎಂಥೆಂಥ ಮಹರ್ಷಿಗಳೋ ಹೆಂಗಸಿನ ಮೋಹಕ್ಕೆ ಸಿಕ್ಕಿಕೊಂಡರು. ಇಂದಲ್ಲ, ನಾಳೆ ತಾನೇ ಕರೆಯುತ್ತಾನೆ, ಆದರಿಸುತ್ತಾನೆ' ಎಂದು ಅವರಿಗೆ ಸಮಾಧಾನ ಹೇಳಿದನು.

ಕಾವೇರಮ್ಮ ಮಗನೊಡನೆ ಯಾವ ಪ್ರಸ್ತಾಪವನ್ನೂ ಮಾಡಲಿಲ್ಲ. ತನ್ನ ಸೊಸೆಗೆ ಮಾತ್ರ, 'ನಿನ್ನ ಗಂಡನಿಗೆ ನೀರು ತೋಡಿ ಕೊಡು, ಊಟಕ್ಕೆ ಅವನ ತಟ್ಟೆ ತಂದು ಹಾಕು, ಕೈ ಒರಸಿಕೊಳ್ಳುವುದಕ್ಕೆ ಚೌಕ ಕೊಡು, ಅವನ ಬಟ್ಟೆ ಬರೆಗಳನ್ನು ನೋಡಿಕೋ' ಎಂದು ಮುಂತಾಗಿ ಸೀತಾರಾಮುವಿಗೆ ಕೇಳಿಸುವಂತೆಯೇ ಹೇಳುತ್ತಿದ್ದಳು. ಪದ್ಮ ಮಾಡುತ್ತಿದ್ದ ಈ ಸಣ್ಣ ಪುಟ್ಟ ಉಪಚಾರಗಳಿಗೆ ಸೀತಾರಾಮು ಅಡ್ಡಬರುತ್ತಿರಲಿಲ್ಲ. ದಿನವೂ ಸಾಯಂಕಾಲ ಕಾವೇರಮ್ಮ ತನ್ನ ಸೊಸೆಗೆ ಅಲಂಕಾರ ಮಾಡಿಸುತ್ತಿದ್ದಳು. 'ಧೈರ್ಯಮಾಡಿ ಹತ್ತಿರಕ್ಕೆ ಹೋಗು, ಮಾತನಾಡಿಸು, ಕೈಕಾಲು ಹಿಸುಕಲೇ ಎಂದು ಕೇಳಿ ಉಪಚಾರ ಮಾಡು · ನಿನ್ನ ಗಂಡ ಒಳ್ಳೆಯವನು. ಅವನೇನೂ ಕೋಪಮಾಡಿಕೊಳ್ಳುವುದಿಲ್ಲ. ಪಕ್ಕದಲ್ಲಿ ಕುಳಿತುಕೊಂಡು ಯೋಗಕ್ಷೇಮ ವಿಚಾರಿಸು' ಎಂದು ಮುಂತಾಗಿ ಸೊಸೆಗೆ

ಶಿಕ್ಷಣ ಕೊಡುತ್ತಿದ್ದಳು. ಕಾಫಿ ತಿಂಡಿಗಳನ್ನು ಅವಳ ಕೈಯಲ್ಲೇ ಕಳಿಸಿ ಕೊಡುತ್ತಿದ್ದಳು. ಸೀತಾರಾಮು ಹೇಗೆ ನಡೆದುಕೊಳ್ಳುತ್ತಾನೆ? ಈ ಉಪಚಾರಗಳಿಗೆ ಅವನ ಪ್ರತಿಕ್ರಿಯೆ ಹೇಗೆ ಬರುತ್ತದೆ? ಎಂಬುದನ್ನೆಲ್ಲ ಚಾಣಾಕ್ಷಳಾದ ಕಾವೇರಮ್ಮ ಗಮನಿಸುತ್ತಿದ್ದಳು.

ಸೀತಾರಾಮು ಸಹಜವಾಗಿಯೇ ನಡೆದುಕೊಳ್ಳುತ್ತಿದ್ದನು. ಪದ್ಮಳ ವಿಷಯದಲ್ಲಿ ಅನಾದರಣೆಯನ್ನೇನೂ ತೋರಿಸುತ್ತಿರಲಿಲ್ಲ. ಕಾಫಿ ತಿಂಡಿಗಳನ್ನು ತಂದಾಗ ಅವಳನ್ನು ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿ ಅವಳಿಗೂ ಕೊಟ್ಟು ತಾನೂ ತೆಗೆದುಕೊಳ್ಳುತ್ತಿದ್ದನು. ಮಧ್ಯೆಮಧ್ಯೆ ತಾನಾಗಿ ಒಂದೊಂದು ಮಾತು ಆಡುತ್ತಿದ್ದನು. ಒಂದು ದಿನ, 'ನಿನಗೆ ಹಾಡು ಹೇಳುವುದಕ್ಕೆ ಬರುತ್ತದೆಯೆ? ಕಸೂತಿ ಹಾಕುವುದಕ್ಕೆ ಬರುತ್ತದೆಯೆ?' ಎಂದು ಅವಳನ್ನು ಕೇಳಿದನು. ಅವಳು, 'ಅಮ್ಮ ಹಾಡು ಹೇಳಿ ಕೊಟ್ಟಿದ್ದಾಳೆ. ಕಸೂತಿ ಹಾಕುವುದು ಗೊತ್ತಿಲ್ಲ. ದಾರ ಸೂಜಿ ತಂದುಕೊಟ್ಟರೆ ಕಲಿತುಕೊಳ್ಳುತ್ತೇನೆ' ಎಂದು ಉತ್ತರ ಕೊಟ್ಟಳು. ಮತ್ತೊಂದು ದಿನ, 'ನೀನು ಎಲ್ಲಿಯವರೆಗೆ ಓದಿದ್ದೀಯೆ' ಎಂದು ಕೇಳಿದನು. ಅವಳು, 'ಅಪ್ಪರ್ ಪ್ರೈಮರಿ ಪರೀಕ್ಷೆ ನನಗೆ ಆಗಿದೆ. ಮುಂದೆ ನಾನು ಓದಲಿಲ್ಲ' ಎಂದು ಹೇಳಿದಳು. ಮಗುದೊಂದು ದಿನ, 'ನಿನಗೆ ನನ್ನಮೇಲೆ ಬಹಳ ಪ್ರೇಮವಿದೆಯೆ? ನನ್ನನ್ನು ನೋಡಿದರೆ ನಿನಗೆ ಏನನ್ನಿಸುತ್ತದೆ?' ಎಂದು ಕೇಳಿದನು. ಆ ಹುಡುಗಿ, 'ನಿಮ್ಮನ್ನು ಎಷ್ಟು ನೋಡುತ್ತಿದ್ದರೂ ತೃಪ್ತಿಯೇ ಆಗುವುದಿಲ್ಲ. ನಿಮ್ಮ ಹತ್ತಿರವೇ ಯಾವಾಗಲೂ ಇದ್ದುಬಿಡೋಣ ಅನ್ನಿಸುತ್ತದೆ' ಎಂದು ಮುಗ್ಧಭಾವದಿಂದ ಉತ್ತರಕೊಟ್ಟಳು. ಸೀತಾರಾಮು ನಿಟ್ಟುಸಿರನ್ನು ಬಿಟ್ಟನು.

ಹೀಗೆ ಆಗುತ್ತಿದ್ದ ಸಂಭಾಷಣೆಯನ್ನೆಲ್ಲ ಪದ್ಮ ತನ್ನ ಅತ್ತೆಗೆ ವರದಿ ಮಾಡುತ್ತಿದ್ದಳು. ಕಾವೇರಮ್ಮ, 'ಹಾಗೆಯೇ ನಿನ್ನ ಗಂಡನೊಡನೆ ಮಾತುಕಥೆ ಆಡಬೇಕಮ್ಮ. ಅವನ ಉಪಚಾರ ಮಾಡಬೇಕು' ಎಂದು ಪ್ರೋತ್ಸಾಹಿಸುತ್ತಿದ್ದಳು. ಸೀತಾರಾಮು ಇತರ ವಿಚಾರಗಳಲ್ಲಿ ಸರಿಯಾಗಿಯೇ ಇದ್ದನು. ಆದರೆ ತನ್ನ ವ್ರತವನ್ನು ಮಾತ್ರ ಬಿಡದೆ ಕಟ್ಟುನಿಟ್ಟಾಗಿ

ನಡೆಸುತ್ತಿದ್ದನು. ಒಂದು ತಿಂಗಳಾಯಿತು, ಎರಡು ತಿಂಗಳಾಯಿತು. ಬೆಟ್ಟಹಲಸೂರಿನಿಂದ ಶೀನಪ್ಪ ಬಂದು ಪದ್ಮಳನ್ನು ತವರುಮನೆಗೆ ಕಳಿಸಿ ಕೊಡಬೇಕೆಂದು ಕಾವೇರಮ್ಮನನ್ನು ಕೇಳಿದನು. ಪದ್ಧತಿಯಂತೆ ಪದ್ಮ ತವರುಮನೆಗೆ ಹೋದಳು. ಪುನಃ ಶ್ರೀನಿವಾಸಪುರಕ್ಕೆ ತಂದುಬಿಡಿ ಎಂದು ಸೀತಾರಾಮು ಕಾಗದವನ್ನೇನೂ ಬರೆಯಲಿಲ್ಲ. ಮೂರು ತಿಂಗಳಾದರೂ ಅವನು ಸುಮ್ಮನೆಯೇ ಇದ್ದನು.

ಕಾವೇರಮ್ಮನಿಗೆ ತನ್ನ ಹಿರಿಯ ಮಗನ ಸಂಸಾರ ಹೀಗೆ ಕೆಟ್ಟು ಹೋಯಿತಲ್ಲ. ಇಬ್ಬರು ಹೆಂಡತಿಯರು ಅವನಿಗಿದ್ದರೂ ಒಬ್ಬಳೂ ಇಲ್ಲ ದಂತಾಯಿತಲ್ಲ. ತಾನು ಉದ್ದೇಶಪಟ್ಟುದೊಂದು, ಆದದ್ದು ಬೇರೊಂದು —ಎಂದು ಸಂಕಟಪಟ್ಟುಕೊಳ್ಳುತ್ತ, ಒಂದು ದಿನ ಸೀತಾರಾಮುವಿನೊ ಡನೆ ತಾನೇ ಪ್ರಸ್ತಾಪವನ್ನೆತ್ತಿದಳು.

‘ಅಪ್ಪಾ ಸೀತಾರಾಮು! ಪದ್ಮ ತವರು ಮನೆಗೆ ಹೋಗಿ ಮೂರು ತಿಂಗಳಾಯಿತು. ಶೀನಪ್ಪನಿಗೆ ನೀನು ಕಾಗದ ಬರೆಯಲಿಲ್ಲವೇ?’ ಎಂದು ಕೇಳಿದಳು.

‘ನಾನು ಬರೆಯಲಿಲ್ಲಮ್ಮ.’

‘ಹೀಗೆ ನೀನು ಹೆಂಡತಿಯಿಲ್ಲದೆ ಸಂನ್ಯಾಸಿಯಂತಿದ್ದರೆ ಹೆತ್ತ ತಾಯಿ ನನಗೆ ಸಂಕಟವಲ್ಲವೇನಪ್ಪ? ಆ ಬೀಗರು ಸಹ ಏನೆಂದು ತಿಳಿದುಕೊಂಡಾರು? ನಮ್ಮ ಮರ್ಯಾದೆಗೆ ಕುಂದುಕ. ಒಂದು ಕಾಗದ ಬರೆದು ಹಾಕು.’

‘ನಾನು ಕಾಗದ ಬರೆಯುವುದಿಲ್ಲ. ಅವರಾಗಿ ತಂದುಬಿಟ್ಟರೆ ಬೇಡ, ಕರೆದುಕೊಂಡು ಹೋಗಿ—ಎಂದು ಹೇಳುವುದಿಲ್ಲ. ನಿನ್ನ ಮಾನ ವನ್ನು ನಾನೇನೂ ತೆಗೆಯುವುದಿಲ್ಲ. ಯೋಚನೆ ಮಾಡಬೇಡಮ್ಮ.’

‘ಈಗಲೇ ನನ್ನ ಮಾನ ಹೋಗಿದೆಯಪ್ಪ! ಇನ್ನೂ ನನ್ನ ಮಾನ ಏನುಳಿದಿದೆ? ನೀನು ಯಾವಾಗ ಆ ಹುಡುಗಿಯನ್ನು ಮುಟ್ಟಿ ಸಹ ಮುಟ್ಟಲಿಲ್ಲವೋ, ಆ ಹುಡುಗಿಯೊಂದು ಕಡೆ ನೀನೊಂದು ಕಡೆ ಮಲಗು ತ್ತಿದ್ದಿರೋ ಆಗಲೇ ಆ ಹುಡುಗಿ ತನ್ನ ತಾಯಿಗೆ, ಮಾವನಿಗೆ ಎಲ್ಲ ತಿಳಿಸಿ ದಳು. ಅವರೂ ನನ್ನನ್ನು ಕೇಳಿದರು. ಈ ಸೌಭಾಗ್ಯಕ್ಕೆ ನಮ್ಮ ಹುಡುಗಿ

ಯನ್ನೇಕೆ ತಂದುಕೊಂಡಿರಿ ? ಅವಳ ಗತಿ ಏನಾಗಬೇಕು? ಎಂದೆಲ್ಲ ಕೇಳಿದರು. ನಾನು ಏನು ಜವಾಬು ಕೊಡಬೇಕು? ಹೇಳಪ್ಪ ಸೀತಾ ರಾಮು !'

'ನಾನೇನು ಹೇಳಲಮ್ಮ? ನಾನು ಸರೋಜಳಿಗೆ ಮಾಡಿದ ದ್ರೋಹಕ್ಕೆ, ಅನ್ಯಾಯಕ್ಕೆ ಬೇರೆ ಪ್ರಾಯಶ್ಚಿತ್ತ, ಬೇರೆ ದಂಡನೆ ನನಗೆ ಯಾವುದೂ ತೋರುವುದಿಲ್ಲ. ಎರಡನೆಯ ಮದುವೆ ಮಾಡಿಕೊಳ್ಳಬೇಕು ಎಂದು ನೀನು ನಿರ್ಬಂಧಿಸಿದೆ. ನಾನು ಮಾಡಿಕೊಂಡೆ. ಅಲ್ಲಿಗೆ ತಾಯಿಯ ಮಾತನ್ನು ನಾನು ಉಳಿಸಿದಹಾಗಾಯಿತು ; ತಾಯಿಯ ಶಂಕೆ ಯನ್ನೂ ಕಳೆದಹಾಗಾಯಿತು. ಇನ್ನು ನನ್ನ ಸುಖ ಸಂತೋಷದ ವಿಚಾರ! ನನ್ನ ಹಣೆಯಲ್ಲಿ ಅವುಗಳೆಲ್ಲ ಬರೆದಿಲ್ಲ ಎನ್ನುವುದು ಜಾತಕ ದಿಂದಲೇ ಸ್ಪಷ್ಟವಾಗಿದೆ ನಾನೇನು ಮಾಡಲಿ? ನಾಳೆ ಚಿತಿಯಮೇಲೆ ನನ್ನ ಹೆಣ ಇಟ್ಟರೂ ಈ ಹೃದಯ ಭಸ್ಮವಾಗುವುದಿಲ್ಲ. ನನಗೆ ಇನ್ನು ಸಂಸಾರದ ಸುಖ ಏನು ಬೇಕಾಗಿದೆ? ತಂಗಿಯರ ಮದುವೆ ನಡೆಯ ಬೇಕು, ತಮ್ಮಂದಿರನ್ನು ಓದಿಸಬೇಕು—ಆ ಜವಾಬ್ದಾರಿಗಳೆಲ್ಲ ನನ್ನ ತಲೆಗೆ ಕಟ್ಟಿದ್ದು. ನಿನಗೆ ಸಂತೋಷವಾಗುವಹಾಗೆ ಅವುಗಳನ್ನೆಲ್ಲ ನಾನು ನಡೆಸಿ ಕೊಡುತ್ತೇನೆ. ನನ್ನ ವ್ರತದ ಗೋಜಿಗೆ ನೀನು ಬರಬೇಡ. ಅಷ್ಟೇ ನಾನು ಕೇಳಿಕೊಳ್ಳುವುದು.'

'ಸರೋಜಳಮೇಲೆ ನನಗೆ ದ್ವೇಷವಿಲ್ಲ ಸೀತಾರಾಮು! ಹುಡುಗಿ ಒಳ್ಳೆಯವಳು, ಅವಳ ತಾಯಿಯ ದುರ್ಗುಣ ಅವಳಲ್ಲಿ ಲೇಶವೂ ಇಲ್ಲ. ಎಲ್ಲ ಕೃಷ್ಣರಾಯರ ದೊಡ್ಡಗುಣ. ಕೃಷ್ಣರಾಯರು ದೊಡ್ಡ ಮನುಷ್ಯರು, ನಿನ್ನ ತಂದೆಗೆ ಬಹಳ ಬೇಕಾದವರಾಗಿದ್ದರು. ನಮ್ಮ ಮನೆಯಲ್ಲೇ ಎಷ್ಟೋ ದಿವಸ ಊಟ ನಿದ್ದೆ ಮಾಡುತ್ತಿದ್ದರು. ನಿನ್ನ ತಂದೆಗೆ ಕೃಷ್ಣ ರಾಯರು ಮನೆಗೆ ಬಂದರೂ ಎಂದರೆ ಅಂಥ ಸಂತೋಷವಾಗುತ್ತಿತ್ತು. ಅವರಿಬ್ಬರೂ ಸೇರಿದರೆ ರಾತ್ರಿ ನಿದ್ದೆಯೇ ಮಾಡುತ್ತಿರಲಿಲ್ಲ. ರಾತ್ರಿಯೆಲ್ಲ ಅದೇನು ಮಾತು ಕಥೆ ಆಡುತ್ತಿದ್ದರೋ! ನೀನೂ ನೋಡಿಲ್ಲವೇ? ಆ ನಿನ್ನತ್ತೆ ತುಳಸಾಬಾಯಿ—ಅವಳ ರೀತಿ ಬೇರೆ. ಮೊದಲೆಲ್ಲ ಸರಿಯಾ ಗಿಯೇ ಇದ್ದವಳು, ಕೃಷ್ಣರಾಯರ ಉದ್ಯೋಗ ಹೆಚ್ಚುತಾ ಹೆಚ್ಚುತಾ

ಅವಳಿಗೆ ಗರ್ವ ಹೆಚ್ಚುತ್ತ ಹೋಯಿತು. ಈಗ ಪದ್ಮಳನ್ನು ಅಸಡ್ಡೆ ಮಾಡಬೇಡಪ್ಪ! ಅವಳೂ ಒಳ್ಳೆಯ ಹುಡುಗಿಯೆ. ಹೆಚ್ಚು ತಿಳಿವಳಿಕೆ ಇಲ್ಲ; ಅಷ್ಟೇ. ಮುಂದೆ ನೋಡೋಣ. ಸದ್ಯಃ ನಿನ್ನ ಸಂಸಾರ ಸರಿ ಹೋದರೆ ನನಗೆ ಆಗ ಮನಸ್ಸಿಗೆ ನೆಮ್ಮದಿ.'

'ಪದ್ಮಳಮೇಲೆ ನನಗೆ ದ್ವೇಷವಿಲ್ಲಮ್ಮ! ನನಗೂ ಆ ಹುಡುಗಿಯ ಯೋಚನೆ ಇದೆ. ಪಾಪ! ಅವಳದೇನು ತಪ್ಪು? ಬೇರೆ ಯಾರನ್ನಾದರೂ ಮದುವೆ ಮಾಡಿಕೊಂಡಿದ್ದರೆ ಹೇಗೋ ಸುಖಪಡುತ್ತಿದ್ದಳು ಈ ನತದೃಷ್ಟನ ಕೈಹಿಡಿದು ಅವಳಿಗೂ ಸುಖವಿಲ್ಲ!'

'ನೋಡಪ್ಪ ಸೀತಾರಾಮು! ಆ ಬೀಗಿತ್ತಿಯ ಕೈಯಿಂದ ನಾನು ಮಾತು ತಿನ್ನುವಹಾಗೆ ಮಾಡಬೇಡ. ಶೀನಪ್ಪ ನಾಳೆ ನನ್ನೊಡನೆ ಜಗಳಕ್ಕೆ ಬಂದಾನು. ಅವನು ಒರಟ. ಅವನಿಗೆ ಸಮಾಧಾನ ಹೇಳುವುದು ಕಷ್ಟ ಪದ್ಮಳ ಜಾತಕ ಒಳ್ಳೆಯದು, ಅದೃಷ್ಟವೂ ಒಳ್ಳೆಯದು. ನೋಡು, ಮದುವೆ ನಿಷ್ಕರ್ಷೆಯಾಗುವ ಹೊತ್ತಿಗೆ ನಿನಗೆ ಶಿರಸ್ತೆ ಕೆಲಸ ಆಯಿತು. ನಾಳೆ ಅಮಲ್ದಾರಿಯೂ ಆಗುತ್ತೆ. ಅಂಥ ಹೆಂಡತಿಯನ್ನು ಆದರಿಸಬೇಕಪ್ಪ. ಅವಳ ಮನಸ್ಸಿಗೆ ಸಂಕಟವನ್ನುಂಟುಮಾಡಬಾರದು. ಈಗ ಮೂರು ತಿಂಗಳಿಂದ ತವರುಮನೆಯಲ್ಲಿದ್ದಾಳೆ. ಇಲ್ಲಿ ನಡದದ್ದನ್ನೆಲ್ಲ ಅವಳು ತಾಯಿಗೆ ಹೇಳದೇ ಇರುತ್ತಾಳೆಯೆ? ಹೆಂಗಸರ ಬಾಯಿ ಸುಮ್ಮನಿರುವುದಿಲ್ಲ. ಆ ತಾಯಿ ಎಲ್ಲಕ್ಕೂ ಬಣ್ಣಕಟ್ಟಿ ಹತ್ತು ಜನರ ಮುಂದೆ ಹೇಳಿಕೊಂಡು ಅಳುತ್ತಾಳೆ. ನಿನ್ನ ಮಾನವೂ ಹೋಗುತ್ತದೆ, ನನ್ನ ಮಾನವೂ ಹೋಗುತ್ತದೆ. ಅದಕ್ಕೆಲ್ಲ ಅವಕಾಶಕೊಡಬೇಡ. ಏನೋ ಎರಡು ದಿವಸ ಹಿಂದಿನ ನೆನಪಿನಲ್ಲಿ ಗಂಡ ಹಾಗಿದ್ದ, ಈಗೆಲ್ಲ ಸರಿಯಾಗಿ ನಡೆದುಕೊಳ್ಳುತ್ತಿದಾನೆ—ಎನ್ನುವ ಹಾಗೆ ಇರು. ಲೋಕದ ಜನ ಇರುವ ರೀತಿ ನೀನೂ ಇರಬೇಕು ಸೀತಾರಾಮು! ಈಗ ನೀನು ಸರೋಜಳಿಗೆ ಒಂದು ಕಾಗದ ಬರೆದುಹಾಕು. ಅವಳು ಏನು ಜವಾಬು ಬರೆಯುತ್ತಾಳೋ ನೋಡೋಣ. ಬೆಟ್ಟಹಲಸೂರಿಗೂ ಕಾಗದ ಬರೆದು ಹಾಕು. ಶೀನಪ್ಪ ಪದ್ಮಳನ್ನು ತಂದುಬಿಡಲಿ.'

'ಇನ್ನೂ ಸರೋಜಳ ಚಪಲ ನೀನಿಟ್ಟುಕೊಂಡಿದ್ದೀಯಾ ಅಮ್ಮ!

ಅವಳಿಗೆ ಎರಡು ಕಾಗದ ಬರೆದೆ. ಜವಾಬೇನೂ ಬರಲಿಲ್ಲ. ಹಿಂದೆ ಅವಳ ಒಂದು ಕಾಗದಕ್ಕೂ ನಾನು ಜವಾಬು ಕೊಡಲಿಲ್ಲ. ಗೊತ್ತಿದೆಯೋ ಇಲ್ಲವೋ ? ಈಗ ನಾನು ಎರಡನೆಯ ಮದುವೆ ಮಾಡಿಕೊಂಡು ಅವಳಿಗೆ ಕಾಗದ ಬರೆದರೆ ಜವಾಬು ಎಂದಿಗಾದರೂ ಕೊಡುತ್ತಾಳೆಯೇ ? ಅವಳ ಮನಸ್ಸು ನನ್ನ ವಿಷಯದಲ್ಲಿ ತೀರ ರೋಸಿಹೋಗಿದೆ. ಈಗ ಅವಳ ದಾರಿಯೇ ಬೇರೆಯಾಗಿದೆ. ಅವಳ ಮಾತನ್ನು ನೀನು ಎತ್ತಬೇಡ. ನನಗೆ ದುಃಖ ತಡೆದುಕೊಳ್ಳುವುದಕ್ಕಾಗುವುದಿಲ್ಲ. ಬೆಟ್ಟಹಲಸೂರಿಗೆ ಕಾಗದ ಬರೆ ಎಂದು ನೀನು ಹೇಳಿದೆ. ಬರೆಯುತ್ತೇನೆ; ಪದ್ಮಳನ್ನು ತಂದುಬಿಡಲಿ. ಆದರೆ ನಾನು ಹಿಂದೆ ವ್ರತನಿಷ್ಠನಾಗಿ ಇದ್ದಂತೆಯೇ ಇರತಕ್ಕವನು. ಆ ವಿಚಾರವನ್ನು ಮಾತ್ರ ನೀನು ಖಂಡಿತವಾಗಿ ತಿಳಿದುಕೊಳ್ಳಬೇಕು.'

ಕಾವೇರಮ್ಮ ಎರಡು ನಿಮಿಷ ಮೌನವಾಗಿದ್ದಳು. ಅನಂತರ, 'ಆಗಲಪ್ಪ ! ಬೆಟ್ಟಹಲಸೂರಿಗೆ ಕಾಗದ ಬರೆದುಹಾಕು' ಎಂದು ಮಾತ್ರ ಹೇಳಿದಳು. ಆ ದಿವಸವೆಲ್ಲ ಕಾವೇರಮ್ಮನಿಗೆ ಬಹಳ ಅಶಾಂತಿಯಾಗಿತ್ತು. ರಾತ್ರಿ ನಿದ್ದೆಬರಲಿಲ್ಲ. ತನ್ನ ಹೆಣ್ಣುಮಕ್ಕಳ ಮದುವೆಯ ಯೋಚನೆಗಿಂತ ಹೆಚ್ಚಾಗಿ ಸೀತಾರಾಮುವಿನ ಸಂಸಾರ ಹೇಗೆ ನೆಟ್ಟಗಾದೀತೋ ಎಂಬುದೇ ದೊಡ್ಡ ಯೋಚನೆಯಾಗಿತ್ತು. ಸೀತಾರಾಮು ತನ್ನ ಸಂಕಲ್ಪವನ್ನು ಬದಲಾಯಿಸುವ ಹಾಗಿಲ್ಲ ಎಂಬುದು ಆಕೆಗೆ ಸ್ಪಷ್ಟಪಟ್ಟಿತು. ನಾಳೆ ಶೀನಪ್ಪ ಜಗಳಕ್ಕೆ ಬಂದರೆ ಏನು ಮಾಡಬೇಕು ? ಎಂಬುದಕ್ಕೆ ಪರಿಹಾರ ತೋರದೇ ಹೋಯಿತು. ಜತೆಗೆ ಸರೋಜಳ ಮೇಲೂ ಮನಸ್ಸು ತಿರುಗಿತು. ಅವಳು ತನಗೆ ಮಾಡುತ್ತಿದ್ದ ಉಪಚಾರಗಳು— ಹಾಸಿಗೆಯನ್ನು ಹಾಸುವುದು, ಕೈಕಾಲು ಹಿಸುಕುವುದು ಏನಾದರೂ ಕೀರ್ತನೆಗಳನ್ನು ಹಾಡುವುದು; ಪಾತ್ರೆ ಪದಾರ್ಥಗಳನ್ನು ಬೆಳಗುವುದರಲ್ಲಿ ಇತರರಿಗೆ ಬಿಡದೆ ತಾನೇ ಮುಂದಾಗಿ ಎಲ್ಲ ಕೆಲಸಗಳನ್ನೂ ಮಾಡುತ್ತಿದ್ದುದು, ಹುಡುಗರ ಮತ್ತು ಸೀತಾರಾಮುವಿನ ಬಟ್ಟೆಬರೆಗಳನ್ನು ಜೋಪಾನ ಮಾಡಿಡುತ್ತಿದ್ದುದು, ಬಿಡುವು ಮಾಡಿಕೊಂಡು ಹುಡುಗರಿಗೆ ಪಾಠವನ್ನು ಹೇಳಿಕೊಡುತ್ತಿದ್ದುದು, ಅವಳ ಪ್ರೀತಿಯುಕ್ತ

ವಾದ ಸಂಭಾಷಣೆ, ಸೀತಾರಾಮುವಿನ ಮೇಲೆ ಅವಳಿಗಿದ್ದ ಗಾಢವಾದ ಪ್ರೇಮ — ಎಲ್ಲವೂ ಚಿತ್ತರಂಗದಲ್ಲಿ ಸುಳಿಯುತ್ತ, ಸರೋಜ ಕಣ್ಣೆದುರಿಗೆ ನಿಂತಂತೆಯೇ ಭಾಸವಾಯಿತು.

ಸರೋಜಳ ಹಿಂದುಗಡೆ ಕೃಷ್ಣರಾಯರು ನಿಂತಿದ್ದಂತೆಯೂ ಭ್ರಾಂತಿಯುಂಟಾಯಿತು. ಆ ದಿನದಲ್ಲಿ ಅವರು ತಮ್ಮ ದುಃಖವನ್ನೆಲ್ಲ ನುಂಗಿಕೊಂಡು, ದೈನ್ಯದಿಂದ, 'ಅಮ್ಮ! ನಿಮಗೆ ನಾನೊಬ್ಬ ಅಣ್ಣ ಎಂದು ತಿಳಿದುಕೊಳ್ಳಿ. ಸೀತಾರಾಮು ಶಿವಮೊಗ್ಗಕ್ಕೆ ಬರುವ ಹಾಗೆ ಮಾಡಿ. ಹೆಚ್ಚು ಹೇಳಲಾರೆ' ಎಂದು ಹೇಳಿದ್ದು ಕಿವಿಯಲ್ಲಿ ಮೊರೆಯಿತು. ಕಾವೇರಮ್ಮ ಹಾಸಿಗೆಯ ಮೇಲೆ ಎದ್ದು ಕುಳಿತುಬಿಟ್ಟಳು.

'ಅಮ್ಮ ಸರೋಜ!' ಎಂಬ ಮಾತುಗಳು ಹೇಗೋ ಆಕೆಗೆ ತಿಳಿಯದೆಯೇ ಬಾಯಿಂದ ಹೊರಟುವು. ಕಣ್ಣುಗಳು ಹನಿಗೂಡಿ ಮಂಜಾದುವು. 'ಸ್ನೇಹ ಸಂತೋಷಗಳು ತಾಂಡವವಾಡಬೇಕಾಗಿದ್ದ ಕಡೆಯಲ್ಲಿ ದ್ವೇಷ ಮತ್ತು ದುಃಖಗಳು ತುಂಬಿಹೋದುವಲ್ಲ. ನಾನು ಇಲ್ಲಿ ನನ್ನ ಮಗನನ್ನು ನೋಡಿ ಸಂಕಟಪಡುವ ಹಾಗಾಯಿತು. ಅಲ್ಲಿ ತುಳಸಾಬಾಯಿ ತನ್ನ ಮಗಳನ್ನು ನೋಡಿ ಸಂಕಟಪಡುವ ಹಾಗಾಯಿತು. ಸರೋಜ ಇಲ್ಲಿಗೆ ಬಂದು ಸೇರಿದ ಹೊರತು ಸೀತಾರಾಮು ಪದ್ಮಳನ್ನು ಹತ್ತಿರಕ್ಕೆ ಬರಗೊಡುವುದಿಲ್ಲ. ಸವತಿಯೊಡನೆ ಸಂಸಾರ ಮಾಡಿಕೊಂಡಿರುವುದಕ್ಕೆ ತಮ್ಮ ಮಗಳನ್ನು ಅವರೇಕೆ ಕಳಿಸಿಕೊಡುತ್ತಾರೆ? ಜತೆಗೆ ಈಗ ಅವಳು ಡಾಕ್ಟರ್ ಪರೀಕ್ಷೆಗೆ ಓದುತ್ತಿದಾಳೆ, ನಾಳೆ ಕೈತುಂಬ ಹಣ ಸಂಪಾದನೆ ಮಾಡುತ್ತಾಳೆ. ಈ ಗಂಡನ ಆಶ್ರಯ ಅವಳಿಗೇನು ಬೇಕಾಗಿದೆ? ಸೀತಾರಾಮು ಬರೆದ ಎರಡು ಕಾಗದಗಳಿಗೂ ಅವಳು ಜವಾಬುಕೊಟ್ಟಿಲ್ಲ ಇಲ್ಲಿಯ ಸಂಬಂಧ ಹರಿದುಹೋಯಿತು ಎಂಬ ತೀರ್ಮಾನದಿಂದಲೇ ಜವಾಬುಕೊಡಲಿಲ್ಲ ಎಂದು ನನಗೆ ತೋರುತ್ತದೆ. ಈಗೇನು ಮಾಡಲಿ? ನಾಳೆ ಶೀನಪ್ಪ ದೊಡ್ಡ ಜಗಳ ಮಾಡುತ್ತಾನೆ. ಅವನಿಗೇನು ಸಮಾಧಾನ ಹೇಳಲಿ?' ಎಂದು ಮುಂತಾಗಿ ಆಲೋಚಿಸುತ್ತ ಹಾಸಿಗೆಯ ಮೇಲೆ ಕಾವೇರಮ್ಮ ಕುಳಿತಿದ್ದಳು.

ರಾತ್ರಿ ಎರಡು ಗಂಟೆಯ ಸಮಯ. ಸೀತಾರಾಮು ಜಲಬಾಧೆ ತೀರಿಸಿಕೊಳ್ಳುವುದಕ್ಕೆ ಕೊಟಡಿಯಿಂದ ಹೊರಕ್ಕೆ ಬಂದವನು ತನ್ನ ತಾಯಿ ಹಾಸಿಗೆಯಮೇಲೆ ಕುಳಿತಿದ್ದುದನ್ನು ನೋಡಿ ಚಕಿತನಾದನು. 'ಏಕಮ್ಮ ಕುಳಿತಿದ್ದೀಯೆ ? ನೀನು ರಾತ್ರಿ ಮಲಗಿಕೊಳ್ಳಲಿಲ್ಲವೇ ?' ಎಂದು ಅವನು ಕೇಳಿದನು.

'ಮಲಗಿದ್ದೆನಪ್ಪ ! ನಿದ್ದೆ ಏಕೋ ಬರಲಿಲ್ಲ. ಮನಸ್ಸಿಗೆ ಸಂಕಟ; ಶಾಂತಿಯಿಲ್ಲ.'

'ಏಕೆ ? ಹೆಣ್ಣುಮಕ್ಕಳ ಮದುವೆ ಇನ್ನೂ ಆಗಿಲ್ಲವಲ್ಲ ಎಂದು ಸಂಕಟಪಡುತ್ತಿದ್ದೀಯೇನು ? ವರಗಳನ್ನು ಗೊತ್ತುಮಾಡಿದ ಸಮಾಚಾರ ತಿಳಿಸಿದೆನಲ್ಲ. ಇನ್ನೇನು ? ಕೆಲವು ದಿನಗಳಲ್ಲಿಯೇ ಮದುವೆಗಳಾಗುತ್ತವೆ.'

'ಅವರ ಯೋಚನೆ ನನಗೇನೂ ಇಲ್ಲಪ್ಪ. ನಿನ್ನ ಯೋಚನೆಯೇ ನನಗೆ. ಮೈಸೂರಿಗೆ ಹೋಗಿಬರೋಣ! ಸರೋಜಳನ್ನೂ ಕೃಷ್ಣರಾಯರನ್ನೂ ನೋಡಿಕೊಂಡುಬರೋಣ!—ಎಂದು ಮನಸ್ಸು ಮಾಡಿದ್ದೇನೆ.'

ಸೀತಾರಾಮು ಅವಾಕ್ಕಾದನು. ಅವನಿಗೆ ತಾನು ಭೂಮಿಯ ಮೇಲೆ ಇದ್ದೇನೆ ಎಂಬುವ ಭಾವನೆಯೇ ಅಳಿಸಿಹೋಯಿತು. 'ಒಂದು ಲಕ್ಷ ವರಹ ಸುರಿದರೂ ಆ ಬಿಕನಾಸಿಯ ಮನೆಯ ಹೊಸಿಲೊಳಕ್ಕೆ ಕಾಲಿಡುವುದಿಲ್ಲ' ಎಂದು ಹೇಳುತ್ತಿದ್ದ ತನ್ನ ತಾಯಿ ಈ ಬದ್ಧ ದ್ವೇಷದ ಸನ್ನಿವೇಶದಲ್ಲಿ ತಾನಾಗಿ ಅಲ್ಲಿಗೆ ಹೋಗಬೇಕೆಂದಿದ್ದಾಳಲ್ಲ— ಎಂದು ಆಲೋಚಿಸುತ್ತ ಅವನು ತಾಯಿಯ ಪಕ್ಕದಲ್ಲಿ ಹೋಗಿ ಕುಳಿತುಕೊಂಡನು. ಅವನಿಗೆ ತಾಯಿಯನ್ನು ನೋಡಿ ದುಃಖ ಉಕ್ಕಿಬಂತು. ಸ್ವಲ್ಪ ಸಮಾಧಾನ ಮಾಡಿಕೊಂಡು, 'ಅಮ್ಮ! ನೀನು ಈಗ ಮೈಸೂರಿಗೆ ಹೋಗಬೇಡ. ನಾಳೆ ಎಂತಿದ್ದರೂ ಮದುವೆಗಳಿಗೆ ಲಗ್ನಪತ್ರಿಕೆ ಕಳಿಸಬೇಕು. ಆಗ ನಾನೇ ಮತ್ತೊಮ್ಮೆ ಕಾಗದ ಬರೆಯುತ್ತೇನೆ. ಏನು ಜವಾಬು ಬರುತ್ತದೋ ನೋಡೋಣ, ಅವರೇನು ಮಾಡುತ್ತಾರೋ ನೋಡೋಣ. ಈಗ ನೀನು ಮೈಸೂರಿಗೆ ಹೋಗಿ ನನ್ನತ್ತೆಯ ಮುಂದೆ ನಿಲ್ಲುವುದು ನನಗೆ ಸ್ವಲ್ಪವೂ ಇಷ್ಟವಿಲ್ಲ' ಎಂದನು.

'ಸರಿಯಪ್ಪ ನೀನು ಹೇಳುವುದು. ಹಾಗೆಯೇ ಮಾಡು.'

'ಇನ್ನು ಯಾವ ಆಲೋಚನೆಯನ್ನೂ ಮಾಡಬೇಡ. ಸುಮ್ಮನೆ ಮಲಗಿಕೊ' ಎಂದು ಹೇಳುತ್ತ ಆಕೆಯನ್ನು ಸಮಾಧಾನಪಡಿಸಿ, ಸೀತಾರಾಮು ನೀರಮನೆಗೆ ಹೋಗಿ ಕೈಕಾಲು ತೊಳೆದುಕೊಂಡು ಬಂದನು. ಕಾವೇರಮ್ಮ ಹಾಸಿಗೆಯಲ್ಲಿ ಮಲಗಿದ್ದಳು.

ಅತ್ತ ಬೆಟ್ಟಹಲಸೂರಿಗೆ ಕಾಗದ ಹೋದಮೇಲೆ ಶೀನಪ್ಪನ ಮನಸ್ಸು ಹಗುರವಾಯಿತು. ಅವನು ತನ್ನ ತಂಗಿಗೂ ಹೆಂಡತಿಗೂ ಕಾಗದವನ್ನು ಓದಿ ಹೇಳಿ, 'ನಾನು ಹೇಳಿರಲಿಲ್ಲವೇ? ಎಷ್ಟು ದಿನ ಗಂಡಸು ಸುಮ್ಮನೆ ಇದ್ದಾನು? ಎಂಥೆಂಥ ಮಹರ್ಷಿಗಳೋ ಜಾತಿಕುಲ ನೋಡದೆ ಎಂಥೆಂಥ ಹೆಂಗಸರನ್ನೋ ಮುಟ್ಟಿದರು. ಎರಡು ದಿನ ಆ ಸೀತಾರಾಮರಾಯನೂ ಹಾರಾಡಿದ. ಈಗ ಹೆಂಡತಿಯನ್ನು ತಂದು ಬಿಡಿ, ಕರೆದುಕೊಂಡುಹೋಗಿ ಮೂರು ತಿಂಗಳಾಯಿತು ಎಂದು ಕಾಗದ ಬರೆದ. ಇನ್ನು ನಿಮ್ಮಿಂದ ಬಯ್ಸಿಕೊಳ್ಳೋದು ತಪ್ಪಿತು' ಎಂದು ಹೇಳಿದನು. ಅವನ ಹೆಂಡತಿ ಆ ಉತ್ತರದಿಂದ ಬಾಯನ್ನೇನೂ ಮುಚ್ಚಿಕೊಳ್ಳಲಿಲ್ಲ. 'ಶೋಭನ ಪ್ರಸ್ತಕ್ಕೆ ಏರ್ಪಾಟುಮಾಡಿದೆ, ಹುಡುಗಿಯನ್ನು ತಂದುಬಿಡಿ ಎಂದು ಬರೆದ ಗಂಡ ಶೋಭನದ ಮೂರು ದಿನವೂ ಹುಡುಗಿಯನ್ನು ಮುಟ್ಟಲಿಲ್ಲ. ಆಮೇಲೂ ಮುಟ್ಟಲಿಲ್ಲ. ಏನು ಮಾತನಾಡುತ್ತೀರೋ ನೀವು! ತಾಯಿ ಹೇಳಿ ಕಾಗದ ಬರೆಸಿದ್ದಾಳೆ! ಅವನು—ಒಬ್ಬ ಷಂಡ ನಾಚಿಕೆಗೆಟ್ಟವನು, ಕಾಗದ ಬರೆದಿದ್ದಾನೆ. ಇಲ್ಲದಿದ್ದರೆ ಮೂರು ತಿಂಗಳವರೆಗೂ ಅವನು ಹೆಂಡತಿಯಿಲ್ಲದೆ ಸುಮ್ಮನಿರುತ್ತಿದ್ದನೇ? ನೀವು ಸುಮ್ಮನಿರುತ್ತಿದ್ದಿರಾ? ಇತ್ತ ನನ್ನನ್ನ ತವರುಮನೆಗೆ ಕಳಿಸಿದಿರಿ. ಅತ್ತ ಹಿಂದೆಯೇ ಓಡಿ ಬಂದಿರಿ! ನೀವು ಆಡಿದ ಆಟಗಳನ್ನೆಲ್ಲ ಮರೆತುಬಿಟ್ಟಿರೇನು? ಈಗ ನನಗೆ ಅವನ ನೆಚ್ಚಿಕೆಯೇ ಇಲ್ಲ. ನೀವು ಸಾವಿರ ಸಮಾಧಾನ ಹೇಳಿದರೂ ನನಗೆ ನಂಬಿಕೆಯೇ ಬರೋದಿಲ್ಲ' ಎಂದು ಒದರಿಬಿಟ್ಟಳು.

'ಯಾವುದನ್ನೂ ನೋಡಿ ಬಿಡೋಣ. ಕೂಳುಹಾಕುವ ಶಕ್ತಿಯಿದೆ, ಬಟ್ಟೆ ತೆಗೆದುಕೊಡೋ ಚೈತನ್ಯ ಇದೆ' ಎಂದು ಶೀನಪ್ಪ ಹೇಳಿದನು.

'ಅವಳ ಹೊಟ್ಟೆಗೆ ಬಟ್ಟೆಗೆ ಏನು ತಾಪತ್ರಯ ಬಂದಿದೆ ಶೀನಣ್ಣ? ನೀನು ಹೇಳೋ ಮಾತು ಏಕೋ ವಿಚಿತ್ರವಾಗಿದೆ. ಅವಳನ್ನು ನಾನು ಸಾಕಲಾರದೆ ಆ ಕೊಂಪೆಗೆ ನೂಕಿದೆನೇ? ಅಲ್ಲಿ ಹೋಗಿ ಸುಖಪಡೋದು ಏನಿದೆ? ಹೇಳು. ಇಲ್ಲೇ ನನ್ನ ಕಣ್ಣ ಮುಂದೆ ಪದ್ಮ ಇದ್ದುಬಿಡಲಿ' ಎಂದು ತಂಗಿ ಹೇಳಿದಳು.

'ಇರಲಮ್ಮ! ಈ ಬಾರಿ ನೋಡಿ ಬಿಡೋಣ. ಆ ಸೀತಾರಾಮ ರಾಯ ಹಿಂದಿನಂತೆಯೇ ಇದ್ದರೆ ಅವನಿಗೂ ಆ ಕಾವೇರಮ್ಮನಿಗೂ ಹಿಡಿದಿರುವ ಪಿಶಾಚಿಯನ್ನು ಚಪ್ಪಲಿಯೇಟಿನಿಂದ ಬಿಡಿಸುತ್ತೇನೆ. ನಾನು ಯಾರು? ನಾನು ಏನು? ಎನ್ನುವುದನ್ನು ಅವರು ತಿಳಿದಾರು!'

ಹೀಗೆ ಆಕ್ಷೇಪಣೆಗಳೂ ಸಮಾಧಾನಗಳೂ ನಡೆದು ಕಡೆಗೆ ಶೀನಪ್ಪ ಪದ್ಮಳನ್ನು ಕರೆದುಕೊಂಡು ಶ್ರೀನಿವಾಸಪುರಕ್ಕೆ ಹೊರಟನು. ಅವನು ಮನೆಯನ್ನು ತಲುಪಿದಾಗ ಸೀತಾರಾಮು ಇನ್ನೂ ಕಚೇರಿಯಿಂದ ಬಂದಿರಲಿಲ್ಲ. ಕಾವೇರಮ್ಮ ಅವರಿಗೆ ಸ್ವಾಗತವನ್ನು ನೀಡಿದಳು. ಆದರೆ ಮನಸ್ಸಿನಲ್ಲಿ ಸಂತೋಷಕ್ಕಿಂತ ಭಯವೇ ಮೂಡಿತ್ತು. ತನ್ನ ಸೊಸೆಗೆ ಹಿರಿಯ ಮಗಳ ಕೈಯಲ್ಲಿ ಹೆರಳನ್ನು ಹಾಕಿಸಿ ಅಲಂಕಾರ ಮಾಡಿಸಿ ಹೊಸ ಸೀರೆಯನ್ನು ಉಡಿಸಿ ಬಹಳ ಆಕರ್ಷಕವಾಗಿ ಅವಳನ್ನು ಮಾಡಿಸಿದಳು. ಶೀನಪ್ಪ ಮತ್ತು ಪದ್ಮ ಬರುವ ನಿರೀಕ್ಷಣೆ ಇದ್ದುದರಿಂದ ಉಪಾಹಾರಕ್ಕೆ ಸಜ್ಜಿಗೆಯನ್ನೂ ಬೋಂಡವನ್ನೂ ಮಾಡಿಟ್ಟಿದ್ದಳು. ತನ್ನ ಸೊಸೆಯನ್ನು ಕರೆದು, 'ಪದ್ಮ! ನಿನ್ನ ಗಂಡನ ಕೊಟಡಿಯನ್ನು ಚೊಕ್ಕಟವಾಗಿ ಮಾಡಮ್ಮ. ಮೇಜಿನಮೇಲೆ ಕಸೂತಿ ವಸ್ತ್ರವನ್ನು ಹರಡು, ಒಳಗೆ ಊದುಬತ್ತಿಯನ್ನು ಹಚ್ಚಿಡು. ಅವನು ಬರುವ ಹೊತ್ತಾಯಿತು' ಎಂದು ಸೂಚನೆ ಕೊಟ್ಟಳು. ಸೀತಾರಾಮು ಕಚೇರಿಯಿಂದ ಹಿಂದಿರುಗಿ ಮನೆಯ ಹೊರಬಾಗಿಲಿಗೆ ಬರುತ್ತಿದ್ದ ಹಾಗೆಯೇ ಅವನಿಗೆ ಊದು ಬತ್ತಿಯ ಸುವಾಸನೆ ಮೂಗಿಗೆ ಹೊಡೆಯಿತು. ಪದ್ಮ ಮತ್ತು ಶೀನಪ್ಪ ಬಂದಿದಾರೆಂಬುದನ್ನು ಅವನು ಊಹಿಸಿ ಸ್ವಲ್ಪ ಹರ್ಷಚಿತ್ತನಾಗಿ ಒಳಕ್ಕೆ ಬಂದನು. ಅವನ ಪ್ರಥಮ ಕಟಾಕ್ಷಕ್ಕೇನೇ ಪದ್ಮ ಸಿಕ್ಕಿದಳು. ಅನಂತರ ಶೀನಪ್ಪನ ಮೇಲೆ, ಇತರರ ಮೇಲೆ ನೋಟ ಹೋಯಿತು.

ತನ್ನ ಕೊಟಡಿಯನ್ನು ಪ್ರವೇಶಿಸಿದಾಗ ಅದು ಘಮಘಮಾಯಿಸುತ್ತಿದ್ದುದು ಕಂಡುಬಂತು. 'ಪದ್ಮ ತವರು ಮನೆಗೆ ಹೋಗಿ ತಯಾರಾಗಿ ಒಂದಿದ್ದಾಳೆ' ಎಂದು ಮನಸ್ಸಿನಲ್ಲಿ ಸಂತೋಷದಿಂದ ಹೇಳಿಕೊಂಡನು. ಶೀನಪ್ಪನೊಡನೆ ಕುಶಲಪ್ರಶ್ನೆಗಳು ಇತ್ಯಾದಿಗಳು ನಡೆದುವು.

ಕಾವೇರಮ್ಮ ಪದ್ಮಳ ಕೈಯಲ್ಲಿ ಬೆಳ್ಳಿತಟ್ಟೆಯಲ್ಲಿ ಉಪಾಹಾರವನ್ನು ಕಳಿಸಿಕೊಟ್ಟಳು. ಜತೆಗೆ ಹೇಗೆ ಉಪಚಾರ ಮಾಡಬೇಕೆಂಬುದನ್ನೂ ಕಲಿಸಿಕೊಟ್ಟಳು. ಅದರಮೇಲೆ ಆ ಹುಡುಗಿ ಬೇರೊಂದು ಬೆಳ್ಳಿಯ ತಟ್ಟೆಯಲ್ಲಿ ನೀರಿನ ಲೋಟಗಳನ್ನೂ ಕಾಫಿಯ ಲೋಟಗಳನ್ನೂ ಇಟ್ಟುಕೊಂಡು, ಚೊಕ್ಕಟವಾದ ಟವಲ್ಲನ್ನೂ ಹಿಡಿದುಕೊಂಡು ಕೊಟಡಿಗೆ ಬಂದಳು. ಇವುಗಳನ್ನೆಲ್ಲ ಶೀನಪ್ಪ ನೋಡುತ್ತಿದ್ದನು. ಅವನಿಗೆ ನಡುಮನೆಯಲ್ಲಿ ಮಣೆಹಾಕಿ ಕಾವೇರಮ್ಮ ಉಪಾಹಾರವನ್ನಿಟ್ಟಿದ್ದಳು.

ಪದ್ಮ ಮತ್ತು ಸೀತಾರಾಮು ಕೊಟಡಿಯಲ್ಲಿ ಅರ್ಧ ಗಂಟೆಯವರೆಗೂ ಜತೆಯಲ್ಲಿದ್ದರು. ಸೀತಾರಾಮುವಿಗೆ ಪದ್ಮಳ ವಿಚಾರದಲ್ಲಿ ಒಂದು ಆಶ್ಚರ್ಯಯುಕ್ತವಾದ ಸಂತೋಷವುಂಟಾಯಿತು. ಸರೋಜ ಕಾಫಿ ತಿಂಡಿಗಳನ್ನು ತರುತ್ತಿದ್ದ ರೀತಿಯಲ್ಲಿಯೇ ಪದ್ಮ ಈ ದಿನ ಮಾಡಿದಳಲ್ಲ. ಇದು ಹೇಗೆ? ಹಿಂದೆ ಹೀಗೆಲ್ಲ ಮಾಡುತ್ತಿರಲಿಲ್ಲ. ಜತೆಗೆ ತಾನು ಬರುವ ಹೊತ್ತಿಗೆ ಕೊಟಡಿಯಲ್ಲಿ ಊದುಬತ್ತಿಯನ್ನು ಹಚ್ಚಿಟ್ಟಿದ್ದಳು. ಅದನ್ನು ಯಾರು ಕಲಿಸಿ ಕೊಟ್ಟರು? ಎಂದು ತನ್ನಲ್ಲಿಯೇ ಗುಣಾಕಾರ ಹಾಕಿಕೊಳ್ಳುತ್ತ ಪದ್ಮಳನ್ನು ಪಕ್ಕದಲ್ಲಿಯೇ ಕುಳ್ಳಿರಿಸಿ ಕೊಂಡನು. ಯಾವಾಗ ಬೆಟ್ಟಹಲಸೂರಿನಿಂದ ಹೊರಟದ್ದು? ಅಲ್ಲಿ ತಾಯಿ, ಅತ್ತೆ ಎಲ್ಲ ಹೇಗಿದ್ದಾರೆ? ಎಂದು ಮುಂತಾಗಿ ವಿಚಾರಿಸಿದನು. ಆಮೇಲೆ ಅವಳ ಮುಖವನ್ನು ಪ್ರೇಮದಿಂದ ದೃಷ್ಟಿಸುತ್ತ, 'ಈಗ ನೀನು ಬದಲಾಯಿಸಿದ್ದೀಯೆ. ನಯ ನಾಜೂಕುಗಳನ್ನು ಕಲಿತಿದ್ದೀಯೆ. ನನಗೆ ಸಂತೋಷ. ಕಾಫಿ ತಿಂಡಿಗಳನ್ನು ಈ ರೀತಿ ತರಬೇಕು ಎಂದು ಯಾರು ಹೇಳಿಕೊಟ್ಟರು?' ಎಂದು ಕೇಳಿದನು.

'ಅತ್ತೆಯವರು ಹೇಳಿಕೊಟ್ಟರು.' ಎಂದು ಪದ್ಮ ಉತ್ತರ ಕೊಟ್ಟಳು.

'ಅತ್ತೆ ಹೇಳಿ ಕೊಟ್ಟಳೇ? ಊದುಬತ್ತಿ ಹಚ್ಚಿ ಕೊಟಡಿಯಲ್ಲಿಡು; ಮೇಜಿನ ಮೇಲೆ ಕಸೂತಿಯ ಬಟ್ಟೆ ಹರಡಿಡು; ಕೈ ಒರಸಿಕೊಳ್ಳುವುದಕ್ಕೆ ಹತ್ತಿರ ಟವಲ್ಲಿಟ್ಟುಕೊ ಎಂದೆಲ್ಲ ಹೇಳಿಕೊಟ್ಟಳೇ?'

'ಹೌದು. ಅವರೇ ಎಲ್ಲ ಹೇಳಿದರು.'

'ಬೋಂಡ ತೆಗೆದುಕೊ, ತಿನ್ನು. ಸಂಕೋಚಪಟ್ಟುಕೊಳ್ಳಬೇಡ' ಎಂದು ಹೇಳುತ್ತ ಕೆಲವು ಬೋಂಡಗಳನ್ನು ಪದ್ಮಳಿಗೆ ತಿನ್ನಿಸಿದನು. ಇಬ್ಬರೂ ಸೇರಿ ತಟ್ಟೆಯಲ್ಲಿದ್ದುದನ್ನೆಲ್ಲ ಖಾಲಿಮಾಡಿದರು. ಕಾಫಿ ಕುಡಿದರು.

'ಪದ್ಮ! ನಿನಗೆ ನಾನು ಸ್ವಲ್ಪ ಪಾಠ ಹೇಳಿಕೊಡಲೇ?'

'ಹೇಳಿಕೊಡಿ; ಕಲಿತುಕೊಳ್ಳುತ್ತೇನೆ. ಕಷ್ಟಪಟ್ಟು ಪಾಠ ಗಟ್ಟಿ ಮಾಡಿ ನಿಮಗೆ ಒಪ್ಪಿಸುತ್ತೇನೆ.'

ಸೀತಾರಾಮುವಿಗೆ ನಗು ಬಂತು. 'ನೋಡು! ನಾನು ಹೇಳಿ ಕೊಡುವ ಪಾಠವನ್ನು ಇತರರಿಗೆ ತಿಳಿಸಬಾರದು.'

'ತಿಳಿಸುವುದಿಲ್ಲ.'

'ಈ ಕೊಟಡಿಯಲ್ಲಿ ಏನು ಮಾತನಾಡುತ್ತೇವೋ ಏನು ಮಾಡು ತ್ತೇವೋ ಅದನ್ನೆಲ್ಲ ಹೊರಗೆ ಹೇಳಬಾರದು. ನನ್ನ ವ್ರತ ಗೊತ್ತಿದೆ ಯಲ್ಲ. ಇನ್ನೂ ಕೆಲವು ದಿವಸ ನಾನು ಹಾಗೆಯೇ ಇರತಕ್ಕವನು. ಅದಕ್ಕೆ ಬೇರೆ ಕಾರಣ ಇದೆ. ನೀನು ಎಲ್ಲಿ ಮಲಗಿಕೊಂಡಿದ್ದೆ? ಎಂದು ನಿನ್ನ ಮಾವ ಕೇಳಿದರೆ ಅವನಿಗೆ ಏನು ಜವಾಬು ಕೊಡುತ್ತೀಯೆ?'

'ನಾನು ಜವಾಬೇ ಕೊಡುವುದಿಲ್ಲ. ಇಲ್ಲಿ ನಡೆಯುವುದನ್ನು ಹೊರಗೆ ಹೇಳುವುದಿಲ್ಲ.'

'ಜವಾಬು ಕೊಡದೇ ಇರುವುದಕ್ಕಾಗುತ್ತದೆಯೇ? ಜವಾಬು ಕೊಡಬೇಕು. ಏನು ಹೇಳುತ್ತೀಯೆ? ತಿಳಿಸು.'

'ನೆಲದ ಮೇಲೆ ದೂರ ಮಲಗಿದ್ದೆ ಎಂದು ಹೇಳುತ್ತೇನೆ.'

'ಹಾಗೆ ಹೇಳಬಾರದು. ಗಂಡನ ಜತೆಯಲ್ಲೇ ಮಲಗಿದ್ದೆ. ಈಗ ಅವರು ಸರಿಯಾಗಿದ್ದಾರೆ ಎಂದು ಹೇಳಬೇಕು.'

'ಹಾಗೆಯೇ ಆಗಲಿ. ಅತ್ತೆಯವರು ಕೇಳಿದರೆ ಏನು ಹೇಳ ಬೇಕು?'

'ನಿಮಗೇ ಗೊತ್ತಿದೆಯಲ್ಲ ಅತ್ತೆ – ಎಂದು ಹೇಳಬೇಕು. ಈಗ ಕೊಟಡಿಯಲ್ಲಿ ಏನು ನಡೆಯಿತು? ಎಂದು ನಿನ್ನ ಮಾವ ಕೇಳಿದರೆ ಏನು ಹೇಳುತ್ತೀಯೆ?'

'ಸಜ್ಜಿಗೆ ಬೋಂಡ ತಿನ್ನಿಸಿದರು, ಕಾಫಿ ಕೊಟ್ಟರು ಎಂದು ಹೇಳುತ್ತೇನೆ'

'ಹಾಗೆ ಹೇಳಬಾರದು. ಇಬ್ಬರೂ ಒಟ್ಟಿಗೆ ತಿಂಡಿ ಕಾಫಿ ತೆಗೆದು ಕೊಂಡೆವು ಎಂದು ಹೇಳಬೇಕು. ಒಳ್ಳೆಯ ಮಾತನಾಡಿದರು ಎಂದು ಹೇಳಬೇಕು.'

'ಹಾಗೆಯೇ ಹೇಳುತ್ತೇನೆ.'

ಸೀತಾರಾಮು ಎದ್ದು ನಿಂತುಕೊಂಡನು. ಪದ್ಮ ಸಹ ಎದ್ದು ನಿಂತುಕೊಂಡಳು. ಅವಳನ್ನು ಹತ್ತಿರಕ್ಕೆ ಸೆಳೆದುಕೊಂಡು, 'ಪದ್ಮ! ನಿನ್ನ ಅದೃಷ್ಟ ಒಳ್ಳೆಯದೆಂದು ನಿನ್ನತ್ತೆಯವರು ಹೇಳುತ್ತಾರೆ. ನೀನೂ ಸುಖಪಡುವ ಅದೃಷ್ಟವನ್ನು ದೇವರು ಕರುಣಿಸಲಿ' ಎಂದು ಹೇಳಿದನು. ಕೊಟಡಿಯಿಂದ ಇಬ್ಬರೂ ಹೊರಕ್ಕೆ ಬಂದರು.

ಆ ದಂಪತಿಗಳನ್ನು ನೋಡಿ ಶೀನಪ್ಪನಿಗೆ ಬಹಳ ಸಂತೋಷವಾಯಿತು. ಕಾವೇರಮ್ಮ ಹಳ್ಳಿಯ ಸಮಾಚಾರಗಳನ್ನೂ ಜಮೀನಿನ ವಿಚಾರಗಳನ್ನೂ, ಮನೆಯ ಬಾಡಿಗೆಯ ವಿಷಯವನ್ನೂ ಅವನನ್ನು ಕೇಳಿ ತಿಳಿದುಕೊಂಡಳು. ಹೀಗೆಯೇ ಮಾತುಕತೆಗಳನ್ನಾಡುತ್ತ ರಾತ್ರಿ ಊಟಗಳನ್ನು ಮಾಡಿ ಎಲ್ಲರೂ ಮಲಗಿದರು. ಪದ್ಮ ತನ್ನ ಗಂಡನ ಕೊಟಡಿಯನ್ನು ಸೇರಿದಳು.

ಮಾರನೆಯ ದಿನ ಬೆಳಗ್ಗೆ ಯಾವುದೊಂದು ಗಲಾಟೆಯೂ ಆಗಲಿಲ್ಲ. ಶೀನಪ್ಪ ಪದ್ಮಳನ್ನು ನೀರಮನೆಯಲ್ಲಿ ಸಂಧಿಸಿ ಪ್ರಶ್ನೆ ಮಾಡಿದನು. ಆ ಹುಡುಗಿ, 'ನಾವು ಜತೆಯಲ್ಲೇ ಮಲಗಿದ್ದೆವು ಮಾವ!' ಎಂದು ಹೇಳಿದಳು.

ಅವನಿಗೆ ಸಂತೋಷವಾಯಿತು. 'ನಿನ್ನೆ ಸಾಯಂಕಾಲ ಏನು ಮಾತನಾಡಿದ ನಿನ್ನ ಗಂಡ? ಮೂರು ತಿಂಗಳು ಕಾಲ ಹಳ್ಳಿಯಲ್ಲಿ ಏಕಿದ್ದೆ ಮೊದಲೇ ಬರಬಾರದಾಗಿತ್ತೆ ಎಂದು ಕೇಳಿದನೆ?' ಎಂದನು.

'ಅವುಗಳನ್ನೆಲ್ಲ ಕೇಳಲಿಲ್ಲ ಮಾವ! ನಾವಿಬ್ಬರೂ ಜತೆಯಲ್ಲಿ ತಿಂಡಿ ಕಾಫಿ ತೆಗೆದುಕೊಂಡೆವು. ಅವರು ಒಳ್ಳೆಯ ಮಾತನಾಡಿದರು' ಎಂದು ಪದ್ಮ ಉತ್ತರಕೊಟ್ಟಳು.

ಶೀನಪ್ಪ ಸಂತುಷ್ಟಹೃದಯನಾಗಿ ಕಾವೇರಮ್ಮನೊಡನೆ, 'ನನ್ನ ನಿಮ್ಮ ಜವಾಬ್ದಾರಿ ಇಳಿಯಿತಮ್ಮ! ಗಂಡ ಹೆಂಡತಿ ಒಂದಾಗಿ ಸೇರಿದರು. ಇನ್ನು ನಾನು ನನ್ನ ತಂಗಿಯನ್ನೂ ಹೆಂಡತಿಯನ್ನೂ ಧೈರ್ಯ ದಿಂದ ಸಂಧಿಸಬಹುದು. ಅವರೊಡನೆ ಜಗಳ ತಪ್ಪಿತು. ನಿಮ್ಮೊಡ ನೆಯೂ ಜಗಳ ತಪ್ಪಿತು' ಎಂದು ಹೇಳಿದನು. ಕಾವೇರಮ್ಮನ ಭಯ ನಿವಾರಣೆಯಾಯಿತು. ಊಟವಾದಮೇಲೆ ಶೀನಪ್ಪ ಬೆಟ್ಟ ಹಲಸೂರಿಗೆ ಹಿಂದಿರುಗಿದನು.

ಕಾವೇರಮ್ಮ ಸೊಸೆಯನ್ನು ಕರೆದು, 'ಪದ್ಮ! ನಿನ್ನೆ ರಾತ್ರಿ ನೀನು ಎಲ್ಲಿ ಮಲಗಿದ್ದೆ? ನಿನ್ನ ಗಂಡ ಎಲ್ಲಿ ಮಲಗಿದ್ದ?' ಎಂದು ಕೇಳಿದಳು.

'ನಿಮಗೇ ಗೊತ್ತಿದೆಯಲ್ಲ ಅತ್ತೆ' ಎಂದು ಅವಳು ಉತ್ತರ ಕೊಟ್ಟಳು.

ಕಾವೇರಮ್ಮ ಚಕಿತಳಾದಳು. ಸರಳೆಯಾದ ಪದ್ಮ ಹೇಳುತ್ತಿದ್ದ ಉತ್ತರ ಅದಲ್ಲ. 'ನಿನ್ನ ಮಾವನಿಗೆ ಏನು ಹೇಳಿದೆ?'

'ನಾವು ಜತೆಯಲ್ಲೇ ಮಲಗಿದ್ದೆವು ಎಂದು ಹೇಳಿದೆ ಅತ್ತೆ!'

ಕಾವೇರಮ್ಮ ಎಲ್ಲ ಅರ್ಥ ಮಾಡಿಕೊಂಡಳು. 'ನೀನು ಜಾಣೆ ಯಮ್ಮ! ಇಲ್ಲಿ ನಡೆಯುವುದನ್ನು ಬೇರೆ ಕಡೆ ಹೇಳಬಾರದು. ತವರು ಮನೆಯಲ್ಲೂ ಹೇಳಬಾರದು. ಅಲ್ಲಿ ನಡೆಯುವುದನ್ನು ಇಲ್ಲಿಯೂ ಹೇಳ ಬಾರದು. ಎಲ್ಲ ಮನಸ್ಸಿನಲ್ಲಿಟ್ಟುಕೊಂಡು ಯಾರ ಹತ್ತಿರ ಹೇಗಿರ ಬೇಕೋ ಹಾಗೆ ಇರಬೇಕು; ಯಾರ ಹತ್ತಿರ ಏನು ಮಾತನಾಡಬೇಕೋ ಹಾಗೆ ಆಡಬೇಕು' ಎಂದು ಹೇಳಿದಳು.

'ನೀವು ಹೇಳಿದಂತೆ ಕೇಳುತ್ತೇನೆ ಅತ್ತೆ! ಅವರು ಹೇಳಿದಂತೆ ಇರುತ್ತೇನೆ ಅತ್ತೆ!'

'ಒಳ್ಳೆಯದಮ್ಮ!'

## ೨೧. ತಂಗಿಯರ ಮದುವೆಗಳು

ಮದುವೆಗಳಿಗೆ ಲಗ್ನಗಳು ನಿಷ್ಕರ್ಷೆಯಾಗಿ ಶ್ರೀನಿವಾಸಪುರದಲ್ಲಿ ಭರದಿಂದ ಏರ್ಪಾಟುಗಳು ನಡೆಯತೊಡಗಿದುವು. ಕಾವೇರಮ್ಮ ತಾನು ಬ್ಯಾಂಕಿನಲ್ಲಿ ಹಾಕಿಟ್ಟುಕೊಂಡಿದ್ದ ಇಡುಗಂಟಿನ ಮೇಲೆ ಸಾಲವನ್ನು ತರಹೇಳಿ, ಇಡುಗಂಟಿನ ವಾಯಿದೆ ಮುಂದಿನ ವರ್ಷ ಮುಗಿದಾಗ ಸಾಲ ವನ್ನು ತೀರಿಸಬಹುದೆಂದು ಸೀತಾರಾಮುವಿಗೆ,ಹೇಳಿದಳು. ಆದ್ದರಿಂದ ಹಣ ಬಹುಮಟ್ಟಿಗೆ ಒದಗಿದ ಹಾಗಾಯಿತು. ತುಮಕೂರಿನ ಮನೆ ಯನ್ನು ಬಾಡಿಗೆಗೆ ಕೊಟ್ಟಿದ್ದುದರಿಂದ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಬರುತ್ತಿತ್ತಷ್ಟೆ. ಆ ಹಣವನ್ನು ಕಾವೇರಮ್ಮ ಖರ್ಚು ಮಾಡದೆ ಹಾಗೆಯೇ ಇಟ್ಟುಕೊಂಡಿದ್ದಳು. ಆ ಹಣವನ್ನೆಲ್ಲ ಮದುವೆಗಳ ಖರ್ಚಿಗಾಗಿ ಆಕೆ ಕೊಟ್ಟುಬಿಟ್ಟಳು. ಜತೆಗೆ ಜಮೀನಿನ ಗುತ್ತಿಗೆ ಹಣ ಎಂದಿನಂತೆ ಬರುವ ನಿರೀಕ್ಷೆ ಇತ್ತು. ಅದನ್ನು ತರುವಾಯ ಬಳಸಿಕೊಳ್ಳಬಹು ದೆಂದು ಸೀತಾರಾಮುವಿಗೆ ಆಕೆ ತಿಳಿಸಿದಳು.

ಸೀತಾರಾಮು ಶಿರಸ್ತೇ ಕೆಲಸ ಮಾಡುತ್ತಿದ್ದುದರಿಂದ ತಾಲ್ಲೂಕು ಕಚೇರಿಯ ಆಳುಗಳೂ ಇತರರೂ ಕೆಲಸಕ್ಕೆ ಒದಗಿಬಂದರು. ಅಲ್ಲದೆ ಹಳ್ಳಿಗಳ ಕಡೆಯಿಂದ ಹಾಲು ಮೊಸರು ತುಪ್ಪ ತರಕಾರಿ ಬಾಳೆಯೆಲೆ ಮೊದಲಾದುವನ್ನು ಶ್ಯಾನುಭೋಗರುಗಳೂ ಪಟೇಲರುಗಳೂ ಒದಗಿಸಿ ದರು. ಹೀಗೆ ಜನಗಳೂ ಪದಾರ್ಥಗಳೂ ಸೇರುತ್ತಿದ್ದುದನ್ನು ನೋಡಿ ಕಾವೇರಮ್ಮನಿಗೆ ಬಹಳ ಸಂತೋಷವಾಗುತ್ತಿತ್ತು. ತನ್ನ ಮಗ ಬೇಗ ಆಮಲ್ದಾರಿ ಕೆಲಸ ಮಾಡುವುದನ್ನು ನೋಡಿಯೇನೆ ಎಂದು ಆಕೆ ಹಾರೈ ಸುತ್ತಿದ್ದಳು.

ಲಗ್ನಪತ್ರಿಕೆಗಳನ್ನು ಎಲ್ಲರಿಗೂ ಕಳಿಸಿದ್ದಾಯಿತು. ಸೀತಾರಾಮು ಕೃಷ್ಣರಾಯರಿಗೂ ನಾಗರಾಜನಿಗೂ ಅವುಗಳನ್ನು ಕಳಿಸಿದ್ದನು. ತರೀ ಕೆರೆಗೂ ಲಗ್ನಪತ್ರಿಕೆ ಹೋಗಿತ್ತು. ಕೃಷ್ಣರಾಯರಿಗೆ ಸೀತಾರಾಮು ಒಂದು ಕಾಗದವನ್ನೂ ಬರೆದನು. ಅದರ ಸಾರಾಂಶ ಇಷ್ಟೇ: ತಮ್ಮನ್ನು ಎಲ್ಲ ವಿಧಗಳಲ್ಲಿಯೂ ತಂದೆಯೆಂದೇ ಭಾವಿಸಿಕೊಂಡಿದ್ದೇನೆ. ತಮ್ಮ ವಿಚಾರ

ದಲ್ಲಿ ಮತ್ತು ಚಿ॥ ಸೌ॥ ಸರೋಜಳ ವಿಚಾರದಲ್ಲಿ ಮಹಾಪರಾಧ ಮಾಡಿದ್ದೇನೆ. ತಾವು ದೊಡ್ಡ ಮನಸ್ಸುಮಾಡಿ ಕ್ಷಮೆ ತೋರಬೇಕು. ಸಮಯ ದೊರೆತಾಗ ತಮ್ಮಲ್ಲಿ ಎಲ್ಲವನ್ನೂ ವಿಜ್ಞಾಪಿಸಿಕೊಳ್ಳುತ್ತೇನೆ. ತಾವುಗಳೆಲ್ಲ ಅಗತ್ಯವಾಗಿ ಮದುವೆಗಳಿಗೆ ದಯಮಾಡಿಸಿ ನನ್ನ ದುಃಖವನ್ನು ಹೋಗಲಾಡಿಸಬೇಕು; ತಾವೂ ಅತ್ತೆಯವರೂ ನಮ್ಮೆಲ್ಲರನ್ನೂ ಆಶೀರ್ವದಿಸಬೇಕು. ನನ್ನ ಅತ್ತೆಯವರ ಪಾದಕಮಲಗಳಿಗೆ ಶಿರಸಾ ನಮಸ್ಕಾರ ಮಾಡುತ್ತಿದೇನೆ ಎಂದು ಅವರಿಗೆ ತಿಳಿಸಬೇಕು.

ಸರೋಜಳಿಗೂ ಸೀತಾರಾಮು ಕಾಗದವನ್ನು ಬರೆದನು. ಅದರ ಸಾರಾಂಶ ಇದು: ಹಿಂದೆ ನಿನಗೆ ಎರಡು ಕಾಗದಗಳನ್ನು ನಾನು ಬರೆದೆ. ನಿನ್ನಿಂದ ಉತ್ತರ ಬರಲಿಲ್ಲ. ಹಿಂದೆ ನಿನ್ನ ಕಾಗದಗಳಿಗೆ ನಾನು ಉತ್ತರ ಕೊಡಲಿಲ್ಲ ಎಂಬುದು ತೀವ್ರವಾಗಿಯೇ ನೆನಪಿಗೆ ಬರುತ್ತಿದೆ. ನಿನ್ನ ವಿಚಾರದಲ್ಲಿ ನಾನು ಮಾಡಿದ ಮಹಾಪರಾಧಕ್ಕೆ ತಕ್ಕ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತಿದ್ದೇನೆ ಎನ್ನುವುದು ನಿನ್ನ ಹೃದಯಕ್ಕೆ ತಿಳಿಯದು. ನೀನು ಕ್ಷಮಾಮೂರ್ತಿ ಎಂದು ನಂಬಿದ್ದೇನೆ. ಈ ಸಂದರ್ಭದಲ್ಲಿ ನೀನು ಶ್ರೀನಿವಾಸಪುರಕ್ಕೆ ಬಂದರೆ ನನ್ನ ದುಃಖವೆಲ್ಲ ಕೊನೆಗೊಳ್ಳುತ್ತದೆ.

ಕಾಗದಗಳು ಸೇರಿ ಮೈಸೂರಿನಲ್ಲಿ ಹಿಂದಿನ ಕಥೆಯೆಲ್ಲ ಮರುಕೊಳಿಸಿತು. 'ಮರ್ಯಾದೆಗೆ ಕಾಗದ ಬರೆದಿದ್ದಾನೆ, ಲಗ್ನಪತ್ರಿಕೆಗಳನ್ನು ಕಳಿಸಿದ್ದಾನೆ. ಈಗೇನು ಮಾಡುತ್ತೀರಿ?' ಎಂದು ತುಳಸಾಬಾಯಿ ಗಂಡನನ್ನ ಕೇಳಿದಳು.

'ಸೀತಾರಾಮು ನಡತೆಯನ್ನು ಮೀರದೆ ಯೋಗ್ಯತೆಯನ್ನು ಉಳಿಸಿಕೊಂಡಿದ್ದಾನೆ. ಆ ವಿಚಾರದಲ್ಲಿ ನನಗೆ ಸಂತೋಷ' ಎಂದು ಕೃಷ್ಣರಾಯರು ಹೇಳಿದರು.

'ಏನೋ ಹಿಂದೆ ನಡೆದುಹೋಯಿತು. ಮುಂದೆ ಕಾಲಸ್ಥಿತಿ ಹೇಗೆ ಬದಲಾಯಿಸುತ್ತದೆಯೋ ಗೊತ್ತಿಲ್ಲ. ಸೀತಾರಾಮುವನ್ನು ತೀರ ವಿರೋಧ ಮಾಡಿಕೊಳ್ಳುವುದು ಬೇಡ. ಅವನು ಸರೋಜಳಿಗೂ ಕಾಗದ ಬರೆದಿದ್ದಾನೆ. ನಾವು ದ್ವೇಷವನ್ನೇನೂ ಬೆಳಸಿಲ್ಲ, ಸಂಕಟವನ್ನು ಮಾತ್ರ

ಅನುಭವಿಸುತ್ತಿದೇವೆ—ಎನ್ನುವುದು ಅವನಿಗೆ ತಿಳಿಯಲಿ. ಅದಕ್ಕೆ ತಕ್ಕ ಹಾಗೆ ಮಾಡಿ.'

'ನೀನು ಶ್ರೀನಿವಾಸಪುರಕ್ಕೆ ಹೋಗಿ ಬರುತ್ತೀಯಾ?'

'ನೀವೇ ಆಲೋಚನೆ ಹೇಳಿ. ಈಗ ನಾನು ನನ್ನ ಜಂಬ ಬಿಟ್ಟು ಬಿಟ್ಟೆ. ಬೆಳೆದ ಮಗಳನ್ನು ಹಾಗೆ ಮನೆಯಲ್ಲಿಟ್ಟುಕೊಂಡು ನಾನು ಏನು ಜಂಬ ಮಾಡಲಿ? ನಾಳೆ ಸರೋಜ ಡಾಕ್ಟರಾಗಿ ಬರುತ್ತಾಳೋ ಏನು ಉದ್ಯೋಗ ಮಾಡುತ್ತಾಳೋ ಗಂಡನ್ನ ಬಿಟ್ಟವಳು ಎಂಬ ಹೆಸರು ಬೇರೆ ತಪ್ಪುವುದಿಲ್ಲ. ತಪ್ಪನ್ನು ಹೆಂಗಸಿನಮೇಲೆ ಹೊರಿಸುತ್ತಾರೆಯೇ ಹೊರತು ಗಂಡಸು ಏನು ಮಾಡಿದರೂ ಲೋಕ ಅವನನ್ನು ಟೀಕಿಸುವುದಿಲ್ಲ. ಗಂಡನ ಆಶ್ರಯ ಇಲ್ಲದ ಹೆಣ್ಣಿನಮೇಲೆ ಎಲ್ಲರೂ ಕಣ್ಣು ಹಾಕುತ್ತಾರೆ. ನಮ್ಮ ಮನೆಯ ಹೆಸರು ಕೆಟ್ಟುಹೋಗುತ್ತದೆ. ನೀವೇ ಆಲೋಚಿಸಿ. ಕಾಗದದ ಕೊನೆಯಲ್ಲಿ ನನ್ನ ಮಾತೆತ್ತಿ ಏನೋ ಬರೆದಿದ್ದಾನಲ್ಲ! ಅದೇನು? ಅದನ್ನು ಮತ್ತೆ ಓದಿ.'

ಕೃಷ್ಣರಾಯರು ಕೊನೆಯ ವಾಕ್ಯವನ್ನು—ನನ್ನ ಅತ್ತೆಯವರ ಪಾದ ಕಮಲಗಳಿಗೆ ಶಿರಸಾ ನಮಸ್ಕಾರ ಮಾಡುತ್ತಿದೇನೆ ಎಂದು ಅವರಿಗೆ ತಿಳಿಸಬೇಕು—ಎಂಬುದನ್ನು ಓದಿ ಹೇಳಿದರು. ತುಳಸಾಬಾಯಿ ಪ್ರಸನ್ನ ಚಿತ್ತಳಾಗಿ,

'ಅದೇನು ಸೀತಾರಾಮು ಹಾಗೆ ಬರೆದಿದ್ದಾನಲ್ಲ? ಅದರ ಅರ್ಥ ಏನು?' ಎಂದು ಕೇಳಿದಳು.

'ನೀನು ಅವನ ಮೇಲೆ ಬಹಳ ಕೋಪ ಮಾಡಿಕೊಂಡಿದ್ದೀಯೆ; ಆ ಕೋಪಕ್ಕೆ ತಾನೇ ಕಾರಣ. ಕೋಪವನ್ನು ಬಿಡಬೇಕು, ಕ್ಷಮೆ ತೋರಬೇಕು, ತನ್ನನ್ನು ಆಶೀರ್ವಾದ ಮಾಡಬೇಕು—ಎಂಬುದು ಅದರ ಅಭಿಪ್ರಾಯ.'

'ಅವನ ಜಾತಕದಲ್ಲಿ ಏನಿತ್ತೋ ಏನೋ! ಎಲ್ಲ ಅದರಂತೆ ನಡೆಯಿತು ಎಂತ ಕಾಣುತ್ತೆ. ನಾನು ಅವನ ಮೇಲೆ ಏಕೆ ಕೋಪಮಾಡಿಕೊಳ್ಳಲಿ? ಕಾವೇರಿಯ ಮೇಲೂ ನಾನೇಕೆ ದ್ವೇಷ ತಾಳಲಿ? ಮುಖ್ಯವಾಗಿ ಏನು! ಸರೋಜಳ ಅದೃಷ್ಟ ಹೀನ ಅದೃಷ್ಟ! ಅವಳನ್ನು

ಕರೆಯಿರಿ. ಅವಳಿಗೇನು ಬರೆದಿದ್ದಾನೆಯೋ ಕೇಳೋಣ. ಅವಳ ಅಭಿಪ್ರಾಯ ಏನಿದೆಯೋ ತಿಳಿಯೋಣ.'

ಸರೋಜ ತನ್ನ ಕೊಟಡಿಯಲ್ಲಿ ಸೀತಾರಾಮುವಿನ ಕಾಗದವನ್ನು ಒಡೆದು ನೋಡಿಕೊಂಡು, ಅದನ್ನು ಮೇಜಿನಮೇಲಿಟ್ಟು ಚಿಂತಾಪರವಶಳಾಗಿದ್ದಳು. ಕೆಲವು ನಿಮಿಷಗಳಮೇಲೆ ಅವನ ಹಿಂದಿನ ಎರಡು ಕಾಗದಗಳನ್ನು ತನ್ನ ಟ್ರಂಕಿನಿಂದ ತೆಗೆದು, ಅವುಗಳನ್ನು ಮತ್ತೆ ಓದಿ, ಮೂರು ಕಾಗದಗಳನ್ನೂ ಜೋಡಿಸಿ ಕೈಯಲ್ಲಿ ಹಿಡಿದುಕೊಂಡಳು. ಎರಡು ನಿಟ್ಟುಸಿರು ಅವಳ ಬಾಯಿಂದ ಹೊರಟಿತು; ನಾಲ್ಕು ಹನಿ ನೀರು ಕಣ್ಣುಗಳಿಂದ ಉರುಳಿತು. ಕುರ್ಚಿಯಿಂದ ಎದ್ದು ಆ ಮೂರು ಕಾಗದಗಳನ್ನೂ ಟ್ರಂಕಿನಲ್ಲಿಟ್ಟು ಬೀಗಹಾಕಿಬಿಟ್ಟಳು. ಪುನಃ ಕುರ್ಚಿಯಮೇಲೆ ಕುಳಿತುಕೊಂಡು ಮೇಜಿನಮೇಲಿದ್ದ ವೈದ್ಯ ಗ್ರಂಥಗಳ ಸಾಲನ್ನು ಎವೆಯಿಕ್ಕದೆ ನೋಡುತ್ತಿದ್ದಳು. ಕೃಷ್ಣರಾಯರು ಕೊಟಡಿಯ ಬಾಗಿಲನ್ನು ತೆರೆಯುತ್ತಲೂ ಅವಳ ಯೋಚನಾಪರಂಪರೆಗೆ ಭಂಗವಾಗಿ, ಅವಳು ತಟ್ಟನೆ ಎದ್ದುನಿಂತುಕೊಂಡಳು.

'ಅಮ್ಮ ಸರೋಜ! ನಿನ್ನ ತಾಯಿ ಕರೆಯುತ್ತಾಳೆ ಬಾರಮ್ಮ! ಬಹಳವಾಗಿ ಯೋಚನೆ ಮಾಡುತ್ತಿದ್ದೆಯಲ್ಲ. ಶ್ರೀನಿವಾಸಪುರಕ್ಕೆ ಹೋಗುವ ಯೋಚನೆ ಬಂತೇ?' ಎಂದು ಅವರು ಕೇಳಿದರು.

ಸರೋಜ ಉತ್ತರವನ್ನೇನೂ ಕೊಡದೆ ತಂದೆಯೊಡನೆ ಹೊರಟು ಬಂದಳು. ತುಳಸಾಬಾಯಿ ಮಗಳನ್ನು ಪಕ್ಕದಲ್ಲಿ ಕುಳ್ಳಿರಿಸಿಕೊಂಡು ಮುಂಗೂದಲುಗಳನ್ನು ನೇವರಿಸುತ್ತ, 'ನೀನು ಬಹಳ ಬಡವಾಗಿ ಹೋಗಿದ್ದೀಯೆ. ಓದನ್ನು ಕಡಮೆಮಾಡು ಎಂದರೆ, ನನ್ನ ಮಾತು ಕೇಳುವುದಿಲ್ಲ. ನಿನ್ನ ವ್ರತ, ಕಟ್ಟುನಿಟ್ಟು ಜೀವನ, ಬಿಡು ಎಂದರೆ ಬಿಡುವುದಿಲ್ಲ. ಏಕೆ ಹೀಗೆ ಮಾಡುತ್ತೀಯೋ ಅಮ್ಮ? ನಿನ್ನ ವ್ರತ ನೋಡಿ ವರ ಕೊಡೋ ದೇವರಿಲ್ಲ; ಬಡವಾಗಿದ್ದೀಯಲ್ಲ ಎಂದು ನಿನ್ನನ್ನು ಪ್ರೀತಿಯಿಂದ ಆದರಿಸೋ ಗಂಡನಿಲ್ಲ. ಹೆಂಗಸಿಗೆ ತಂದೆ ತಾಯಿ ಅಣ್ಣ ತಮ್ಮ ಯಾರಿದ್ದರೇನು? ಗಂಡ ಎಂಬುವ ಆ ವಸ್ತು ಆದರಣೆ ಮಾಡಿದರೆ ಆಗುವ ಸಂತೋಷ ಮತ್ತೆ ಯಾರು ಮಾಡಿದರೂ ಆಗುವುದಿಲ್ಲ. ಹೆಂಗಸಿನ

ಜನ್ಮವೇ ಹಾಗೆ. ನಿನ್ನ ಗಂಡ ಏನೆಂದು ಬರೆದಿದ್ದಾನೆ? ಅವನಿಗೂ ಆ ಎರಡನೆಯ ಮದುವೆಯಿಂದ ಏನೊಂದು ಸುಖವೂ ಇದ್ದಹಾಗೆ ಕಾಣಿಸುವುದಿಲ್ಲ. ನಿನ್ನಲ್ಲೇ ಅವನ ಪ್ರಾಣಗಳೆಲ್ಲ ಇರುವ ಹಾಗೆ ತೋರುತ್ತದೆ. ಏನು ಹೇಳುತ್ತೀಯೆ ಸರೋಜ? ಶ್ರೀನಿವಾಸಪುರಕ್ಕೆ ಹೋಗಿಬರೋಣ ಎಂದು ಮನಸ್ಸಿದೆಯೆ?' ಎಂದು ಕೇಳಿದಳು.

'ನೀನೂ ಅಪ್ಪ ಏನು ಆಲೋಚನೆ ಮಾಡಿದ್ದೀರಿ?'

'ನಾವೇನು ಯೋಚನೆಮಾಡೋಣ? ಮುಖ್ಯವಾಗಿ ಹೋಗಬೇಕಾದವಳು ನೀನು. ನಿನ್ನ ಜತೆಯಲ್ಲಿ ಯಾರಾದರೊಬ್ಬರು ಬರಬೇಕು. ನನಗೆ ಇನ್ನೇನೂ ತೋರುವುದಿಲ್ಲಮ್ಮ. ನಿನ್ನ ತಂದೆಯನ್ನು ಬೇಕಾದರೆ ಕೇಳಿ ನೋಡು.'

'ಏನಪ್ಪ! ನೀನೇನು ಹೇಳುತ್ತೀಯೆ?

'ಅಮ್ಮ! ಸೀತಾರಾಮು ಏನೇ ಅಪರಾಧ ಮಾಡಿರಲಿ, ಅವನು ನನ್ನ ಸ್ನೇಹಿತನಾಗಿದ್ದ ಶ್ರೀನಿವಾಸರಾಯನ ಮಗ ಮಗುವಾಗಿದ್ದಾಗ ನಾನೂ ಅವನನ್ನು ಎತ್ತಿ ಆಡಿಸಿದ್ದೇನೆ. ಎರಡನೆಯದಾಗಿ, ಅವನು ನನ್ನ ಅಳಿಯ, ನಿನ್ನ ಗಂಡ! ನಿನ್ನ ಸುಖ ಸಂತೋಷ ಅವನ ಅಧೀನ. ನಿನ್ನನ್ನು ನೋಡಿ ಅವನ ತಪ್ಪುಗಳನ್ನೆಲ್ಲ ಮನ್ನಿಸಬೇಕು. ಯಾವಾಗಲೂ ಕ್ಷಮೆ ತೋರುವುದು ಒಳ್ಳೆಯದು. ಇನ್ನು ಸೀತಾರಾಮುವಿನ ವಿಷಯದಲ್ಲಿ ನನಗೆ ಹೆಚ್ಚಾಗಿ ಏಕೆ ಹೇಳಬೇಕು? ಆಲೋಚನೆ ಮಾಡಿ ನೋಡಮ್ಮ. ನಿನ್ನ ಇಷ್ಟಕ್ಕೆ ವಿರುದ್ಧವಾಗಿ ನಿನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗಬೇಕು ಎನ್ನುವ ಅಭಿಪ್ರಾಯ ನಿನ್ನ ತಾಯಿಗೂ ಇಲ್ಲ, ನನಗೂ ಇಲ್ಲ.'

'ನೀನು ಹೇಳುವುದು ಸರಿಯಪ್ಪ! ನನಗೂ ಅವರು ಕಾಗದ ಬರೆದಿದ್ದಾರೆ . . . .'

ಮುಂದೆ ಮಾತು ಹೊರಡಲಿಲ್ಲ; ಕಂಠ ಬಿಗಿಯಿತು, ಕಣ್ಣೀರು ಉಕ್ಕಿತು. ಸರೋಜ ತನ್ನ ತಾಯಿಯ ಎದೆಯಮೇಲೆ ಮುಖವಿಟ್ಟುಕೊಂಡು ಅಳುತ್ತಿದ್ದಳು. ತುಳಸಾಬಾಯಿ ಮಗಳನ್ನು ಅಪ್ಪಿಕೊಂಡು 'ಸಮಾಧಾನ ಮಾಡಿಕೊಳ್ಳಮ್ಮ! ಸಮಾಧಾನ ಮಾಡಿಕೋ. ನಿನಗೆ

ಸಂಕಟವೇ. ನಿನ್ನನ್ನು ನೋಡಿ ನಮಗೂ ಸಂಕಟವೇ! ಏನು ಮಾಡು ವುದು? ನಿನ್ನ ಅದೃಷ್ಟ ಹೀನ ಅದೃಷ್ಟ! ಈಗ ಸುಕನ್ಯೆ ನಗುತಾ ನಲೀತಾ ಗಂಡನ ಮನೆಯಲ್ಲಿಲ್ಲವೇ! ನೀನು ಆ ಪುಣ್ಯ ಕೇಳಿಕೊಂಡು ಬರಲಿಲ್ಲ. ಸಮಾಧಾನ ಮಾಡಿಕೋ ಸರೋಜ!' ಎಂದು ಕುರುಳನ್ನು ತಿದ್ದುತ್ತಿದ್ದಳು.

ಸರೋಜ ಸ್ವಲ್ಪ ಹೊತ್ತಿನಮೇಲೆ ಎದ್ದು ಕುಳಿತು, 'ನಾನು ಈಗ ಎಲ್ಲಿಗೂ ಹೋಗುವುದಿಲ್ಲಪ್ಪ! ನನ್ನ ದುಃಖ ನನ್ನ ಸಂಕಟ ಇನ್ನೂ ಆರಿಲ್ಲ. ಅವರಲ್ಲಿ ಅಂಥ ಪ್ರೇಮ . . . . . ಅಂಥ ಪ್ರೇಮ ಇಟ್ಟಿದ್ದೆ!' ಎಂದು ಹೇಳುತ್ತ ಮತ್ತೆ ಅಳುವುದಕ್ಕೆ ತೊಡಗಿದಳು. ಕೃಷ್ಣರಾಯರ ಕಣ್ಣುಗಳ ಲ್ಲಿಯೂ ನೀರು ಉಕ್ಕಿತು.

'ನನಗೆ ಎಲ್ಲಿಗೆ ಹೋಗುವುದಕ್ಕೂ ಮನಸ್ಸಿಲ್ಲಪ್ಪ! ಓದುವುದನ್ನು ಕಡಮೆಮಾಡು ಎಂದು ಅಮ್ಮ ಹೇಳುತ್ತಾಳೆ. ನನ್ನ ದುಃಖ ಮರೆಯುವು ದಕ್ಕೆ ನನಗೆ ಅದೊಂದೇ ಮಾರ್ಗ. ಅಣ್ಣ ಮೆಡಿಕಲ್ ಕಾಲೇಜಿಗೆ ನನ್ನನ್ನು ಸೇರಿಸಿ ಪುಣ್ಯ ಕಟ್ಟಿಕೊಂಡ. ಒಂದು ಕ್ಷಣವೂ ವಿರಾಮವಿಲ್ಲದೆ ಕೆಲಸ ಓದು ಇರುತ್ತೆ. ಬೇರೆ ಯೋಚನೆಗಳಿಗೆ ಅವಕಾಶವೇ ಇರುವು ದಿಲ್ಲ. ಆದ್ದರಿಂದ ನಾನೂ ನಿಮ್ಮ ಕಣ್ಣೆದುರಿಗೆ ಬದುಕಿದ್ದೇನೆ. ನನ್ನ ಮಗು ಹೋಗಿಬಿಟ್ಟಿತಲ್ಲ! ಆ ವ್ಯಸನ ಇನ್ನೂ ಇದೆ. ನಾನು ಡಾಕ್ಟರ್ ಪರೀಕ್ಷೆ ಮುಗಿಸಲೇ ಬೇಕು ಎಂದು ಸಂಕಲ್ಪ ಮಾಡಿದ್ದೇನೆ. ಆಯಿತು ನಾಲ್ಕು ವರ್ಷ. ಇನ್ನೊಂದು ವರ್ಷ ತಾನೆ ಉಳಿದಿರುವುದು.'

ಶ್ರೀನಿವಾಸಪುರಕ್ಕೆ ಹೋಗುವುದು ತಮ್ಮ ಮಗಳಿಗೆ ಇಷ್ಟವಿಲ್ಲ ಎಂದು ತಿಳಿದಮೇಲೆ ಮುಂದೆ ಏನು ಮಾಡಬೇಕು? ಎಂಬುವ ಸಮಸ್ಯೆ ಎದ್ದುಕುಳಿತುಕೊಂಡಿತು. ಕಡೆಗೆ ಒಂದು ಕಾಗದವನ್ನು ಬರೆದು ಹಾಕೋಣ, ವಧೂವರರ ಉಡುಗೊರೆಗಳಿಗೆ ಏನಾದರೂ ಹಣ ಕೊಟ್ಟು ಕಳಿಸೋಣ ಎಂದು ತೀರ್ಮಾನಿಸಿದರು. ಸರೋಜ, 'ಅಪ್ಪ! ನೀನು ಕಾಗದ ಬರೆಯುವ ಹಾಗಿದ್ದರೆ—ಸರೋಜ ಅತ್ತೆಯವರ ಪಾದಕಮಲ ಗಳಿಗೆ ನಮಸ್ಕಾರ ಮಾಡುತ್ತಾಳೆ, ಅವರ ಆಶೀರ್ವಾದವನ್ನು ಬೇಡು ತ್ತಾಳೆ ಎಂದು ಒಂದು ಪಂಕ್ತಿ ಸೇರಿಸಿ ಬರೆ. ಹೆಚ್ಚಾಗಿ ನನ್ನ ವಿಚಾರ

ಏನನ್ನೂ ಬರೆಯ ಬೇಡ' ಎಂದು ಹೇಳಿ ತನ್ನ ಕೊಟಡಿಗೆ ಹೊರಟು ಹೋದಳು.

ಕೃಷ್ಣರಾಯರ ಕಾಗದ ಶ್ರೀನಿವಾಸಪುರಕ್ಕೆ ಬಂತು. 'ಮದುವೆಗಳು ನಿಷ್ಕರ್ಷೆಯಾಗಿರುವುದನ್ನು ಕೇಳಿ ಸಂತೋಷವಾಯಿತು. ನಾವು ಈಗ ಶ್ರೀನಿವಾಸಪುರಕ್ಕೆ ಬರುವ ಸ್ಥಿತಿಯಲ್ಲಿಲ್ಲ. ಮದುವೆಗಳು ನಿರ್ವಿಘ್ನವಾಗಿ ನೆರವೇರಲಿ. ದೇವರು ವಧೂವರರಿಗೆ ಸಮಸ್ತ ಸನ್ಮಂಗಳಗಳನ್ನೂ ಕರುಣಿಸಲಿ. ವಧೂವರರಿಗೆ ಆಶೀರ್ವಾದ ಮಾಡಿ ಐವತ್ತು ರೂಪಾಯಿಗಳನ್ನು ಮನಿಯಾರ್ಡರ್ ಮೂಲಕ ಕಳಿಸಿದ್ದೇನೆ. ಪ್ರತಿ ವಧುವಿಗೂ ಹದಿನೈದು ರೂಪಾಯಿ, ಪ್ರತಿ ವರನಿಗೂ ಹತ್ತು ರೂಪಾಯಿಗಳಂತೆ ಓದಿಸುವುದು. ನನ್ನ ಸ್ನೇಹಿತ ಶ್ರೀನಿವಾಸರಾವನ್ನು ನಿತ್ಯವೂ ನೆನಸಿಕೊಳ್ಳುತ್ತಿದೇನೆ ಎಂದು ನಿನ್ನ ತಾಯಿಗೆ ತಿಳಿಸುವುದು. ಸರೋಜ,—ಅತ್ತೆಯವರ ಪಾದಕಮಲಗಳಿಗೆ ನಮಸ್ಕಾರ ಮಾಡುತ್ತಿದೇನೆ, ಅವರ ಆಶೀರ್ವಾದ ಬೇಡುತ್ತಿದೇನೆ ಎಂದು ತಿಳಿಸುತ್ತಾಳೆ. ಅದನ್ನು ನಿನ್ನ ತಾಯಿಗೆ ಹೇಳುವುದು' ಎಂಬುದು ಮುಖ್ಯವಾದ ಒಕ್ಕಣೆಯಾಗಿತ್ತು. ಹಣವೂ ಮನಿಯಾರ್ಡರ್ ಮೂಲಕ ಸೀತಾರಾಮುವಿನ ಕೈಸೇರಿತು. ಅವನು ತನ್ನ ತಾಯಿಗೆ ಎಲ್ಲವನ್ನೂ ವಿವರಿಸಿದನು. ಕಾವೇರಮ್ಮ ಎಲ್ಲವನ್ನೂ ಕೇಳಿಕೊಂಡು, 'ಅಪ್ಪ ಸೀತಾರಾಮು! ಕೃಷ್ಣರಾಯರು ಘನವಾದ ರೀತಿಯಲ್ಲಿ ನಡೆದುಕೊಂಡರು. ಉಪಾಯವಾಗಿ ನನಗೂ ಛೀಮಾರಿ ಮಾಡಿದರು. ಅವರು ಬರುವುದಿಲ್ಲ ಎನ್ನುವುದನ್ನು ನಿರೀಕ್ಷಿಸಿಯೇ ಇದ್ದೆ. ಜವಾಬು ಕೊಟ್ಟಾರೋ ಇಲ್ಲವೋ ಎಂಬ ಸಂದೇಹವಿತ್ತು. ಸಂದೇಹ ನಿವಾರಣೆ ಆಯಿತು' ಎಂದಳು.

'ಸರೋಜ ಹೇಳಿರುವುದನ್ನು ಗಮನಿಸಿದೆಯಾ?'

'ಗಮನಿಸದೆ ಏನಪ್ಪ? ಅವಳ ಸಂಕಟ ಅವಳು ಹೇಳಿಕೊಂಡಿದ್ದಾಳೆ. ಇರಲಿ, ಈಗ ಆ ಮಾತೆಲ್ಲ ಬೇಡ. ಸದ್ಯಃ ಮದುವೆಗಳು ನಡೆಯಲಿ. ನಿನ್ನ ತಂಗಿಯರಿಬ್ಬರ ಕೊರಲಿಗೂ ಮೂರು ಮೂರು ಗಂಟು ಬೀಳಲಿ. ಆಮೇಲೆ ಯೋಚನೆ ಮಾಡೋಣ. ಈಗ ಮದುವೆಗೆ

ಬಂಧು ಬಳಗ ಸೇರಿದರೆ, ನಾನು ಮುಖ ತೋರಿಸುವ ಹಾಗಿಲ್ಲ ಎಂಬುದೊಂದು ದೊಡ್ಡ ವ್ಯಥೆ ನನಗೆ.'

'ಅದೇಕಮ್ಮ? ಮದುವೆಗಳಿಗೆ ಎಲ್ಲ ಏರ್ಪಾಟುಗಳೂ ಚೆನ್ನಾಗಿ ನಡದಿವೆಯಲ್ಲ!'

'ಸೀತಾರಾಮು! ನೀನು ಬುದ್ಧಿವಂತ ಎಂದೇ ತಿಳಿದಿದ್ದೇನಪ್ಪ! ಆದರೂ ನಿನಗೆ ಇಷ್ಟು ಮಾತ್ರ ತೋರದೆ ಇರುವುದು ಆಶ್ಚರ್ಯ!'

'ಅದೇನು? ಹೇಳಿಬಿಡು. ಏನಾದರೂ ಕೊರತೆ ಇದ್ದರೆ ಪರಿಹಾರ ಮಾಡುತ್ತೇನೆ.'

'ನಾಳೆ ಧಾರೆಯೆರೆಯುವುದಕ್ಕೆ, ಹಸೆಯಮೇಲೆ ಕುಳಿತುಕೊಳ್ಳುವುದಕ್ಕೆ ನಿನ್ನ ಜತೆಯಲ್ಲಿ ಪದ್ಮ ಅಲ್ಲವೇನಪ್ಪ ಕುಳಿತುಕೊಳ್ಳುವುದು? ನಿನಗೆ ಎರಡನೆಯ ಮದುವೆ ಆಗಿರುವುದು ನಮ್ಮ ಬಂಧುಗಳಿಗೇನೆ ಅನೇಕರಿಗೆ ಗೊತ್ತಿಲ್ಲ. ಮದುವೆ ಹಳ್ಳಿಯಲ್ಲಿ ನಡೆಯಿತು. ನಾವು ಪ್ರಕಟಿಸಲಿಲ್ಲ, ಅವರೂ ಪ್ರಕಟಿಸಲಿಲ್ಲ. ಲಗ್ನಪತ್ರಿಕೆಗಳನ್ನು ಯಾರಿಗೂ ಕಳಿಸಲಿಲ್ಲ. ಏನೋ ಗಾಳಿ ವರ್ತಮಾನ ಒಬ್ಬಿಬ್ಬರಿಗೆ ಮುಟ್ಟಿದ್ದರೆ ಮುಟ್ಟಿರಬಹುದು. ಈಗ ಮದುವೆಗೆ ಬಂದವರು ಸರೋಜ ಎಲ್ಲಿ? ಇವಳಾರು ಈ ಹುಡುಗಿ? ಯಾವಾಗ ಎರಡನೆಯ ಮದುವೆ ಆಯಿತು? ನಮಗೆ ಸುದ್ದಿಯೇ ತಿಳಿಯದಲ್ಲ! ಆ ರತ್ನದಂತಹ ಹುಡುಗಿ ಸರೋಜಳನ್ನು ತೊರೆಯಲು ಕಾರಣವೇನು? ಎಂದು ಮುಂತಾಗಿ ಆಡದೇ ಹೋಗುತ್ತಾರೆಯೇ? ನನ್ನನ್ನ ಕೇಳದೇ ಹೋಗುತ್ತಾರೆಯೇ? ನಾನೇನು ಜವಾಬು ಹೇಳಲಿ ಸೀತಾರಾಮು? ಬರುವವರು ನಿನಗೆ ಒಂದೋ ಎರಡೋ ಮಕ್ಕಳಾಗಿರಬಹುದು, ಮಕ್ಕಳು ಹೇಗಿವೆಯೋ? ಮನ್ಮಥನಂಥ ಗಂಡ, ರತಿಯಂಥ ಹೆಂಡತಿ; ಮಕ್ಕಳಿಗೇನು! ಒಳ್ಳೆಯ ಚೆಲುವಿನ ಕಣಿಗಳು! ಎಂದು ನಿರೀಕ್ಷಿಸಿರುತ್ತಾರಲ್ಲ. ಬಂದಾಗ ಕೇಳುತ್ತಾರಲ್ಲ. ಮದುವೆಗೆ ಬೆಟ್ಟಹಲಸೂರಿನ ಶೀನಪ್ಪ, ಅವನ ಬಳಗ ಬಂದು ಸೇರುತ್ತಾರೆ; ಕೃಷ್ಣರಾಯರು ತುಳಸಾಬಾಯಿ ನಾಗರಾಜ ಕಾಣಿಸುವುದಿಲ್ಲ. ನೋಡುವವರ ಕಣ್ಣು ಕುರುಡೇನಪ್ಪ ಸೀತಾರಾಮು?

ನಾನೇನು ಜವಾಬುಕೊಡಲಿ? ಅವರಿಗೆ ನಾನು ಮುಖ ಹೇಗೆ ತೋರಿಸಲಿ?'

ತಾಯಿಗೆ ತೃಪ್ತಿಯಾಗುವಂತೆ ಮದುವೆಯ ಏರ್ಪಾಟುಗಳನ್ನು ಮಾಡುತ್ತಿದ್ದ ಗಡಿಬಿಡಿಯಲ್ಲಿ ಸೀತಾರಾಮುವಿಗೆ ಆ ತಾಯಿ ಎತ್ತಿದ ಸಂಕಟದ ಪ್ರಶ್ನೆ ಹೊಳಿದೇ ಇರಲಿಲ್ಲ. ಈ ಮದುವೆಯ ಏರ್ಪಾಟು ಗಳನ್ನು ಏಕೆ ತಾನೆ ಕೈಕೊಂಡೆನೋ ಎಂಬುವಷ್ಟು ಅವನ ಮನಸ್ಸಿಗೆ ಮುಜುಗರವಾಯಿತು. ತಾಯಿಯನ್ನು ಕೇಳುವಂತೆಯೇ ತನ್ನನ್ನೂ ನೆಂಟರು ಕೇಳುತ್ತಾರಲ್ಲ. ಆದರಲ್ಲಿಯೂ ಮದುವೆಯಾದವನು ತಾನು. ಸರೋಜಳನ್ನು ಏಕೆ ಬಿಟ್ಟುಬಿಟ್ಟೆ? ಎರಡನೆಯ ಮದುವೆಯನ್ನು ಏತಕ್ಕೆ ಮಾಡಿಕೊಂಡೆ? ಎಂದು ಮುಂತಾಗಿ ಕೇಳುವವರಿಗೆ ಏನು ಜವಾಬು ನಾನು ಕೊಡಲಿ? ಎಂದು ಸೀತಾರಾಮು ಶೋಕಭರಿತನಾದನು.

'ಹೌದಮ್ಮ! ನೀನು ಹೇಳಿದ್ದು ಸರಿ. ನನ್ನನ್ನೂ ಕೇಳುತ್ತಾರಲ್ಲ. ಅಪಮಾನವನ್ನು ಅನುಭವಿಸಬೇಕು; ಅನುಭವಿಸೋಣ. ಈಗ ಪೇಚಾಡಿಕೊಂಡು ಫಲವೇನು?' ಎಂದು ಅವನು ಹೇಳಿದನು.

ಮದುವೆಗಳಿಗೆ ನೆಂಟರಿಷ್ಟರು ತಂಡ ತಂಡವಾಗಿ ಬರುತ್ತಿದ್ದರು. ಅವರಿಗೆಲ್ಲ ತಕ್ಕ ಬೀಡಾರಗಳನ್ನು ಸೀತಾರಾಮು ಒದಗಿಸಿದ್ದನು. ಜನ ಬಂದಬಂದ ಹಾಗೆಲ್ಲ ಮಾತುಗಳೂ ವಿಧವಿಧವಾಗಿ ಹೊರಡುತ್ತಿದ್ದುವು. ಮದುವೆಗಳಲ್ಲಿ ಬೀಗರ ಬಿಂಕಗಳನ್ನೂ ಅಳಿಯಂದಿರ ಕೊಂಕುಗಳನ್ನೂ ಹೇಗೋ ಸಹಿಸಿಕೊಳ್ಳಬಹುದಾಗಿತ್ತು. ಆದರೆ ಸೀತಾರಾಮು ಸರೋಜ—ಇವರ ಸಂಬಂಧವಾಗಿ ಬರುತ್ತಿದ್ದ ಅನ್ವೇಷಣಾತ್ಮಕವಾದ ಪ್ರಶ್ನೆಗಳನ್ನು ಸಹಿಸಿಕೊಳ್ಳುವುದು ಅಸಾಧ್ಯವಾಗಿತ್ತು. 'ಮದುವೆ ಮನೆಗೆ ಬಂದು ಅದನ್ನು ಹೇಗಮ್ಮ ಕೇಳುವುದು?' ಎಂದು ಒಂದು ಕಡೆ. 'ಮೊದಲನೆಯ ಹೆಂಡತಿ ಇದ್ದಾಳಮ್ಮ! ಅವಳು—ನಿನ್ನೊಡನೆ ಸಂಸಾರ ಮಾಡುವುದಿಲ್ಲ ಎಂದು ಹೇಳಿ ಹೊರಟುಹೋದಳಂತೆ. ಆಮೇಲೆ ಈ ಹುಡುಗಿಯೊಡನೆ ಮದುವೆ ಆಯಿತಂತೆ' ಎಂದು ಇನ್ನೊಂದು ಕಡೆ. 'ಕಾವೇರಮ್ಮ ಎರಡು ದಿನವೂ ಆ ಸೊಸೆಯನ್ನು ಬಾಳಗೊಡಿಸಲಿಲ್ಲ. ಹುರಿದುಕೊಂಡು ತಿಂದಳು. ಆ ಸೊಸೆಯನ್ನು—ನೀನು ಗಂಡನ

ಕೊಟಡಿಗೆ ಹೋಗಬೇಡ ಎಂದು ಕೂಡ ನಿರ್ಬಂಧ ಮಾಡಿದಳು' ಎಂದು ಮತ್ತೊಂದು ಕಡೆ. ಹೀಗೆಲ್ಲ ಅವರವರಲ್ಲೇ ಚರ್ಚೆಗಳಾಗಿ ಒಬ್ಬಿಬ್ಬರು ಧೈರ್ಯಮಾಡಿ ಕಾವೇರಮ್ಮನನ್ನು, 'ಇದೇನು ಕಾವೇರಮ್ಮ? ಹೊಸ ಸೊಸೆ ಬಂದಹಾಗಿದೆಯಲ್ಲ. ಮೊದಲಿನ ಸೊಸೆಯನ್ನು ಏಕೆ ಕರಸಿ ಕೊಳ್ಳಲಿಲ್ಲ?' ಎಂದು ಕೇಳಿದರು. ಆಕೆ, 'ಏನೋ ಅಮ್ಮ! ನಮ್ಮ ಗೃಹಕೃತ್ಯದ ವಿಷಯ. ಅದೆಲ್ಲ ನಿಮಗೇಕೆ? ಮದುವೆಗಳಿಗೆ ಬಂದಿದ್ದೀರಿ. ಸಂತೋಷ. ನಮ್ಮ ಕೈಯಲ್ಲಾದ ಉಪಚಾರ ಮಾಡು ತ್ತೇವೆ. ಉಂಡು ಸುಖವಾಗಿದ್ದು ವಾಪಸುಹೋಗಿ' ಎಂದು ಹೇಳಿ ಬಿಟ್ಟಳು. ಅತ್ತ ಸೀತಾರಾಮುವನ್ನೂ ಕೆಲವರು ಕೇಳಿದರು. ಅವನು, 'ಏನೋ ನನ್ನಿಷ್ಟ. ಮದುವೆ ಮಾಡಿಕೊಂಡೆ. ಇಬ್ಬರು ಹೆಂಡತಿಯರು ಏಕಿರಬಾರದು?' ಎಂದು ಹೇಳಿದನು.

ಮದುವೆಗಳಿಗೆ ತುಮಕೂರಿನಿಂದ ರಾಮಣ್ಣನೂ ಬಂದಿದ್ದನು. ಆದರೆ ಸೀತಾರಾಮುವಿನೊಡನೆ ಹೆಚ್ಚು ಮಾತುಗಳಿಗೆ ಅವಕಾಶವಾಗ ಲಿಲ್ಲ. ಸರೋಜಳ ಜಾತಕ ಒಳ್ಳೆಯದಲ್ಲ, ಅದರಿಂದ ಸೀತಾರಾಮು ವಿಗೆ ಕೆಡುಕಾಗುತ್ತೆ ಎಂದು ಶಂಕಿಸಿ ಕಾವೇರಮ್ಮ ಎರಡನೆಯ ಮದುವೆ ಮಾಡಿಸಿದಳು ಎಂದು ಸ್ಥೂಲವಾಗಿ ಅವನಿಗೆ ತಿಳಿಯಿತು. ಸೀತಾರಾಮು ತನ್ನ ವ್ರತದ ವಿಷಯವನ್ನು ಅವನಿಗೆ ತಿಳಿಸಲಿಲ್ಲ.

ಒಟ್ಟಿನಲ್ಲಿ ಮದುವೆ ಮನೆಯಲ್ಲಿ ಹೆಚ್ಚು ಸಂತೋಷ ಸಂಭ್ರಮ ಗಳೇನೂ ಇರಲಿಲ್ಲ. ಬಂದ ನೆಂಟರುಗಳೆಲ್ಲ ಬೇಗ ತೊಲಗಿ ಹೋದರೆ ಸಾಕು ಎಂದು ಕಾವೇರಮ್ಮನಿಗೂ ಸೀತಾರಾಮುವಿಗೂ ಅನ್ನಿಸುತ್ತಿತ್ತು. ಈ ಮದುವೆಗಳ ಪರಿಣಾಮ: ಸೀತಾರಾಮುವಿನ ಎರಡನೆಯ ಮದುವೆಯ ವಿಚಾರ, ಸರೋಜಳ ವಿಚಾರ ನಾನಾವಿಧವಾಗಿ ಬಂಧುಗಳಲ್ಲೆಲ್ಲ ಹರ ಡಿದ್ದು; ಕಾವೇರಮ್ಮನನ್ನೂ ಸೀತಾರಾಮುವನ್ನೂ ಎಲ್ಲರೂ ನಿಂದಿಸಿದ್ದು; ಅವರಿಬ್ಬರೂ ದುಃಖಿತರಾದದ್ದು.

## ೨೨. ಪ್ರೇಮ ಪುತ್ಥಳಿ ಪದ್ಮ !

ಮದುವೆಗಳೆಲ್ಲ ಮುಗಿದು ನೆಂಟರಿಷ್ಟರೆಲ್ಲ ಹೊರಟುಹೋಗಿ ಒಂದು ವಾರವಾಯಿತು. ಕಾವೇರಮ್ಮ ಮತ್ತು ಸೀತಾರಾಮುಗಳ ಮನಸ್ಸುಗಳು ಸಮಾಧಾನಕ್ಕೆ ಬಂದುವು. ಎರಡು ಹೆಣ್ಣುಮಕ್ಕಳ ಮದುವೆಗಳಾಗಿ ದೊಡ್ಡ ಜವಾಬ್ದಾರಿ ಇಳಿಯಿತು. ಇನ್ನುಳಿದವರೆಲ್ಲ ಗಂಡುಮಕ್ಕಳು. ಅವರಲ್ಲಿ ಎರಡನೆಯ ಮಗನಿಗೆ ಒಂದು ಮದುವೆ ಬೇಗ ಮಾಡಬೇಕು. ಅವನನ್ನು ತುಮಕೂರಿನಲ್ಲೇ ನಿಲ್ಲುವಹಾಗೆ ಮಾಡಬೇಕು. ಬರುವ ಸಂಬಳದ ಜತೆಗೆ ಮನೆಯ ಒಂದು ಭಾಗವನ್ನು ಬಾಡಿಗೆಗೆ ಕೊಟ್ಟುಕೊಂಡರೆ, ಅವನ ಸಂಸಾರ ಹೇಗೋ ನಡೆದುಹೋಗುತ್ತದೆ. ಮನೆಯನ್ನು ನೋಡಿಕೊಳ್ಳುತ್ತಿದ್ದ ಹಾಗೂ ಆಗುತ್ತದೆ. ಒಂದೇ ಕಡೆ ಜನ ಸೇರಿದಷ್ಟೂ ಸಂಸಾರ ನಿರ್ವಹಿಸುವುದು ಕಷ್ಟ; ಅವರು ಕಡಮೆಯಾದಷ್ಟೂ ನಿರ್ವಹಿಸುವುದು ಸುಲಭ. ಅವರವರು ಬೇರೆಬೇರೆಯಾಗಿದ್ದುಬಿಟ್ಟರೆ ಅಂಬಲಿಯೋ ಗಂಜಿಯೋ ಕುಡಿದುಕೊಂಡು ಸ್ವತಂತ್ರವಾಗಿ ಸಂತೋಷವಾಗಿದ್ದುಬಿಡುತ್ತಾರೆ. ಇನ್ನು ಮೂರು ತಿಂಗಳಿಗೆಲ್ಲ ಹೆಣ್ಣುಮಕ್ಕಳು ಗಂಡಂದಿರ ಮನೆಗಳಿಗೆ ಹೊರಟು ಹೋಗುತ್ತಾರೆ. ಸೀತಾರಾಮುವಿನ ಸಂಸಾರ ಹಾಳಿತಕ್ಕೆ ಬರುತ್ತದೆ—ಎಂದು ಮುಂತಾಗಿ ಕಾವೇರಮ್ಮ ಆಲೋಚಿಸುತ್ತಿದ್ದಳು. ಆಗ ಸೀತಾರಾಮು ಬಂದು,

'ನೋಡಿದೆಯಾ ಅಮ್ಮ! ಮೊದಲನೆಯ ಹೆಂಡತಿ ಬದುಕಿರುವಾಗ, ಅದರಲ್ಲಿಯೂ ಅವಳು ನಿರ್ದೋಷಿಯಾಗಿರುವಾಗ, ಬೇರೆ ಮದುವೆ ಮಾಡಿಕೊಂಡರೆ ಪಡಬೇಕಾದ ಭಂಗಗಳನ್ನು ನೋಡಿದೆಯಾ? ಬಂದ ನೆಂಟರಿಗೆ ಮದುವೆಯ ಊಟ ನೋಟಗಳ ಮೇಲೆ ಮನಸ್ಸೇ ಇರಲಿಲ್ಲ. ಎಲ್ಲ ನಮ್ಮ ಗೃಹಕೃತ್ಯದ ವಿಷಯ ಭೇದಿಸುವುದರಲ್ಲೇ ಅವರ ಮನಸ್ಸಿತ್ತು. ಅವರಿಗೆ ಏನು ಸಮಾಧಾನ ಹೇಳುವುದಕ್ಕೂ ನನಗೆ ತೋರಲಿಲ್ಲ' ಎಂದನು.

'ಅಪ್ಪಾ ಸೀತಾರಾಮು! ನಾವು ಸಮಾಧಾನ ಹೇಳಿದರೆ ಅವರು ತೃಪ್ತಿಪಟ್ಟುಕೊಂಡಾರೆಯೆ? ಅವರಿಗೆ ಬೇಕಾಗಿರುವುದು ನಮ್ಮ ಸುಖ

ದುಃಖ ಅಲ್ಲ; ಬರಿ ಆಕ್ಷೇಪಣೆ, ನಿಂದೆ. ಅವರೊಡನೆ ಪಂಚಾಯತಿಗೆ ಹೋಗುವುದೇ ಅವಿವೇಕ. ನಮ್ಮ ಅಂತರಂಗವನ್ನು ಹೊರ ಪಡಿಸುವುದಂತೂ ದೊಡ್ಡ ಅವಿವೇಕ. ಇರಲಿ, ಯಾವುದಕ್ಕೂ ಕಾಲ ಬರುತ್ತದೆ. ಮುಖ್ಯವಾಗಿ ಈಗ ನಾವು ಜನರ ಬಾಯಲ್ಲೆಲ್ಲ ಅಲೆಯು ಬೇಕು. ಪದ್ಮ ಒಳ್ಳೆಯ ಹುಡುಗಿ. ಬಂದ ಜನ ನನ್ನ ನಿನ್ನ ಕೇಳಿದ್ದಿರಲಿ. ಅವಳನ್ನು ಸಹ ಕೇಳಿದ್ದಾರೆ. ಆ ಹುಡುಗಿ ಏನಾದರೂ ಹೇಳಿಯಾಳೋ ಎಂದು ಸಂಚುಮಾಡಿದರಪ್ಪ!'

'ಅವಳು ಏನು ಹೇಳಿದಳಮ್ಮ? ಅರಿಯದ ಹುಡುಗಿಯೇ ಅವಳು!'

'ಈ ಮಾತುಗಳನ್ನೆಲ್ಲ ದೊಡ್ಡವರನ್ನ ಕೇಳಿ—ಎಂದು ಅವಳು ಹೇಳಿಬಿಟ್ಟಳಪ್ಪ!'

'ನೀನೇನಾದರೂ ಅವಳಿಗೆ ಹೇಳಿಕೊಟ್ಟಿದ್ದೆಯೇನಮ್ಮ?'

'ಇಲ್ಲಪ್ಪ! ನಾನೇನೂ ಹೇಳಿಕೊಡಲಿಲ್ಲ. ಆ ಹುಡುಗಿಯೇ ಬಂದು ಎಲ್ಲವನ್ನೂ ನನಗೆ ತಿಳಿಸಿದಳು. ನಾನು—ನೀನು ಜಾಣೆಯಮ್ಮ, ಹಾಗೆಯೇ ಉತ್ತರಕೊಡಬೇಕು ಎಂದು ಹೇಳಿದೆ.'

ಸೀತಾರಾಮುವಿಗೆ ಪದ್ಮಳ ವಿಷಯದಲ್ಲಿ ಹೃದಯಾಂತರಾಳದಿಂದ ಪ್ರೇಮದ ಬುಗ್ಗೆ ಚಿಮ್ಮಿತು. ಅವಳ ಸರಳತೆ, ಅವಳ ಸಹಜ ಮುಗ್ಧ ಸೌಂದರ್ಯ, ಅವಳ ವಿಧೇಯತೆ, ಅವಳ ಪರಿಶುದ್ಧಪ್ರೇಮ,—ಇವು ಒಂದೊಂದೂ ಅವನ ಹೃದಯವನ್ನು ಸೂರೆಗೊಂಡುವು. ಅವನ ಮುಖ ಭಾವದಲ್ಲಾದ ಮಾರ್ಪಾಟನ್ನು ಕಾವೇರಮ್ಮ ಗಮನಿಸಿದಳು.

'ಅಪ್ಪಾ ಸೀತಾರಾಮು! ಪದ್ಮಳನ್ನು ನೀನು ಆದರಿಸಬೇಕಪ್ಪ! ನಿನಗೆ ಇಬ್ಬರು ಹೆಂಡತಿಯರನ್ನು ಬ್ರಹ್ಮ ಗಂಟುಹಾಕಿರುವಾಗ ನೀನೇನು ಮಾಡುವುದಕ್ಕಾಗುತ್ತೆ? ಇವೆಲ್ಲ ಮನುಷ್ಯ ಯತ್ನವೇ? ಎಲ್ಲ ದೈವ ಸಂಕಲ್ಪ' ಎಂದು ಹೇಳಿದಳು.

'ಆಗಲಮ್ಮ, ಆಲೋಚನೆ ಮಾಡುತ್ತೇನೆ. ಅದಕ್ಕೂ ಕಾಲ ಬರುತ್ತೆ'

ಎಂದು ಹೇಳಿ ಸೀತಾರಾಮು ಕೊಟಡಿಗೆ ಹೊರಟುಹೋದನು.

ತನ್ನ ಜಾತಕದಲ್ಲಿ 'ಎರಡನೆಯ ಕಂಕಣಪ್ರಾಪ್ತಿ ಇದೆ' ಎಂದು ಹೇಳಿರುವುದರ ಅಭಿಪ್ರಾಯವೇನು? ಮೊದಲನೆಯ ಹೆಂಡತಿ ತೀರಿಕೊಳ್ಳುತ್ತಾಳೆ, ಆಮೇಲೆ ಎರಡನೆಯ ಹೆಂಡತಿ ಬರುತ್ತಾಳೆ ಎಂದು ಅರ್ಥವೇ? ಅಥವಾ ಇಬ್ಬರು ಹೆಂಡತಿಯರೂ ಸಜೀವರಾಗಿದ್ದು ತನ್ನೊಡನೆ ಸಂಸಾರ ಮಾಡುತ್ತಾರೆ ಎಂದು ಅರ್ಥವೇ? ಅಥವಾ ಮೊದಲನೆಯ ಹೆಂಡತಿ ಇದ್ದರೂ ತನ್ನೊಡನೆ ಬಾಳದೆ ಬೇರೆಯಾಗಿದ್ದು ತಾನು ಎರಡನೆಯ ಹೆಂಡತಿಯೊಡನೆ ಸಂಸಾರ ಮಾಡುವುದು ಎಂದು ಅರ್ಥವೇ? ಯಾವುದೂ ತಿಳಿಯಲಿಲ್ಲ. ಮೊದಲಿನಲ್ಲಿ ಸರೋಜಳ ಹೊರತು ಬೇರೆ ಯಾವ ಹೆಂಗಸನ್ನೂ ಪ್ರೀತಿಸುವುದಿಲ್ಲ, ಮುಟ್ಟುವುದಿಲ್ಲ ಎಂದು ನಾನು ಸಂಕಲ್ಪ ಮಾಡಿದ್ದೆ. ಪದ್ಮ ಬಂದ ಹೊಸತರಲ್ಲಿ ನನಗೆ ಅವಳಲ್ಲಿ ಪ್ರೀತಿಯೇ ಹುಟ್ಟಲಿಲ್ಲ; ಜತೆಗೆ ನಾನು ಸರೋಜಳಿಗೆ ಮಾಡಿದ ಅನ್ಯಾಯ ಮನಸ್ಸನ್ನು ಇರಿಯುತ್ತಿದ್ದುದರಿಂದ ಪದ್ಮಳನ್ನು ಕಂಡಾಗ ಮನಸ್ಸಿಗೆ ಜುಗುಪ್ಸೆಯಾಯಿತೇ ಹೊರತು ಅವಳು ಸಹ್ಯವಾಗಲಿಲ್ಲ. ಈಗ ಪದ್ಮಳ ಮೇಲೆ ಪ್ರೇಮೋದಯವಾಗಿದೆ. ಆ ದಿನವೇ—ಅವಳು ಬೆಟ್ಟಹಲಸೂರಿನಿಂದ ಹಿಂದಿರುಗಿದ ದಿನವೇ—ಅವಳಲ್ಲಿ ನನ್ನ ಮನಸ್ಸು ಅನುರಕ್ತವಾಯಿತು. ಈಗ ದಿನದಿನಕ್ಕೂ ಅದು ಬಲಗೊಳ್ಳುತ್ತಿದೆ. ನನ್ನ ಸಂಕಲ್ಪವೇ ಸಡಿಲವಾಗುತ್ತಿದೆ. ನಾನೇನು ಮಾಡಲಿ? ಸರೋಜ ನನ್ನೊಡನೆ ಸಂಸಾರ ಮಾಡಲು ಪುನಃ ಬರುವ ಸಂಭವವುಂಟೇ? ಅವಳು ನನ್ನ ಮೂರು ಕಾಗದಗಳಿಗೂ ಜವಾಬು ಕೊಟ್ಟಿಲ್ಲ. ಅವಳು ದೊಡ್ಡಮನಸ್ಸುಮಾಡಿ ನನ್ನನ್ನು ಕ್ಷಮಿಸಿ ನನ್ನ ಭಾಗಕ್ಕೆ ವಾಸವದತ್ತೆಯಾದರೆ ನಾನು ನಿಜವಾಗಿಯೂ ಭಾಗ್ಯಶಾಲಿ. ಆಗ ಪದ್ಮಳೂ ಸುಖಶಾಲಿಯಾಗುತ್ತಾಳೆ. ಮುಂದೆ ಇಬ್ಬರು ಹೆಂಡತಿಯರ ತೊಡಕು ಉದ್ಭವವಾದರೂ ನಾನು ಸಮಾನ ಪ್ರೇಮದಿಂದ ಇಬ್ಬರನ್ನೂ ನಡಸಿಕೊಂಡು ಮತ್ಸರ ಬೆಳೆಯದಂತೆ ನೋಡಿಕೊಳ್ಳುತ್ತೇನೆ. ನನ್ನ ಭವಿಷ್ಯ ಹೇಗಿದೆಯೋ ಕಾಣೆನಲ್ಲ—ಎಂದು ಚಿಂತಾಪರನಾಗಿ ಕುರ್ಚಿಯಲ್ಲಿ ಕುಳಿತಿದ್ದನು.

ಮೂರು ತಿಂಗಳೊಳಗಾಗಿಯೇ ಕಾವೇರಮ್ಮ ತನ್ನ ಹೆಣ್ಣುಮಕ್ಕಳನ್ನು ಅವರವರ ಗಂಡಂದಿರ ಮನೆಗಳಿಗೆ ಕಳಿಸಿಕೊಡಬೇಕಾಯಿತು. ಆಗ ತಾಯಿಯ ಸಂಕಟ ಸಹಜವಾಗಿಯೇ ಕಾಣಿಸಿಕೊಂಡು ಕಣ್ಣುಗಳಲ್ಲಿ ನೀರು ಹರಿಯಿತು. ಜತೆಯಲ್ಲಿಯೇ ತುಳಸಾಬಾಯಿಯ ಜ್ಞಾಪಕ ಬಂತು. ಆ ದಿವಸ ತುಳಸಾಬಾಯಿ ಕಣ್ಣೀರು ಹರಿಸುತ್ತ ಬಹು ದುಃಖದಿಂದ, 'ಕಾವೇರಮ್ಮ! ನೀವೂ ಹೆಣ್ಣುಮಕ್ಕಳನ್ನು ಹೆತ್ತಿದ್ದೀರಿ. ಈಗೇನೋ ಅವರಿಗೆ ಮದುವೆಯಿಲ್ಲ, ನಾಳೆ ಮದುವೆಯಾಗಿ ಗಂಡಂದಿರ ಮನೆಗಳಿಗೆ ಹೋಗುವುದಿಲ್ಲವೇ? ನನ್ನ ಸಂಕಟ ನನ್ನ ಕಣ್ಣೀರು ನಿಮ್ಮನ್ನು ತಟ್ಟದೆ ಬಿಡುತ್ತದೆಯೇ?' ಎಂದು ಹೇಳಿದ್ದು ಸ್ಮರಣೆಗೆ ಬಂತು. ಯಾವ ಅಳಿಯ ಏನು ನೆಪ ಹೇಳಿ ಬೇರೆ ಮದುವೆ ಮಾಡಿಕೊಳ್ಳುತ್ತಾನೋ! ಯಾವ ಅಳಿಯ ಏನು ಕೋಪಮಾಡಿಕೊಂಡು ಬೆನ್ನಮೇಲೆ ನಾಲ್ಕೇಟು ಬಿಗಿಯುತ್ತಾನೋ! ಯಾವ ಅಳಿಯ ದುರ್ಮಾರ್ಗಿಯಾಗಿ ನಿಮ್ಮ ಮಗಳನ್ನು ನೀವೇ ಇಟ್ಟುಕೊಳ್ಳಿ—ಎಂದು ಮನೆಯಲ್ಲಿ ದೂಡಿಬಿಟ್ಟು ಹೋಗುತ್ತಾನೋ—ಎಂಬ ಭಯಗಳೂ ಸಂಕಟಗಳೂ ಆಕೆಯನ್ನು ಕಾಡಿದುವು. ಹೇಗೋ ಕೊನೆಗೆ ಸಮಾಧಾನ ತಂದುಕೊಂಡು ಆ ಹೆಣ್ಣುಮಕ್ಕಳನ್ನು ಅವರ ಗಂಡಂದಿರ ಜತೆಯಲ್ಲಿ ಕಳಿಸಿಕೊಟ್ಟಳು. ಕೆಲವು ದಿವಸಗಳಲ್ಲಿಯೇ ಆಕೆ ವ್ಯಸನಗ್ರಸ್ತಳಾಗಿ ಸರಿಯಾಗಿ ಅನ್ನಾಹಾರವಿಲ್ಲದೆ ಬಡವಾಗಿ ಹೋದಳು.

ಪದ್ಮ ಒಂದು ಭಾನುವಾರ ಕಾವೇರಮ್ಮನ ಪಕ್ಕದಲ್ಲಿ ಕುಳಿತುಕೊಂಡು, 'ಅತ್ತೆ! ನೀವು ಬಡವಾಗಿ ಹೋಗಿದ್ದೀರಿ. ನಿಮ್ಮ ಆರೋಗ್ಯವೂ ಸರಿಯಾಗಿಲ್ಲ. ನಾಳೆಯಿಂದ ನಾನೇ ಮಡಿಯುಟ್ಟುಕೊಂಡು ಅಡಿಗೆ ಮಾಡಲೆ? ಅಮ್ಮ ನನಗೆ ಅಡಿಗೆ ಮಾಡುವುದನ್ನು ಹೇಳಿಕೊಟ್ಟಿದ್ದಾಳೆ' ಎಂದಳು.

'ಅಮ್ಮ! ನೀನು ಅಡಿಗೆ ಮಾಡಿದರೆ ನಾನು ಮಡಿ ಹೆಂಗಸು ಊಟಮಾಡುವುದಿಲ್ಲ. ಇನ್ನೂ ನೀನು ಹುಡುಗಿ. ನಿನಗೂ ಒಂದೆರಡು ಮಕ್ಕಳಾಗಿ ಆಮೇಲೆ ನೀನು ಮಡಿಯುಟ್ಟುಕೊಂಡು ಅಡಿಗೆ ಮಾಡಿದರೆ ನಾನು ಊಟ ಮಾಡಬಹುದು. ಈಗ ನೀನೇನಾದರೂ ಉಪ್ಪಿಟ್ಟನ್ನೊ

ಸಜ್ಜಿಗೆಯನ್ನೊ ಮಾಡಿದರೆ ಅದನ್ನು ಮಾತ್ರ ತೆಗೆದುಕೊಳ್ಳುತ್ತೇನೆ; ಅಷ್ಟೇ.'

'ನನಗೂ ಮಕ್ಕಳಾಗಬೇಕು ಎಂಬ ಆಶೆ ಇದೆಯಲ್ಲ! ಮಕ್ಕಳಾದ ಮೇಲೆ ನಿಮಗೂ ನಾನು ಅಡಿಗೆ ಮಾಡಬಹುದಲ್ಲ.'

'ಈಗ ನಿನ್ನ ಮೇಲೆ ನಿನ್ನ ಗಂಡನಿಗೆ ಅಕ್ಕರೆ ಬೆಳೆಯುತ್ತ ಇದೆಯಮ್ಮ! ಚಿಂತೆಪಡಬೇಡ. ನಿನಗೆ ಮಕ್ಕಳಾಗಬೇಕು ಎಂದು ನನಗೂ ಆಶೆಯಿದೆ ಪದ್ಮ!'

'ಅವರು ನೆಲದ ಮೇಲೆಯೇ ಬೇರೆ ಮಲಗುವುದಕ್ಕೆ ಕಾರಣವೇನು ಅತ್ತೆ?'

'ಮೊನ್ನೆ ಮದುವೆಗಳಾದಾಗ ಜನ ನಿನ್ನನ್ನ ಕೇಳಿದರಲ್ಲ. ನೀನು ಅವನಿಗೆ ಎರಡನೆಯ ಹೆಂಡತಿ. ಮೊದಲನೆಯ ಹೆಂಡತಿ ಇದ್ದಾಳೆ. ಅವಳ ಚಿಂತೆ ನಿನ್ನ ಗಂಡನಿಗೆ ಬಹಳವಾಗಿದೆಯಮ್ಮ! ಇರಬೇಕಾದ್ದೇ! ಹೆಂಡತಿ ಎಂದರೆ ಗಂಡನಿಗೆ ಅಕ್ಕರೆ ಇರಬೇಡವೇ?'

'ಅಕ್ಕ ಹೇಗಿದ್ದಾಳೆ ಅತ್ತೆ?'

'ಅವಳು ಚೆನ್ನಾಗಿದ್ದಾಳೆ. ದುಂಡನೆಯ ಮುಖ, ಉದ್ದ ಕೂದಲು, ಅಗಲವಾದ ಕಣ್ಣುಗಳು; ಸ್ವಲ್ಪ ನಿನಗಿಂತ ಎತ್ತರ. ಬೆಳ್ಳಗೆ ಚೆನ್ನಾಗಿದ್ದಾಳೆ. ಚೆನ್ನಾಗಿ ಓದಿದ್ದಾಳೆ. ಅವಳಿಗೆ ಸಂಗೀತ ಬರುತ್ತೆ; ಅವಳು ಎಲ್ಲ ಕೆಲಸಗಳಲ್ಲಿಯೂ ಜಾಣೆ.'

'ಹಾಗಾದರೆ ಅವರು ಅಕ್ಕನ್ನ ಏಕೆ ಬಿಟ್ಟುಬಿಟ್ಟರು ಅತ್ತೆ? ಅಂಥ ಹೆಂಡತಿಯನ್ನು ಬಿಟ್ಟು ಬಿಟ್ಟು, ಹಳ್ಳಿಯ ಹುಡುಗಿ—ನಾನೇನೂ ಚೆನ್ನಾಗಿಲ್ಲ, ಓದಿದವಳೂ ಅಲ್ಲ, ನನ್ನನ್ನ ಮದುವೆಯಾದರಲ್ಲ! ಅದಕ್ಕೇನೇ ನನ್ನ ಮೇಲೆ ಅವರಿಗೆ ಅಕ್ಕರೆ ಹುಟ್ಟಲಿಲ್ಲ!'

'ಅವಳನ್ನ ನಿನ್ನ ಗಂಡ ಬಿಟ್ಟುಬಿಡಲಿಲ್ಲ ಪದ್ಮ! ಅವಳಾಗಿ ಬಂದಿಲ್ಲ. ಅವಳಿಗೆ ಸಮಾಧಾನ ಹೇಳಬೇಕು. ಅವಳು ಶ್ರೀಮಂತ ಮನೆಯ ಹುಡುಗಿ. ಅಣ್ಣ ಅಪ್ಪ ಚೆನ್ನಾಗಿ ಸಂಪಾದನೆ ಮಾಡುತ್ತಿದಾರೆ. ಅವಳೂ ದೊಡ್ಡ ಡಾಕ್ಟರ್ ಪರೀಕ್ಷೆಗೆ ಓದುತ್ತಿದಾಳೆ. ಅವಳು ಈಗ ಮೈಸೂರಲ್ಲಿದ್ದಾಳೆ.'

'ಮತ್ತೆ ನನ್ನನ್ನೇಕೆ ಮದುವೆ ಮಾಡಿಸಿದಿರಿ ಅತ್ತೆ ?'

'ಅವಳದು ಕೆಟ್ಟ ಜಾತಕ. ನಿನ್ನ ಗಂಡನಿಗೆ ಅಪಾಯ ಎಂದು ಜೋಯಿಸರು ಹೇಳಿದರು. ನಿನ್ನದು ಒಳ್ಳೆಯ ಜಾತಕ, ಒಳ್ಳೆಯ ಅದೃಷ್ಟ. ಅದಕ್ಕಾಗಿ ಮದುವೆ ಮಾಡಿಸಿದೆನಮ್ಮ! ನೀನೂ ಚೆನ್ನಾಗಿದ್ದೀಯೆ. ಹೆಚ್ಚಾಗಿ ಓದದಿದ್ದರೆ ಏನು? ಗರತಿಯಾಗಿ ಬಾಳುವುದಕ್ಕೆ ಎಷ್ಟು ಓದು ತಾನೇ ಬೇಕು! ನಾಳೆ ಅವಳೇನಾದರೂ ಇಲ್ಲಿಗೆ ಬಂದರೆ ನೀನೇನು ಮಾಡುತ್ತೀಯೆ?'

'ನೀವೇ ಹೇಳಿ ಅತ್ತೆ! ನೀವು ಹೇಳಿದ ಹಾಗೆ ಮಾಡುತ್ತೇನೆ.'

'ನೀನೇ ಹೇಳು ನೋಡೋಣ. ಅವಳನ್ನು ನೋಡಿ ಮತ್ಸರಪಡುತ್ತೀಯಾ?'

'ಮತ್ಸರ ಅಂದರೆ ಏನತ್ತೆ?'

'ಅವಳು ನಿನಗೆ ಸವತಿ. ಇಬ್ಬರು ಹೆಂಡತಿಯರಿದ್ದರೆ, ಒಬ್ಬರನ್ನೊಬ್ಬರು ದ್ವೇಷಿಸುವುದುಂಟು. ಅದಕ್ಕೆ ಮತ್ಸರ ಎಂದು ಹೇಳುತ್ತಾರೆ.'

'ನನಗೆ ಮತ್ಸರ ಇಲ್ಲ ಅತ್ತೆ. ನಿಮ್ಮ ಸೇವೆ ಮಾಡುತ್ತಿರುವ ಹಾಗೆ ಅಕ್ಕನ ಸೇವೆಯನ್ನೂ ಮಾಡುತ್ತೇನೆ. ಅವರಿಬ್ಬರಿಗೆ ಕಾಫಿ ತಿಂಡಿ ತೆಗೆದುಕೊಂಡು ಹೋಗಿ ಕೊಡುತ್ತೇನೆ. ಅವರಿಬ್ಬರಿಗೆ ಹಾಸಿಗೆ ಹಾಕಿ ಕೊಡುತ್ತೇನೆ. ನಾನು ನಿಮ್ಮ ಪಕ್ಕದಲ್ಲಿ ಬಂದು ಮಲಗುತ್ತೇನೆ. ನನ್ನನ್ನ ಅವರು—ನೀನು ನಿನ್ನ ಹಳ್ಳಿಗೆ ಹೊರಟುಹೋಗು ಎಂದು ಹೇಳಿ ಕಳಿಸಿ ಬಿಡದಿದ್ದರೆ ಸಾಕು. ನೀವು ಅವರಿಗೆ ಹೇಳುತ್ತೀರಾ ಅತ್ತೆ ?'

'ಅವಳು ಬರುತ್ತಾಳೋ ಇಲ್ಲವೋ ಗೊತ್ತಿಲ್ಲ.'

'ನೀವು ಹೋಗಿ ಕರೆದರೆ ಬರುವುದಿಲ್ಲವೇ ಅತ್ತೆ? ಅಕ್ಕ ಬೇಗ ಬರುವ ಹಾಗೆ ಮಾಡಿ ಅತ್ತೆ.'

'ಅದು ಕಷ್ಟದ ಕೆಲಸ ಪದ್ಮ! ಇರಲಿ ನೋಡೋಣ. ನಿನ್ನ ಗಂಡ ಮನೆಯಲ್ಲೇ ಇದ್ದಾನೆ. ಅಡಿಗೆಯ ಮನೆಯಲ್ಲಿ ನಾರು ಮಗುಟ ಇದೆ. ಅದನ್ನುಟ್ಟುಕೊಂಡು ನೀನೇ ಉಪ್ಪಿಟ್ಟು ಮಾಡು. ಮೊನ್ನೆ ಯಾರೋ ರಸಬಾಳೆಹಣ್ಣಿನ ಗೊನೆ ತಂದುಕೊಟ್ಟಿದ್ದರಲ್ಲ. ಹುಡುಗ

ರೇನು ತಿಂದುಹಾಕಿದ್ದಾರೋ ಇನ್ನೂ ಇಟ್ಟಿದ್ದಾರೋ ನೋಡು. ನನ್ನ ಕೈಗೂ ಎರಡು ಹಣ್ಣು ಹಾಕು; ನಿನ್ನ ಗಂಡನಿಗೂ ಕೊಡು; ನೀನೂ ಹುಡುಗರೂ ತೆಗೆದುಕೊಳ್ಳಿ. ಮಾಡಿದ ಉಪ್ಪಿಟ್ಟನ್ನು ಹಾಗೆಯೇ ಸ್ವಲ್ಪ ಮುಚ್ಚಿಟ್ಟಿರಮ್ಮ. ನಾನು ಆಮೇಲೆ ತೆಗೆದುಕೊಳ್ಳುತ್ತೇನೆ. ಹೋಗು, ಹೋಗಿ ಏನಾದರೂ ಮಾಡು.'

ಪದ್ಮ ತನ್ನ ಅತ್ತೆ ಹೇಳಿದಹಾಗೆಯೇ ನಾರು ಮಗುಟದ ಮಡಿಯುಟ್ಟುಕೊಂಡು ಉಪ್ಪಿಟ್ಟನ್ನೂ ಕಾಫಿಯನ್ನೂ ಮಾಡಿದಳು. ಹುಡುಗರಿಗೆ ಕೊಟ್ಟು, ಅತ್ತೆಗೆ ಮುಚ್ಚಿಟ್ಟು, ತಾನು ಮೈಲಿಗೆ ಮುಟ್ಟಿಕೊಳ್ಳಬೇಕೆಂದಿದ್ದಳು. ಕಾವೇರಮ್ಮ, 'ಪದ್ಮ! ಇನ್ನೂ ಸ್ವಲ್ಪ ಮಡಿ ಕೆಲಸ ಇದೆಯಮ್ಮ. ನಿನ್ನ ಗಂಡನಿಗೆ ಉಪ್ಪಿಟ್ಟು ಕಾಫಿ ಕೊಟ್ಟು ಬಾ. ಹೇಳುತ್ತೇನೆ' ಎಂದಳು.

ಅತ್ತೆ ಹೇಳಿದಂತೆಯೇ ತಟ್ಟೆಯಲ್ಲಿ ಸ್ವಲ್ಪ ಉಪ್ಪಿಟ್ಟನ್ನೂ ಎರಡು ಬಾಳೆಯಹಣ್ಣುಗಳನ್ನೂ ಇಟ್ಟುಕೊಂಡು ಪದ್ಮ ಸೀತಾರಾಮುವಿನ ಕೊಟಡಿಗೆ ಬಂದಳು. ಒಲೆಯ ಮುಂದೆ ಕುಳಿತಿದ್ದು ಬಂದಳೆಂಬುದು ಅವಳ ಮುಖ ಕೆಂಪು ತಿರುಗಿದ್ದುದರಿಂದ ಕಂಡುಬಂತು. ಸೀತಾರಾಮುವಿನ ನೋಟ ಅವಳ ಮೇಲೆ ಪ್ರೇಮ ಪೂರ್ಣವಾಗಿ ವ್ಯಾಪಿಸಿತು.

'ಹಾಗೆಯೇ ಸ್ವಲ್ಪ ನಿಂತುಕೋ ಪದ್ಮ! ನಿನ್ನನ್ನು ಚೆನ್ನಾಗಿ ನೋಡಬೇಕು. ಇದೇನು ಮಡಿಯಲ್ಲಿಯೇ ಉಪ್ಪಿಟ್ಟು ತೆಗೆದುಕೊಂಡು ಬಂದೆಯಲ್ಲ?' ಎಂದು ಅವನು ಕೇಳಿದನು.

'ಅತ್ತೆಯವರು ಕಳಿಸಿಕೊಟ್ಟರು; ತೆಗೆದುಕೊಂಡು ಬಂದೆ. ಉಪ್ಪಿಟ್ಟನ್ನು ಸಹ ನಾನೇ ಮಾಡಿದೆ. ನಾರು ಮಗುಟ ಉಟ್ಟುಕೊಂಡು ನೀನೇ ಮಾಡಮ್ಮ ಪದ್ಮ—ಎಂದು ಅತ್ತೆಯವರು ಹೇಳಿದರು; ಮಾಡಿದ್ದೇನೆ. ರುಚಿ ಹೇಗಿದೆಯೋ? ನೀವು ಮೆಚ್ಚುತ್ತೀರೋ ಇಲ್ಲವೋ?'

ಸೀತಾರಾಮುವಿನ ನೋಟ ಉಪ್ಪಿಟ್ಟಿನ ಕಡೆಗೆ ಹೋಗಲಿಲ್ಲ. ಪದ್ಮ ಆ ನಾರು ಮಗುಟದಲ್ಲಿ ಅತ್ಯಂತ ಆಕರ್ಷಕವಾಗಿ ಕಂಡುಬಂದಳು. ಸುಮ್ಮನೆ ಅದನ್ನು ನಡುವಿಗೆ ಒಂದು ಬಾರಿ ಸುತ್ತಿಕೊಂಡು ಭುಜದಮೇಲೆ ಸೆರಗನ್ನೆಳೆದುಕೊಂಡಿದ್ದಳು. ಪರ್ವತರಾಜಪುತ್ರಿ ತಪಸ್ಸಿನಲ್ಲಿ ಕುಳಿತಿದ್ದ

ಮಹೇಶ್ವರನನ್ನು ಒಲಿಸಿಕೊಳ್ಳಬೇಕೆಂದು ಸರ್ವಾಭರಣಯುಕ್ತಳಾಗಿ ಪಟ್ಟೆ ಪೀತಾಂಬರಗಳನ್ನುಟ್ಟು, ದಿವ್ಯ ಕುಸುಮಮಾಲಾಲಂಕೃತಳಾಗಿ 'ಬಿಂಕದಿಂದ ಕೊಂಕಿ ನಿಂದಾಗ' ಮಹೇಶ್ವರನು ತನ್ನ ಕಟಾಕ್ಷವನ್ನು ಅವಳ ಕಡೆಗೆ ಬೀರದೆಯೇ ಕಾಮಭಸ್ಮೋದ್ಧೂಳಿತಗಾತ್ರನಾಗಿ ಕೈಲಾಸಕ್ಕೆ ಹೊರಟುಹೋದನು. ಆ ಸರ್ವಮಂಗಳಾದೇವಿ ನಾರುಸೀರೆಯನ್ನುಟ್ಟು ತಪಸ್ಸಿನಲ್ಲಿ ನಿಂತಾಗ ಕೈಲಾಸದಲ್ಲಿದ್ದ ಮಹೇಶ್ವರನು ಅಲ್ಲಿಂದಲೇ ದೃಷ್ಟಿಸಿ ನೋಡಿ ಮನಸ್ಸು ನಿಲ್ಲದೆ ಬ್ರಹ್ಮಚಾರಿಯ ವೇಷದಲ್ಲಿ ಒಂದೇ ಹೆಜ್ಜೆಯಲ್ಲಿ ಎದುರಿಗೆ ಬಂದನು! ಅದು ಗಿರಿಜಾಕಲ್ಯಾಣದ ಕಥೆ. ವಿರಳಾಲಂಕೃತೆಯಾದ ಮಾಳವಿಕೆ ಅಗ್ನಿಮಿತ್ರನ ಎದುರಿಗೆ ನಿಂತಂತೆ ಪದ್ಮ ಸೀತಾರಾಮುವಿನ ಎದುರಿನಲ್ಲಿ ವಿರಳವಸ್ತ್ರಳಾಗಿ ತಟ್ಟೆ ಹಿಡಿದುಕೊಂಡು ನಿಂತಿದ್ದಳು. ಐದು ನಿಮಿಷವಾಯಿತು. ಇನ್ನೂ ಸೀತಾರಾಮು ನೋಡುತ್ತಲೇ ಇದ್ದನು. 'ನೀನು ಮಡಿಯುಟ್ಟುಕೊಂಡಿದ್ದೀಯಲ್ಲ. ತಟೆಯನ್ನು ಹೇಗೆ ಕೊಡುತ್ತೀಯೆ?' ಎಂದು ಕೇಳಿದನು.

'ಮೇಜಿನಮೇಲಿರುವ ಬಟ್ಟೆಯನ್ನು ತೆಗೆಯಿರಿ. ಅದರ ಮೇಲಿಡುತ್ತೇನೆ.'

ಪದ್ಮ ಹತ್ತಿರ ಬಂದು ತಟ್ಟೆಯನ್ನು ಮೇಜಿನಮೇಲಿಟ್ಟಳು. ಹಿಂದಿರುಗಿ ಹೋಗಿ ಕಾಫಿಯನ್ನೂ ನೀರನ್ನೂ ಬೇರೆ ಲೋಟಗಳಲ್ಲಿ ತಂದಿಟ್ಟಳು. ಪದ್ಮ ಉಪಾಹಾರವನ್ನು ಜತೆಯಲ್ಲಿ ತೆಗೆದುಕೊಳ್ಳಲಿಲ್ಲ. ಮಡಿಯಲ್ಲಿದ್ದುದರಿಂದ ಹಿಂದಿರುಗಿ ಬಂದಳು.

ಸೀತಾರಾಮುವಿನ ಮನಸ್ಸು ಸಂಪೂರ್ಣವಾಗಿ ಚಂಚಲವಾಗಿ ಹೋಯಿತು. ಇನ್ನೂ ಸ್ವಲ್ಪ ಕಾಲ ಪದ್ಮ ಕೊಟಡಿಯಲ್ಲೇ ಇದ್ದಿದ್ದರೆ ಆಗಿತ್ತಲ್ಲ, ತನ್ನ ಪಕ್ಕದಲ್ಲಿ ಕುಳಿತುಕೊಂಡು ಉಪಾಹಾರವನ್ನು ತೆಗೆದುಕೊಂಡಿದ್ದಿದ್ದರೆ ಚೆನ್ನಾಗಿತ್ತಲ್ಲ ಎಂಬುವ ಭಾವನೆಗಳು ಮೊದಲು ಬಂದುವು. ಆಮೇಲೆ, ದೊರೆಯದ ಫಲಕ್ಕಾಗಿ ವ್ರತನೇಮಗಳನ್ನು ಮಾಡುವುದಕ್ಕಿಂತ ದೊರೆತಿರುವ ಫಲವನ್ನು ನಿರಾಯಾಸವಾಗಿ ಅನುಭೋಗಿಸಬಹುದಲ್ಲ ಎಂಬ ಅನುಕೂಲ ತರ್ಕವೂ ಸ್ಫುರಿಸಿತು. ತಾನು ಪದ್ಮಳ ವಿಚಾರದಲ್ಲಿ ನಡೆದುಕೊಳ್ಳುತ್ತಿರುವುದು ಅಧರ್ಮವಲ್ಲವೆ? ಅವಳು ತನಗಿಂತ

ಹೆಚ್ಚಾಗಿ ವ್ರತನಿಷ್ಠಳಾಗಿದ್ದಾಳಲ್ಲ ಎಂಬ ಸುಖಧರ್ಮದ ಬೋಧೆಯೂ ಆಯಿತು. ಜನಿಸಿದ ಕರುಣೆ ಕ್ರಮಃಕ್ರಮವಾಗಿ ಉತ್ಕಟ ಪ್ರೇಮಕ್ಕೆ ಪರಿವರ್ತಿತವಾಗಿ ಪದ್ಮಳನ್ನು ನೋಡಬೇಕೆಂಬ ಅತ್ಯಾಶೆ ದುರ್ದಮನೀಯವಾಯಿತು.

ಸೀತಾರಾಮು ಕೊಟಡಿಯನ್ನು ಬಿಟ್ಟು ನಡುಮನೆಗೆ ಬಂದನು. ಅಲ್ಲಿ ತನ್ನ ತಾಯಿ ಮತ್ತು ಪದ್ಮ ಉಪ್ಪಿಟ್ಟು ತಿನ್ನುತ್ತಿದ್ದುದು ಕಂಡುಬಂತು. ಪದ್ಮ ಹಿಂದಿನಂತೆಯೇ ಇನ್ನೂ ನಾರು ಮಗುಟವನ್ನೇ ಉಟ್ಟುಕೊಂಡಿದ್ದಳು. ತನ್ನ ಗಂಡ ಅನಿರೀಕ್ಷಿತವಾಗಿ ಹಾಗೆ ಬಂದುದನ್ನು ನೋಡಿ ಅವಳು ಸಂಭ್ರಮದಿಂದ ಎದ್ದುನಿಂತುಕೊಂಡಳು. ಆ ಚೆಲುವೆ ಆ ಉಡುಪಿನಲ್ಲಿ ಕುಳಿತರೂ ನಿಂತರೂ, ಏನು ಅಂಗಾಂಗಗಳ ಚಲನೆ ಮಾಡಿದರೂ ಎಲ್ಲವೂ ಸೀತಾರಾಮುವಿಗೆ ಮೋಹಕವಾಗಿ ಕಂಡುಬಂದು ಅವನ ದೃಷ್ಟಿಯನ್ನೂ ಮನಸ್ಸನ್ನೂ ಸೆರೆಹಿಡಿದಿದ್ದುವು. ಅವನು ಹತ್ತಿರ ಬಂದು ನಿಂತುಕೊಂಡು, ‘ ಪದ್ಮ ! ಕುಳಿತುಕೊಂಡೇ ಉಪ್ಪಿಟ್ಟು ತಿನ್ನು’ ಎಂದು ಹೇಳಿ ಕುಳಿತುಕೊಳ್ಳುವಂತೆ ಮಾಡಿದನು. ಅವಳಿಗೆ ಸ್ತ್ರೀಜಾತಿ ಸಹಜವಾದ ಲಜ್ಜೆ ತಲೆದೋರಿ ಮುಖ ಕೆಂಪೇರಿತು. ಮುಖವನ್ನು ತಗ್ಗಿಸಿಕೊಂಡು, ಗಂಡನನ್ನು ನೋಡಬೇಕೆಂಬ ಆಶೆಯಿಂದ ಒಮ್ಮೊಮ್ಮೆ ಸ್ವಲ್ಪ ತಲೆಯೆತ್ತಿ, ಉಪ್ಪಿಟ್ಟಿನಮೇಲೆ ಗಮನವಿಲ್ಲದೆ, ಹೇಗೋ ಬಾಯಿಗೆ ಹಾಕಿಕೊಳ್ಳುತ್ತ, ಅದು ಬಾಯಿಗೆ ತಪ್ಪಿ ಕೆನ್ನೆಗಳಿಗೋ, ಮೂಗಿಗೋ ಬಿದ್ದಾಗ, ಸೀತಾರಾಮುವಿನ ನಗುವಿಗೆ ಕಾರಣಳಾಗಿ ಪೇಚಾಡುತ್ತ ಕುಳಿತಿದ್ದಳು. ಕಾವೇರಮ್ಮ ಎಲ್ಲವನ್ನೂ ಗಮನಿಸುತ್ತ, ‘ಸೀತಾರಾಮು ! ಪದ್ಮ ತಂದುಕೊಟ್ಟ ಉಪ್ಪಿಟ್ಟು ನಿನಗೆ ಸಾಕಾಗಲಿಲ್ಲವೇನಪ್ಪ ? ಕೈಹಿಡಿ ! ಇನ್ನು ಸ್ವಲ್ಪ ಹಾಕುತ್ತೇನೆ ’ ಎಂದು ಹೇಳುತ್ತ ಒಂದಿಷ್ಟು ಉಪ್ಪಿಟ್ಟನ್ನು ಹಿಡಿಮಾಡಿದಳು. ಸೀತಾರಾಮುವಿನ ಕೈ ತಾಯಿಯ ಕಡೆಗೆ, ದೃಷ್ಟಿ ಹೆಂಡತಿಯ ಕಡೆಗೆ ಇದ್ದುವು. ತಾಯಿ ಕೊಟ್ಟಿದ್ದನ್ನು ಅವನು ಬಾಯಿಗೆ ಹಾಕಿಕೊಂಡು, ‘ ಅಮ್ಮ ! ನಿನ್ನ ಉಪ್ಪಿಟ್ಟೇ ರುಚಿಯಾಗಿ ಕಾಣುತ್ತದಲ್ಲ ! ನಿನ್ನ ಸೊಸೆ ಇದಕ್ಕೇನಾದರೂ ಹೆಚ್ಚು ತುಪ್ಪ ಹಾಕಿದಳೇ ನಮ್ಮ ?’ ಎಂದು ನಗುತ್ತ ಕೇಳಿದನು.

'ನನಗೆ ಗೊತ್ತಿಲ್ಲಪ್ಪ. ಪದ್ಮಳನ್ನೇ ಕೇಳು. ಅವಳು ತಂದು ಕೊಟ್ಟಿದ್ದನ್ನು ನಾನು ತಿನ್ನುತ್ತಿದ್ದೇನೆ.'

'ಹೌದತ್ತೆ! ನಿಮ್ಮ ಭಾಗದ ಉಪ್ಪಿಟ್ಟಿಗೆ ಎರಡು ಮಿಳ್ಳೆ ಹೆಚ್ಚು ತುಪ್ಪ ಹಾಕಿ ಮುಚ್ಚಿಟ್ಟಿದ್ದೆ' ಎಂದು ಪದ್ಮ ಹೇಳಿದಳು.

ಕಾವೇರಮ್ಮನಿಗೆ ಪರಮ ಸಂತೋಷವಾಯಿತು. ಆದರೂ, 'ಅದೇ ಕಮ್ಮ ಹಾಗೆ ಮಾಡಿದೆ? ನಿನ್ನ ಗಂಡನ ಭಾಗಕ್ಕೂ ಹೆಚ್ಚು ತುಪ್ಪ ಹಾಕ ಬೇಕಾಗಿತ್ತೋ ಇಲ್ಲವೋ?' ಎಂದು ಕೇಳಿ ಅವಳ ಉತ್ತರಕ್ಕೇನೂ ಕಾಯದೆ, 'ಅಪ್ಪ ಸೀತಾರಾಮು! ನನಗೆ ನನ್ನ ಹೆಣ್ಣುಮಕ್ಕಳ ವಿಷಯ ದಲ್ಲಿ ಕೂಡ ಅಷ್ಟೊಂದು ಯೋಚನೆ ಇಲ್ಲ. ಅವರು ತಮ್ಮ ತಮ್ಮ ಗಂಡಂದಿರ ಮನೆಗಳಲ್ಲಿದ್ದಾರೆ. ಗಂಡಂದಿರು ಹೇಗೋ ಆದರಿಸು ತ್ತಿದಾರೆ; ಸುಖವಾಗಿಯೇ ಇದ್ದಾರೆ ಎಂದು ಸಮಾಧಾನಪಟ್ಟುಕೊಂಡಿ ದ್ದೇನೆ. ನನಗೆ ಪದ್ಮಳ ವಿಚಾರವೇ ಕೊರಗಾಗಿ ಹೋಗಿದೆ. ನಾನು ಮಾಡಿಸಿದ ಮದುವೆ! ಅದರ ಪುಣ್ಯ ಪಾಪ ನನ್ನ ತಲೆಗೆ ಕಟ್ಟಿದ್ದು. ಅವಳೂ ಮಕ್ಕಳನ್ನು ಹೆತ್ತು, ಮಕ್ಕಳನ್ನು ಆಡಿಸಿಕೊಂಡು ಸುಖವಾಗಿರ ಬೇಕು ಎಂದು ಹಗಲೂ ಇರುಳೂ ಯೋಚನೆಮಾಡುತ್ತಿದ್ದೇನಪ್ಪ! ಈ ತಾಯಿಯ ಮಾತು ತಳ್ಳಿಹಾಕಬೇಡ. ನೀನು ಸುಖವಾಗಿರಬೇಕು ಎಂದ ಲ್ಲವೇ ಈ ಮದುವೆಯನ್ನು ನಾನು ಮಾಡಿಸಿದ್ದು. ನೀನೂ ಪ್ಯಾಸ್ ಮಾಡಿ ದ್ದೀಯೆ; ನೀನೂ ಬುದ್ಧಿವಂತನೇ, ನೀನೂ ಶಿರಸ್ತೆ ಕೆಲಸ ಮಾಡು ತ್ತಿದ್ದೀಯೆ. ನಿನಗೇನು ತಿಳಿಯದೆ? ಮೊನ್ನೆ ಪದ್ಮ ಪುರಂದರ ದಾಸರ ಕೀರ್ತನೆಗಳನ್ನು ಹೇಳಿದಳು. ಎಷ್ಟು ಚೆನ್ನಾಗಿತ್ತು ಅನ್ನುತ್ತೀಯೆ. ನೀನು ಅವಳ ಹಾಡು ಕೇಳಿ, ಅವಳ ಕೆಲಸ ಜಾಣತನ ಒಪ್ಪ—ಎಲ್ಲ ನೋಡಿ, ಅವಳನ್ನು ಹೆಂಡತಿ ಅಂತ ಆದರಿಸಬೇಕಪ್ಪ!' ಎಂದು ಹೇಳಿ ದಳು.

'ಅಮ್ಮ! ನಿನ್ನ ಸೊಸೆ ಕೀರ್ತನೆ ಹೇಳುವುದನ್ನು ನಾನೂ ಕೇಳ ಬೇಕಲ್ಲ. ಈಗ ಹಾಡಿಸುತ್ತೀಯಾ?'

'ಆಗಲಪ್ಪ! ಅವಳು ಹಾಡುತ್ತಾಳೆ. ನೀನೂ ಮೆಚ್ಚಿಕೊಳ್ಳು

ತ್ತೀಯೆ. ಪದ್ಮ! ಮೊನ್ನೆ ಹೇಳಿದ್ದನ್ನು ಹೇಳಮ್ಮ. ನಿನ್ನ ಗಂಡ ಕೇಳಲಿ.'

'ಬೇರೆ ಸೀರೆಯುಟ್ಟುಕೊಂಡುಬರುತ್ತೇನೆ, ಅತ್ತೆ! ಆಮೇಲೆ ಹಾಡುತ್ತೇನೆ' ಎಂದು ಹೇಳಿ ಪದ್ಮ ಎದ್ದುಹೋದಳು. ಸ್ವಲ್ಪ ಹೊತ್ತಿನೊಳಗಾಗಿ ಸೀರೆಯನ್ನುಟುಕೊಂಡು ಬಂದು ಒಂದು ಚಾಪೆಯನ್ನು ಗಂಡನಿಗೆ ಹಾಸಿದಳು. ಸೀತಾರಾಮು ಕುಳಿತುಕೊಂಡನು.

'ನೀನೂ ಚಾಪೆಯ ಮೇಲೆ ಕುಳಿತುಕೊಂಡೇ ಹಾಡಮ್ಮ' ಎಂದು ಕಾವೇರಮ್ಮ ಹೇಳಿದಳು.

ಪದ್ಮ ಚಾಪೆಯ ಮೇಲೆ ಇನ್ನೊಂದು ಕೊನೆಯಲ್ಲಿ ಕುಳಿತುಕೊಂಡಳು. ಆಮೇಲೆ ಕೆಲವು ದೇವರನಾಮಗಳನ್ನು ಹೇಳಿದಳು. ಅವಳ ಕಂಠ ಚೆನ್ನಾಗಿಯೇ ಇತ್ತು. ಸಂಗೀತ ಜ್ಞಾನ ಹೆಚ್ಚಾಗಿರಲಿಲ್ಲ. ಆದರೆ ಅಪಸ್ವರಗಳಿಲ್ಲದೆ ರಾಗಗಳ ಛಾಯೆ ಕೆಡಿಸದೆ ಸಾಹಿತ್ಯಭಾಗವನ್ನು ವಕ್ರಮಾಡದೆ ಸಹಜ ರೀತಿಯಲ್ಲಿ ಅವಳು ಹಾಡಿದಳು. ನಾಲ್ಕು ದೇವರನಾಮಗಳನ್ನು ಹೇಳಿದ ಬಳಿಕ, ಕಾವೇರಮ್ಮ, 'ಆಡಿಸಿದಳು ಯಶೋದ!—ಹೇಳು ಪದ್ಮ! ಮೊನ್ನೆ ಹೇಳಿದ ಹಾಗೆಯೇ ಅಭಿನಯ ಮಾಡಿಕೊಂಡು ಹೇಳಬೇಕು' ಎಂದಳು. ಪದ್ಮ ಶ್ರೀ ಕೃಷ್ಣನನ್ನೇ ಮಗುವಾಗಿ ತಾನು ಆಡಿಸುತ್ತಿರುವಂತೆ ಭಾವೈಕ್ಯವನ್ನು ಹೊಂದಿ ಆ ಕೀರ್ತನೆಯನ್ನು ಮಗುವನ್ನು ಎತ್ತಿ ಕುಣಿಸುತ್ತಿರುವಂತೆ, ಕೈಯಲ್ಲಿ ಅತ್ತ ಇತ್ತ ತೂಗುತ್ತಿರುವಂತೆ ತಕ್ಕ ಅಭಿನಯದೊಡನೆ ಹೇಳಿದಳು. ಸೀತಾರಾಮು ಸಂತೋಷದಿಂದ ಪರವಶನಾದನು. ಮಾತು ಹೊರಡಲಿಲ್ಲ. ಕೆಲವು ನಿಮಿಷಗಳೊಳಗಾಗಿ ಅವನ ಮುಖ ನೀರೋಡಿತು. ಪದ್ಮಳಿಗೆ ನಿಜವಾಗಿಯೂ ಒಂದು ಮಗು ಇದ್ದಿದ್ದರೆ ಆ ಮಗುವನ್ನು ಆ ಕೀರ್ತನೆ ಹೇಳುತ್ತ ಹೀಗೆಯೇ ಸಾಕ್ಷಾತ್ತಾಗಿ ಆಡಿಸುತ್ತಿದ್ದಳಲ್ಲವೇ? ಆ ಸುಖ ಸಂತೋಷಗಳನ್ನು ಅವಳಿಗೆ ತಪ್ಪಿಸಿದ ಮಹಾಪಾಪಕಾರ್ಯವನ್ನು ತಾನು ಮಾಡುತ್ತಿಲ್ಲವೇ? ಅಯ್ಯೋ! ಪದ್ಮಳನ್ನು ಹೀಗೆ ಸಂಕಟಕ್ಕೆ ಗುರಿಮಾಡಿದೆನಲ್ಲ ಎಂಬ ದುಃಖ ತುಂಬಿಕೊಂಡು ಅವನ ಕಣ್ಣುಗಳಿಂದ ನೀರು ತೊಟ್ಟಿಕ್ಕಿತು. ಅವನು, 'ಪದ್ಮ! ಇನ್ನೊಂದುಬಾರಿ ಆ ಕೀರ್ತನೆಯನ್ನು ಹೇಳು!' ಎಂದನು.

ಅವಳಿಗೆ ತನ್ನ ಗಂಡನು ಮೆಚ್ಚಿಕೊಂಡನೆಂದು ಸಂತೋಷವಾಯಿತು. ಮತ್ತೆ ಅದನ್ನೇ ಸೊಗಸಾಗಿ ಅಭಿನಯಿಸುತ್ತ ಹಾಡಿದಳು. ಆಮೇಲೆ '**ಪೋಗದಿರಲೋ ರಂಗ**' ಎಂಬ ಕೀರ್ತನೆಯನ್ನು ಹಾಡಿದಳು.

'ನೀನು ಚೆನ್ನಾಗಿ ಹಾಡುತ್ತೀಯೆ ಪದ್ಮ! ನನಗೆ ತಿಳಿದೇ ಇರಲಿಲ್ಲ!' ಎಂದು ಅವನು ದುಃಖದಿಂದ ಹೇಳಿದನು.

'ಹೌದಪ್ಪ ಸೀತಾರಾಮು! ನಿನಗೆ ಹೇಗೆ ತಿಳಿಯಬೇಕು. ಅವಳ ಮೇಲೆ ನಿನಗೆ ನೋಟವೇ ಹೋಗಲಿಲ್ಲ' ಎಂದು ಕಾವೇರಮ್ಮ ಹೇಳಿದಳು.

'ಆಗಲಮ್ಮ! ಅದಕ್ಕೂ ಕಾಲ ಬರುತ್ತೆ. ಎರಡು ದಿನ ಪದ್ಮ ನಿನ್ನ ಪಕ್ಕದಲ್ಲಿಯೇ ಮಲಗಿಕೊಳ್ಳಲಮ್ಮ!' ಎಂದು ಸೀತಾರಾಮು ಉತ್ತರ ಹೇಳಿ ತನ್ನ ಕೊಟಡಿಗೆ ಹೋಗಿ ಬಾಗಿಲನ್ನು ಹಾಕಿಕೊಂಡನು.

ಸೀತಾರಾಮು ಚಾಪೆಯ ಮೇಲೆ ಬಿದ್ದುಕೊಂಡು, 'ಸರೋಜ! ಸರೋಜ! ದೇವರು ನಿನಗೆ ದಿವ್ಯದೃಷ್ಟಿಯನ್ನು ಕೊಡಬಾರದೇ? ಆಗ ನೀನು ನನ್ನ ಸಂಕಟವನ್ನು ನೋಡುತ್ತಿದ್ದೆ! ನಿನ್ನ ವಿಚಾರದಲ್ಲಿ ನಾನು ಮಹಾಪರಾಧಿಯೋ ಪದ್ಮಳ ವಿಚಾರದಲ್ಲಿ ನಾನು ಮಹಾಪರಾಧಿಯೋ ಜಗದೀಶ್ವರನೇ ಬಲ್ಲ. ಇನ್ನೂ ನಿನಗೆ ನನ್ನ ವಿಚಾರದಲ್ಲಿ ಕ್ಷಮೆ ಇಲ್ಲವೇ? ಎಷ್ಟು ವರ್ಷಕ್ಕೆ ನಿನ್ನ ಕೋಪ ಇಳಿದೀತು? ನಿನ್ನ ದುಃಖ ಇಳಿದೀತು? ನಿನ್ನ ಪಾದಗಳಿಗೆ ಅಡ್ಡಬಿದ್ದು ಕ್ಷಮಾಪಣೆ ಕೇಳಿಕೊಳ್ಳುತ್ತೇನೆ' ಎಂದು ಹೇಳಿಕೊಳ್ಳುತ್ತ ಕಣ್ಣೀರನ್ನೊರಸಿಕೊಳ್ಳುತ್ತಿದ್ದನು.

# ೨೩. ರಾಮಣ್ಣ ಮೈಸೂರಿನಲ್ಲಿ

ಸೀತಾರಾಮುವಿನ ತಮ್ಮನಿಗೆ ಹೆಣ್ಣು ಕೊಡುವುದಕ್ಕೆ ಮೂರು ನಾಲ್ಕು ಕಡೆಗಳಿಂದ ಜನ ಹಿಂದೆ ಶ್ರೀನಿವಾಸಪುರಕ್ಕೆ ಬಂದಿದ್ದರು. ಆದರೆ ಮೊದಲು ಹೆಣ್ಣು ಮಕ್ಕಳ ಮದುವೆ ಆಗಬೇಕು, ಆಮೇಲೆ ಮಗನ ಮದುವೆಯ ಯೋಚನೆ ಎಂದು ಕಾವೇರಮ್ಮ ಹೇಳಿದ್ದರಿಂದ ಯಾವುದೂ ನಿಷ್ಕರ್ಷೆಗೆ ಬಂದಿರಲಿಲ್ಲ. ಮದುವೆಗಳಿಗೆ ರಾಮಣ್ಣ ಬಂದಿದ್ದಾಗ ಇವುಗಳ ಪ್ರಸ್ತಾಪವೆಲ್ಲ ಬಂದಿತ್ತು. ಈಚೆಗೆ ರಾಮಣ್ಣ ಒಂದು ಕಾಗದದಲ್ಲಿ ತನ್ನ ಅಣ್ಣನ ಮೂರನೆಯ ಮಗಳು ಸೀತಾಲಕ್ಷ್ಮಿ ಎಂಬ ಹುಡುಗಿಯನ್ನು ಗೊತ್ತು ಮಾಡಬಹುದೆಂದು ಸೂಚನೆ ಕೊಟ್ಟಿದ್ದನು. 'ಆ ಹುಡುಗಿ ನನ್ನ ಅಣ್ಣನಿಗೆ ಕೊನೆಯ ಮಗಳು, ನಾಲ್ಕು ವರ್ಷಗಳ ಕಾಲ ನನ್ನ ಮನೆಯಲ್ಲೇ ಓದುತ್ತಿದ್ದಳು. ಮಿಡಲ್ ಸ್ಕೂಲ್ ಪರೀಕ್ಷೆ ಮಾಡಿದಳು. ಹುಡುಗಿ ಈಗ ತುಮಕೂರಿನ ಹತ್ತಿರವಿರುವ ಸೆಟ್ಟಿಹಳ್ಳಿಯಲ್ಲಿ ತಂದೆಯ ಮನೆಯಲ್ಲಿದ್ದಾಳೆ. ಹುಡುಗಿಗೆ ಹದಿನೈದು ವರ್ಷ; ಸುಮಾರಾಗಿದ್ದಾಳೆ. ಬೆಳ್ಳಗೇನಿಲ್ಲ, ಆದರೆ ಕಣ್ಣುಮೂಗು ನೇರವಾಗಿ, ವಕ್ರಗಳೇನೂ ಇಲ್ಲದೆ ಇದ್ದಾಳೆ. ನೀನು ಆಲೋಚನೆ ಮಾಡಿ ಜವಾಬು ಬರೆ. ಜಾತಕಗಳು ಕೂಡಿಬರುತ್ತವೆ. ದೈವಸಂಕಲ್ಪವಿದ್ದು ಈ ಸಂಬಂಧ ಕೈಗೂಡಿದರೆ ನಾನೂ ನೀನೂ ಸಮೀಪ ಬಂಧುಗಳಾಗುತ್ತೇವೆ. ನಿನ್ನ ತಾಯಿಯ ವಿಷಯದಲ್ಲಿ ಇಲ್ಲೆಲ್ಲ ಬಹಳ ಹೆದರಿಕೆ ಇದೆ. ನಿನ್ನ ಚರಿತ್ರೆಯೆಲ್ಲ ಪ್ರಸಿದ್ಧವಾಗಿರುವುದರಿಂದ ನನ್ನಣ್ಣನೂ ನನ್ನ ಅತ್ತಿಗೆಯೂ ಭಯವನ್ನು ವ್ಯಕ್ತಗೊಳಿಸಿದರು. ನಾನು ಅವರಿಗೆ ತಿಳಿವಳಿಕೆ ಕೊಟ್ಟು ಧೈರ್ಯ ಹೇಳಿದ್ದೇನೆ. ಬೇಕಾದಾಗ ಹುಡುಗಿಯನ್ನು ಶ್ರೀನಿವಾಸಪುರಕ್ಕೆ ಕರೆದುಕೊಂಡು ಬರುತ್ತೇನೆ. ನೀವುಗಳೆಲ್ಲ ನೋಡಬಹುದು' ಎಂದು ವಿವಾಹದ ಪ್ರಸ್ತಾಪಗಳಾದಮೇಲೆ ಕೊನೆಯಲ್ಲಿ, 'ಈಗ ನಾನು ಮೈಸೂರಿಗೆ ಹೋಗುವ ಕೆಲಸವೊಂದು ಗಂಟುಬಿದ್ದಿದೆ. ಹೋದಾಗ ಕೃಷ್ಣರಾಯರ ಮನೆಗೂ ಹೋಗಿ ನೋಡಿಕೊಂಡು ಬರುತ್ತೇನೆ. ಆ

ವಿಚಾರಗಳನ್ನೆಲ್ಲ ಮುಂದಿನ ಕಾಗದದಲ್ಲಿ ತಿಳಿಸುತ್ತೇನೆ' ಎಂದು ಬರೆದು ಕಾಗದವನ್ನು ಮುಕ್ತಾಯ ಮಾಡಿದ್ದನು.

ಸೀತಾರಾಮು ಆ ಮೈಸೂರಿನ ಪ್ರಯಾಣದ ವಿಚಾರವೊಂದನ್ನು ಬಿಟ್ಟು ಉಳಿದುದನ್ನೆಲ್ಲ ತಾಯಿಗೆ ತಿಳಿಸಿದನು. ಆಕೆ, 'ಆಗಲಪ್ಪ! ದೈವಸಂಕಲ್ಪ ಹೇಗಿದೆಯೋ ನೋಡೋಣ. ರಾಮಣ್ಣನ ನೆಂಟೂ ನಮಗೆ ಗಂಟುಬೀಳುತ್ತದೋ ಏನೋ. ಬಹಳ ಲೆಕ್ಕಾಚಾರದ ದೂರಾಲೋಚನೆಯ ಮನುಷ್ಯ ರಾಮಣ್ಣ! ಒಳ್ಳೆಯ ಮನುಷ್ಯನೇ! ವಂಚನೆಯೇನೂ ಇಲ್ಲ. ನಿನ್ನಲ್ಲಿ ಅವನಿಗೆ ಬಹಳ ಸ್ನೇಹ. ಏನೋ ಮಧ್ಯಸ್ಥಿಕೆಗೆ ನಿಂತು ನಿನ್ನನ್ನು ನನ್ನ ಕೈತಪ್ಪಿಸಿಬಿಡುತ್ತಾನಲ್ಲ ಎಂದು ಆಗ ನನಗೆ ಅವನಮೇಲೆ ಸ್ವಲ್ಪ ಕೋಪವಿತ್ತು. ಈಗ ಅವನ ಅಣ್ಣನ ಮಗಳನ್ನೇ ತಂದುಕೊಂಡರೆ ನಿನ್ನ ತಮ್ಮನಿಗೂ ದಿಕ್ಕಾಗುತ್ತೆ; ತುಮಕೂರಿನಲ್ಲಿ ರಾಮಣ್ಣ ಸಹಾಯಕ್ಕೆ ಒದಗುತ್ತಾನೆ. ಸೆಟ್ಟಹಳ್ಳಿ ಹತ್ತಿರವೇ ಇದೆ. ಹುಡುಗಿ ದೂರದವಳೇನೂ ಅಲ್ಲ. ನನಗೇನೋ ಒಪ್ಪಿಗೆ ಇದೆಯಪ್ಪ. ಆದರೆ ಸ್ವಲ್ಪ ನಿಧಾನಿಸೋಣ, ಹಿಂದೆ ನಡೆದ ಮದುವೆಗಳಲ್ಲಿ ಬಂಧುಬಳಗದವರ ಬಾಯಲ್ಲೆಲ್ಲ ಬಿದ್ದೆವು; ನಿನ್ನ ತಮ್ಮನ ಮದುವೆಯ ಕಾಲಕ್ಕೆ ಅದು ತಪ್ಪಲಿ—ಎಂದು ಯೋಚನೆ ಈಚೆಗೆ ಬಂದಿದೆ' ಎಂದು ಹೇಳಿದಳು.

ಆ ಸಂಬಂಧಕ್ಕೆ ತನ್ನ ತಾಯಿ ಒಪ್ಪಿದ್ದನ್ನು ನೋಡಿ ಸೀತಾರಾಮುವಿಗೆ ಸಂತೋಷವಾಯಿತು. ಆದರೆ ಅವನ ಮನಸ್ಸೆಲ್ಲ ಆ ಕಾಗದದ ಕೊನೆಯ ಭಾಗದಲ್ಲಿ ಕಾತರಗೊಳ್ಳುತ್ತಿತ್ತು. ಸರೋಜಳನ್ನು ನೋಡುವ ಪುಣ್ಯ ರಾಮಣ್ಣನಿಗೆ ದೊರೆಯಿತು. ತನಗೆ ಅದಿಲ್ಲವಾಯಿತು. ಈಗ ರಾಮಣ್ಣ ಅವರ ಮನೆಗೆ ಹೋದರೆ ನಾನೇ ಅವನನ್ನು ಮಧ್ಯಸ್ಥಿಕೆಗೆ ಕಳಿಸಿದೆನೆಂದು ಕೃಷ್ಣರಾಯರೂ ತನ್ನತ್ತೆಯೂ ತಿಳಿದುಕೊಳ್ಳುತ್ತಾರೆ. ತಾನು ಆ ವಿಚಾರದಲ್ಲಿ ನಿರ್ದೋಷಿ. ರಾಮಣ್ಣನೇ ತಾನು ಮಧ್ಯಸ್ಥಿಕೆ ನಡಸಿ ನೋಡೋಣವೆಂದು ಮೈಸೂರಿಗೆ ಹೋಗುತ್ತಾನೋ ಏನೋ! ನೇರವಾಗಿ ಆ ಮಾತನ್ನು ಬರೆಯುವ ಬದಲು ಪರ್ಯಾಯವಾಗಿ ಅದನ್ನು ತಿಳಿಸಿದಂತೆ ಕಾಣುತ್ತದೆ. ಮೈಸೂರಲ್ಲಿ ಏನು ಮಾತು ನಡೆಯುತ್ತ

ದೆಯೋ—ಎಂದು ಮುಂತಾಗಿ ಆಲೋಚಿಸುತ್ತ ಸೀತಾರಾಮು ತನ್ನ ಕೊಟಡಿಗೆ ಹೋದನು. ಅವನಿಗೆ ಮನಸ್ಸು ಸ್ತಿಮಿತಕ್ಕೆ ಬರಲಿಲ್ಲ. ಕೊಟಡಿಯಲ್ಲಿ ನಿಲ್ಲಲಾಗದೆ ಉಡುಪನ್ನು ಧರಿಸಿಕೊಂಡು ರೈಲ್ವೆ ಸ್ಟೇಷನ್ನಿನ ಕಡೆಗೆ ಒಬ್ಬನೇ ಹೊರಟುಬಿಟ್ಟನು. ಅಲ್ಲಿಂದ ಹಾಗೆಯೇ ಮಿಡಲ್ ಸ್ಕೂಲಿನ ಬಳಿಗೂ ಹೋದನು. ಹಿಂದೆ ಅಲ್ಲಿ ಓದುತ್ತಿದ್ದ ಸರೋಜ ಎಂಬ ಹುಡುಗಿ ಆ ಸ್ಕೂಲಿನಲ್ಲಿರಲಿಲ್ಲ. ಅವಳು ಮಿಡಲ್ ಸ್ಕೂಲ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಮನೆಯಲ್ಲೇ ಇದ್ದಳು. ಒಂದು ವರ್ಷದಿಂದ ಅವನು ತಾನು ಹಿಂದೆ ಕೊಡುತ್ತಿದ್ದ ವಿದ್ಯಾರ್ಥಿವೇತನವನ್ನು ನಾಲ್ಕನೆಯ ತರಗತಿಯ ಇಬ್ಬರು ಹುಡುಗಿಯರಿಗೆ ಹಂಚಿ ಕೊಡುತ್ತಿದ್ದನು. ತಾನು ಶ್ರೀನಿವಾಸಪುರಕ್ಕೆ ಬಂದು ಐದು ವರ್ಷಗಳಾಗಿ ಹೋಗಿವೆಯಲ್ಲ. ಕಾಲಚಕ್ರ ಹೇಗೆ ಬೇಗ ಉರುಳಿಹೋಯಿತು— ಎಂದು ಹೇಳಿಕೊಳ್ಳುತ್ತ ಹಾಗೆಯೇ ಸುತ್ತಾಡುತ್ತಿದ್ದನು. ಬಹಳಹೊತ್ತಿನ ಮೇಲೆ ಅವನು ಮನೆಗೆ ಹಿಂತಿರುಗಿದನು. ರಾಮಣ್ಣನಿಂದ ಕಾಗದ ಬರುವವರೆಗೂ ಅವನಿಗೆ ಶಾಂತಿಯೇ ಇರಲಿಲ್ಲ. ಕಾಗದ ಬಂದಮೇಲೆ ಶಾಂತಿ ದೊರೆಯಲೂ ಇಲ್ಲ.

ರಾಮಣ್ಣ ಮೈಸೂರಲ್ಲಿ ತನಗಿದ್ದ ಕೆಲಸವನ್ನು ಮುಗಿಸಿಕೊಂಡು ಕೃಷ್ಣರಾಯರ ಮನೆಗೆ ಹೋದನು ಅವರು ರಮಾವಿಲಾಸ ಅಗ್ರಹಾರದಲ್ಲಿದ್ದರು. ಅವರಿಗೆ ಪೆನ್‌ಷನ್ ಆಗಿ ಒಂದೂವರೆ ವರ್ಷಗಳಾಗಿ ಹೋಗಿದ್ದುವು. ರಾಮಣ್ಣ ಗೇಟನ್ನು ತೆಗೆದುಕೊಂಡು ಒಳಕ್ಕೆ ಹೋದನು. ಮುಂದಿನ ವರಾಂಡದಲ್ಲಿ ಕೃಷ್ಣರಾಯರು ಆರಾಮು ಕುರ್ಚಿಯಲ್ಲಿ ಕುಳಿತುಕೊಂಡು ಭಗವದ್ಗೀತೆಯನ್ನು ಓದಿಕೊಳ್ಳುತ್ತಿದ್ದರು. ರಾಮಣ್ಣನನ್ನು ನೋಡಿ ಚಕಿತರಾಗಿ ಎದ್ದು ಸ್ವಾಗತವನ್ನು ನೀಡಿದರು. ಆಮೇಲೆ ಅವನನ್ನು ಕರೆದುಕೊಂಡು ಒಳಗೆ ಹಾಲಿಗೆ ಹೋದರು. ಹಾಲಿನಲ್ಲಿ ತುಳಸಾಬಾಯಿ ಇದ್ದಳು.

'ಕುಳಿತುಕೊಳ್ಳಿ ರಾಮಣ್ಣ!' ಎಂದು ಅವರು ಹೇಳಿದರು. ಇಬ್ಬರೂ ಕುಳಿತರು.

ತುಳಸಾಬಾಯಿಗೆ ರಾಮಣ್ಣನನ್ನು ನೋಡುತ್ತಲೂ ಹಿಂದೆ ತುಮ

ಕೂರಿನಲ್ಲಿ ನಡೆದುದೆಲ್ಲ ಜ್ಞಾಪಕಕ್ಕೆ ಬಂದು ಆಕೆಗೆ ಅಳುಬಂತು. ಕೃಷ್ಣ ರಾಯರು ಗಂಭೀರವಾಗಿ,

'ಯಾವಾಗ ಬಂದಿರಿ ರಾಮಣ್ಣ? ಎಲ್ಲಿ ಇಳಿದುಕೊಂಡಿದ್ದೀರಿ?' ಎಂದು ಕೇಳಿದರು.

ನಿನ್ನೆ ಮಧ್ಯಾಹ್ನ ಬಂದೆ. ನನ್ನ ನೆಂಟರ ಮನೆಯಲ್ಲಿ ಇಳಿದು ಕೊಂಡಿದ್ದೇನೆ. ನನ್ನ ಅಣ್ಣಂದಿರು ತಮ್ಮ ಒಬ್ಬ ಸ್ನೇಹಿತನಿಗೆ ಜಾಮೀ ನಾಗಿ ನಿಂತು ಸಾಲ ಕೊಡಿಸಿದ್ದರು. ಆ ಸ್ನೇಹಿತ ಬ್ಯಾಂಕಿಗೆ ಸಾಲ ಕೊಡಲಿಲ್ಲ. ಅವರೂ ಕಾದುನೋಡಿ ಹಣ ಬಾರದೆ ಹೋಗಲು ಇಬ್ಬರ ಮೇಲೂ ಕೇಸ್‌ಮಾಡಿದರು. ಡಿಕ್ರಿ ಆಯಿತು. ಆ ಸ್ನೇಹಿತ ತಪ್ಪಿಸಿ ಕೊಂಡು ಎಲ್ಲಿಯೋ ತಿರುಗುತ್ತಿದ್ದ. ಅದರಮೇಲೆ ನನ್ನ ಅಣ್ಣಂದಿ ರಿಂದ ಬ್ಯಾಂಕಿನವರು ಹಣ ವಸೂಲ್ಮಾಡಿಕೊಂಡರು. ಜಾಮೀನ್ ನಿಲ್ಲೋ ಫಜೀತಿ ನೋಡಿ! ಏನುಮಾಡುವುದು? ಸ್ನೇಹಿತ ಎಂದು ಇವರು ನಂಬಿದರು, ಜಾಮೀನಾದರು. ಈಗ ಆ ಮನುಷ್ಯ ಸಿಕ್ಕಿದ್ದಾನೆ. ಅವನು ತಾನು ಪ್ರಜಾಪ್ರತಿನಿಧಿ ಸಭೆಗೆ ಮೆಂಬರಾಗಿ ಬರಬೇಕು, ದೇಶೋ ದ್ಧಾರ ಮಾಡಬೇಕು ಎಂದು ಈಗ ಹೊರಕ್ಕೆ ತಲೆ ಹಾಕಿದ್ದಾನೆ. ಜತೆಗೆ ಈಗ ಒಂದು ಕ್ರಿಮಿನಲ್ ವ್ಯಾಜ್ಯದಲ್ಲಿ ಅಪರಾಧಿಯಾಗಿ ಸಿಕ್ಕಿಹಾಕಿ ಕೊಂಡು ಪೇಚಾಡುತ್ತಿದಾನೆ. ರಾಜಿಮಾಡಿಸಿ ಕೇಸನ್ನು ಹಿಂದಕ್ಕೆ ತೆಗೆದುಕೊಳ್ಳುವಂತೆ ನಾನು ಮಾಡಬಹುದು. ಅದಕ್ಕಾಗಿ, ಮೈಸೂರಿಗೆ ಬಂದೆ. ನನ್ನ ಅಣ್ಣಂದಿರು ಹಿಂದೆ ತೆತ್ತ ಹಣವನ್ನು ಆ ಮನುಷ್ಯ ಕೊಡ ಲೊಪ್ಪಿದ್ದಾನೆ. ನಮಗೆ ಹಣವೂ ಬೇಕಾಗಿದೆ. ನನ್ನ ಅಣ್ಣಂದಿರ ಕೊನೆಯ ಮಗಳ ಮದುವೆ ಆಗಬೇಕು. ಹಾಗೆಯೇ ತಮ್ಮನ್ನೆಲ್ಲ ನೋಡಿ ಕೊಂಡು ಹೋಗೋಣ, ಬಹಳ ದಿನಗಳಾದುವಲ್ಲ ಎಂದು ತಮ್ಮ ಮನೆಗೆ ಬಂದೆ.'

'ಏನಪ್ಪ! ಕೆಲವು ತಿಂಗಳ ಹಿಂದೆ ಶ್ರೀನಿವಾಸಪುರದಲ್ಲಿ ಮದುವೆ ಗಳಾದುವಲ್ಲ. ನೀವೂ ಹೋಗಿದ್ದಿರಾ?' ಎಂದು ತುಳಸಾಬಾಯಿ ಕೇಳಿದಳು.

'ಹೋಗಿದ್ದೆನಮ್ಮ. ಅಗತ್ಯವಾಗಿ ಬರಬೇಕು ಎಂದು ನನಗೆ

ಸೀತಾರಾಮು ಕಾಗದ ಬರೆದಿದ್ದ. ನಾನೂ ಅವನನ್ನು ನೋಡಿ ಐದು ವರ್ಷ ಆಗಿತ್ತು. ನೋಡಿಕೊಂಡು ಬರೋಣ ಎಂದು ಹೋಗಿದ್ದೆ.

'ನಮಗೂ ಕಾಗದ ಬರೆದಿದ್ದ. ಸಂಬಂಧಗಳು ಚೆನ್ನಾಗಿದ್ದರೆ ಹೋಗಿಬರುವುದು ಚೆನ್ನ. ಆ ಪುಣ್ಯ ನಾವು ಕೇಳಿಕೊಂಡು ಬರಲಿಲ್ಲ. ಮದುವೆಗಳು ಹೇಗೆ ನಡೆದುವು?' ಎಂದು ತುಳಸಾಬಾಯಿ ಕೇಳಿದಳು.

'ಏನೋ ನಡೆದುವಮ್ಮ! ಯಾರಿಗೂ ಏನೂ ಸಂತೋಷವಿದ್ದ ಹಾಗೆ ಕಾಣಲಿಲ್ಲ. ಆ ಸಂಸಾರ ನೋಡಿದರೂ ದುಃಖವಾಗುತ್ತೆ. ಇಲ್ಲಿ ನೋಡಿದರೂ ದುಃಖವಾಗುತ್ತೆ.'

'ಅದೇಕಪ್ಪ, ಆ ಸಂಸಾರ ನೋಡಿದರೆ ದುಃಖ? ಮೆಚ್ಚಿ ಮೆಚ್ಚಿ ಎರಡನೆಯ ಮದುವೆ ಮಾಡಿಕೊಂಡನಲ್ಲ. ನಮ್ಮ ಬೀಗಿತ್ತಿಯೂ ಹಟ ಹಿಡಿದು ಮಾಡಿಸಿದಳಲ್ಲ.'

'ಅಮ್ಮ! ಈಗೇತಕ್ಕೆ ಆ ಮಾತುಗಳೆಲ್ಲ? ಅವುಗಳನ್ನೆಲ್ಲ ಆಡು ವುದಕ್ಕೆ ಮಧ್ಯಸ್ಥಿಕೆ ಮಾಡುವುದಕ್ಕೆ ನಾನು ಬರಲಿಲ್ಲ. ಸೀತಾರಾಮು ತನ್ನ ಹಣೆಬರಹ ಇದ್ದಂತೆ ಅನುಭವಿಸಬೇಕು. ತಮ್ಮ ಹಿರಿಯ ಮಗಳು ಎಲ್ಲಿ? ಆಕೆ ಆರೋಗ್ಯವಾಗಿದ್ದಾಳೆಯೆ?'

ಕೃಷ್ಣರಾಯರು ಮಹಡಿಯಮೇಲೆ ತನ್ನ ಕೊಟಡಿಯಲ್ಲಿದ್ದ ಸರೋಜ ಳನ್ನು ಕರೆದರು. ಅವಳು ಮೆಟ್ಟಲಿಳಿದು ಕೆಳಕ್ಕೆ ಬಂದಳು. ಹಾಲಿ ನಲ್ಲಿ ಯಾರೋ ಹೊಸಬರೊಬ್ಬರನ್ನು ಕಂಡು ಮೆಟ್ಟಲು ಸಾಲಿನ ಬಳಿಯೇ ನಿಂತು, 'ಏನಪ್ಪ! ಕರದೆಯಲ್ಲ. ಏಕೆ?' ಎಂದಳು.

'ಅಮ್ಮ! ತುಮಕೂರಿನ ರಾಮಣ್ಣ ಬಂದಿದಾರೆ. ನಿನಗೆ ಗುರುತು ಸಿಕ್ಕಲಿಲ್ಲವೇ?' ಎಂದರು.

ಸರೋಜ ಮುಂದೆ ಬಂದು ಕೈಮುಗಿದು, 'ನಮಸ್ಕಾರ! ಮೊದಲು ಸರಿಯಾಗಿ ನಾನು ನೋಡಲಿಲ್ಲ. ನನ್ನ ಮನಸ್ಸು ನಾನು ಓದುತ್ತಿದ್ದ ವಿಷಯದಮೇಲೆ ಹೋಗಿತ್ತು. ದಯವಿಟ್ಟು ಕ್ಷಮಿಸಿ.' ಎಂದು ಹೇಳಿ ಅಲ್ಲಿದ್ದ ಕುರ್ಚಿಯೊಂದರಲ್ಲಿ ಕುಳಿತುಕೊಂಡಳು. ರಾಮಣ್ಣನೂ, 'ನಮ ಸ್ಕಾರ!' ಎಂದು ಮಾತ್ರ ಹೇಳಿ ಕೈಮುಗಿದನು.

ಸರೋಜ ಜಾರ್ಜೆಟ್ ಸೀರೆಯನ್ನುಟ್ಟುಕೊಂಡಿದ್ದಳು. ಸೊಟ್ಟ

ಬೈತಲೆ ಇತ್ಯಾದಿಗಳು ಇರಲಿಲ್ಲ. ಹಿಂದಿನಂತೆಯೇ ಮಧ್ಯ ಬೈತಲೆ, ಉದ್ದ ಜಡೆ. ಅವಳು ಹೆಚ್ಚೇನೂ ಬೆಳೆದಿರಲಿಲ್ಲ. ಮೊದಲಿಗಿಂತ ಒಂದು ಸುತ್ತು ದುಂಡಾಗಿದ್ದಳೆಂದು ಹೇಳಬಹುದಾಗಿತ್ತು. ಹಿಂದೆ ಕೃಶವಾಗಿ, ಬಳುಕುತ್ತಿದ್ದ ದೇಹ ಈಗ ಸ್ವಲ್ಪ ತುಂಬಿಕೊಂಡಂತೆ ಕಾಣುತ್ತಿತ್ತು. ಮುಖವೇನೂ ಉಲ್ಲಾಸವಾಗಿರಲಿಲ್ಲ; ಅದು ಗಂಭೀರವಾಗಿತ್ತು. ಮೊದಲಿನಷ್ಟು ಲಜ್ಜೆ ಕಂಡುಬರಲಿಲ್ಲ. ಅದಕ್ಕೆ ಬದಲು ಧೈರ್ಯ, ಆತ್ಮವಿಶ್ವಾಸ ಕಂಡು ಬರುತ್ತಿದ್ದುವು. ಹಿಂದೆ ಸೀತಾರಾಮುವಿನ ಮನೆಗೆ ತಾನು ಹೋಗಿಬರುತ್ತಿದ್ದಾಗ ಅವಳು ತನ್ನೊಡನೆ ಮಾತನಾಡಿದ ಸಂದರ್ಭಗಳು ಬಹಳ ಕಡಮೆ; ಮಾತನಾಡಬೇಕಾಗಿದ್ದಾಗ ಎರಡೋ ಮೂರೋ ಮಾತುಗಳು, ಅಷ್ಟೇ. ಈಗ ಮಾತುಗಳನ್ನು ಧಾರಾಳವಾಗಿ ಆಡಿ ತನ್ನೆದುರಿಗೇನೆ ಕುರ್ಚಿಯಲ್ಲಿ ಕುಳಿತದ್ದನ್ನು ನೋಡಿ ರಾಮಣ್ಣ, — ಡಾಕ್ಟರ್ ಕಳೆ ಆಗಲೇ ಕಂಡುಬರುತ್ತಿದೆ ಎಂದು ಮನಸ್ಸಿನಲ್ಲಿ ಹೇಳಿಕೊಂಡನು.

ಒಂದು ನಿಮಿಷ ಯಾರೂ ಏನೂ ಮಾತನಾಡಲಿಲ್ಲ ತರುವಾಯ ಸರೋಜ,

'ನಿಮ್ಮ ಹೆಂಡತಿ ಮಕ್ಕಳು ಆರೋಗ್ಯವಾಗಿದ್ದಾರೆಯೆ? ಈಗ ನೀವು ಯಾವ ಕೆಲಸದಲ್ಲಿದ್ದೀರಿ?' ಎಂದು ಕೇಳಿದಳು.

'ನನ್ನ ಹೆಂಡತಿ ಮಕ್ಕಳು ಆರೋಗ್ಯವಾಗಿದ್ದಾರಮ್ಮ! ನಾನು ತುಮಕೂರಿನಲ್ಲಿಯೇ ಸಬ್ ಡಿವಿಜನ್ ಕಚೇರಿಯಲ್ಲಿ ಹೆಡ್ ಕ್ಲಾರ್ಕ್ ಕೆಲಸದಲ್ಲಿದ್ದೇನೆ.'

ಆ ನೌಕರಿಯ ಹೆಸರನ್ನು ಕೇಳುತ್ತಲೂ ಸರೋಜ ಮುಖವನ್ನು ತಗ್ಗಿಸಿಬಿಟ್ಟಳು. ಆಮೇಲೆ ಪುನಃ ಮುಖವೆತ್ತಿ,

'ಸಂತೋಷ. ನಿಮ್ಮನ್ನು ನೋಡಿದ್ದೂ ಸಂತೋಷ. ತುಮಕೂರಿಗೆ ಯಾವಾಗ ವಾಪಸು ಹೋಗುತ್ತೀರಿ?' ಎಂದಳು.

'ಈ ಮಧ್ಯಾಹ್ನ ಮೆಯಿಲ್ ಗಾಡಿಯಲ್ಲಿ ಬೆಂಗಳೂರಿಗೆ ಹಿಂದಿರುಗೋಣ ಎಂದಿದ್ದೇನೆ. ಅಲ್ಲಿಂದ ಒಂದೆರಡು ದಿನ ಬಿಟ್ಟುಕೊಂಡು ತುಮಕೂರಿಗೆ ಹೋಗುತ್ತೇನೆ.'

ಒಂದು ನಿಮಿಷ ಬಿಟ್ಟುಕೊಂಡು ಸರೋಜ,

'Now I have reconciled myself to my present condition. Nobody need worry himself about me (ಈಗ ನನ್ನ ಪ್ರಕೃತಸ್ಥಿತಿಗೆ ಸಮಾಧಾನ ಮಾಡಿಕೊಂಡಿದ್ದೇನೆ. ಯಾರೂ ನನ್ನ ವಿಚಾರದಲ್ಲಿ ಪೇಚಾಡಬೇಕಾಗಿಲ್ಲ). ನಾನು ಓದಿಕೊಳ್ಳುವುದಕ್ಕೆ ಹೋಗಬೇಕು. ನಾನು ಹೋಗುತ್ತೇನೆ. ತಮ್ಮನ್ನು ನೋಡಿದ್ದು ಸಂತೋಷವಾಯಿತು' ಎಂದು ಇಂಗ್ಲಿಷಿನಲ್ಲಿ ಸ್ವಲ್ಪ, ಕನ್ನಡದಲ್ಲಿ ಸ್ವಲ್ಪ ಹೇಳಿ ಮಹಡಿಯ ಮೇಲಕ್ಕೆ ಹೋಗದೆ ಮುಂದಿನ ಕೊಟಡಿಗೆ ಎದ್ದುಹೋದಳು.

ಅವಳ ಮಾತುಗಳಲ್ಲಿ ತಿರಸ್ಕಾರದ ಅಥವಾ ಜುಗುಪ್ಸೆಯ ಭಾವನೆಯೇನೂ ಇರಲಿಲ್ಲ. ದುಃಖದ ಛಾಯೆಯೇನೋ ಕಾಣುತ್ತಿತ್ತು ; ಜತೆಗೆ ಶಾಂತಿಯ, ಒಂದು ಸ್ಥಿರಸಂಕಲ್ಪದ ಭಾವವೂ ಕಾಣುತ್ತಿತ್ತು. ರಾಮಣ್ಣ ತನ್ನ ಮನಸ್ಸಿನಲ್ಲಿ, 'ಆಕೆ ಪುನಃ ಸೀತಾರಾಮುವಿನೊಡನೆ ಸಂಸಾರ ನಡಸುವುದಕ್ಕೆ ಬರುವಹಾಗಿಲ್ಲ. ಆ ನಿರ್ಧರವನ್ನು ತಿಳಿಸುವುದಕ್ಕಾಗಿಯೇ ಅದನ್ನು ಹೇಳಿದಳು. ಈ ಕಥೆ ಹೀಗೆಯೇ ಕೊನೆಗೊಳ್ಳಬೇಕು ಎಂದು ಕಾಣುತ್ತದೆ' ಎಂದು ಹೇಳಿಕೊಂಡನು. ಸರೋಜ ಮುಂದಿನ ಕೊಟಡಿಗೆ ಹೋದವಳು ಅದರ ಬಾಗಿಲನ್ನೇನೂ ಮುಚ್ಚಲಿಲ್ಲ. ಒಳಗೆ ಕುರ್ಚಿಯಲ್ಲಿ ಕುಳಿತುಕೊಂಡು ಆಲೋಚನಾಪರಳಾಗಿದ್ದಳು. ಹಾಲಿನಲ್ಲಿ ನಡೆಯುವ ಮಾತುಗಳನ್ನು ಕೇಳುವ ಕುತೂಹಲದಿಂದಲೂ ತುಂಬಿದ್ದಳು.

ಸರೋಜ ಇಂಗ್ಲಿಷಿನಲ್ಲಿ ಹೇಳಿದ ಮಾತುಗಳು ತುಳಸಾಬಾಯಿಗೆ ಅರ್ಥವಾಗಲಿಲ್ಲ. ತನ್ನ ತಾಯಿಗೆ ತಿಳಿಯಬಾರದೆಂದೇ ಅವಳು ಅವನ್ನು ಇಂಗ್ಲಿಷಿನಲ್ಲಿ ಆಡಿದ್ದು. ಕೃಷ್ಣರಾಯರು,

'ರಾಮಣ್ಣ! ನೀವು ಇಲ್ಲಿಯ ಸಮಾಚಾರ ತಿಳಿದುಕೊಳ್ಳಬೇಕು ಎಂದು ಬಂದಿದ್ದೀರಿ. ಆದ್ದರಿಂದ ಹೇಳುತ್ತೇನೆ. ಈಗ ಸರೋಜಳನ್ನು ಡಾಕ್ಟರ್ ಪರೀಕ್ಷೆಗೆ ಓದಿಸಿ ಆಯಿತು. ಅವಳೂ ಎಲ್ಲದರಲ್ಲೂ ತೇರ್ಗಡೆಯಾಗಿದ್ದಾಳೆ. ಅವಳು ಸ್ವತಂತ್ರವಾಗಿ ಜೀವನ ನಡಸುವಂತಾಗಲಿ ಎಂಬುವ ಆಲೋಚನೆಯಿಂದ ನಾವು ಹಾಗೆ ಓದಿಸಿದೆವು. ಮುಂದೆ ಅವಳ ಭವಿಷ್ಯ ಹೇಗಿದೆಯೋ ನಮಗೆ ಗೊತ್ತಿಲ್ಲ. ನಾವು

ಆಲೋಚನೆ ಮಾಡುವುದೊಂದು ಆಗುವುದು ಬೇರೊಂದು. ಸರೋಜಳ ಮದುವೆಯ ವಿಚಾರದಲ್ಲಿ ಅದು ನಮಗೆ ಪೂರ್ತಿ ಅನುಭವಕ್ಕೆ ಬಂದಿದೆ. ನನಗೂ ಪೆನ್‍ಷನ್ ಆಗಿ ಒಂದೂವರೆ ವರ್ಷವಾಯಿತು. ಇನ್ನು ಹೆಚ್ಚು ಕಾಲ ನಾವು ಮೈಸೂರಿನಲ್ಲಿರಬೇಕಾದ್ದಿಲ್ಲ. ಶಿವಮೊಗ್ಗದಲ್ಲಿ ಸ್ವಂತ ಮನೆ ಇದೆ. ನಾಳೆ ಸರೋಜ ಶಿವಮೊಗ್ಗದಲ್ಲಿ ಒಂದು ಅಂಗಡಿ ಇಟ್ಟು ಕೊಂಡು ಸ್ವಂತವಾಗಿಯೇ ಡಾಕ್ಟರಾಗುತ್ತಾಳೆ. ನಮ್ಮ ರಘು ಈಗ ಪೂನಾದಲ್ಲಿ ಎಲ್‍ಎಲ್.ಬಿ, ಪರೀಕ್ಷೆಗೆ ಓದುತ್ತಿದಾನೆ. ಇನ್ನು ಒಂದು ವರ್ಷ ಬಾಕಿ ಇದೆ. ಆಮೇಲೆ ಶಿವಮೊಗ್ಗದಲ್ಲೇ ಅವನು ಬೋರ್ಡ್ ಹಾಕುತ್ತಾನೆ. ಇದು ನಮ್ಮ ವಿಚಾರ ' ಎಂದು ಹೇಳಿದರು.

'ನಾಗರಾಜರಾಯರು ಈಗ ಎಲ್ಲಿದ್ದಾರೆ?'

' ಅವನು ಈಗ ಚಿತ್ರದುರ್ಗದಲ್ಲಿ ಡೆಪ್ಯುಟಿ ಕಮಿಷನರಿಗೆ ಅಸಿಸ್ಟೆಂಟಾಗಿದ್ದಾನೆ. ಬೇರೆ ಕಡೆಗೆ ವರ್ಗವಾಗಬಹುದು ಎಂದು ಕಾಗದ ಬರೆದಿದ್ದ. ಅವನು ಇನ್ನೆರಡು ದಿನಗಳಲ್ಲಿ ಇಲ್ಲಿಗೆ ಬಂದಾನು.'

' ರಾಮಣ್ಣ! ನೋಡಿ ನಮ್ಮ ಪುಣ್ಯ! ಅಸಿಸ್ಟೆಂಟ್ ಕಮಿಷನರ್ ಹುದ್ದೆಯಲ್ಲಿರೋ ಮಗ ಮದುವೆಯಿಲ್ಲದೆ ಗೊಡ್ಡುಬ್ರಹ್ಮಚಾರಿಯ ಹಾಗಿದ್ದಾನೆ. ಒಬ್ಬ ಸೀತಾರಾಮುವಿನಿಂದ ನಮ್ಮ ಸಂಸಾರವೆಲ್ಲ ಹೇಗೆ ಕೆಟ್ಟು ಹೋಯಿತು. ಸರೋಜಳ ಕಷ್ಟ ನೋಡಲಾರದೆ, ನಾಳೆ ಅವಳ ಗತಿ ಏನಾಗುತ್ತೋ, ಅವಳನ್ನು ರಕ್ಷಣೆ ಮಾಡುವವರು ಯಾರು?—ತಾನು ಮದುವೆ ಮಾಡಿಕೊಂಡರೆ ಆ ಹೆಂಡತಿ ಸರೋಜಳನ್ನು ಎಲ್ಲಿ ಬಾಳಗೊಡದೆ ಹೋಗುತ್ತಾಳೋ— ಎಂದೆಲ್ಲ ಆಲೋಚನೆ ಮಾಡಿ ಮದ್ರಾಸಿನಿಂದ ಬಂದಿದ್ದ ಶ್ರೀಮಂತ ಹುಡುಗಿಯನ್ನ, ಒಳ್ಳೆ ಅಪರಂಜಿಯಂಥ ಹುಡುಗಿಯನ್ನ— ಬೇಡ, ನಾನು ಮದುವೆಯಾಗದೆಯೇ ಇದ್ದುಬಿಡುತ್ತೇನೆ ಎಂದು ಸಂಕಲ್ಪ ಮಾಡಿ ಕಳಿಸಿಬಿಟ್ಟ ' ಎಂದು ತುಳಸಾಬಾಯಿ ದುಃಖದಿಂದ ಹೇಳಿದಳು.

' ರಘುವಿನ ಮದುವೆ ಆಗಿಲ್ಲ. ಆಗಬೇಕಾಗಿದೆ ' ಎಂದು ಕೃಷ್ಣರಾಯರು ಹೇಳಿದರು.

' ಇನ್ನೂ ಹೆಣ್ಣುಮಕ್ಕಳ ಮದುವೆ ಆಗಬೇಕಾಗಿದೆ. ಸುಕನ್ಯೆಯ

ಮದುವೆಯೇನೋ ಹಿಂದೆ ಆಗಿಹೋಯಿತು. ಇವರಿಗೆ ಪೆನ್‌ಷನ್ ಆಗಿಹೋಯಿತು. ನಾಗರಾಜ ಎಲ್ಲವನ್ನೂ ಸುಧಾರಿಸಬೇಕಾಗಿದೆ. ಅವನೂ ಈಗ ಎಷ್ಟೋ ಮಾಡಿದ್ದಾನೆ. ಸರೋಜಳ ಓದಿಗೆಲ್ಲ ಅವನೇ ಹಣವನ್ನು ಒದಗಿಸಿದ. ಅವನು ದೊಡ್ಡ ಹುದ್ದೆಯಲ್ಲಿದ್ದಾನೆ. ಅವನಿಗೆ ಖರ್ಚುಗಳಿಲ್ಲವೇ? ಆದರೂ ಮಾಡುತ್ತಿದ್ದಾನಪ್ಪ! ಎಲ್ಲಿಯಾದರೂ ಆಯುಸ್ಸು ಹೊಯ್ದುಕೊಂಡು ಚೆನ್ನಾಗಿರಲಿ.'

'ಮುಖ್ಯವಾಗಿ ನೋಡಿಯಮ್ಮ! ಎಲ್ಲರೂ ಒಳ್ಳೆಯವರೇ, ಎಲ್ಲರೂ ತಿಳಿದವರೇ; ಆದರೆ ಎಲ್ಲರೂ ದುರದೃಷ್ಟಶಾಲಿಗಳು. ಏನು ಕಾರಣವೋ ಏನೋ, ಗ್ರಹಚಾರ ದೋಷ; ಪ್ರಾರಂಭದಲ್ಲಿಯೇ ಬಲವಾಗಿ ದ್ವೇಷ ಮನಸ್ತಾಪ ಹುಟ್ಟಿಬಿಟ್ಟಿತು, ಕಾಳ್ಗಿಚ್ಚಿನಂತೆ ಸುಟ್ಟುಬಿಟ್ಟಿತು. ಈಗ ಎಲ್ಲರೂ ನೋಯುತ್ತಿರುವವರೇ ಆಗಿದ್ದಾರೆ. ಆದರೂ ಪರಿಹಾರ ಇಲ್ಲದೇ ಹೋಗಿಲ್ಲ. ಹೊಸ ಪರಿಸ್ಥಿತಿಗೆ ಎಲ್ಲರೂ ಹೊಂದಿಕೊಂಡರೆ ಎಲ್ಲರೂ ಸುಖಪಡಬಹುದು. ಆಗಿ ಹೋದ ಮದುವೆಗಳನ್ನು ವಿಚ್ಛೇದನ ಮಾಡುವುದಕ್ಕಾಗುತ್ತದೆಯೇ? ಹಿರಿಯರು ನೀವು ಆಲೋಚನೆ ಮಾಡಿ. ಈಗಲೂ ಸೀತಾರಾಮು ಕೃಷ್ಣರಾಯರನ್ನು ತನ್ನ ತಂದೆಗಿಂತ ಹೆಚ್ಚು ಎಂದೇ ಗೌರವ ಇಟ್ಟುಕೊಂಡಿದ್ದಾನೆ. ತಮ್ಮನ್ನ ತಾಯಿಗಿಂತ ಹೆಚ್ಚು ಎಂದೇ ಗೌರವ ಇಟ್ಟುಕೊಂಡಿದ್ದಾನೆ. ತಾವು ಔದಾರ್ಯದಿಂದ ಕ್ಷಮಿಸುತ್ತೀರಿ ಎಂದು ನಂಬಿದ್ದಾನೆ' ಎಂದು ರಾಮಣ್ಣ ಹೇಳಿದನು.

'ರಾಮಣ್ಣ! ಇದು ಬಹಳ ತೊಡಕಿನ ವಿಚಾರ. ಮೊದಲನೆಯದಾಗಿ, ನಮ್ಮ ಮಗಳ ಇಷ್ಟಕ್ಕೆ ವಿರೋಧವಾಗಿ ನಾವು ಏನು ಮಾಡುವುದಕ್ಕೂ ಸಿದ್ಧವಾಗಿಲ್ಲ. ಸಂಸಾರ ಮಾಡಬೇಕಾದವಳು ಅವಳು. ಅವಳ ಅಭಿಪ್ರಾಯವನ್ನು ಆಗಲೇ ನೀವು ತಿಳಿದಿದ್ದೀರಿ. ನಾವು ಅವಳನ್ನು ಏತಕ್ಕೆ ಬಲಾತ್ಕಾರ ಮಾಡಬೇಕು? ಇವುಗಳೆಲ್ಲ ಬಲಾತ್ಕಾರ ಪ್ರಯೋಗದಿಂದ ಕೈಗೂಡತಕ್ಕ ವಿಚಾರಗಳೇ?' ಎಂದು ಕೃಷ್ಣರಾಯರು ಹೇಳಿದರು.

'ಅಪ್ಪಾ ರಾಮಣ್ಣನವರೇ! ನಮಗೆ ಸರೋಜಳ ಇಷ್ಟ ಹೇಗೆ ಮುಖ್ಯವೋ ಹಾಗೆಯೇ ನಾಗರಾಜನ ಇಷ್ಟವೂ ಮುಖ್ಯ. ಆ ದಿನವೇ

ಅವನು ಸರೋಜಳನ್ನು ಸೀತಾರಾಮುವಿನ ಮನೆಗೆ ಕಳಿಸುವುದಕ್ಕೆ ಒಪ್ಪಲಿಲ್ಲ. ಸರೋಜ ಒಂದು ವೇಳೆ ಒಪ್ಪಿದರೂ ನಾನು ಖಂಡಿತ ಒಪ್ಪು ವುದಿಲ್ಲ. ನಿಮ್ಮ ಹಿರಿಯ ಮಗನ ಆಸೆ ನಿಮಗೆ ಇರಬೇಕಾದರೆ ಆ ಮಾತನ್ನ ಆಡಬೇಡಿ. ನಿಮ್ಮ ನಾಗರಾಜ ಇಲ್ಲ ಎಂದು ತಿಳಿದುಕೊಂಡು ಬಿಡಿ—ಎಂದು ರೇಗಿ ಹೇಳಿಬಿಟ್ಟ. ಅವನ ಇಷ್ಟಕ್ಕೆ ವಿರೋಧವಾಗಿ ನಾವು ನಡೆಯುವುದಕ್ಕೆ ಆಗುವುದಿಲ್ಲಪ್ಪ. ಕೈಗೆ ಬಂದ ಮಗ! ಅಸಿಸ್ಟೆಂಟ್ ಕಮಿಷನರು! ನಾಳೆ ಡೆಪ್ಯುಟಿ ಕಮಿಷನರ್ ಆಗುವ ಮಗ! ನಾವು ನಮ್ಮ ಅವಿವೇಕದಿಂದ ಕಳೆದುಕೊಂಡುಬಿಡುವುದೇ? ಸರೋಜ ಹೀಗೆಯೇ ಸ್ವತಂತ್ರವಾಗಿ ಬಾಳಬೇಕಾದೀತು ಎಂದು ನಾವೂ ಮನಸ್ಸು ಗಟ್ಟಿಮಾಡಿಕೊಂಡಿದ್ದೇವೆ. ನಾಗರಾಜ ತನ್ನ ತಂಗಿಯನ್ನ ಕೈಬಿಡದೆ ಮೆಡಿಕಲ್ ಕಾಲೇಜಿಗೂ ಸೇರಿಸಿದ. ಡಾಕ್ಟರ್ ಪರೀಕ್ಷೆಯನ್ನೂ ಮಾಡಿಸಿದ. ಮುಂದೆಯೂ ಅವನ ಇಷ್ಟ ಹೇಗಿದೆಯೋ ಹಾಗೆ ನಡೆಯಬೇಕು' ಎಂದು ತುಳಸಾಬಾಯಿ ಹೇಳಿದಳು.

ನಾಗರಾಜ ವಹಿಸಿದ ಪಾತ್ರವನ್ನು ರಾಮಣ್ಣ ಕೇಳಿದಮೇಲೆ ಅವನಿಗೆ ಬಹಳ ನಿರುತ್ಸಾಹವಾಯಿತು. ಒಂದು ಕಡೆ ಸರೋಜಳೂ ಇಷ್ಟಪಡುತ್ತಿಲ್ಲ. Nobody need worry himself about me ಎಂದು ಖಡಾಖಂಡಿತವಾಗಿ ಗಂಭೀರವಾಗಿ ಹೇಳಿಬಿಟ್ಟಳು. ಇನ್ನೊಂದು ಕಡೆ ನಾಗರಾಜ ವಿರೋಧವಾಗಿದ್ದಾನೆ. ಇದು ಕೊನೆಮುಟ್ಟುವ ಹಾಗೆ ಕಾಣುವುದಿಲ್ಲ. ಕೃಷ್ಣರಾಯರೂ ತುಳಸಾಬಾಯಿಯೂ ಏನುಮಾಡಿಯಾರು? ಎಂದು ಚಿಂತಾಮಗ್ನನಾಗಿ ರಾಮಣ್ಣ ಕುಳಿತಿದ್ದನು.

'ಇಲ್ಲಿಯೇ ಊಟ ಮಾಡಿಕೊಂಡು ಹೋಗಿ ರಾಮಣ್ಣ!' ಎಂದು ಕೃಷ್ಣರಾಯರು ಹೇಳಿದರು.

'ನಿಮ್ಮ ಮನೆಯಲ್ಲಿ ಆದಿನ ನೀವೂ ನಿಮ್ಮ ಹೆಂಡತಿ ಬಹಳ ಉಪಚಾರ ಮಾಡಿದಿರಪ್ಪ! ನಾವು ಇನ್ನೂ ಅದನ್ನು ಮರೆತಿಲ್ಲ. ಇಲ್ಲಿಯೇ ಊಟಕ್ಕೇಳಿ. ನೀವು ಬಂದದ್ದೂ ಸಂತೋಷವಾಯಿತು' ಎಂದು ತುಳಸಾಬಾಯಿಯೂ ಊಟಕ್ಕೆ ಆಮಂತ್ರಣ ಕೊಟ್ಟಳು.

'ಅಮ್ಮ! ಸಂತೋಷ. ನಿಮ್ಮ ಮನೆಯಲ್ಲಿ ಊಟಮಾಡುವು

ದಕ್ಕೆ ನಿಮ್ಮ ಮನೆ ಸಂಬಂಧ ಬೆಳಸುವುದಕ್ಕೆ ಪುಣ್ಯ ಮಾಡಿರಬೇಕು. ಆಗಲಿ.'

ರಾಮಣ್ಣ ಅಲ್ಲಿ ಊಟಮಾಡಿಕೊಂಡು ತನ್ನ ಸ್ನೇಹಿತನ ಮನೆಗೆ ಹೊರಟು ಹೋದನು. ಮೆಯಿಲ್ ಗಾಡಿಯಲ್ಲಿ ತನ್ನಣ್ಣನ ಸ್ನೇಹಿತನನ್ನು ಜತೆಗೆ ಕರೆದುಕೊಂಡು ಬೆಂಗಳೂರಿಗೆ ಹೊರಟನು. ಅಲ್ಲಿ ಲಾಯರ್ ಕಚೇರಿಗೆ ಮಾರನೆಯ ದಿನ ಹೋಗಿ ತನ್ನ ಅಣ್ಣನಿಗೆ ಬರಬೇಕಾಗಿದ್ದ ಹಣವನ್ನು—ಸುಮಾರು ಒಂಭೈನೂರು ರೂಪಾಯಿಗಳನ್ನು ಪಾರ್ಟಿಯಿಂದ ವಸೂಲ್ ಮಾಡಿಕೊಂಡು, ಕ್ರಿಮಿನಲ್ ವ್ಯಾಜ್ಯದಲ್ಲಿ ರಾಜಿಗೆ ಏರ್ಪಾಟು ಮಾಡಿ ತುಮಕೂರಿಗೆ ಹಿಂದಿರುಗಿದನು.

ಶ್ರೀನಿವಾಸಪುರಕ್ಕೆ ರಾಮಣ್ಣ ಕಾಗದವನ್ನು ಬರೆದುಹಾಕಿದನು. ಸರೋಜ ಇಂಗ್ಲಿಷಿನಲ್ಲಿ ಹೇಳಿದ ಮಾತುಗಳನ್ನೂ, ತುಳಸಾಬಾಯಿ ನಾಗರಾಜನ ವಿಚಾರವಾಗಿ ಹೇಳಿದ್ದನ್ನೂ 'ಈ ತೊಡಕು ಬಗೆ ಹರಿಯುವ ಸೂಚನೆಯೇನೂ ಕಾಣುಬರುವುದಿಲ್ಲ' ಎಂಬ ತನ್ನ ಅಭಿಪ್ರಾಯವನ್ನೂ ತಿಳಿಸಿದನು.

# ೨೪. ಅಮಲ್ದಾರ್ ಸೀತಾರಾಮರಾವ್

ಶ್ರೀನಿವಾಸಪುರದ ಅಮಲ್ದಾರರು ಹತ್ತು ದಿನ ರಜ ತೆಗೆದುಕೊಂಡು ಕಾರ್ಯಾರ್ಥವಾಗಿ ಬೆಂಗಳೂರಿಗೆ ಹೋಗಿದ್ದರು. ಆ ಅವಧಿಯಲ್ಲಿ ಸೀತಾರಾಮುವೇ ಶಿರಸ್ತೆ ಕೆಲಸದ ಜತೆಗೆ ಅಮಲ್ದಾರಿ ಕೆಲಸವನ್ನೂ ನೋಡಿಕೊಳ್ಳುತ್ತಿದ್ದನು. ಹೀಗೆ ಅಮಲ್ದಾರರು ಮಧ್ಯೆ ಮಧ್ಯೆ ರಜಗಳನ್ನು ತೆಗೆದುಕೊಂಡಾಗ ಸೀತಾರಾಮು ಅಲ್ಪಾವಧಿಯಲ್ಲಿ ಅಮಲ್ದಾರಿ ಕೆಲಸವನ್ನು ನೋಡುತ್ತಿದ್ದುದುಂಟು. ಆದರೆ ಅವನು ನಿಜವಾಗಿಯೂ ಅಮಲ್ದಾರನಾಗಿ ಬೇರೆ ತಾಲ್ಲೂಕಿಗೆ ವರ್ಗವಾಗುವ ಸುಯೋಗ ಶೀಘ್ರದಲ್ಲಿಯೇ ಲಭಿಸಿತು. ಎರಡು ತಿಂಗಳ ಹಿಂದೆ ಸರ್ಕಾರದವರು ಪ್ರೊಬೇಷನರಿ ಅಮಲ್ದಾರರುಗಳನ್ನು ತೆಗೆದುಕೊಳ್ಳುವುದಾಗಿ ಗೆಜೆಟ್ಟಿನಲ್ಲಿ ಪ್ರಕಟಿಸಿದ್ದರು. ಆಗ ಸೀತಾರಾಮು ತಾನೂ ಏತಕ್ಕೆ ಅರ್ಜಿ ಹಾಕಬಾರದು ಎಂದು ಆಲೋಚನೆ ಮಾಡಿ ಅದಕ್ಕೆ ಪ್ರಯತ್ನಪಟ್ಟಿದ್ದನು. ಉಮೇದುವಾರರಲ್ಲಿ ಕೆಲವರನ್ನು ಆಯ್ಕೆ ಮಾಡಿ ಭೇಟಿಗೆ ಬರಬೇಕೆಂದು ಸರಕಾರದಿಂದ ಕಾಗದ ಬಂದಾಗ ಚುನಾವಣೆಯ ಸಮಿತಿಯ ಮುಂದೆ ಸೀತಾರಾಮು ಹೋಗಿದ್ದನು. ಆಗ ಸಮಿತಿಯಲ್ಲಿದ್ದ ರೆವಿನ್ಯೂ ಕಮಿಷನರು—ಸೀತಾರಾಮುವಿನ ತಂದೆ ಶ್ರೀನಿವಾಸರಾಯರನ್ನು ಚೆನ್ನಾಗಿ ತಿಳಿದಿದ್ದವರು—ಸೀತಾರಾಮುವಿನ ಕಾರ್ಯದಕ್ಷತೆ, ಆಕರ್ಷಕವಾದ ಮೂರ್ತಿಸ್ವರೂಪ, ಅವನು ಆಗಲೇ ಪ್ಯಾಸ್ ಮಾಡಿದ್ದ ಅಕೌಂಟ್ಸ್, ರೆವಿನ್ಯೂ, ಸಿವಿಲ್, ಕ್ರಿಮಿನಲ್ ಮೊದಲಾದ ಪರೀಕ್ಷೆಗಳು, ಶಿರಸ್ತೆ ಕೆಲಸದ ಮತ್ತು ತಾಲ್ಲೂಕು ಕಚೇರಿ ಕೆಲಸದ ಸಂಪೂರ್ಣಾನುಭವ—ಇವುಗಳೆಲ್ಲವನ್ನೂ ತಿಳಿದವರಾದ್ದರಿಂದ, 'ನಿಮ್ಮನ್ನು ಪಕ್ಕ ಅಮಲ್ದಾರರ ಪಟ್ಟಿಗೇನೆ ಸೇರಿಸಿದ್ದೇವೆ. ಈಗ ಪ್ರೊಬೇಷನರಾಗಿ ನೀವೇಕೆ ಬರಬೇಕು?' ಎಂದು ಇಂಗ್ಲಿಷಿನಲ್ಲಿ ಕೇಳಿದರು. ಸೀತಾರಾಮು, 'ಒಳ್ಳೆಯದು ಸಾರ್! ಆ ವಿಚಾರಗಳೆಲ್ಲ ನನಗೆ ಗೊತ್ತಿಲ್ಲ. ಗೆಜೆಟ್ಟಿನಲ್ಲಿರುವುದನ್ನು ನೋಡಿ ನಾನೂ ಅರ್ಜಿಯನ್ನು ಹಾಕಿದೆ. 'ತಮ್ಮ ಸಂತೋಷವಿದ್ದ ಹಾಗೆ ಮಾಡಬಹುದು' ಎಂದು

ಹೇಳಿ ಸಮಿತಿಯವರಿಗೆಲ್ಲ ವಂದನೆಗಳನ್ನು ಸಮರ್ಪಿಸಿ ಹಿಂದಿರುಗಿ ಬಂದಿದ್ದನು.

ಸರಕಾರದವರು ಸೀತಾರಾಮುವನ್ನು ಚೆನ್ನಪಟ್ಟಣದ ಆ್ಯಕ್ಟಿಂಗ್ ಅಮಲ್ದಾರನನ್ನಾಗಿ ನೇಮಿಸಿ ಹೊರಡಿಸಿದ್ದ ಆಜ್ಞೆ ರೆವಿನ್ಯೂ ಕಮಿಷನರ ವರ ಕಚೇರಿಯಿಂದ ಟಪಾಲಿನಲ್ಲಿ ಬಂತು. ಅವನಿಗೆ ಅದನ್ನು ಓದಿ ಕೊಂಡು ಬಹು ಸಂತೋಷವಾಯಿತು. ತನ್ನ ತಾಯಿ ಪದೇಪದೇ ಬಯಸುತ್ತಿದ್ದುದು ಶೀಘ್ರದಲ್ಲಿಯೇ ಕೈಗೂಡಿತಲ್ಲ ಎಂದು ಸಂತುಷ್ಟಚಿತ್ತ ನಾಗಿ ತನ್ನ ತಾಯಿಯ ಬಳಿಗೆ ಹೋಗಿ, 'ಅಮ್ಮ! ಸರಕಾರದಿಂದ ಆರ್ಡರ್ ಬಂದಿದೆ. ಇದೇನು ಗೊತ್ತೇ? ಹೇಳು ನೋಡೋಣ' ಎಂದು ನಗುತ್ತ ಕೇಳಿದನು. ಅವನ ಸಂತೋಷಭಾವವನ್ನೂ, ಸರಕಾ ರದ ಆಜ್ಞೆ ಎಂಬುದನ್ನೂ ಜತೆಗೊಳಿಸಿ ಕಾವೇರಮ್ಮ, 'ಏನಪ್ಪ! ಅಮಲ್ದಾರಿ ಕೆಲಸ ಆಯಿತೆ?' ಎಂದು ಸಂಭ್ರಮದಿಂದ ಎದ್ದು ನಿಂತಳು.

'ಹೌದಮ್ಮ! ಚೆನ್ನಪಟ್ಟಣದ ಅಮಲ್ದಾರನನ್ನಾಗಿ ಬಡ್ತಿಕೊಟ್ಟು ವರ್ಗಮಾಡಿದಾರೆ.'

'ನೋಡಪ್ಪ ಸೀತಾರಾಮು! ನಾನು ಹೇಳುತ್ತಿರಲಿಲ್ಲವೇ? ನೀನೂ ಅಮಲ್ದಾರಿ ಕೆಲಸ ಮಾಡುತ್ತೀಯಪ್ಪ ಎಂದು ನಾನು ಹೇಳುತ್ತಿರಲಿ ಲ್ಲವೇ? ನೋಡು ಸೀತಾರಾಮು! ಈಗ ನಾನೂ ಒಬ್ಬಳು ಮನುಷ್ಯಳು ಎಂದು ತಲೆಯೆತ್ತಿಕೊಂಡು ಓಡಾಡುವಂತಾಯಿತು. ತುಳಸಾಬಾಯಿ ಯೊಡನೆ ಮುಖಕ್ಕೆ ಮುಖ ಕೊಟ್ಟು ಮಾತನಾಡುವಂತಾಯಿತು! ನಿನ್ನ ತಂದೆಯಂತೂ ಅಮಲ್ದಾರಿ ಮಾಡಲಿಲ್ಲ. ನನಗೆ ಅದು ದೊಡ್ಡ ಕೊರಗಾಗಿ ಹೋಗಿತ್ತು. ಅವರ ಸ್ನೇಹಿತರು ಬೇಗಬೇಗ ಬಡ್ತಿ ಪಡೆದು ಏರಿದರಲ್ಲ; ಇವರ ಅದೃಷ್ಟ ಹೀನ ಅದೃಷ್ಟ ಆಗಿ ಹೋಯಿತಲ್ಲ. ನಿನ್ನ ತಂದೆ ಯಾವುದನ್ನೂ ಗಮನಿಸದೆ ಕೃಷ್ಣರಾಯರ ಸ್ನೇಹವೊಂದನ್ನೇ ಗಮನಿಸಿ ನನ್ನನ್ನ ಅವಳ ಮುಂದೆಯೆಲ್ಲ ಎಳೆದು ಅಪಮಾನಪಡಿಸುತ್ತಿದಾ ರಲ್ಲ—ಎಂದು ಅಂಥ ಸಂಕಟಪಟ್ಟೆ. ಸೀತಾರಾಮು! ದೇವರು ನಿನಗೆ ಪೂರ್ಣಾಯುಸ್ಸು ಕೊಡಲಪ್ಪ! ಗಂಡ ದೊಡ್ಡ ಹುದ್ದೆಗೆ ಬಂದರೆ

ಹೆಂಡತಿಗೆ ಸಂತೋಷವೇ! ಆದರೆ ನೋಡು, ಮಗ ದೊಡ್ಡ ಹುದ್ದೆಗೆ ಬಂದರೆ ತಾಯಿಗೆ ಆಗುವ ಸಂತೋಷದಲ್ಲಿ ಹತ್ತರಲ್ಲಿ ಒಂದು ಪಾಲೂ ಅಲ್ಲ! ಹೊತ್ತೂ ಹೆತ್ತೂ ಬೆಳಸಿ ಹಗಲೂ ಇರುಳೂ ಮಕ್ಕಳ ಹಿತವನ್ನೇ ಬಯಸಿ ಅವರು ಯಾವಾಗ ಮುಂದಕ್ಕೆ ಬಂದಾರೋ ಅವರು ಎಂದಿಗೆ ಸುಖವಾಗಿದ್ದಾರೋ ಎಂದು ಹಾರೈಸುತ್ತ ತಾಯಿ ಇರುತ್ತಾಳೆ. ನನಗೆ ಸಂತೋಷ ಆಯಿತಪ್ಪ ಸೀತಾರಾಮು!'

'ಅಮ್ಮ! ಅಮಲ್ದಾರಿ ಕೆಲಸ ಆದದ್ದಕ್ಕೇನೆ ಇಷ್ಟೆಲ್ಲ ಸಂಭ್ರಮ ಸಂತೋಷ ಪಟ್ಟೆಯಲ್ಲ. ನಾಳೆ ನಾನು ಅಸಿಸ್ಟೆಂಟ್ ಕಮಿಷನರಾಗಿ ನಾಗರಾಜನ ಜತೆಗೆ ಬಂದರೆ ಹೇಗೆ?'

'ಅಪ್ಪ ಸೀತಾರಾಮು! ಅಸಿಸ್ಟೆಂಟ್ ಕಮಿಷನರೂ ಆಗುತ್ತೀಯಪ್ಪ. ಈ ಕಣ್ಣಲ್ಲಿ ಅದನ್ನೂ ನಾನು ನೋಡುತ್ತೇನೆ. ಪದ್ಮಳ ಅದೃಷ್ಟ ಒಳ್ಳೆಯ ಅದೃಷ್ಟ! ಅವಳ ಜಾತಕ ಒಳ್ಳೆಯ ಜಾತಕ! ನಾನು ಹೇಳುತ್ತಿದ್ದುದು ತಾರ್ಕಣ್ಯಕ್ಕೆ ಬಂತೇನಪ್ಪ? ತಾಯಿಯ ಮಾತನ್ನು ತಳ್ಳಿಹಾಕಬೇಡ. ಪದ್ಮ ಒಳ್ಳೆಯ ಹುಡುಗಿ. ಈಗ ಅವಳೂ ಜಾಣತನ ಕಲಿತಿದ್ದಾಳೆ. ನನಗೆ ನನ್ನ ಹೆಣ್ಣುಮಕ್ಕಳ ಮೇಲೂ ಅಷ್ಟೊಂದು ಪ್ರೇಮವಿಲ್ಲ. ಪದ್ಮಳಮೇಲೆ ನನ್ನ ಪ್ರಾಣವೆಲ್ಲ ಇದೆ. ಅಂಥ ಒಳ್ಳೆಯ ಹುಡುಗಿ! ಅವಳೂ ಚೆಲುವೆಯೇ! ಅವಳನ್ನು ಹೆಂಡತಿಯಾಗಿ ನೀನು ಆದರಿಸಬೇಕು. ಇದುವರೆಗೂ ನೀನು ಯಾರೂ ಮಾಡದ ದೊಡ್ಡ ವ್ರತವನ ಮಾಡಿದೆಯಪ್ಪ! ಇನ್ನು ಸಾಕು. ಆ ಹುಡುಗಿ ಸಂಕಟಪಡುತ್ತ ನಿತ್ಯವೂ ಗಂಟೆಕಾಲ ತುಳಸೀಪೂಜೆಯನ್ನು ಮಾಡುತ್ತ ಶ್ರದ್ಧೆಯಿಂದ ನನ್ನ ಉಪಚಾರ ಮಾಡುತ್ತ, ರಾತ್ರಿ ನನ್ನ ಪಕ್ಕದಲ್ಲಿ ಬಂದು ಮಲಗಿಕೊಂಡರೆ— ನಾನು ನೋಡಿ ಹೇಗೆ ಸಹಿಸಿಕೊಂಡಿರಲಿ? ಆಲೋಚನೆ ಮಾಡು.'

'ಅಮ್ಮ! ಸರೋಜ ಬರುವವರೆಗೂ ನಾನು ಪದ್ಮಳ ಆಸೆ ಬಿಟ್ಟಿರುವುದು ನಿನಗೆ ಗೊತ್ತು. ರಾಮಣ್ಣ ತನ್ನ ಕೆಲಸಕ್ಕೆ ಮೈಸೂರಿಗೆ ಹೋಗಿದ್ದು, ಹಾಗೆಯೇ ಕೃಷ್ಣರಾಯರ ಮನೆಯನ್ನು ಹೊಕ್ಕು ಅಲ್ಲಿನ ಸಂದರ್ಭ ನೋಡಿಕೊಂಡು ಕಾಗದ ಬರೆದಿದ್ದ. ಅದನ್ನು ನೋಡಿದರೆ ಸರೋಜ ನನ್ನೊಡನೆ ಸಂಸಾರ ಮಾಡುವುದಕ್ಕೆ ಬರುವಹಾಗಿಲ್ಲ

ಎಂದು ತಿಳಿಯಿತು. ಅವಳಿಗೂ ಇಷ್ಟವಿಲ್ಲ. ನಾಗರಾಜ ಅವಳನ್ನು ಡಾಕ್ಟರ್ ಪರೀಕ್ಷೆಗೆ ಓದಿಸಿದ, ಅವಳಿಗಾಗಿ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿದ್ದಾನೆ. ಅವಳು ಬೇರೆಯೇ ಇರಬೇಕು, ಸಾಧ್ಯವಾದರೆ ಬೇರೆ ಮದುವೆಯನ್ನೇ ಮಾಡಿಕೊಳ್ಳಬೇಕು ಎಂಬುದು ಅವನ ಹಟ. ತುಳಸಾಬಾಯಿ ಮತ್ತು ಕೃಷ್ಣರಾಯರು ಆ ಮಗಳ ಮತ್ತು ಆ ಮಗನ ಇಷ್ಟಕ್ಕೆ ವಿರೋಧವಾಗಿ ಏನನ್ನೂ ಮಾಡುವುದಿಲ್ಲ. ಈಗಿರುವ ಸ್ಥಿತಿ ಇದು. ಏನುಮಾಡಬೇಕು ಎನ್ನುತ್ತೀಯೆ ?'

'ಅಪ್ಪಾ ಸೀತಾರಾಮು! ನೀನು ಯೋಚನೆ ಮಾಡಬೇಡ. ನನ್ನ ಮಾತನ್ನು ನೀನು ನಡಸು. ಪದ್ಮಳನ್ನು ಹತ್ತಿರಕ್ಕೆ ಬರಮಾಡಿಕೋ. ನಾನು ಸರೋಜಳನ್ನು ಕರೆದುಕೊಂಡು ಬರುತ್ತೇನೆ! ಸಾವಿರ ನಾಗರಾಜರು, ಸಾವಿರ ತುಳಸಾಬಾಯಿಯರು ನನಗೆ ಲಕ್ಷ್ಯವಿಲ್ಲ. ಸರೋಜ ಮುಖ್ಯಳಾದವಳು. ನಾನು ಹೋಗಿ ಕರೆದರೆ ಅವಳು ಬರುತ್ತಾಳೆ. ಅವಳು ಬಹಳ ಒಳ್ಳೆಯ ಹುಡುಗಿ! ನಾನು ಚೆನ್ನಾಗಿ ಪರೀಕ್ಷೆಮಾಡಿ ನೋಡಿದ್ದೇನೆ. ಕೃಷ್ಣರಾಯರು ನನ್ನ ಮಾತನ್ನು ಎಂದಿಗೂ ತಳ್ಳಿಹಾಕುವುದಿಲ್ಲ. ಈಗ ನೀನು ಅಮಲ್ದಾರಿ ಕೆಲಸಕ್ಕೆ ಬಂದೆ. ಅವರೂ ಸಂತೋಷಪಡುತ್ತಾರೆ. ಹಿಂದೆ ಸುಕನ್ಯೆಯ ಮದುವೆಗೆ ಅವರು ಲಗ್ನಪತ್ರಿಕೆ ಕಳಿಸಿದ್ದರು ನೋಡು! ಆಗ ನನಗದನ್ನು ತಿಳಿಸದೆ ನೀನು ತಪ್ಪು ಮಾಡಿಬಿಟ್ಟೆ. ನನಗೆ ತಿಳಿಸಿದ್ದರೆ ಆಗಲೇ ನಾನು ಸಮಾಧಾನಕ್ಕೆ ಬರುವುದಕ್ಕೆ ಉಪಾಯ ಮಾಡುತ್ತಿದ್ದೆ. ಆಗ ನೋಡು! ನಾವು ಉಡುಗೊರೆ ಕಳಿಸಬೇಕಾಗಿತ್ತು, ಸಾಧ್ಯವಾಗಿದ್ದರೆ ಒಬ್ಬರನ್ನು ಕಳಿಸಬೇಕಾಗಿತ್ತು; ಇಲ್ಲ ಒಂದು ಕಾಗದವನ್ನು ಬರೆಯಬೇಕಾಗಿತ್ತು. ನಾವು ನಡತೆ ತಪ್ಪಿದೆವು. ಜತೆಗೆ ದ್ವೇಷವನ್ನು ಬೆಳಸುತ್ತಿದೇವೆ ಎಂಬ ಅಭಿಪ್ರಾಯ ಅವರಿಗೆ ಬರುವಂತಾಯಿತು. ನೀನು ನಿನ್ನ ತಂಗಿಯರ ಮದುವೆಗಳಿಗೆ ಲಗ್ನಪತ್ರಿಕೆ ಕಳಿಸಿದೆ, ಕಾಗದ ಬರೆದೆ. ಅವರು ನೋಡು ಹೇಗೆ ನಡದುಕೊಂಡರು? ಅವರ ಕಾಗದದಲ್ಲಿ ಸಮಾಧಾನಕ್ಕೆ ಅವಕಾಶ ಇಟ್ಟುಕೊಂಡಿದ್ದಾರೆ. ನಿನಗೆ ಅದು ತಿಳಿಯಲಿಲ್ಲ. ಸರೋಜ ಹೇಳಿದ್ದನ್ನು ನೀನು ಗಮನಿಸಿದೆಯಾ? ಎಂದು ನೀನು ನನ್ನನ್ನು ಕೇಳಿದೆ. ನಾನು ಗಮನಿಸಿದೆ. ನೀನು ಅದನ್ನು

ಸರಿಯಾಗಿ ಗಮನಿಸಲೇ ಇಲ್ಲ. ಅದರ ಅಭಿಪ್ರಾಯ ಏನು ಸೀತಾರಾಮು? ನಾನು ದೊಡ್ಡ ಮನಸ್ಸು ಮಾಡಿ, ಅವಳ ಮೇಲೆ ಮೊದಲಿನ ಪ್ರೇಮವನ್ನೇ ಇಟ್ಟು, ಬಂದು ಕರೆಯಬೇಕು; ನಿನ್ನನ್ನೂ ಅವಳನ್ನೂ ಚಿರಕಾಲ ಅಗಲಿಸಬಾರದು ಎಂದು ಅಭಿಪ್ರಾಯ. ಡಾಕ್ಟರ್ ಪರೀಕ್ಷೆ ಈಗೆಲ್ಲ ಮುಗಿಯಿತಪ್ಪ. ನೀನು ಯೋಚನೆ ಮಾಡಬೇಡ. ಹಿಂದೆಯೇ ನನ್ನ ಮನಸ್ಸಿಗೆ ಬಹಳ ಸಂಕಟ ಆಗಿದ್ದಾಗ ಮೈಸೂರಿಗೆ ನಾನು ಹೋಗಬೇಕು ಎಂದು ಮನಸ್ಸು ಮಾಡಿದ್ದೆ. ಈಗ ನೀನು ಅಮಲ್ದಾರಿಗೆ ಬಂದಿದ್ದೀಯೆ. ನಾನು ಹೋಗಿ ಸರೋಜಳನ್ನು ಕರೆದುಕೊಂಡು ಬರುತ್ತೇನೆ; ಧೈರ್ಯವಾಗಿರು.'

ಈ ಮಾತು ಮುಗಿಯುವ ಹೊತ್ತಿಗೆ ಪದ್ಮ ಅಲ್ಲಿಗೆ ಬಂದಳು. ಕಾವೇರಮ್ಮ ಅವಳಿಗೆ ಸಮಾಚಾರವನ್ನು ತಿಳಿಸಿದಳು. ಅವಳು ಪ್ರಸನ್ನ ವದನಳಾಗಿ ಸೀತಾರಾಮುವನ್ನು ನೋಡಿದಳು. ಆಮೇಲೆ ಅತ್ತೆಯ ಕಡೆಗೆ ತಿರುಗಿ, 'ನನಗೂ ಬಹಳ ಸಂತೋಷ ಅತ್ತೆ! ನಾನು ಹಳ್ಳಿಯಲ್ಲಿ ಹುಟ್ಟಿ ಹಳ್ಳಿಯಲ್ಲಿ ಬೆಳೆದವಳು. ನಾನು ಈಗ ಅಮಲ್ದಾರರ ಹೆಂಡತಿ ಆದೆ. ಜನರಲ್ಲಿ ಗೌರವ ಬಂತು. ದೇವರ ದಯೆ, ನಿಮ್ಮ ಆಶೀರ್ವಾದ' ಎಂದು ಹೇಳಿ ದೇವರಿಗೆ ನಮಸ್ಕಾರ ಮಾಡಿದಳು, ಬಳಿಕ ಕಾವೇರಮ್ಮನಿಗೂ ಸೀತಾರಾಮುವಿಗೂ ನಮಸ್ಕಾರ ಮಾಡಿದಳು.

'ನನ್ನ ತಾಯಿ, ಮಾವ, ಅತ್ತೆ ಇದನ್ನು ಕೇಳಿದರೆ ಬಹಳ ಸಂತೋಷ ಪಡುತ್ತಾರೆ. ಅವರಿಗೊಂದು ಕಾಗದ ಬರೆಯಲೇ ಅತ್ತೆ!' ಎಂದು ಕೇಳಿದಳು.

'ಅಗತ್ಯವಾಗಿ ಬರೆಯಮ್ಮ. ನಿನ್ನ ಗಂಡನೂ ಬರೆಯುತ್ತಾನೆ.'

ಆ ದಿವಸ ಮನೆಯಲ್ಲಿ ಸಂತೋಷ ಸಂಭ್ರಮಗಳು ತುಂಬಿದ್ದುವು. ಕಾವೇರಮ್ಮ ಹಬ್ಬದ ಅಡಿಗೆಯನ್ನು ಮಾಡಿದಳು.

ಶಿರಸ್ತೇದಾರರಿಗೆ ಅಮಲ್ದಾರೀ ಕೆಲಸವಾಗಿ ಚೆನ್ನಪಟ್ಟಣಕ್ಕೆ ವರ್ಗವಾಗಿರುವ ಸಮಾಚಾರ ಕೆಲವು ಗಂಟೆಗಳಲ್ಲಿಯೇ ತಾಲ್ಲೂಕು ಕಚೇರಿಯಲ್ಲೂ, ಊರಿನಲ್ಲೂ ಹರಡಿಹೋಯಿತು. ಕಚೇರಿಯ ನೌಕರರು ಸೀತಾರಾಮುವಿಗೆ ಅಭಿನಂದನೆಗಳನ್ನು ಸಮರ್ಪಿಸಲು ಬರುತ್ತಿದ್ದರು.

ಊರಿನ ಗಣ್ಯರು ಆ ಸಮಾಚಾರವನ್ನು ತಿಳಿದು ಅವರೂ ಸಹ ಮನೆಗೆ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿಹೋದರು. ಬಂದವರೆಲ್ಲ ಸೀತಾರಾಮುವಿನ ಒಳ್ಳೆಯ ಗುಣಗಳನ್ನು ಪ್ರಶಂಸೆಮಾಡಿದವರೇ. ಇಂಥ ಶಿರಸ್ತೆದಾರರು ನಮಗೆ ಮುಂದೆ ದೊರೆಯುವುದಿಲ್ಲ. ಚೆನ್ನಪಟ್ಟಣ ತಾಲ್ಲೂಕಿನವರು ಪುಣ್ಯ ಮಾಡಿದ್ದರು. ಅಲ್ಲಿ ಅಮಲ್ದಾರರಾಗಿ ಸರ್ವಜನ ಪ್ರಿಯರಾಗಿ ಕೀರ್ತಿಯನ್ನು ಸಂಪಾದಿಸುತ್ತಾರೆ—ಎಂದು ಮುಂತಾಗಿ ಹೊಗಳುವುದನ್ನು ಕೇಳಿ ಕಾವೇರಮ್ಮ ಬಹಳವಾಗಿ ಸಂತೋಷಪಡುತ್ತಿದ್ದಳು. ಆ ಸಂತೋಷದಲ್ಲಿ ಪದ್ಮ ತಾನೂ ಭಾಗಿಯಾಗಿದ್ದಳು. ಆದರೆ ತಾನು ಅಮಲ್ದಾರರ ಹೆಂಡತಿ ಎಂದು ಹೆಸರು ಪಡೆದರೂ ಅಮಲ್ದಾರರ ಮಕ್ಕಳ ತಾಯಿ ಆಗುವ ಅದೃಷ್ಟವಿಲ್ಲವಲ್ಲ ಎಂಬ ವ್ಯಸನ ಮನಸ್ಸಿನಲ್ಲಿ ಕುಳಿತಿತ್ತು.

'ಅತ್ತೆ! ಈಗ ಅವರಿಗೆ ಅಮಲ್ದಾರಿ ಕೆಲಸವಾಯಿತಲ್ಲ, ಅಕ್ಕನ್ನ ಕರಸಿಕೊಳ್ಳುತ್ತೀರಾ? ನನಗೆ ಮತ್ಸರ ಇಲ್ಲ ಅತ್ತೆ! ಅಕ್ಕ ಬರಬೇಕು ಎಂದು ನನಗೆ ಆಸೆಯಿದೆಯಲ್ಲ!' ಎಂದು ಪದ್ಮ ಕೇಳಿದಳು.

'ಅಮ್ಮ ಪದ್ಮ! ನೀನು ಚಿಂತೆ ಪಡಬೇಡ. ಈ ದಿವಸ ನನ್ನ ಮಗ ನನ್ನ ಮಾತು ಕೇಳುತ್ತಾನೆ ಎಂದು ನಂಬಿಕೆಯಿದೆ. ಅವನೂ ಬುದ್ಧಿವಂತನೇ! ಅವನಿಗೇನು ಗೊತ್ತಿಲ್ಲವೇ? ನಿನಗೆ ಮಲ್ಲಿಗೆ ಮೊಗ್ಗು ಹೆಣೆದು ಜಡೆ ಹಾಕುತ್ತೇನೆ. ಮಲ್ಲಿಗೆ ಮೊಗ್ಗು ತರಿಸಿದ್ದೇನೆ. ನಾರು ಮಗುಟ ಉಟ್ಟುಕೊಂಡು ಬಾ. ನಿನ್ನ ಅಕ್ಕನನ್ನೂ ಕರಸೋಣ. ಈಗ ಅವಳ ಗಂಡನಿಗೆ ಅಮಲ್ದಾರಿ ಕೆಲಸ ಆಯಿತು ಎಂದರೆ ಅವಳಿಗೂ ಸಂತೋಷವಲ್ಲವೆ? ಅವಳೂ ನಿನ್ನ ಹಾಗೆಯೇ ಒಳ್ಳೆಯ ಹುಡುಗಿ' ಎಂದು ಹೇಳಿ ಕಾವೇರಮ್ಮ ತನ್ನ ಸೊಸೆಗೆ ಮಲ್ಲಿಗೆ ಮೊಗ್ಗಿನ ಜಡೆ ಹೆಣೆದು ಅಲಂಕಾರ ಮಾಡಿದಳು.

ಆ ದಿವಸ ಸಾಯಂಕಾಲ ಸುಮಾರು ಆರು ಗಂಟೆಯ ಹೊತ್ತಿಗೆ ಒಬ್ಬ ಗಂಡಸು, ಒಬ್ಬಳು ಹೆಂಗಸು, ಹದಿನೇಳು ವರ್ಷದ ಒಬ್ಬ ಹುಡುಗಿ ಮತ್ತು ಹತ್ತು ವರ್ಷದ ಒಬ್ಬ ಹುಡುಗ ತನ್ನ ಮನೆಗೆ ಬಂದದ್ದನ್ನು ಕಾವೇರಮ್ಮ ಕುತೂಹಲದಿಂದ ನೋಡಿದಳು. ಗಂಡಸು ತಟ್ಟೆಯೊಂದರಲ್ಲಿ

ಹಣ್ಣು ಹೂವು, ಮೊದಲಾದುವನ್ನು ಮುಚ್ಚಿ ತಂದಹಾಗಿತ್ತು. ಹೆಂಗಸು ಕೂಡ ಹಾಗೆಯೇ ಮತ್ತೊಂದು ತಟ್ಟೆಯನ್ನು ತಂದಿದ್ದಳು. ಸೀತಾರಾಮು ಇನ್ನೂ ಮನೆಗೆ ಬಂದಿರಲಿಲ್ಲ. ಬಂದವರಿಗೆ ಪದ್ಮ ಒಂದು ಚಾಪೆಯನ್ನು ಹಾಸಿ ಕುಳಿತುಕೊಳ್ಳುವಂತೆ ಹೇಳಿದಳು. ಪದ್ಮ ಉಟ್ಟುಕೊಂಡಿದ್ದ ಒಳ್ಳೆಯ ಸೀರೆ, ಅವಳ ಮಲ್ಲಿಗೆ ಮೊಗ್ಗಿನ ಜಡೆ, ಅವಳ ಅಲಂಕಾರ—ಎಲ್ಲವನ್ನೂ ನೋಡಿ ಹೆಂಗಸು, 'ಅಮ್ಮ! ಈಕೆ ನಮ್ಮ ಶಿರಸ್ತೇದಾರರ ಹೆಂಡತಿಯೇ?' ಎಂದು ಕಾವೇರಮ್ಮನನ್ನು ಕೇಳಿದಳು.

'ಹೌದಮ್ಮ! ನನ್ನ ಸೊಸೆ ಅವಳು' ಎಂದು ಕಾವೇರಮ್ಮ ಉತ್ತರ ಹೇಳಿದಳು. 'ನನ್ನ ಮಗ ಇನ್ನು ಹತ್ತು ನಿಮಿಷಗಳಿಗೆಲ್ಲ ಬರುತ್ತಾನೆ. ಅವನನ್ನು ನೋಡುವುದಕ್ಕೆ ಬಂದಿರಾ? ನೀವು ಯಾರಮ್ಮ?' ಎಂದು ಕಾವೇರಮ್ಮ ಕೇಳಿದಳು.

ಗಂಡಸು ಪರಿಚಯವನ್ನು ಮಾಡಿಕೊಟ್ಟನು. 'ನಾನು ಹಿಂದೆಯೂ ನಿಮ್ಮ ಮನೆಗೆ ಎರಡು ಮೂರು ಬಾರಿ ಬಂದಿದ್ದೆ. ಆಗ ನೀವು ನನ್ನನ್ನು ನೋಡಲಿಲ್ಲ. ನಾನು ಸೀತಾರಾಮರಾಯರನ್ನು ಮಾತ್ರ ಕಂಡು ಮಾತನಾಡಿ ಹೋದೆನಮ್ಮ. ನಾನು ಇದೇ ಊರಿನವನು. ಸ್ವಲ್ಪ ಜಮೀನಿದೆ. ಆದರೆ ಬಡವ, ಸಂಸಾರ ದೊಡ್ಡದು. ಹಳ್ಳಿಕಡೆ ಪೌರೋಹಿತ್ಯ ಮಾಡುವುದು, ಪಂಚಾಂಗ ನೋಡಿ ಹೇಳುವುದು—ಇವುಗಳಿಂದ ನಾಲ್ಕು ಕಾಸು ಸಂಪಾದನೆ ಮಾಡುತ್ತಿದ್ದೇನೆ. ಹಿಂದೆ ನಿಮ್ಮ ಮನೆಯಲ್ಲಿ ಮದುವೆಗಳಾದಾಗ ನಾನು ಊರಲ್ಲಿರಲಿಲ್ಲ. ಮದುವೆ ಮಾಡಿಸುವುದಕ್ಕೆ ಹಳ್ಳಿಕಡೆ ಹೋಗಿದ್ದೆ. ಇವಳು ನನ್ನ ಹೆಂಡತಿ. ಈ ಹುಡುಗಿ ನನ್ನ ಹಿರಿಯ ಮಗಳು, ಈ ಹುಡುಗ ಎರಡನೆಯ ಮಗ. ಇನ್ನೂ ಇಬ್ಬರು ಮಕ್ಕಳಿದ್ದಾರೆ. ಮಿಡಲ್ ಸ್ಕೂಲಿನಲ್ಲಿ ಓದುತ್ತಿದ್ದ ಈ ನನ್ನ ಮಗಳು ಸರೋಜಾಗೆ ಸೀತಾರಾಮರಾಯರು ನಾಲ್ಕು ವರ್ಷ ಕಾಲ ತಿಂಗಳಿಗೆ ಐದು ರೂಪಾಯಿಗಳಂತೆ ಸಹಾಯ ಮಾಡುತ್ತ ಬಂದರಮ್ಮ! ಮಹಾರಾಯರು! ದೇವರು ಅವರಿಗೆ ನೂರು ವರ್ಷ ಆಯುಸ್ಸು ಕೊಟ್ಟಿರಲಿ.'

ಈ ಆಶೀರ್ವಾದ ಆತನ ಬಾಯಿಂದ ಹೊರಡುವ ಹೊತ್ತಿಗೆ ಸೀತಾರಾಮುವೂ ಮನೆಯೊಳಕ್ಕೆ ಬಂದನು. ಚಾಪೆಯ ಮೇಲೆ ಕುಳಿತಿದ್ದ

ವರೆಲ್ಲ ಎದ್ದು ನಮಸ್ಕಾರ ಮಾಡಿದರು. ಸೀತಾರಾಮುವಿನ ನೋಟ ಆ ಹುಡುಗಿಯ ಕಡೆಗೆ ಹೋಯಿತು. 'ಏನು ಸರೋಜ! ನನ್ನ ಮನೆಗೆ ಬಂದುಬಿಟ್ಟೆ. ಈಚೆಗೆ ಒಂದು ವರ್ಷದಿಂದ ಕಾಣಲೇ ಇಲ್ಲ' ಎಂದು ಹೇಳಿದವನೇ ಪಕ್ಕದಲ್ಲಿ ದೃಷ್ಟಿಯನ್ನು ತಿರುಗಿಸಿದನು. 'ಇದೇನು ಪದ್ಮ! ಈ ಅಲಂಕಾರ?' ಎಂದು ಕೇಳಿದನು. ಆ ಕ್ಷಣದಲ್ಲಿಯೇ ಸೀತಾರಾಮು ವಿನ ದೇಹದಲ್ಲಿ ವಿದ್ಯುತ್ಸಂಚಾರವಾದಂತೆ ಅನುಭವವಾಯಿತು. ಅತ್ತ (ಹುಡುಗಿ) ಸರೋಜ! ಇತ್ತ ಪದ್ಮ! ಇಬ್ಬರ ಹೆಸರುಗಳೂ ತನ್ನ ಬಾಯಿಂದ ಹೊರಟದ್ದು ಇದೇನು ದೈವಘಟನೆ! ಆ ಹುಡುಗಿ ಮನೆಗೆ ಬರುವಳೆಂದು ಕನಸಿನಲ್ಲಿಯೂ ಕಂಡಿರಲಿಲ್ಲ ಎಂದು ಯೋಚಿಸುತ್ತ ಮುಂದೆ ಏನು ಮಾತೂ ಹೊಳೆಯದೆ ಸ್ತಬ್ಧನಾಗಿ ನಿಂತುಬಿಟ್ಟನು. ನಿಂತಿದ್ದ ಜನರನ್ನು ಕುಳಿತುಕೊಳ್ಳುವಂತೆ ಕಾವೇರಮ್ಮನೇ ಹೇಳಿ ಕೂಡಿಸಿದಳು. ಪುರೋಹಿತನು, 'ಸ್ವಾಮಿ! ತಮಗೆ ಅಮಲ್ದಾರಿ ಕೆಲಸ ಆಯಿತು, ಚೆನ್ನಪಟ್ಟಣಕ್ಕೆ ಹೊರಟುಹೋಗುತ್ತೀರಿ ಎಂದು ತಿಳಿಯಿತು. ತಾವು ಮಾಡಿದ ಉಪಕಾರಕ್ಕಾಗಿ ತಮಗೆ ಮತ್ತೊಮ್ಮೆ ಕೃತಜ್ಞತೆಯನ್ನು ತಿಳಿಸು ವುದಕ್ಕೆ ಬಂದಿದ್ದೇನೆ. ನನ್ನ ಕಸಬು ಪೌರೋಹಿತ್ಯ. ತಮಗೆ ತಿಳಿದೇ ಇದೆ. ಹಾಗೆಯೇ ತಮಗೆ ಶಾಸ್ತ್ರೋಕ್ತವಾಗಿ ಆಶೀರ್ವಾದ ಮಾಡಿ ಫಲಮಂತ್ರಾಕ್ಷತೆ ಕೊಟ್ಟು ಹೋಗೋಣ ಎಂದು ಬಂದಿದ್ದೇನೆ. ಈ ಹುಡುಗಿ ತನ್ನ ಗಂಡನ ಮನೆಗೆ ಹೋಗುತ್ತಾಳೆ. ತಮಗೆ ನಮಸ್ಕಾರ ಮಾಡಿ ಆಶೀರ್ವಾದ ಪಡೆಯುವುದಕ್ಕೆ ಬಂದಿದ್ದಾಳೆ' ಎಂದು ಹೇಳಿ ದನು. ಮಾತು ಮುಗಿಯಿತೋ ಇಲ್ಲವೋ, 'ಶತಮಾನಂ ಭವತಿ ಶತಾಯುಃ ಪುರುಷಃ ಶತೇಂದ್ರಿಯ ಆಯುಷ್ಯೇವೇಂದ್ರಿಯೈಃ ಪ್ರತಿತಿಷ್ಠತಿ' ಎಂದು ಮುಂತಾಗಿ ದೀರ್ಘವಾಗಿ ಆಶೀರ್ವಾದ ಮಾಡಿ ತಾನು ತಂದಿದ್ದ ತಟ್ಟೆಯ ಮುಸುಕನ್ನು ತೆಗೆದು ಅಕ್ಷತೆಕಾಳನ್ನು ಕೈಗೆ ತೆಗೆದುಕೊಂಡನು. ಸೀತಾರಾಮು ಪದ್ಮಳನ್ನು ಹತ್ತಿರಕ್ಕೆ ಕರೆದನು. ದಂಪತಿಗಳು ನಮ ಸ್ಕಾರ ಮಾಡಿದರು. ಅಕ್ಷತೆಕಾಳುಗಳನ್ನು ಶಿರಸಾ ಧಾರಣೆ ಮಾಡಿದರು. ಪುರೋಹಿತನು ತೆಂಗಿನಕಾಯಿ ಅಕ್ಷತೆ ಹೂವುಗಳನ್ನು ಇಬ್ಬರಿಗೂ ಕೊಟ್ಟನು. ಸೀತಾರಾಮುವಿಗೆ ಆ ಆಶೀರ್ವಾದದಿಂದ ಮನಸ್ಸಿನಲ್ಲಿ

ಬಹಳ ಹರ್ಷವುಂಟಾಯಿತು. ದೈವಯೋಗದಿಂದ ಪುರೋಹಿತನು ಮನೆಗೆ ಬಂದು ಫಲಮಂತ್ರಾಕ್ಷತೆ ಕೊಟ್ಟು ಆಶೀರ್ವಾದ ಮಾಡಿದನಲ್ಲ. ಇದು ನನ್ನ ಪುಣ್ಯ ಎಂದು ಹೇಳಿಕೊಂಡನು. ಪದ್ಮಳಿಗೂ ಸಂತೋಷ ವಾಯಿತು. ಕಾವೇರಮ್ಮ, 'ಅಪ್ಪಾ ಪುರೋಹಿತರೇ! ಈ ದಿನ ಹೇಗಿದೆ? ತಿಥಿ ಏನು?' ಎಂದು ಕೇಳಿದಳು. ಪುರೋಹಿತನು,

'ಅಮ್ಮ! ಇವತ್ತು ಗುರುವಾರ, ಸಪ್ತಮಿ ತಿಥಿ. ಅದನ್ನು ನೋಡಿ ಕೊಂಡೇ ನಾನೂ ರಾಯರಿಗೆ ಫಲಮಂತ್ರಾಕ್ಷತೆ ಕೊಟ್ಟು ಆಶೀರ್ವಾದ ಮಾಡುವುದಕ್ಕಾಗಿ ಬಂದೆ. ತಾವು ಪುಣ್ಯವಂತರಮ್ಮ! ತಮ್ಮ ಮಕ್ಕಳು ಅಮಲ್ದಾರಿ ಕೆಲಸಕ್ಕೆ ಬಂದುದನ್ನು ನೋಡಿದಿರಿ. ನಾಳೆ ಅಸಿಸ್ಟೆಂಟ್ ಕೆಲಸ ಆಗುವುದನ್ನೂ ನೋಡುತ್ತೀರಿ. ಒಳ್ಳೆಯ ದಣಿ ಎಂದು ಕಚೇರಿ ಯಲ್ಲಿ ಎಲ್ಲರೂ ಹೊಗಳುತ್ತಾರೆ' ಎಂದು ಹೇಳಿದನು.

ಪುರೋಹಿತನ ಹೆಂಡತಿ ತಾನು ತಂದಿದ್ದ ತಟ್ಟೆಯ ಮುಸುಕನ್ನು ತೆಗೆದು, ಪದ್ಮಳಿಗೆ ಅರಸಿನ ಕುಂಕುಮ ಹಚ್ಚಿ ಕುಪಸದ ಕಣವನ್ನು ಕೊಟ್ಟಳು. ಕಾವೇರಮ್ಮ, 'ಅಪ್ಪಾ ಸೀತಾರಾಮು! ಆ ಮುತ್ತೈದೆಗೂ ನೀವು ದಂಪತಿಗಳು ನಮಸ್ಕಾರ ಮಾಡಬೇಕಪ್ಪ' ಎಂದು ಹೇಳಿದಳು. ಅದರಂತೆ ಅವರು ಮಾಡಿದರು.

ಆಮೇಲೆ ಸೀತಾರಾಮು ಹುಡುಗಿಯನ್ನು ಮಾತನಾಡಿಸಿ, ಯೋಗ ಕ್ಷೇಮವನ್ನು ವಿಚಾರಿಸಿ, 'ಸರೋಜ! ನೀನು ದೂರದಲ್ಲಿದ್ದರೂ ನಿನ್ನನ್ನು ಜ್ಞಾಪಿಸಿಕೊಳ್ಳುತ್ತಲೇ ಇರುತ್ತೇನೆ. ನಿನ್ನ ಗಂಡನನ್ನು ಕರೆದುಕೊಂಡು ಚೆನ್ನಪಟ್ಟಣಕ್ಕೆ ಒಂದು ಬಾರಿ ಬಾ' ಎಂದು ಹೇಳಿದನು. ಆ ಹುಡುಗಿ, 'ನಾನೂ ನಿಮ್ಮನ್ನು ಎಂದಿಗೂ ಮರೆಯುವುದಿಲ್ಲ ನನಗೆ ಮಗ ಹುಟ್ಟಿದರೆ ನಿಮ್ಮ ಹೆಸರನ್ನೇ ಇಡುತ್ತೇನೆ' ಎಂದು ಹೇಳಿದಳು. ಆ ಮಾತನ್ನು ಕೇಳಿ ಕಾವೇರಮ್ಮನಿಗೆ ಪರಮಾನಂದವಾಯಿತು. 'ಸರೋಜ! ನೀನು ಬಹು ಜಾಣೆಯಮ್ಮ! ನಿನಗೂ ಎಂಟು ಮಕ್ಕಳಾಗಲಿ! ಗಂಡನ್ನ ಸಂತೋಷಪಡಿಸುತ್ತ ಸುಖವಾಗಿ ಸಂಸಾರ ಮಾಡುತ್ತಿರಮ್ಮ!' ಎಂದು ಹರಸಿದಳು. ಹೀಗೆ ಮಾತುಗಳಾಗಿ ಬಂದಿದ್ದವರು ಹೊರಟು ಹೋದರು.

ಕಾವೇರಮ್ಮ, ' ಸೀತಾರಾಮು ! ಸರೋಜ ಮನೆಗೆ ಬಂದಹಾಗೇ ಆಯಿತಲ್ಲಪ್ಪ ! ಮುಂದೆ ನಡೆಯುವುದು ಇಂದೇ ನಡೆದು ಹೋಯಿತು ! ನೀನು ಸರೋಜ ! ಪದ್ಮ ! ಎಂದು ಬಾಯಿಂದ ಆಡಿದಾಗ ನನಗೆಷ್ಟು ಸಂತೋಷವಾಯಿತು ಅನ್ನುತ್ತೀಯೆ ? ನಿನಗೂ ಸಂತೋಷ ಆಯಿತಲ್ಲ ! ನಿನ್ನ ಬಾಯಿಂದ ಮಾತೇ ಹೊರಡಲಿಲ್ಲ. ನಾನು ಹೇಳಿದ ಮಾತು ನೋಡು ಸೀತಾರಾಮು ! ' ಎಂದಳು.

' ನನಗೂ ಆಶ್ಚರ್ಯವಾಯಿತಮ್ಮ ! ನೀನು ಹೇಳಿದಂತೆಯೇ ನನಗೂ ಹಿಡಿಸಲಾರದಷ್ಟು ಸಂತೋಷವಾಯಿತು.'

' ಆ ಹುಡುಗಿಗೆ ತಿಂಗಳು ತಿಂಗಳೂ ಐದು ರೂಪಾಯಿ ಕೊಡು ತ್ತಿದ್ದೆಯಾ ? '

' ಕೊಡುತ್ತಿದ್ದೆನಮ್ಮ ! ಕಾರಣ ನಿನಗೇ ಅರ್ಥವಾಗುತ್ತೆ.'

' ಒಳ್ಳೆಯದಪ್ಪ ! ದಾನಧರ್ಮ ಮಾಡಿದ್ದು ಒಳ್ಳೆಯ ಫಲವನ್ನೇ ಕೊಡುತ್ತೆ. ನನಗೂ ಸಂತೋಷವೇ ! ಅದರಲ್ಲಿಯೂ ಈ ದಿವಸವೇ ಆ ಪುರೋಹಿತನೂ, ಅವನ ಹೆಂಡತಿಯೂ ಬಂದು ಆಶೀರ್ವಾದ ಮಾಡಿದ್ದು, ಆ ಹುಡುಗಿ ಸರೋಜ ನಮ್ಮ ಮನೆಗೆ ಬಂದದ್ದು—ಎಲ್ಲವೂ ಚೆನ್ನಾಗಿ ಹೊಂದಿಕೊಂಡಿವೆಯಪ್ಪ ! '

ತನ್ನ ತಾಯಿಯ ಸಡಗರವನ್ನೂ ಸಂಭ್ರಮವನ್ನೂ ಸೀತಾರಾಮು ಅರ್ಥಮಾಡಿಕೊಂಡನು. ತನ್ನ ತಾಯಿ ಹೇಳಿದಹಾಗೆ ಇದೇನು ಘಟನೆಗಳ ಯೋಗ ! ದೈವಸಂಕಲ್ಪ ಹೀಗೆಯೇ ಇರುವಹಾಗೆ ಕಾಣು ತ್ತದೆ. ಸರೋಜ ಮನೆಗೆ ಬರುತ್ತಾಳೆ, ನನ್ನೊಡನೆ ಪುನಃ ಸೇರುತ್ತಾಳೆ ಎನ್ನುವುದಕ್ಕೆ ಬೇರೆ ನಿದರ್ಶನವೇ ಬೇಕಾಗಿಲ್ಲ—ಎಂದು ಸಂತುಷ್ಟ ಚಿತ್ತನಾದನು. ರಾತ್ರಿ ಭೋಜನವಾದಮೇಲೆ ಕಾವೇರಮ್ಮ, ' ಅಪ್ಪಾ ಸೀತಾರಾಮು ! ನೀನೂ ಪದ್ಮ ದೇವರಿಗೆ ನಮಸ್ಕಾರ ಮಾಡಿರಪ್ಪ ! ' ಎಂದು ಹೇಳಿದಳು. ಅವರು ದೇವರಿಗೆ ನಮಸ್ಕಾರ ಮಾಡಿ ಅನಂತರ ಕಾವೇರಮ್ಮನಿಗೂ ನಮಸ್ಕಾರ ಮಾಡಿದರು.

' ಅಪ್ಪ ಸೀತಾರಾಮು ! ಈ ತಾಯಿಯ ಮಾತನ್ನು ನಡಸಪ್ಪ ! ಪದ್ಮಳ ಕೈಹಿಡಿದುಕೊಂಡು ಜತೆಯಲ್ಲಿ ಕರೆದುಕೊಂಡು ಹೋಗು.

ಪುರೋಹಿತರು ಈ ದಿನ ಪ್ರಶಸ್ತವಾಗಿದೆ ಎಂದು ಹೇಳಿದ್ದನ್ನು ಕೇಳಿದೆ ಯಲ್ಲ' ಎಂದಳು.

ಸೀತಾರಾಮು ಮತ್ತೆ ಯಾವ ಮಾತನ್ನೂ ಆಡದೆ ಪದ್ಮಳ ಕೈಹಿಡಿದು ಕೊಂಡು ತನ್ನ ಕೊಟಡಿಗೆ ಕರೆದುಕೊಂಡುಹೋದನು! ಕಾವೇರಮ್ಮ ತನ್ನ ಹಾಸಿಗೆಯನ್ನು ತಾನೇ ಸಂತೋಷದಿಂದ ಹಾಸಿಕೊಂಡಳು; ನಿರಾಲೋಚನೆಯಿಂದ ಸುಖವಾಗಿ ನಿದ್ರಿಸಿದಳು.

ಎರಡು ಮೂರು ದಿನಗಳಲ್ಲಿ ಸೀತಾರಾಮುವಿಗೆ ಸ್ನೇಹಿತರಿಂದಲೂ ಬಂಧುಗಳಿಂದಲೂ ಅಭಿನಂದನೆಗಳನ್ನು ತಿಳಿಸಿ ಹಲವು ಕಾಗದಗಳು ಬಂದುವು. ರಾಮಣ್ಣ ತನ್ನ ಸಂತೋಷವನ್ನು ವ್ಯಕ್ತಗೊಳಿಸಿ ಬೇಗನೆಯೆ ಅಸಿಸ್ಟೆಂಟ್ ಕಮಿಷನರ್ ಕೆಲಸವೂ ಆಗಲಿ ಎಂದು ಹಾರೈಸಿದ್ದನು. ಈ ಎಲ್ಲ ಕಾಗದಗಳ ತೂಕವನ್ನು ಮೀರಿಸುವ ಒಂದು ಕಾಗದ ಕೃಷ್ಣರಾಯ ರಿಂದ ಬಂತು. ಲಕ್ಕೋಟೆಯಮೇಲಿದ್ದ ಅಂಚೆಯ ಮುದ್ರೆಯಿಂದಲೂ, ವಿಳಾಸಬರೆದಿದ್ದ ಕೈಬರವಣಿಗೆಯಿಂದಲೂ ಕಾಗದ ಕೃಷ್ಣರಾಯರದೆಂದು ಬಹಳ ಹರ್ಷದಿಂದ ಸೀತಾರಾಮು ಒಡೆದು ನೋಡಿಕೊಂಡನು. ಅದನ್ನು ತಾಯಿಗೂ ತಿಳಿಸಿದನು. ಕಾವೇರಮ್ಮ, 'ಏನು ಬರೆದಿ ದ್ದಾರಪ್ಪ? ಓದಿ ಹೇಳು' ಎಂದಳು. ಸೀತಾರಾಮು, 'ನಿನಗೆ ಅಮಲ್ದಾರಿ ಕೆಲಸ ಆಯಿತು ಎಂದು ಪತ್ರಿಕೆಗಳಲ್ಲಿ ಓದಿದೆ. ನಾಗ ರಾಜನೂ ಆ ವಿಷಯವನ್ನು ತಿಳಿಸಿ ಕಾಗದವನ್ನು ಬರೆದಿದ್ದಾನೆ. ನಮಗೆಲ್ಲ ಬಹಳ ಸಂತೋಷವಾಗಿದೆ. ನಿನ್ನ ತಂದೆ ಶ್ರೀನಿವಾಸರಾವ್ ನನ್ನಂತೆಯೇ ಅಮಲ್ದಾರಿ ಮೊದಲಾದ ಕೆಲಸಗಳಿಗೆ ಏರಲಿಲ್ಲವಲ್ಲ ಎಂಬ ವ್ಯಸನ ನನಗಿತ್ತು. ಈ ವ್ಯಸನ ನನಗಿಂತ ಹೆಚ್ಚಾಗಿ ನಿನ್ನ ತಾಯಿಗಿತ್ತು. ಆದರೆ ನನ್ನ ಮತ್ತು ಶ್ರೀನಿವಾಸರಾವಿನ ಸ್ನೇಹಕ್ಕೆ ನಮ್ಮ ನಮ್ಮ ಹುದ್ದೆ ಗಳ ವ್ಯತ್ಯಾಸದಿಂದ ಯಾವ ರೀತಿಯಲ್ಲೂ ಬಾಧಕ ಬರಲಿಲ್ಲ. ಈಗ ನಿನಗೆ ಅಮಲ್ದಾರಿ ಕೆಲಸವಾದದ್ದು ಶ್ರೀನಿವಾಸರಾವಿಗೆ ಆದಂತೆಯೇ ಎಂದು ಭಾವಿಸಿ ಸಂತೋಷಪಡುತ್ತಿದ್ದೇನೆ. ನಿನ್ನ ತಾಯಿಯೂ ಬಹಳ ಸಂತೋಷಪಡುತ್ತಿರಬೇಕು. ಹೀಗೆಯೇ ನೀನು ಅಭಿವೃದ್ಧಿಗೆ ಬರುತ್ತಿರ ಬೇಕೆಂದೂ ನಾವೂ ಕಣ್ಣಲ್ಲಿ ನೋಡಿ ಸಂತೋಷಪಡುತ್ತಿರಬೇಕೆಂದೂ

ಹಾರೈಸುತ್ತಿದ್ದೇನೆ. ಸರೋಜಳೂ ನಿನ್ನತ್ತೆಯೂ ಅದೇ ಮಾತನ್ನು ಹೇಳುತ್ತಿದಾರೆ. ನಿನ್ನ ತಾಯಿಗೆ ತಮ್ಮ ನಮಸ್ಕಾರಗಳನ್ನು ತಿಳಿಸ ಬೇಕೆಂದು ಅಪೇಕ್ಷೆಪಡುತ್ತಾರೆ. ಇನ್ನು ಕೆಲವು ದಿನಗಳಿಗೆಲ್ಲ ನಾವು ಮೈಸೂರನ್ನು ಬಿಟ್ಟು ಶಿವಮೊಗ್ಗಕ್ಕೆ ಹೊರಟುಹೋಗುತ್ತೇವೆ—ಎಂದು ಕಾಗದದ ಸಾರಾಂಶವನ್ನು ಹೇಳಿದನು.

ಕಾವೇರಮ್ಮ, 'ಕೃಷ್ಣರಾಯರು ಸಂತೋಷಪಡುತ್ತಾರೆ, ನಿನಗೆ ಕಾಗದ ಬರೆಯುತ್ತಾರೆ ಎಂಬುದನ್ನು ನಾನು ಮೊದಲೇ ಊಹಿಸಿದ್ದೆನಪ್ಪ. ಮೊನ್ನೆಯೇ ನಾನು ನಿನಗೆ ಹೇಳಿರಲಿಲ್ಲವೇ? ಈಗ ಎಲ್ಲ ಒಳ್ಳೆಯದೇ ಆಯಿತು. ನೀನೂ ಅವರಿಗೆ ಮರ್ಯಾದೆಯಾಗಿ ಜವಾಬು ಬರೆದು ಹಾಕು: ನಿಮ್ಮ ಮತ್ತು ಅತ್ತೆಯವರ ಆಶೀರ್ವಾದಗಳಿಂದ ನಾನು ಏಳಿಗೆಗೆ ಬರುವಂತಾಗಿದೆ. ಮುಂದೆಯೂ ತಮ್ಮ ಆಶೀರ್ವಾದಿಂದಲೇ ನಾನು ಏಳಿಗೆಗೆ ಬರಬೇಕಾಗಿದೆ, ಸಂಸಾರದಲ್ಲಿಯೂ ಸುಖವನ್ನು ಕಾಣ ಬೇಕಾಗಿದೆ. ನನ್ನ ತಾಯಿ ತಮಗೆ ನಮಸ್ಕರಿಸುತ್ತಿದೇನೆ ಎಂದು ತಿಳಿಸುತ್ತಾಳೆ. ತನ್ನ ಸೊಸೆ ಡಾಕ್ಟರ್ ಪರೀಕ್ಷೆ ಮುಗಿಸಿಕೊಂಡದ್ದನ್ನು ಕೇಳಿ ನನ್ನ ತಾಯಿ ಸಂತೋಷಪಡುತ್ತಿದಾಳೆ; ತನ್ನ ಬೀಗಿತ್ತಿಯನ್ನು ನೋಡಿ ಬಹಳ ದಿನಗಳಾದುವು ಎಂದು ನೆನಸಿಕೊಳ್ಳುತ್ತಿದಾಳೆ. ನಾವು ಚೆನ್ನಪಟ್ಟಣಕ್ಕೆ ಇನ್ನೊಂದು ವಾರದೊಳಗಾಗಿ ಹೋಗುತ್ತೇವೆ. ತಮ್ಮೆಲ್ಲರ ಯೋಗಕ್ಷೇಮವನ್ನು ತಿಳಿಸಿ ಮತ್ತೆ ಕಾಗದ ಬರೆಯಬೇಕೆಂದು ಬೇಡುತ್ತೇನೆ—ಎಂದು ಉತ್ತರ ಬರೆ ಎಂದಳು.

ಸೀತಾರಾಮು ಅದರಂತೆಯೇ ಕೃಷ್ಣರಾಯರಿಗೆ ಕಾಗದವನ್ನು ಬರೆದುಹಾಕಿದನು. ಒಂದು ವಾರದೊಳಗಾಗಿಯೇ ಶ್ರೀನಿವಾಸಪುರದಿಂದ ಚೆನ್ನಪಟ್ಟಣಕ್ಕೆ ಸಂಸಾರ ಸಮೇತನಾಗಿ ಹೊರಟು ಹೋದನು; ಹೊಸ ಹುದ್ದೆಯಲ್ಲಿ ಸ್ಥಾಪಿತನಾದನು.

## ೨೫. ಡಾಕ್ಟರ್ ಸರೋಜ !

ಸೀತಾರಾಮುವಿನ ಕಾಗದ ಮೈಸೂರನ್ನು ಮುಟ್ಟಿತು. ಕೃಷ್ಣರಾಯರು ಅದನ್ನು ಓದಿಕೊಂಡು ಸರೋಜಳ ಕೈಗೆ ಕೊಟ್ಟು, 'ಸಮಾಚಾರವನ್ನ ನಿನ್ನ ತಾಯಿಗೆ ತಿಳಿಸಮ್ಮ' ಎಂದು ಹೇಳಿದರು. ಸರೋಜ ಆ ಕಾಗದ ವನ್ನು ಎರಡು ಮೂರುಬಾರಿ ತನ್ನಲ್ಲಿಯೇ ಓದಿಕೊಂಡಳು; ತನ್ನ ತಾಯಿಗೆ ವಿವರಗಳನ್ನು ತಿಳಿಸಿದಳು. ಬಹಳ ಹೊತ್ತಿನವರೆಗೆ ಆ ಕಾಗದದ ಒಕ್ಕಣೆಯ ವಿಷಯವಾಗಿ ವ್ಯಾಖ್ಯಾನಗಳಾಗುತ್ತಿದ್ದುವು. 'ಹಿಂದೆ ಅವನ ಕಾಗದದಲ್ಲಿ ತನ್ನ ತಾಯಿಯ ಸಮಾಚಾರವನ್ನೇನೂ ಬರೆದಿರಲಿಲ್ಲ. ಈಗ ಅದನ್ನೇ ಎತ್ತಿ ಬರೆದಿದ್ದಾನೆ. ಕಾವೇರಿ ಹೇಳಿ ಬರೆಸಿರಬೇಕು ಎಂದು ನನಗೆ ತೋರುತ್ತದೆ! ಬೀಗಿತ್ತಿಯನ್ನು ನೋಡಿ ಬಹಳ ದಿನ ಗಳಾದುವು ಎಂದು ನೆನಸಿಕೊಳ್ಳುತ್ತಿದಾಳೆ—ಎಂದರೆ ಬಹುಶಃ ನಾವು ಅವರ ಮನೆಗೆ ಹೋಗಬೇಕು ಎಂದೋ ತಾನೇ ನಮ್ಮ ಮನೆಗೆ ಬರುತ್ತೇನೆ ಎಂದೋ ಸೂಚನೆ ಇರಬಹುದು. ಸೀತಾರಾಮು ಮತ್ತೆ ನಮ್ಮಿಂದ ಕಾಗದವನ್ನು ನಿರೀಕ್ಷಿಸುವ ಹಾಗಿದೆಯಲ್ಲ. ಏನು ಮಾಡು ತ್ತೀರಿ?' ಎಂದು ತುಳಸಾಬಾಯಿ ಗಂಡನನ್ನು ಕೇಳಿದಳು.

'ನೀನೇನು ಹೇಳುತ್ತೀಯೆ ಸರೋಜ? ನಿನ್ನ ಸಲಹೆ ಹೇಳು ನೋಡೋಣ' ಎಂದು ಕೃಷ್ಣರಾಯರು ಮಗಳನ್ನು ಕೇಳಿದರು.

'ನಾನು ಆಲೋಚನೆ ಮಾಡಬೇಕಪ್ಪ! ನಾನು ಡಾಕ್ಟರ್ ಪರೀಕ್ಷೆ ಮುಗಿಸಿಕೊಂಡದ್ದನ್ನು ಕೇಳಿ ನನ್ನತ್ತೆಯವರು ಸಂತೋಷಪಡುತ್ತಿದಾರೆ ಎಂದು ಕಾಗದದಲ್ಲಿದೆ. ನನ್ನನ್ನು ಚೆನ್ನಪಟ್ಟಣದಲ್ಲಿ ನಿರೀಕ್ಷಣೆ ಮಾಡುವ ಅಭಿಪ್ರಾಯ ಅದರಲ್ಲಿ ನನಗೆ ಕಾಣುತ್ತಿದೆ. ಡಾಕ್ಟರ್ ಪರೀಕ್ಷೆ ಆಯಿತು; ಇನ್ನು ದೂರ ಇರುವುದಕ್ಕೆ ಕಾರಣವೇನೂ ಇಲ್ಲ. ಮೊದಲಿನಂತೆಯೇ ಗಂಡನೊಡನೆ ಸಂಸಾರ ಮಾಡಿಕೊಂಡಿರುವುದಕ್ಕೆ ಬಾ ಎಂದು ಹೇಳಿರು ವಂತೆ ತೋರುತ್ತದೆ. ಈಗ ಏನು ಮಾಡಬೇಕೋ ನನಗೆ ತೋರುವುದಿಲ್ಲ.'

'ಸದ್ಯಕ್ಕೆ ನಾವು ಶಿವಮೊಗ್ಗವನ್ನು ಸೇರಿಕೊಳ್ಳೋಣ. ಆಮೇಲೆ ಎಲ್ಲ ಆಲೋಚನೆಗಳನ್ನು ಮಾಡಬಹುದು. ನಾನು ಸೀತಾರಾಮುವಿಗೆ ಒಂದು ಸಾಮಾನ್ಯ ಉತ್ತರ ಬರೆದುಹಾಕುತ್ತೇನೆ. ನಾವು ಬೆಂಗಳೂರು ಮೂಲಕ ಪ್ರಯಾಣ ಮಾಡುತ್ತೇವೆ ಎಂದು ತಿಳಿಸಿ ಉತ್ತರ ಬರೆಯ ಲೇನಮ್ಮ ಸರೋಜ?' ಎಂದು ಕೃಷ್ಣರಾಯರು ಕೇಳಿದರು.

ತುಳಸಾಬಾಯಿ, 'ಅದೇತಕ್ಕೆ ರೈಲುಚಾರ್ಜು ದಂಡಮಾಡುತ್ತೀರಿ? ಇಲ್ಲಿಂದ ಅರಸೀಕೆರೆ ಮಾರ್ಗವಾಗಿ ಶಿವಮೊಗ್ಗಕ್ಕೆ ಹೋಗಬಹುದಲ್ಲ. ನೇರವಾಗಿ ಶಿವಮೊಗ್ಗಕ್ಕೆ ಹೋಗುವ ಬಂಡಿಯೇ ಇದೆಯಲ್ಲ. ಬಳಸಿ ಕೊಂಡು ಏಕೆ ಹೋಗಬೇಕು? ದುಡ್ಡೇನು ಕೊಳ್ಳೇಹೋಗುತ್ತಿದೆಯೇ ನಿಮಗೆ? ಪೆನ್ಷನ್ ಆಗಿ ಎರಡು ವರ್ಷಗಳಾದವು. ಇನ್ನೂ ನಿಮಗೆ ದುಂದು ಖರ್ಚಿನ ಚಟ ಬಿಟ್ಟಿಲ್ಲ' ಎಂದು ಖಂಡಿಸಿದಳು.

ಸರೋಜ ತನ್ನ ತಾಯಿಯ ಮುಖವನ್ನು ದುಃಖದಿಂದ ನೋಡುತ್ತ, 'ಅಮ್ಮ! ಅಪ್ಪ ಕೇಳಿದ ಮಾತಿನ ಅಭಿಪ್ರಾಯ ನಿನಗೆ ಅರ್ಥವಾಗಲಿಲ್ಲ. ಏತಕ್ಕೆ ಖಂಡಿಸಿ ಆಡುತ್ತೀಯೆ?' ಎಂದು ಸಮಾಧಾನಹೇಳಿ, 'ಚನ್ನಪ ಟ್ಟಣದ ಮಾರ್ಗವಾಗಿ ಹೋಗುವುದು ಬೇಡಪ್ಪ! ಈಗ ನಾನು ಅವರ ಕಣ್ಣಿಗೆ ಬೀಳುವುದಕ್ಕೆ ಇಷ್ಟಪಡುವುದಿಲ್ಲ. ಅರಸೀಕೆರೆಯ ಮಾರ್ಗವಾಗಿ ಹೊರಟು ಹೋಗೋಣ.' ಎಂದು ಕೃಷ್ಣರಾಯರಿಗೆ ಹೇಳಿದಳು.

'ಸರಿಯಮ್ಮ! ನಿನ್ನ ಇಷ್ಟಕ್ಕೆ ವಿರೋಧವಾಗಿ ನಾನೇನನ್ನೂ ಮಾಡುವುದಿಲ್ಲ.' ಎಂದು ಅವರು ಹೇಳಿದರು.

ಶೀಘ್ರದಲ್ಲಿಯೇ ಮೈಸೂರನ್ನು ಬಿಟ್ಟು ಹೊರಡುವ ನಿಷ್ಕರ್ಷೆ ಯಾದಮೇಲೆ ಕೃಷ್ಣರಾಜೇಂದ್ರ ಆಸ್ಪತ್ರೆಯಲ್ಲಿ ಡಾಕ್ಟರಾಗಿರುವ ತಮ್ಮನ ಮನೆಗೆ ಒಂದು ದಿನ ಹೋಗಿಬರಬೇಕಾಗುತ್ತದೆಂದು ಕೃಷ್ಣರಾಯರಿಗೆ ತೋರಿತು. ಇನ್ನು ಆ ಪ್ರಸ್ತಾಪವನ್ನು ತಮ್ಮ ಹೆಂಡತಿಯ ಮುಂದೆ ಎತ್ತಿದರೆ ಆಕೆ ಏನು ಹೇಳುವಳೋ, ಹಿಂದೆ ನಡೆದ ಪ್ರಸಂಗದ ಮೇಲೆ ವ್ಯಾಖ್ಯಾನಗಳು ಮತ್ತೆ ಎಲ್ಲಿ ಪ್ರಾರಂಭವಾಗುವುವೋ ಎಂದು ಶಂಕಿಸಿ ತಮ್ಮ ಆಲೋಚನೆಯನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡರು.

ಸರೋಜಳನ್ನು ಮೆಡಿಕಲ್ ಕಾಲೇಜಿಗೆ ಸೇರಿಸುವ ನಿರ್ಧಾರ ಬಂದಾಗ ಅವಳನ್ನು ಆ ಚಿಕ್ಕಪ್ಪನ ಮನೆಯಲ್ಲಿ ಬಿಡಬಹುದೆಂದೋ ಹಾಸ್ಟೆಲ್ಲಿನಲ್ಲಿ ಇಡಬಹುದೆಂದೋ ನಾಗರಾಜ ಹೇಳಿದ್ದನಷ್ಟೆ. ಕೃಷ್ಣ ರಾಯರು ಹಾಸ್ಟೆಲ್ಲಿನಲ್ಲಿಡುವ ಏರ್ಪಾಟನ್ನು ಒಪ್ಪಲಿಲ್ಲ. ತುಳಸಾಬಾಯಿ ಸಹ ತನ್ನ ಮೈದುನನ ಮನೆಯಲ್ಲಿ ಸರೋಜಳಿಗೆ ಆಶ್ರಯ ದೊರೆಯಲಿ, ಹಾಸ್ಟೆಲ್ಲಿನಲ್ಲಿಟ್ಟರೆ ದುಡ್ಡು ಬ್ರಹ್ಮಾಂಡ ಖರ್ಚಾಗುತ್ತೆ ಎಂದು ಹೇಳಿದ್ದಳು. ಆದರಂತೆ ಕೃಷ್ಣರಾಯರು ತಮ್ಮನಿಗೆ ಕಾಗದ ಬರೆದು ಏರ್ಪಾಡು ಮಾಡಿದರು. ಸರೋಜ ಚಿಕ್ಕಪ್ಪನ ಮನೆಗೆ ಬಂದ ಒಂದೆರಡು ದಿನಗಳ ಲ್ಲಿಯೇ ಅವಳ ಚಿಕ್ಕಮ್ಮ, 'ಸಂಸಾರ ಮಾಡುತ್ತಿದ್ದವಳು ಮತ್ತೆ ಓದುವು ದಕ್ಕೆ ಏಕೆ ಪ್ರಾರಂಭಿಸಿದೆ? ನಿನ್ನ ಗಂಡ ನಿನ್ನನ್ನು ತೊರೆದನೆ? ತೊರೆಯಲು ಕಾರಣವೇನು ? ನೀನೇನು ಮಾಡಿದೆ ? ಅವನು ಬೇರೆ ಮದುವೆ ಮಾಡಿ ಕೊಂಡನೆಂದು ಕೇಳಿದೆವಲ್ಲ' ಎಂದು ಮುಂತಾಗಿ ಕೆದಕಿಕೊಳ್ಳುತ್ತ ಸರೋಜಳ ಮನಸ್ಸಿಗೆ ಬಹಳ ನೋವನ್ನುಂಟುಮಾಡಿದಳು. ಆ ಚಿಕ್ಕಮ್ಮನಿಗೆ ಸಮಾಧಾನ ಹೇಳುವುದು ಸರೋಜಳಿಗೆ ಕಷ್ಟವಾಯಿತು. ಮತ್ತೆಮತ್ತೆ ಅದೇಮಾತು, ತನ್ನ ಮಕ್ಕಳೊಂದಿಗೆ ಸರೋಜಳ ವಿಷಯ ವಾಗಿ ಚರ್ಚೆಗಳು—ಹೀಗೆಲ್ಲ ನಡೆದು ಸರೋಜಳಿಗೆ ಆ ಮನೆ ಬಿಟ್ಟು ಬೇರೆ ಹೋದರೆ ಸಾಕಪ್ಪ ಎನ್ನುವಷ್ಟು ಸಂಕಟವಾಗುತ್ತಿತ್ತು. ಒಂದು ದಿನ ಆ ಚಿಕ್ಕಮ್ಮ ತನ್ನ ಮಗಳೊಡನೆ ಯಾವುದೋ ವಿಷಯ ಮಾತ ನಾಡುತ್ತ, ಮನಸ್ಸಿನಲ್ಲಿ ಬಹಳ ಮುಜುಗರಪಟ್ಟುಕೊಂಡು, 'ಏನು ಮಾಡುವುದಮ್ಮ? ಗಂಡನ್ನ ಬಿಟ್ಟುಬಂದ ಮುಂಡಿಯರಿಗೆಲ್ಲ ಈ ಮನೆ ಸತ್ರವಾಗಿ ಹೋಗಿದೆ. ನಿನ್ನಪ್ಪ ನನ್ನನ್ನೇನಾದರೂ ಒಂದು ಮಾತುಕೇಳಿ ಅವರಣ್ಣನಿಗೆ ಕಾಗದ ಬರೆದರೆ? ಎಲ್ಲ ಒಪ್ಪಿಕೊಂಡಮೇಲೆ ನನಗೆ ತಿಳಿಸಿದರು. ಮುಂದೆ ಈ ಸಂಸಾರ ಹಾಳಾಗಿ ಹೋಗುತ್ತೆ! ನೀನು ಗಂಡನೊಡನೆ ಸಂಸಾರ ಮಾಡಿಕೊಂಡ ಗರತಿಯಾಗಿ ಬಾಳಮ್ಮ. ಸರೋಜಳ ಮೇಲ್ಪಂಕ್ತಿ ನಿನಗೆ ಬೇಡ' ಎಂದು ರಾಗ ರಾಗವಾಗಿ ಹೇಳುತ್ತಿದ್ದುದು ಕೊಟಡಿಯಲ್ಲಿದ್ದ ಸರೋಜಳಿಗೆ ಕೇಳಿಸಿತು. ಆ ದಿನವೆಲ್ಲ ಸರೋಜ ಊಟವನ್ನೇ ಮಾಡಲಿಲ್ಲ. ಮಾರನೆಯ ದಿನ ತನ್ನ ತಂದೆಗೆ

ಒಂದು ಕಾಗದ ಬರೆದು, 'ಅಪ್ಪ! ನೀನು ಶಿವಮೊಗ್ಗಕ್ಕೆ ವರ್ಗವಾಗಿ ನಾಲ್ಕು ವರ್ಷಗಳಾದುವಲ್ಲ. ಮೈಸೂರಿಗೇನಾದರೂ ವರ್ಗಮಾಡಿಸಿ ಕೊಳ್ಳುವುದು ಸಾಧ್ಯವೆ?' ಎಂದು ಕೇಳಿ ಬರೆದಿದ್ದಳು. ಬೇರೆ ಯಾವ ಸಮಾಚಾರವನ್ನೂ ಬರೆದಿರಲಿಲ್ಲ. ಕೃಷ್ಣರಾಯರು ತಾವು ಮೈಸೂರಿಗೆ ವರ್ಗಮಾಡಿಸಿಕೊಳ್ಳುವುದಾಗಿ ತಮ್ಮ ಹೆಂಡತಿಗೆ ತಿಳಿಸಿದಾಗ, ಆಕೆ, 'ಮೈಸೂರಲ್ಲಿ ಏನು ನಡೆದಿದೆಯೋ ಏನೋ? ಸರೋಜ ಗಂಭೀರವಾಗಿ ಕಾಗದಬರೆದಿದ್ದಾಳೆ. ತಮ್ಮ ನಿಮ್ಮವನಾದರೆ ತಮ್ಮನ ಹೆಂಡತಿ ನಿಮ್ಮವಳೇ? ಅವಳು ತನ್ನ ಮಕ್ಕಳನ್ನು ಮೊಮ್ಮಕ್ಕಳನ್ನು ಸುತ್ತಲೂ ಕೂಡಿಸಿಕೊಂಡು ತೋಡಿ ತೋಡಿ ತಿನ್ನಿಸುತ್ತಾಳೆ. ಹೊರಗಿನ ನೆಂಟು ಒಂದನ್ನೂ ಮನೆಗೆ ಸೇರಿಸುವುದಿಲ್ಲ. ಈಗೇನು? ಮೈಸೂರಿಗೆ ಹೊರಟು ಹೋಗೋಣ' ಎಂದು ಟೀಕೆಮಾಡಿ ಒಪ್ಪಿಗೆ ಕೊಟ್ಟಿದ್ದಳು. ಕೃಷ್ಣ ರಾಯರು ಮೈಸೂರಿಗೆ ವರ್ಗವಾಗಿ ಬಂದರು. ನಾಗರಾಜ ಮತ್ತು ಕೆಲವರು ಹುಡುಗರು ಶಿವಮೊಗ್ಗದಲ್ಲೇ ಉಳಿದಿದ್ದರು. ಇದು ಹಿಂದೆ ನಡೆದಿದ್ದ ಕಥೆ.

ಕೃಷ್ಣರಾಯರು ಮೊದಲಾದವರು ಶಿವಮೊಗ್ಗಕ್ಕೆ ಹೊರಟುಹೋಗು ತ್ತಾರೆಂಬ ವರ್ತಮಾನ ತಿಳಿದು ಅವರ ತಮ್ಮ ಮತ್ತು ತಮ್ಮನ ಹೆಂಡತಿ ಬಂದು ಮಾರನೆಯ ದಿನ ತಮ್ಮ ಮನೆಗೆ ಆತಿಥ್ಯಕ್ಕೆ ಬರಬೇಕೆಂದು ಆಹ್ವಾನ ಕೊಟ್ಟರು. ಕೃಷ್ಣರಾಯರು ನಿರೀಕ್ಷಿಸಿದ್ದಂತೆಯೇ ಆಯಿತು. ಅವರು ಒಪ್ಪಿಕೊಂಡರು. ಆಹ್ವಾನ ಕೊಟ್ಟವರು ಹೊರಟುಹೋದ ಮೇಲೆ ತುಳಸಾಬಾಯಿ, 'ನಾನು ಅವರ ಮನೆಗೆ ಬರುವುದಿಲ್ಲ. ನೀವು ಬೇಕಾದರೆ ಹೋಗಿಬಿಟ್ಟು ಬನ್ನಿ. ನಿಮಗೆ ಅವನು ತಮ್ಮ. ತಂಗಿಯರು ತಮ್ಮಂದಿರು ಎಂದರೆ ನಿಮಗೆ ಯಾವಾಗಲೂ ಹಿಗ್ಗು. ನನಗೆ ಆ ಓರಗಿತ್ತಿಯ ಮುಖ ನೋಡುವುದಕ್ಕೇನೆ ಅಸಹ್ಯ. ನಾನು ಬರುವುದಿಲ್ಲ. ಸುಮ್ಮನೆ ನನ್ನನ್ನು ನಿಷ್ಠುರಪಡಿಸಬೇಡಿ. ನೀವು ಮಾರಾಯರಾಗಿ ಹೋಗಿ ಔತಣಮಾಡಿಸಿಕೊಂಡು ಬನ್ನಿ. ನಾದಿನಿ ಮಣೆಹಾಕಿ ಎಲ್ಲ ಉಪಚಾರ ಮಾಡುತ್ತಾಳೆ' ಎಂದು ಹೇಳಿದಳು. ಆಕೆಗೆ ಕೃಷ್ಣರಾಯರು ಏನು ಸಮಾಧಾನ ಹೇಳುವುದಕ್ಕೆ ಪ್ರಯತ್ನಪಟ್ಟರೂ, ಆಕೆ ತನ್ನ ಹಟವನ್ನು

ಬಿಡುವಂತೆ ತೋರಲಿಲ್ಲ. ಕೃಷ್ಣರಾಯರು ಖಿನ್ನರಾಗಿ ತಮ್ಮ ಮಗಳ ಕಡೆಗೆ ತಿರುಗಿಕೊಂಡು, ಏನಮ್ಮ ಸರೋಜ! ನಿನ್ನ ಅಭಿಪ್ರಾಯ ಏನು? ನಿನ್ನ ಚಿಕ್ಕಮ್ಮ ಒಂದು ತರಹ ಹೆಂಗಸು, ಘನತೆ ಗಾಂಭೀರ್ಯ ಇಲ್ಲ. ನಿನ್ನ ಮನಸ್ಸನ್ನು ಬಹಳ ನೋಯಿಸಿದ್ದಾಳೆ ಎಂದು ಹಿಂದೆಯೇ ನಾನು ಅರ್ಥಮಾಡಿಕೊಂಡೆ. ನೀನು ಬರುತ್ತೀಯಾ? ಹೇಗೆ ನಿನ್ನ ಮನಸ್ಸು?' ಎಂದು ಕೇಳಿದರು. ಸರೋಜ, 'ಚಿಕ್ಕಪ್ಪ ಒಳ್ಳೆಯವನು. ನನಗೆ ತನ್ನಲ್ಲಿದ್ದ ವೈದ್ಯಗ್ರಂಥಗಳನ್ನೆಲ್ಲ ಕೊಟ್ಟಿದ್ದ. ಅವುಗಳನ್ನೇ ನಾನು ಉಪಯೋಗಿಸುತ್ತಿದ್ದುದು. ನನಗೆ ವಿಷಯ ತಿಳಿಯುವೇ ಇದ್ದಾಗ ಚಿಕ್ಕಪ್ಪನ್ನ ಕೇಳುತ್ತಿದ್ದೆ. ನನಗೆ ಪಾಠಹೇಳಿಕೊಡುತ್ತಿದ್ದ. ಆಸ್ಪತ್ರೆಯಲ್ಲಿ ಕೇಸುಗಳನ್ನು ತೋರಿಸಿ, ರೋಗಲಕ್ಷಣಗಳನ್ನೆಲ್ಲ ವಿವರಿಸಿ ಚಿಕಿತ್ಸಾಕ್ರಮ ಮೊದಲಾದುವನ್ನೆಲ್ಲ ಹೇಳಿಕೊಟ್ಟ. ನಿನ್ನಂತೆಯೇ ಅವನಿಗೆ ನನ್ನಲ್ಲಿ ಬಹಳ ಪ್ರೇಮ. ಚಿಕ್ಕಮ್ಮ ಏನಪ್ಪ? ಸಾಮಾನ್ಯ ಹೆಂಗಸರು ಇರೋ ರೀತಿ ಅವಳೂ ಇದ್ದಾಳೆ. ಅವಳನ್ನೇಕೆ ದೂರಬೇಕು? ಅಮ್ಮನನ್ನೂ ಕರೆದುಕೊಂಡು ಹೋಗೋಣ. ಈಗೆನೋ ಹಟಮಾಡಿದ್ದಾಳೆ. ನಾಳೆಗೆ ಹಟ ಇಳಿಯಬಹುದು' ಎಂದು ಉತ್ತರಕೊಟ್ಟಳು. ತುಳಸಾಬಾಯಿಗೆ ಓರಗಿತ್ತಿಯ ಮೇಲಿದ್ದ ಅಸಮಾಧಾನ ಆ ವೈದುನ ಸರೋಜಳಿಗೆ ಮಾಡಿದ ಉಪಕಾರವನ್ನು ಕೇಳಿದಮೇಲೆ ಬಹುಮಟ್ಟಿಗೆ ತಗ್ಗಿಹೋಯಿತು. ಮಾರನೆಯ ದಿನ ಡಾಕ್ಟರ ಮನೆಗೆ ಔತಣಕ್ಕೆ ಎಲ್ಲರೂ ಹೋಗಿದ್ದು ಹಿಂದಿರುಗಿದರು.

ಶಿವಮೊಗ್ಗದಲ್ಲಿ ತಮ್ಮ ಮನೆಯನ್ನು ಸೇರಿಕೊಂಡಮೇಲೆ ತುಳಸಾಬಾಯಿಗೆ ಬಹಳ ಸಂತೋಷವಾಯಿತು. ತನಗೆ ಯಾವ ಊರೂ ಒಗ್ಗುವುದಿಲ್ಲವೆಂದೂ ಯಾರ ಮನೆಯೂ ಒಪ್ಪುವುದಿಲ್ಲವೆಂದೂ ಆಕೆ ಹೇಳಿ ಸ್ವಗೃಹವಾಸದ ಸುಖಾನುಭವವನ್ನು ವ್ಯಕ್ತಪಡಿಸಿದಳು. ಮನೆಯ ಗೇಟಿನ ಕಂಬಕ್ಕೆ ಡಾ|| ಸರೋಜ ಸೀತಾರಾಮುರಾವ್ ಎಂ.ಬಿ.ಬಿ.ಎಸ್., ಎಂಬ ವಿಳಾಸದ ಹಲಗೆಯನ್ನು ಸರೋಜ ಹಾಕಿಸಿದಳು. ಆದರೆ ಊರಿನಲ್ಲೆಲ್ಲ ಡಾ|| ಸರೋಜ ಎಂಬ ಸಂಕ್ಷಿಪ್ತ ನಾಮವೇ ರೂಢಿಗೆ ಬಂತು. ವಿಳಾಸದ ಹಲಗೆಯನ್ನು ಹಾಕಿಸಿ, ದುರ್ಗಿಗುಡಿಯಲ್ಲಿಯೇ

ಜೈಲುರಸ್ತೆಯಲ್ಲಿ ಅಂಗಡಿಯನ್ನು ತೆರೆದಮೇಲೆ ಜನರ ಕಣ್ಣುಗಳೂ ನಾಲಗೆಗಳೂ ಚುರುಕಾದುವು. ಕೃಷ್ಣರಾಯರ ಗೃಹಕೃತ್ಯದ ವಿಚಾರ ನೆರೆಹೊರೆಯವರಿಗೆ ಕೂಡ ಸರಿಯಾಗಿ ತಿಳಿದಿರಲಿಲ್ಲ. ಸರೋಜ ಹಿಂದೆ ಹೆರಿಗೆಗೆ ಬಂದಿದ್ದವಳು ಹೆತ್ತಮಗುವನ್ನು ಕಳೆದುಕೊಂಡಳು ಎಂಬುದು ಮಾತ್ರ ತಿಳಿದಿತ್ತು. ಅವಳು ಶಿವಮೊಗ್ಗವನ್ನು ಬಿಟ್ಟಮೇಲೆ ತನ್ನ ಗಂಡನ ಮನೆಗೆ ಹೊರಟುಹೋದಳೆಂದು ಎಲ್ಲರೂ ತಿಳಿದುಕೊಂಡಿದ್ದರು. ಈಗ ಡಾಕ್ಟರಾಗಿ ಬೋರ್ಡುಹಾಕಿ ಅಂಗಡಿಯನ್ನು ತೆರೆದಮೇಲೆ, ಪರಿಚಯಸ್ಥರು ಕೃಷ್ಣರಾಯರನ್ನೂ ತುಳಸಾಬಾಯಿಯನ್ನೂ ಕೇಳತೊಡಗಿದರು. ಅವರಿಗೆ ಉತ್ತರ ಹೇಳುವುದು ಕಷ್ಟವಾಯಿತು. ಸರೋಜಳ ವಿಚಾರದಲ್ಲಿ ಶಿವಮೊಗ್ಗದಲ್ಲೆಲ್ಲ ವ್ಯಾಖ್ಯಾನಗಳಾಗುತ್ತಿದ್ದುವು. 'ಕೃಷ್ಣರಾಯರ ಮಗಳನ್ನು ಗಂಡ ತೊರೆದುಬಿಟ್ಟ. ಅವಳು ಡಾಕ್ಟರಾಗಿದ್ದಾಳೆ' ಎಂದು ಕೆಲವರು; 'ಆ ಹುಡುಗಿಯೇ ಆ ಗಂಡನ್ನ ಒಲ್ಲೆ ಎಂದು ಹೇಳಿ ತವರು ಮನೆಯಲ್ಲೇ ಇದ್ದುಬಿಟ್ಟಳು. ಕೃಷ್ಣರಾಯರು ಏನು ಮಾಡಿಯಾರು? ಅವಳನ್ನು ಮುಂದಕ್ಕೆ ಓದಿಸಿದರು' ಎಂದು ಕೆಲವರು. ಸರೋಜಳ ಶೀಲದ ವಿಚಾರದಲ್ಲಿ ಟೀಕೆ ಮಾಡಿದವರು ಮತ್ತೆ ಕೆಲವರು. ಈ ರೀತಿಯಲ್ಲಿ ಕೃಷ್ಣರಾಯರ ಸಂಸಾರದ ಗುಟ್ಟು ಶಿವಮೊಗ್ಗದಲ್ಲಿ ರಟ್ಟಾಗಿ ಅವರೆಲ್ಲ ಅಸುಖಿಗಳಾದರು. ಸರೋಜ ಹೊರಗೆ ಬೀದಿಯಲ್ಲಿ ಓದಾಡುವಾಗ, ಅಂಗಡಿಯಲ್ಲಿ ಕುಳಿತಿದ್ದಾಗ ಅವಳನ್ನು ನೋಡುವ ಕುತೂಹಲದಿಂದ ಜನ ಸೇರುತ್ತಿದ್ದರು. ಅವಳ ಸೌಂದರ್ಯದ ವಿಚಾರದಲ್ಲಿ ಮೆಚ್ಚಿಕೆಗಳೂ ಅವಳ ಅನುಗ್ರಹ ಸಂಪಾದನೆಗೆ ಸಂಚುಗಳೂ ಪ್ರಾರಂಭವಾದುವು. ಗಂಡನ್ನ ಬಿಟ್ಟವಳು ಕಂಡವರ ಸ್ವತ್ತು. ಯಾರು ಅದೃಷ್ಟಶಾಲಿಗಳೋ? ಎಂದು ಅನ್ವೇಷಣಗಳು ನಡೆಯುತ್ತಿದ್ದುವು. ಗ್ರೀಕ್ ಪುರಾಣಗಳಲ್ಲಿ ಪ್ರಸಿದ್ಧರಾದ, ಪಾತಕರನ್ನು ಬೆನ್ನಟ್ಟಿ ಬರುವ ರೌದ್ರಿಯರಂತೆ ಸರೋಜಳ ಬೆನ್ನಟ್ಟಿ ಅಪಯಶಸ್ಸು ಅನ್ವೇಷಣಗಳೂ ಬರುತ್ತಿದ್ದುವು. ಇವುಗಳ ಜತೆಗೆ ನಾಗರಾಜ ದೊಡ್ಡ ಹುದ್ದೆಯಲ್ಲಿದ್ದರೂ, ಒಳ್ಳೆಯ ಸುಂದರನಾಗಿ ಯೌವನದಲ್ಲಿದ್ದರೂ ಮದುವೆಯಾಗದೆ ನಿಂತುಬಿಟ್ಟದ್ದು ಟೀಕೆಗಳಿಗೆ ಮತ್ತೂ ಕಾರಣವಾಯಿತು. ಹಿಂದೆಯೆಲ್ಲ ಸಬ್

ಡಿವಿಜನ್ ಆಫೀಸರಾಗಿ ಸರ್ಕಾರದಲ್ಲಿಯೂ ಸಮಾಜದಲ್ಲಿಯೂ ಹಿರಿಯ ಗೌರವಪಡೆದು ಚೆನ್ನಾಗಿ ಬಾಳಿ ಬದುಕಿದವರು ಕೃಷ್ಣರಾಯರು. ಈಗ ಅವರ ಗೃಹಕೃತ್ಯದ ವಿಚಾರ ಎಲ್ಲರ ಮನೆ ಮಾತಾಯಿತು. ಇವುಗಳೆಲ್ಲದರ ಪರಿಣಾಮ: ತುಳಸಾಬಾಯಿ ಮತ್ತು ಕೃಷ್ಣರಾಯರು ಹೊರಗೆಲ್ಲಿಯೂ ಓಡಾಡುತ್ತಿರಲಿಲ್ಲ, ಯಾರ ಮನೆಗೂ ಹೋಗುತ್ತಿರಲಿಲ್ಲ.

ಕೃಷ್ಣರಾಯರಿಗೆ ಪೆನ್‌ಷನ್ ಆದಮೇಲೆ ಅವರು ಬಳಸುತ್ತಿದ್ದ ಮೋಟಾರನ್ನು ನಾಗರಾಜನಿಗೆ ಕೊಟ್ಟರು. ಅವನು ಅದನ್ನು ಮಾರಿಹಾಕಿ ಬೇರೆ ಒಂದು ಹೊಸ ಮೋಟಾರನ್ನು ಕೊಂಡುಕೊಂಡಿದ್ದನು. ಸರೋಜ ಡಾಕ್ಟರಾಗಿ ಶಿವಮೊಗ್ಗದಲ್ಲಿ ನೆಲಸಿದಮೇಲೆ ತಾನು ಬೇರೆ ಮೋಟಾರನ್ನು ಮುಂದೆ ಕೊಂಡುಕೊಳ್ಳುವುದಾಗಿ ಸರೋಜಳಿಗೆ ಭರವಸೆಯನ್ನು ಹೇಳಿ ತನ್ನ ಮೋಟಾರನ್ನು ಅವಳಿಗೆ ಕೊಟ್ಟನು. ಸರೋಜ ಮೋಟಾರ್ ನಡಸುವುದನ್ನೂ ಕಲಿತುಕೊಂಡಳು.

ಕೆಲವು ವಾರಗಳಾದಮೇಲೆ ಸರೋಜ ಡಾಕ್ಟರಾದುದರ ನಾವೀನ ಮಾಸುತ್ತ ಬಂದಿತು; ಕುತೂಹಲಾನ್ವೇಷಣಗಳು ಕಡಮೆಯಾದುವು. ಕೃಷ್ಣರಾಯರನ್ನು ಚೆನ್ನಾಗಿ ತಿಳಿದಿದ್ದವರು ಅವರ ವಿಚಾರದಲ್ಲಿ ಮೊದಲಿನಂತೆಯೇ ಗೌರವವನ್ನಿಟ್ಟಿದ್ದರು. ಸರೋಜಳ ನಡತೆ, ಶೀಲ, ಭೂತದಯೆ, ಮುಖ್ಯವಾಗಿ ಮಕ್ಕಳಲ್ಲಿ ಅವಳಿಗಿದ್ದ ನಿಷ್ಕಪಟ ಪ್ರೇಮ ಅವಳ ಹಸ್ತಗುಣ, ರೋಗಿಗಳನ್ನು ಅನುಕಂಪದಿಂದ ಪ್ರೀತಿಯಿಂದ ಉಪಚರಿಸಿ ನಾಡಿಸುತ್ತಿದ್ದ ರೀತಿ, ಅವರಿಗೆ ಹೇಳುತ್ತಿದ್ದ ಧೈರ್ಯ, ಶುಲ್ಕದ ವಿಚಾರದಲ್ಲಿ ಅವಳ ಔದಾರ್ಯ—ಮೊದಲಾದುವೆಲ್ಲ ಕ್ರಮಕ್ರಮವಾಗಿ ಪ್ರಕಾಶಕ್ಕೆ ಬಂದುವು. ಬೆಳಗ್ಗೆ ಏಳೂವರೆ ಗಂಟೆಗೆ ಸರಿಯಾಗಿ ಮೋಟಾರಿನಲ್ಲಿ ಮನೆಯನ್ನು ಬಿಟ್ಟವಳು ರೋಗಿಗಳ ಮನೆಗಳಿಗೆ ಹೋಗಿ ಅವರ ಸ್ಥಿತಿಗಳನ್ನು ಪರೀಕ್ಷಿಸಿ, ಕೊಡಬೇಕಾದ ಔಷಧಗಳಿಗೆ ಚೀಟಿಗಳನ್ನು ಬರೆದು ಕೊಟ್ಟು ಎಂಟೂವರೆ ಗಂಟೆಗೆ ಸರಿಯಾಗಿ ತನ್ನ ಅಂಗಡಿಗೆ ಬರುತ್ತಿದ್ದಳು. ಅವಳು ಬರುವ ಹೊತ್ತಿಗೆಲ್ಲ ಅಂಗಡಿಯಲ್ಲಿ ಹತ್ತಾರು ಜನ ಕುಳಿತಿರುತ್ತಿದ್ದರು. ಸುಮಾರು ಹತ್ತುಗಂಟೆಯ ಹೊತ್ತಿಗೆ ಆ ಅಂಗಡಿಯಲ್ಲಿ ಐವತ್ತು ಅರುವತ್ತರವರೆಗೆ ಹೆಂಗಸರೂ ಮಕ್ಕಳೂ ಕಿಕ್ಕಿರಿದು ನಿಂತಿರು

ತ್ತಿದ್ದರು. ಒಂದು ಕ್ಷಣವೂ ವಿರಾಮವಿಲ್ಲದೆ ಅವಳು ಅಷ್ಟಾವಧಾನಿಯಂತೆ ಒಮ್ಮೆಗೇ ಎಂಟೂ ಜನಕ್ಕೆ ಗಮನಕೊಡುತ್ತ ತನ್ನ ಕೆಲಸವನ್ನು ನಿರ್ವಹಿಸುತ್ತಿದ್ದಳು. ಅವಳು ಕುರ್ಚಿಯಲ್ಲಿ ಕುಳಿತುಕೊಳ್ಳುವುದಕ್ಕೆ ಅವಕಾಶವೇ ಸಿಕ್ಕುತ್ತಿರಲಿಲ್ಲ. ಮೇಲಿಂದಮೇಲೆ ಜನ ಬರುತ್ತ ದೀರ್ಘವಾಗಿ ತಮ್ಮ ಅಥವಾ ರೋಗಿಗಳ ಸ್ಥಿತಿಯನ್ನು ತಿಳಿಸುತ್ತ ಬೇಜಾರುಗೊಳಿಸುತ್ತಿದ್ದರೂ ಸರೋಜ ಹಸನ್ಮುಖಿಯಾಗಿಯೇ ಎಲ್ಲವನ್ನೂ ಗ್ರಹಿಸಿ, ಚಿಕಿತ್ಸೆಗಳನ್ನು ನಡಸಿ ಕಳಿಸಿಕೊಡುತ್ತಿದ್ದಳು. ಕೆಲವರು ಸಜ್ಜನೆಯರು, 'ಡಾಕ್ಟರನ್ನು ನೋಡಿದರೇನೆ ಸಾಕಮ್ಮ! ರೋಗ ಗುಣವಾಗುತ್ತದೆ' ಎಂದೂ, 'ಆಕೆಯ ಮಾತಿನಲ್ಲೇ ಅಮೃತ ತುಂಬಿದೆಯಮ್ಮ! ಆಕೆಯ ಮಾತು ಕಿವಿಗೆ ಬಿದ್ದೇ ರೋಗ ಹರಿದುಹೋಯಿತು' ಎಂದೂ, 'ಆಕೆಯ ಶಾಂತಿ ನೋಡಿದರೆ ಆಶ್ಚರ್ಯವಾಗುತ್ತದಮ್ಮ! ಭೂದೇವಿಗೂ ಅಂತಹ ಶಾಂತಿಯಿಲ್ಲ' ಎಂದೂ ವಿಧವಿಧವಾಗಿ ಮೆಚ್ಚಿಕೆಯ ಮಾತುಗಳನ್ನಾಡುತ್ತಿದ್ದರು. ಸರೋಜ ಮಕ್ಕಳ ಚಿಕಿತ್ಸೆಗೆ ಏನೊಂದು ಶುಲ್ಕವನ್ನು ತೆಗೆದುಕೊಳ್ಳುತ್ತಿರಲಿಲ್ಲ. ಆದರೆ ತಾನು ಸ್ಥಾಪಿಸಿದ 'ವನಿತಾಸದನ ಮತ್ತು ಶಿಶುರಕ್ಷಣಾಕೇಂದ್ರ' ಎಂಬ ಸಂಸ್ಥೆಗೆ ಸದಸ್ಯೆಯರಾಗುವಂತೆ ಆ ತಾಯಿಯರನ್ನು ಕೇಳಿಕೊಳ್ಳುತ್ತಿದ್ದಳು. ಅದಕ್ಕೆ ವರ್ಷಕ್ಕೆ ಒಂದು ರೂಪಾಯಿ ಮಾತ್ರ ಶುಲ್ಕ. ಉಳಿದ ರೋಗಿಗಳ ವಿಚಾರದಲ್ಲಿ ಬಹಳ ಮಿತವಾಗಿ ಶುಲ್ಕವನ್ನು ತೆಗೆದುಕೊಳ್ಳುತ್ತಿದ್ದಳು. ಹಲವು ಸಂದರ್ಭಗಳಲ್ಲಿ ರೋಗಿಗಳು ಬಡವರೆಂದು ಕಂಡುಬಂದರೆ ಉಚಿತವಾಗಿಯೇ ಚಿಕಿತ್ಸೆಯನ್ನು ನಡಸುತ್ತಿದ್ದಳು. ಹೀಗೆ ಮಧ್ಯಾಹ್ನ ಹನ್ನೆರಡು ಗಂಟೆಯವರೆಗೂ ಅಂಗಡಿಯಲ್ಲಿದ್ದು ಅನಂತರ ಮನೆಗೆ ಹಿಂದಿರುಗುತ್ತಿದ್ದಳು. ಊಟವಾದಮೇಲೆ ಎರಡು ಗಂಟೆಗಳ ಕಾಲ ವಿಶ್ರಾಂತಿ. ಪಾಪ! ಅಂಗಡಿಯಲ್ಲಿದ್ದಷ್ಟು ಕಾಲವೂ ಕಾಲಮೇಲೇ ನಿಂತಿರುತ್ತಿದ್ದ ಸರೋಜಳಿಗೆ ಕುಳಿತರೆ ಸಾಕು ಎಂದೆನಿಸುತ್ತಿತ್ತು. ಹಿಂದೆ ಸೀತಾರಾಮು ಎರಡನೆಯ ಮದುವೆಯನ್ನು ಮಾಡಿಕೊಂಡನೆಂಬುದನ್ನು ತಿಳಿದಾಗ ಹಾಸಿಗೆಯನ್ನು ವರ್ಜಿಸಿ ಚಾಪೆಯಮೇಲೆ ಮಲಗುತ್ತಿದ್ದ ಕಠಿನವ್ರತವನ್ನು ಹಿಡಿದಿದ್ದಳಷ್ಟೆ. ತಾನು ಮೈಸೂರಿಗೆ ಚಿಕ್ಕಪ್ಪನ ಮನೆಗೆ ಹೋದಾಗ, ಆ ವ್ರತ ಅಲ್ಲಿಯು

ಜನರಿಗೆ ಏಕೆ ತಿಳಿಯಬೇಕೆಂದು ಆಲೋಚಿಸಿ, ಒಂದು ಜಮಖಾನ ಮೇಲೊಂದು ಮಗ್ಗುಲು ಹಾಸು—ಅಷ್ಟನ್ನು ಮಾತ್ರ ಉಪಯೋಗಿಸು ತ್ತಿದ್ದಳು. ಈಗಲೂ ಅದರಂತೆಯೇ ಹಾಸಿಗೆಯನ್ನು ಹಾಕಿಕೊಂಡು ಸರೋಜ ವಿಶ್ರಾಂತಿಯನ್ನು ತೆಗೆದುಕೊಳ್ಳುತ್ತಿದ್ದಳು. ಸಾಯಂಕಾಲ ನಾಲ್ಕರಿಂದ ಆರರವರೆಗೆ ಅಂಗಡಿಯಲ್ಲಿದ್ದು ಅನಂತರ ವನಿತಾಸದನಕ್ಕೆ ಹೋಗುತ್ತಿದ್ದಳು. ಅಲ್ಲಿ ಏಳೂವರೆ ಗಂಟೆಯವರೆಗೆ ಕಾರ್ಯಕ್ರಮ ಗಳಿರುತ್ತಿದ್ದುವು.

ವನಿತಾಸದನದ ಮತ್ತು ಶಿಶುರಕ್ಷಣಾಕೇಂದ್ರದ ಸ್ಥಾಪನೆ ಶಿವಮೊಗ್ಗದ ಇತಿಹಾಸದಲ್ಲಿ ಬಹಳ ಮುಖ್ಯವಾದುದು. ಸರೋಜ ಡಾಕ್ಟರಾಗಿದ್ದುದರಿಂದ ಹೆಂಗಸರು ಅಪ್ರಾರ್ಥಿತರಾಗಿ ಅವಳ ಬಳಿಗೆ ಬರುತ್ತಿದ್ದರು. ಮಕ್ಕಳ ಚಿಕಿತ್ಸೆಯನ್ನು ಉಚಿತವಾಗಿ ಮಾಡುತ್ತಿದ್ದ, ಮಕ್ಕಳನ್ನು ಬಹಳ ಪ್ರೀತಿಯಿಂದ ನೋಡುತ್ತಿದ್ದ ಅವಳ ವಿಚಾರದಲ್ಲಿ ಹೆಂಗಸರಿಗೆಲ್ಲ ಗೌರವವೂ ಪ್ರೇಮವೂ ಹುಟ್ಟಿದುವು. ಸಾಯಂಕಾಲ ನಾಲ್ಕರಿಂದ ಆರರವರೆಗೆ ಅಂಗಡಿಯಲ್ಲಿ ಹೆಚ್ಚು ಗುಂಪಿರುತ್ತಿರಲಿಲ್ಲ. ಆಗ ಬರುತ್ತಿದ್ದ ಹೆಂಗಸರ ಯೋಗಕ್ಷೇಮವನ್ನು ನಿಧಾನವಾಗಿ ವಿಚಾರಿಸುತ್ತ, ಸಾಯಂಕಾಲ ಹೇಗೆ ಕಾಲವನ್ನು ಕಳೆಯುತ್ತೀರಿ? ನಿಮಗೆ ಮಕ್ಕಳನ್ನು ಹೇಗೆ ಸಾಕಬೇಕು. ಎಂಬುದು ತಿಳಿದಿದೆಯೆ? ಮನೆಯಲ್ಲೇನಾದರೂ ಸಣ್ಣಪುಟ್ಟ ಅಪಘಾತಗಳಾದರೆ ಪರಿಹಾರ ಮಾಡುವುದು ಗೊತ್ತಿದೆಯೆ? ನಿಮಗೆ ಓದುಬರೆಹ ಬರುತ್ತದೆಯೆ? ಸಂಗೀತ ಬರುತ್ತದೆಯೆ? ಎಂದು ಮುಂತಾಗಿ ಕೇಳುತ್ತ 'ಒಂದು ವನಿತಾಸದನ'ವನ್ನು ಸ್ಥಾಪನೆ ಮಾಡುತ್ತೇನೆ, ನೀವು ಅದಕ್ಕೆ ಸೇರು ತ್ತೀರಾ? ವರ್ಷಕ್ಕೆ ಒಂದು ರೂಪಾಯಿ ಚಂದಾ ಕೊಟ್ಟರೆ ಸಾಕು' ಎಂದು ಹೇಳುತ್ತಿದ್ದಳು. ಹೀಗೆ ಮೊದಲಿನಲ್ಲಿ ಸುಮಾರು ನಲವತ್ತು ಮಂದಿ ಹೆಂಗಸರು ಒಪ್ಪಿಕೆಕೊಟ್ಟಮೇಲೆ ದುರ್ಗಿಗುಡಿಯಲ್ಲಿಯೇ ಸರೋಜ ಆ ಸಂಸ್ಥೆಯನ್ನು ಪ್ರಾರಂಭಿಸಿದಳು. ಸಂಸ್ಥೆ ಪ್ರಾರಂಭವಾದ ಒಂದು ತಿಂಗಳೊಳಗಾಗಿ ಸದಸ್ಯೆಯರ ಸಂಖ್ಯೆ ಇನ್ನೂರಕ್ಕೇರಿತು.

ಪ್ರತಿ ಸಾಯಂಕಾಲವೂ ಆ ವನಿತಾಸದನದಲ್ಲಿ ಐದು ಗಂಟೆಗೆ ಕಾರ್ಯಕ್ರಮ ಪ್ರಾರಂಭವಾಗುತ್ತಿತ್ತು. ಓದುಬರೆಹಬಲ್ಲ ಕೆಲವರು ಹೆಂಗಸರನ್ನು ಉಪಾಧ್ಯಾಯಿನಿಯರನ್ನಾಗಿ ಮಾಡಿ ಇತರ ಹೆಂಗಸರಿಗೆ ಪಾಠಹೇಳಿ ಕೊಡುವ ಏರ್ಪಾಡಾಯಿತು. ಒಂದು ವಾಚನಾಲಯ ಒಂದು ಚಿಕ್ಕಪುಸ್ತಕ ಭಂಡಾರ ಸ್ಥಾಪಿತವಾದುವು. ಸರೋಜ ಪ್ರಥಮ ಚಿಕಿತ್ಸೆ, ಗೃಹಕಾರ್ಯನಿರ್ವಾಹ ಮತ್ತು ಶಿಶುಗಳ ರಕ್ಷಣೆ—ಇವುಗಳ ವಿಚಾರದಲ್ಲಿ ಅರ್ಧಗಂಟೆ ಪಾಠವನ್ನು ನಡಸುತ್ತಿದ್ದಳು. ಮೊದಲು ಕೆಲವುದಿನ ತಾನೇ ತಂಬೂರಿಯನ್ನಿಟ್ಟುಕೊಂಡು ದೇವರನಾಮಗಳನ್ನು ಹೇಳುತ್ತಿದ್ದಳು. ಆಮೇಲೆ ಸಂಗೀತ ತಿಳಿದ ಇತರ ಹೆಂಗಸರು ಮುಂದೆ ಬಂದದ್ದರಿಂದ ಗೊತ್ತಾದ ವೇಳಾಪಟ್ಟಿಯಂತೆ ಈ ಕಾರ್ಯಕ್ರಮ ನಡೆಯುತ್ತಿತ್ತು. ಪ್ರತಿ ಭಾನುವಾರ ಮಧ್ಯಾಹ್ನ ಮೂರು ಗಂಟೆಗೆ ಮಕ್ಕಳ ಆರೋಗ್ಯ ಪರೀಕ್ಷೆಯನ್ನು ಸರೋಜ ನಡಸುತ್ತಿದ್ದಳು. ಒಂದು ರಿಜಿಸ್ಟರಿನಲ್ಲಿ ಒಂದೊಂದು ಪಾನಿನಲ್ಲಿ ಒಂದೊಂದು ಮಗುವಿನ ಹೆಸರು, ತಾಯಿ ತಂದೆಗಳ ಹೆಸರು, ವಿಳಾಸ—ಇತ್ಯಾದಿಗಳನ್ನೆಲ್ಲ ಬರೆದು ಪ್ರತಿ ವಾರದಲ್ಲೂ ತೂಕ, ದೇಹಸ್ಥಿತಿ, ನಡಸಬೇಕಾದ ಚಿಕಿತ್ಸೆ ಮೊದಲಾದುವನ್ನು ಗುರುತುಮಾಡಿ, ಆಯಾ ತಾಯಿಯರಿಗೆ ತಿಳಿವಳಿಕೆ ಕೊಟ್ಟು ನೋಡಿಕೊಳ್ಳುತ್ತಿದ್ದಳು. ಹೀಗೆ ಸಂಸ್ಥೆ ದಿನದಿನಕ್ಕೂ ಬೆಳೆಯುತ್ತ ಬಂತು. ಅಲ್ಲಿ ನಡೆಯುತ್ತಿದ್ದ ಒಳ್ಳೆಯ ಕೆಲಸಗಳನ್ನು ನೋಡಿ ದೊಡ್ಡ ಮನುಷ್ಯರು ಧನ ಸಹಾಯ ಮಾಡುತ್ತ ಬಂದರು. ಪೌರ ಸಭೆಯಿಂದಲೂ ಗ್ರ್ಯಾಂಟು ದೊರೆಯಿತು. ಆ ಸಂಸ್ಥೆಗೆ ಅಧ್ಯಕ್ಷಣಿಯಾಗಿ ಸರೋಜಳೇ ಚುನಾಯಿತಳಾದಳು. ಕಾರ್ಯದರ್ಶಿನಿ, ಕೋಶಾಧಿಕಾರಿಣಿ, ಕಾರ್ಯಸಮಿತಿಯ ಸದಸ್ಯೆಯರು—ಈ ಸ್ಥಾನಗಳಲ್ಲೆಲ್ಲ ಶಿವಮೊಗ್ಗದ ಗಣ್ಯಸ್ತ್ರೀಯರು ನಿಂತು ನಡಸಿಕೊಂಡು ಹೋಗುತ್ತಿದ್ದರು. 'ವನಿತಾ ಸದನ ಮತ್ತು ಶಿಶುರಕ್ಷಣಾಕೇಂದ್ರ'ದ ಸದಸ್ಯ ಸಂಖ್ಯೆ ಐನೂರರವರೆಗೂ ಏರಿತು.

ಹೀಗೆ ಮಹಿಳೆಯರನೇಕರು ಸರೋಜಳೊಡನೆ ಸಂಪರ್ಕವಿಟ್ಟುಕೊಂಡು ಅವಳೊಡನೆ ವ್ಯವಹರಿಸುತ್ತಿದುದರಿಂದ, ಅವಳ ಶೀಲಸ್ವಭಾವ

ಗಳಿಲ್ಲ ಅವರಿಗೆ ಚೆನ್ನಾಗಿ ಮುಂದಟ್ಟಾದುವು. ಸುಮಾರು ಆರು ತಿಂಗಳ ಅವಧಿಯಲ್ಲಿ ಯಾವ ಸಭ್ಯಸಂಸಾರದಲ್ಲೇ ಆಗಲಿ ಸರೋಜಳ ವಿಚಾರ ವಾಗಿ ಒಂದು ಅಪಶಬ್ದ ಯಾರ ಬಾಯಿಂದಲೂ ಬರುತ್ತಿರಲಿಲ್ಲ. ಕೃಷ್ಣರಾಯರ ಗುಣಗೌರವ ಮೌನವಾಗಿ ನಿಧಾನವಾಗಿ ಶಾಶ್ವತವಾಗಿ ಅಗೋಚರವಾಗಿ ತನ್ನ ಪ್ರಭಾವವನ್ನು ಬೀರುತ್ತಿದ್ದುದರಿಂದ ಜನಾಭಿ ಪ್ರಾಯ ಪರಿವರ್ತನೆಯಾಗಿ ಸರೋಜಳಿಗೆ ರಕ್ಷಾಕವಚವಾಯಿತು. ಸರೋಜ ಕಾರ್ಯಾರ್ಥವಾಗಿ ತಮ್ಮ ಮನೆಗಳಿಗೆ ಬಂದಾಗ, ಹಿರಿಯರು, 'ಕೃಷ್ಣರಾಯರ ಮಗಳು, ಡಾಕ್ಟರ್ ಸರೋಜ ಬಂದಿದಾರೆ!' ಎಂದು ತಂದೆ ಮತ್ತು ಮಗಳು—ಇಬ್ಬರ ಹೆಸರನ್ನೂ ಸೇರಿಸಿ ಬಹಳ ವಿಶ್ವಾಸ ದಿಂದ ಬಹಳ ಗೌರವದಿಂದ ಮಾತನಾಡುತ್ತಿದ್ದರು. ಒಂದು ಊರಿನಲ್ಲಿ ಸಜ್ಜನರ ಪ್ರಭಾವ ಮಹರ್ಷಿಗಳ ತಪಃಪ್ರಭಾವದಂತೆ ಮನಸ್ಸನ್ನು ಸ್ವಚ್ಛಗೊಳಿಸಿ ಜನರನ್ನು ಹೇಗೆ ಉದಾತ್ತರನ್ನಾಗಿ ಮಾಡುತ್ತದೆ ಎಂಬುದನ್ನು ಕೃಷ್ಣರಾಯರ ಉದಾಹರಣೆಯಿಂದ ನೋಡಬಹುದಾಗಿತ್ತು. ಹೆಂಗಸರಿಗಂತೂ 'ನಮ್ಮ ಡಾಕ್ಟರ್ ಸರೋಜ ಬಂದಿದಾರೆ,' 'ನಮ್ಮ ಅಧ್ಯಕ್ಷಿಣಿಯರು ಬಂದಿದಾರೆ' ಎಂಬುವ ಮಾತು ರೂಢಿಯಾಗಿ ಹೋಗಿತ್ತು. ತನ್ನ ಮನೆಗೆ ದೊಡ್ಡ ಮನುಷ್ಯರ ಹೆಂಡತಿಯರು ಹೆಣ್ಣು ಮಕ್ಕಳು—ಡೆಪ್ಯುಟಿ ಕಮಿಷನರ್ ಹೆಂಡತಿಯಾದಿಯಾಗಿ — ಬಂದು ಹೋಗುತ್ತಿದ್ದುದೂ, ಸರೋಜಳನ್ನು ಹೊಗಳುತ್ತಿದ್ದುದೂ ತುಳಸಾ ಬಾಯಿಗೆ ಬಹಳ ಸಂತೋಷವಾಗಿತ್ತು. ತನ್ನ ಮಗ ನಾಗರಾಜ ಅಸಿಸ್ಟೆಂಟ್ ಕಮಿಷನರ್ ಎಂಬ ಹೆಮ್ಮೆ, ಸಂತೋಷ ಮೇಲಾಯಿತು. ತುಳಸಾಬಾಯಿಯನ್ನು ತಮ್ಮ ಮನೆಗಳಿಗೆ ಬರಬೇಕೆಂದು ಆಹ್ವಾನ ಕೊಟ್ಟು, ಆಕೆಯನ್ನು ಕರೆದುಕೊಂಡು ಹೋಗಿ ಎಷ್ಟೋ ಜನ ಮಹಿಳೆಯರು ಗೌರವಿಸಿದರು. ಸರೋಜ ಶಿವಮೊಗ್ಗದ ಸೌಭಾಗ್ಯದ ಅಧಿದೇವತೆಯಾಗಿ ಪುರಸ್ಕೃತಳಾದಳು.

ಸರೋಜಳ ಆದಾಯ ತಿಂಗಳೊಂದಕ್ಕೆ ೨೦೦–೩೫೦ ರೂಪಾಯಿ ಗಳವರೆಗೆ ಇರುತ್ತಿತ್ತು. ಕೃಷ್ಣರಾಯರ ಪೆನ್‌ಷನ್ ತಿಂಗಳಿಗೆ ೨೦೦ ರೂಪಾಯಿಗಳು ಬರುತ್ತಿದ್ದುವು. ಆದ್ದರಿಂದ ಶಿವಮೊಗ್ಗದ ಸಂಸಾರ

ಚೆನ್ನಾಗಿ ನಡೆಯುತ್ತಿತ್ತು. ಸರೋಜ ತನ್ನ ಕಾರ್ಯಕ್ಷೇತ್ರದಲ್ಲಿ ಸದಾ ಕಾಲವೂ ನಿರತಳಾಗಿ, ಬೇರೆ ಹವ್ಯಾಸಗಳನ್ನು ಹಚ್ಚಿಕೊಳ್ಳದೆ ಇರುತ್ತಿದ್ದಳು. ಆದರೆ, ತನ್ನ ಮನೆಯನ್ನು ಬಿಟ್ಟುಹೋಗುವಾಗ ಮತ್ತು ತನ್ನ ಮನೆಗೆ ಹಿಂದಿರುಗುವಾಗ—ದಿನಕ್ಕೆ ನಾಲ್ಕು ಬಾರಿಯಾದರೂ ತನ್ನ ಗೇಟಿನ ಕಂಬಕ್ಕೆ ಹಾಕಿದ್ದ ಬೋರ್ಡಿನ ಕಡೆಗೆ ಅವಳ ದೃಷ್ಟಿ ಹೋಗದೆ ಇರುತ್ತಿರಲಿಲ್ಲ. ಅದರಲ್ಲಿದ್ದ 'ಡಾ॥ ಸರೋಜ ಸೀತಾರಾಮರಾವ್' ಎಂಬ ಒಕ್ಕಣೆಯಲ್ಲಿ ಉತ್ತರಾರ್ಧ ಪ್ರಯತ್ನದಿಂದ ನಿತ್ಯಜಪವಾಗಿ ಪರಿಣಮಿಸುತ್ತಿತ್ತು. ಆ ಎರಡು ಹೆಸರುಗಳೂ ಹೇಗೆ ಒಟ್ಟಿಗೆ ಸೇರಿಕೊಂಡಿವೆ. ಆ ಎರಡು ವ್ಯಕ್ತಿಗಳೂ ಹೇಗೆ ಬೇರೆ ಬೇರೆಯಾಗಿವೆ ಎಂಬ ಆಲೋಚನೆ ಅವಳನ್ನು ಕಾಡುತ್ತಲೇ ಇತ್ತು.



ಶ್ರೀಕಂಠಯ್ಯ ಅಚ್ಚುಕೂಟ–ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು–೨. ೧೦೦೦